...ಹಿತ್ಯ ಗ್ರಂಥಮಾಲಾ—೩೦.

# ಕರ್ಣಾಟಕ ಸಂದರ್ಶನ



ಬರೆದವರು :
ಆಸ್ಥಾನ ವಿದ್ವಾನ್, ಪಂಡಿತ ರತ್ನಂ
ಬಿ. ಶಿವಮೂರ್ತಿಶಾಸ್ತ್ರೀ



೧೯೬೨. ಬೆಲೆ ೫ ರೂ.

# ಮುನ್ನುಡಿ

---

'ಕರ್ಣಾಟಕ ಸಂದರ್ಶನ' ಎಂಬ ಈ ನೂತನ ಕೃತಿಯನ್ನು ನಮ್ಮ ಕನ್ನಡ ಬಂಧುಗಳಿಗೆ ಅರ್ಪಿಸುವ ಸುಸಂಧಿ ಪ್ರಾಪ್ತವಾದುದು ನನಗೆ ಹೆಚ್ಚಿನ ಸಂತೋಷವನ್ನುಂಟುಮಾಡಿದೆ. ಇದರಲ್ಲಿ ಕನ್ನಡ ನಾಡುನುಡಿಗಳಿಗೆ ಸಂಬಂಧಪಟ್ಟ ೪೫ ಲೇಖನಗಳಿವೆ. ೬ ಕವಿತೆಗಳಿವೆ. ನಮ್ಮ ನಾಡಿಗೆ ಸಂಬಂಧಪಟ್ಟ ಹಲಕೆಲವು ಚಿತ್ರಗಳೂ ಇವೆ. ಒಟ್ಟನಲ್ಲಿ ಇದರಲ್ಲಿರುವ ಸಾಹಿತ್ಯವೆಲ್ಲವೂ ಕನ್ನಡಿಗರಿಗೆ ಪ್ರಿಯವೆನಿಸಬಹುದಾದುದು. ಉಪಯುಕ್ತವೆನಿಸಬಹುದಾದುದು ಎಂದು ನನ್ನ ನಂಬಿಕೆ.

ಸುಮಾರು ೪೦ ವರ್ಷಗಳಿಂದ ಕನ್ನಡ ನಾಡುನುಡಿಗಳ ಏಳಿಗೆಗಾಗಿ ನಾನು ಅಳಿಲು ಸೇವೆ ಸಲ್ಲಿಸಿದ್ದೇನೆ. ಉದಯಗಿರಿಯಿಂದ ನೀಲಗಿರಿಯವರೆಗೆ, ಮಂಗಳೂರಿನಿಂದ ಅನಂತಪುರದವರೆಗೆ, ಕ್ಸಾಸ್ಕರಗೋಢಿನಿಂದ್ಲ ಗೋವೆಯವರೆಗೆ, ಬೀದರದಿಂದ ಬಿದನೂರುವರೆಗೆ ಹಲವಾರು ಸಲ ಸಂಚರಿಸಿದ್ದೇನೆ. ೧೯೩೬ ರಿಂದ ಇಂದಿನವರೆಗೆ ಏಕೀಕರಣ ಚಳುವಳಿಗೆ ಕೂಡ ಕಿಂಚಿತ್ತು ಸೇವೆ ಸಲ್ಲಿಸಿದ್ದೇನೆ. ಕರ್ಣಾಟಕದ ತೀರ್ಥ ಕ್ಷೇತ್ರಗಳನ್ನು, ಐತಿಹಾಸಿಕ ಸ್ಥಳಗಳನ್ನು ಸಂದರ್ಶಿಸಿದ್ದೇನೆ. ಮುಂಬಯಿ, ಕಾಶಿ, ದಿಲ್ಲಿ, ಪ್ರಯಾಗ, ಆಗ್ರ, ಹೈದರಾಬಾದು, ಮದರಾಸು, ಕಲ್ಕತ್ತ, ರಾಮೇಶ್ವರಗಳನ್ನು ಸಂಚರಿಸಿ–ವಿಶಾಲ ಭಾರತದಲ್ಲಿರುವ ಕನ್ನಡಿಗರನ್ನು ಪರಿಚಯ ಮಾಡಿಕೊಂಡಿದ್ದೇನೆ.

ಕನ್ನಡ ಸಾಹಿತ್ಯವನ್ನು ತಕ್ಕ ಮಟ್ಟಿಗೆ ಅಧ್ಯಯನಮಾಡಿದ್ದೇನೆ. ೩೫ ವರ್ಷ ಶರಣ ಸಾಹಿತ್ಯವನ್ನೂ, ೫ ವರ್ಷ ಸ್ವತಂತ್ರ ಕರ್ಣಾಟಕವನ್ನೂ ನಡೆಸಿ ಕನ್ನಡಿಗರ ಸೇವೆ ಸಲ್ಲಿಸಿದ್ದೇನೆ. ಶರಣ ಸಾಹಿತ್ಯ ಗ್ರಂಥಮಾಲೆಯಲ್ಲಿ ೩೦

ಪುಸ್ತಕಗಳನ್ನು ಪ್ರಕಟಿಸಿ ಕನ್ನಡಿಗರ ಕೈಗಿತ್ತಿದ್ದೇನೆ. ಆಕಾಶವಾಣಿಯಲ್ಲಿ ಕೂಡ ಹಲ ಕೆಲವು ಭಾಷಣಗಳನ್ನೂ ಶಬ್ದ ಚಿತ್ರಗಳನ್ನೂ ನಿರೂಪಿಸಿದ್ದೇನೆ. ಮೈಸೂರು ಮತ್ತು ಕರ್ಣಾಟಕ ವಿಶ್ವವಿದ್ಯಾನಿಲಯಗಳಲ್ಲಿ ವಿಸ್ತರಣ ಭಾಷಣ ಮಾಡಿದ್ದೇನೆ. ಸಾಹಿತ್ಯ ಪರಿಷತ್ಪತ್ರಿಕೆ ಮತ್ತು ಕನ್ನಡ ನುಡಿಗಳಿಗೆ ಸಂಪಾದಕ ನಾಗಿ ಸೇವೆಸಲ್ಲಿಸಿದ್ದೇನೆ. ಆರುವರ್ಷ ಪರಿಷದಧ್ಯಕ್ಷನಾಗಿ ಕೈಂಕರ್ಯ ಸಲ್ಲಿಸಿದ್ದೇನೆ. ಹಲವಾರು ವಿಶೇಷ ಸಂಚಿಕೆಗಳಿಗೂ ಬರೆಹಗಳನ್ನು ಬರೆ ದಿದ್ದೇನೆ. ಈ ಎಲ್ಲ ಸಂದರ್ಭ ಸನ್ನಿವೇಶಗಳಲ್ಲಿ ನಾನು ಮಾಡಿದ ಭಾಷಣ, ಹಾಡಿದ ಕವಿತೆ, ಬರೆದ ಲೇಖನಗಳು ಈ ಗ್ರಂಥದಲ್ಲಿ ಕಾಣಿಸಿಕೊಂಡಿವೆ. ಮಳೆಯ ಹನಿ ನದಿಯಾದಂತೆ, ಕಾಸು ಕಾಸು ಕೂಡಿ ನಿಧಿಯಾದಂತೆ ಆಗಿದೆ ಈ ನನ್ನ ಪ್ರಯತ್ನ. ಈ ನನ್ನ ಲೇಖನಗಳನ್ನೂ ಕವಿತೆಗಳನ್ನೂ ಓದಿದ ಹಾಗೂ ಕೇಳಿದ ಮಹನೀಯರು, ಹಿತೈಷಿಗಳು, ಇವನ್ನೆಲ್ಲಾ ಒಂದೆಡೆ ಕೂಡಿಸಿದರೆ, ಒಂದು ಗ್ರಂಥರೂಪದಲ್ಲಿ ಬೆಳಕು ಕಾಣಿಸಿದರೆ, ಅದರಿಂದ ಜನಕ್ಕೆ ಉಪಯೋಗವಾದೀತೆಂದು ಹೇಳಿದರು. ನನಗೂ ಅದು ಸಮಂಜಸ ವೆಂದು ತೋರಿತು. ಅದರ ಫಲವಾಗಿ ಈ 'ಕರ್ಣಾಟಕ ಸಂದರ್ಶನ' ರೂಪು ಗೊಂಡಿತು. ಈ ಎಲ್ಲ ಲೇಖನಗಳ, ಕವಿತೆಗಳ ಹಿನ್ನೆಲೆ ಕನ್ನಡ ನಾಡು ನುಡಿಗಳ ಬಗೆಗೆ ನನಗಿರುವ ಅಭಿಮಾನವೇ ಆಗಿದೆ.

ಕನ್ನಡಿಗರ ಬಹು ವರ್ಷಗಳ ಪ್ರಯತ್ನದ ಫಲವಾಗಿ ವಿಶಾಲ ಮೈಸೂರು ಅಥವಾ ಕರ್ಣಾಟಕ ರಾಜ್ಯ ರೂಪುಗೊಂಡಿದೆ. (೩೧-೧-೧೯೫೬) ನಮ್ಮ ಮುಂದಾಳುಗಳೇ ಈಗ ಮಂತ್ರಿಗಳಾಗಿ ಈ ರಾಜ್ಯದ ಏಳಿಗೆಗಾಗಿ ಶ್ರಮಿಸು ತ್ತಿದ್ದಾರೆ. ಮೈಸೂರು-ಮಂಗಳೂರು-ಕೊಡಗು-ಬಳ್ಳಾರಿ-ಬಿದರೆ-ಕಾರವಾರ -ಬೆಳಗಾವಿ-ಧಾರವಾಡ-ಬಿಜಾಪುರ-ಕಲ್ಬುರ್ಗಿ-ರಾಯಚೂರು ಈ ಎಲ್ಲ ಪ್ರದೇ ಶಗಳೂ ಈಗ ಒಂದು ರಾಜ್ಯದ ಹೆಸರಿನಲ್ಲಿ ಕೂಡಿ ಹೋಗಿವೆ. ಕನ್ನಡ ನಾಡಿನ ಉಳಿದ ಭಾಗಗಳಾದ, ತಾಳವಾಡಿ, ಕಾಸರಗೋಡು, ಹೊಸೂರು, ಮಡಕಶಿರ, ಆದವಾನಿ, ಅಕ್ಕಲಕೋಟೆ, ಜತ್ತ, ಸೊಲ್ಲಾಪುರಗಳು ನಮ್ಮ ರಾಜ್ಯಕ್ಕೆ ಸೇರಲೆಂಬ ಪ್ರಯತ್ನ ನಡೆಯುತ್ತಿದೆ. ನಮ್ಮ ಭಾಷೆಯಲ್ಲೂ ಜನರಲ್ಲೂ ಏಕೀಕರಣ ಭಾವ ಬಳೆಯುತ್ತಿದೆ.

ಇಂತಹ ಸುವರ್ಣ ಸಮಯದಲ್ಲಿ 'ಕರ್ಣಾಟಕ ಸಂದರ್ಶನ' ಬೆಳಕು ಕಾಣುತ್ತಿದೆ. ಕನ್ನಡಿಗರನ್ನು ಕೈಬೀಸಿ ಕರೆಯುತ್ತಿದೆ.

ಈ ಗ್ರಂಥವನ್ನು ನಾನು ಪ್ರಕಟಿಸುತ್ತಿರುವುದು ಜ್ಞಾನಾರ್ಥಿಗಳಾದ ಕನ್ನಡ ಮಕ್ಕಳ ಸಲುವಾಗಿ, ನಾಡುನುಡಿಗಳ ಅಭಿಮಾನಿಗಳಾದ ಕನ್ನಡ ಬಂಧುಗಳ ನಿಮಿತ್ತವಾಗಿ ಮಾತ್ರ. ನಾಡಿನ ವಿದ್ವಾಂಸರಿಗೆ ಇದರಿಂದ ಪ್ರಯೋಜನವಾದೀತೆಂದು ಹೇಳಲು ನನಗೆ ಧೈರ್ಯ ಸಾಲದು. ವಿದ್ವಾಂಸರಿಗೆ ಇಂತಹ ಸಂಗ್ರಹ ಗ್ರಂಥಗಳ ನೆರವಾದರೂ ಏಕೆ? ಮುಖ್ಯವಾಗಿ ನನ್ನ ಗಮನ, ನಾಡಿನ ಜನಸಾಮಾನ್ಯರ ಕಡೆಗೆಹಾಗೂ ವಿದ್ಯಾರ್ಥಿಗಳ ಕಡೆಗೆ ಮಾತ್ರ ಎಂದರೆ ಸಾಕು. ಈ ಗ್ರಂಥದಲ್ಲಿ ಕರ್ಣಾಟಕವನ್ನು ಕುರಿತು ನಾನು ಹೇಳಬೇಕಾದುದು ಎಲ್ಲವೂ ಬಂದಿಲ್ಲ. ದೇವರ ದಯುವಿದ್ದರೆ ಇದರ ಎರಡನೆಯ ಭಾಗದಲ್ಲಿ ಉಳಿದ ವಿಚಾರ ಬರಬಹುದು.

ಕನ್ನಡ ನಾಡಿನಲ್ಲಿ ಹಲವು ವರ್ಷಗಳಿಂದ ಸಂಚರಿಸಿದ ಫಲವಾಗಿ, ಕನ್ನಡ ಸಾಹಿತ್ಯದ ಅಧ್ಯಯನದ ಫಲವಾಗಿ, ನನಗುಂಟಾದ ಸ್ಫೂರ್ತಿ ಈ ಗ್ರಂಥ ಲೇಖನಕ್ಕೆ ಕಾರಣವಾದ್ದರಿಂದ ಇದಕ್ಕೆ 'ಕರ್ಣಾಟಕ ಸಂದರ್ಶನ' ಎಂದು ಹೆಸರಿಡಲಾಗಿದೆ.

ಈ ಗ್ರಂಥವು ಕನ್ನಡಿಗರಿಗೆ ಫಲಪ್ರದವೆಂದು ಆದರೆ ನನ್ನ ಶ್ರಮ ಸಫಲವೆಂದು ನಂಬುತ್ತೇನೆ. ನಮ್ಮ ಜನರಲ್ಲಿ ಕನ್ನಡ ಕುಲ ಮತ್ತು ಕನ್ನಡ ನೆಲಗಳ ಅಭಿಮಾನವನ್ನು ಕೆರಳಿಸುವುದೂ ಸರ್ವಾಂಗ ಸುಂದರ ಕರ್ಣಾಟಕ ರಚನೆಗೆ ಜನರನ್ನು ಹುರಿದುಂಬಿಸುವುದೂ ಈ ಗ್ರಂಥದ ಪ್ರಕಟನೆಯಲ್ಲಿ ನನ್ನ ಮುಖ್ಯವಾದ ಉದ್ದೇಶವಾಗಿದೆ. ಈ ಉದ್ದೇಶ ಸಾಧನೆ ಈ ಗ್ರಂಥಕ್ಕೆ ಸಿಗುವ ಮನ್ನಣೆಯನ್ನು ಅವಲಂಬಿಸಿದೆ. ಇದು ಕಾದು ನೋಡಬೇಕಾದ ಸಂಗತಿ. 'ಭವಿತವ್ಯಂ ಭವತ್ಯೇವ'

ದಿನಾಂಕ ೨೦–೯–೧೯೬೨.
ಬೆಂಗಳೂರು–೨

ಇಂತು ಸುಜನ ವಿಧೇಯ,
ಬಿ. ಶಿವಮೂರ್ತಿ ಶಾಸ್ತ್ರೀ,
'ಶರಣ ಸಾಹಿತ್ಯ ಕಾರ್ಯಾಲಯ'

# ವಿಷಯ ಸೂಚಿಕೆ

ಪುಟ

# ಚಿತ್ರಗಳು



ಕರ್ಣಾಟಕ ರತ್ನ ಸಿಂಹಾಸನಾಧೀಶ್ವರರಾದ
ಶ್ರೀಮನ್ ಮಹಾರಾಜ ಜಯಚಾಮರಾಜ ಒಡೆಯರ್
ಮಹಾಸ್ವಾಮಿಯವರು
(ವಿಶಾಲ ಮೈಸೂರು ರಾಜ್ಯಪಾಲರು)

# ಸಮರ್ಪಣ

ಕರ್ಣಾಟಕ ರತ್ನಸಿಂಹಾಸನಾಧೀಶ್ವರರೂ ವಿಶಾಲ ಮೈಸೂರು
ಅಥವಾ ಕರ್ಣಾಟಕ ರಾಜ್ಯದ ಸನ್ಮಾನ್ಯ ರಾಜ್ಯಪಾಲರೂ
ಕನ್ನಡ ನಾಡು ನುಡಿಗಳ ಉದ್ಧಾರಕರೂ
ವಿಶ್ವವಿಖ್ಯಾತ ತತ್ವಜ್ಞಾನಿಗಳೂ ಎನಿಸಿರುವ
ಶ್ರೀ ಮನ್ಮಹಾರಾಜ ಜಯಚಾಮರಾಜ ಒಡೆಯರ್
ಮಹಾಸ್ವಾಮಿಯವರ ದಿವ್ಯ ಸನ್ನಿಧಿಗೆ ಅವರ ಅಭ್ಯುದಯವನ್ನು
ಬಯಸಿ ಅತ್ಯಂತ ಶ್ರದ್ಧಾಸಕ್ತಿಯಿಂದ
ಈ ಗ್ರಂಥವು ಸಮರ್ಪಿಸಲ್ಪಟ್ಟಿದೆ.

ಇಂತು,
ಬಿ. ಶಿವಮೂರ್ತಿ ಶಾಸ್ತ್ರಿ,
ಬೆಂಗಳೂರು-೨

# ಕನ್ನಡ ನಾಡು

ವೃತ್ತ॥ ರಸವತ್ಕಾವ್ಯಕಲಾವಿದರ್ ನಿರುಪಮರ್ ಲೋಕೋಪಕಾರಾಸ್ಪದರ್।
ರಸಿಕರ್ ಮಾನ್ಯರುದಾರಕಾರ್ಯಸಫಲರ್ ವಿಖ್ಯಾತಪುಣ್ಯಾಸ್ಪದರ್॥
ಅಸಮಾಕ್ಷಂಗೆಣೆಯಪ್ಪುವರ್ ವಿಲಸಿತರ್ ಪುಟ್ಟಿರ್ಪನಾಡೆಂಬುವಾ।
ಪೆಸರೀ ಕನ್ನಡನಾಡಿಗಲ್ಲದಿಳೆಯೊಳ್ ಮತ್ತೆಲ್ಲಿಗನ್ವರ್ಥವಯ್ ।
॥ ೧ ॥

ಪೂಗಳಕಂಪು ಮಾರುತನತಂಪು ಗಿಡಂಗಳಗುಂಪು ಕೋಕಿಲಾ।
ರಾಗದಲಂಪು ನೀರೆಯರಪೆಂಪು ವನಂಗಳಸೊಂಪಿನಿಂದಮಾ॥
ಭೋಗದಗೊತ್ತು ಯೋಗಿಗಳಬಿತ್ತು ವಿಲಾಸಿನಿ ಭಾರತಾಂಬೆಯಾ॥
ಮೂಗುತಿನತ್ತು ನೋಡಿದೊಡೆ ಕನ್ನಡನಾಡಿದು ವೈಭವಾನ್ವಿತಂ
॥ ೨ ॥

ಕಂದ॥ ಕನ್ನಡ ಭಾಷೆಯ ಸೊಂಪಂ ।
ಕನ್ನಡ ವಾಙ್ಮಯದ ಪೆಂಪನನುಪಮ ಕಂಪಂ ॥
ಕನ್ನಡಮಾತಿನಲಂಪಂ ।
ಸನ್ನುತ ರಸಿಕರ್ಕಳಲ್ಲದರಿವರೆ ಗಾಂಪರ್ ॥ ೩ ॥

ವೃತ್ತ॥ ಶ್ರೀ ರಾಜದ್ಗುಣೆ ತುಂಗಭದ್ರೆ ಕಪಿಲಾ ವೇದಾವತೀ ದೇವಿಯರ್ ।
ಶ್ರೀರಂಗಾಖ್ಯಸುಪಾದಭಕ್ತಿ ವಿಮಲಾ ಕಾವೇರಿ ಸನ್ಮಾತೆಯುಂ ॥
ಕಾರುಣ್ಯಾಸ್ಪದಳಾಗಿ ಭಕ್ತಕುಲಮಂ ರಕ್ಷಿಪ್ಪಳಾ ಕೃಷ್ಣೆಯುಂ ।
ಸಾರುತ್ತೀ ಕುರುನಾಡು ದೇಶಮನಿದಂ ನೀರಿತ್ತು ಸಂರಕ್ಷಿಪರ್ ॥ ೪ ॥

ನಾನಾ ಕ್ಷೇತ್ರ ಸಮೂಹದಿಂದೆ ಮೆರೆವಾತೀರ್ಥಂಗಳಿಂ ಸಂತತಂ।
ನಾನಾಜಾತಿ ಕುಜಂಗಳಿಂ ಮಣಿಗಳಿಂ ಕೂಡಿರ್ಪ ಭೂಭಾಗದಿಂ ॥
ನಾನಾ ವಿದ್ಯೆಗಳಿಂ ವಿಭೂಷರೆನಿಸಿಪ್ಪಾ ಸಜ್ಜನವ್ರಾತದಿಂ ।
ದೇನೆಂಬೆಂ ವರದೇಶಮಿರ್ಪುದಿಳೆಯೊಳ್ ಕರ್ಣಾಟಕಾಖ್ಯಂವಲಂ
॥ ೫ ॥

—ಶೂಲಪಾಣಿ



ಕನ್ನಡ ಸಾಹಿತ್ಯ ಸಂಸ್ಕೃತಿಗಳ ಉದ್ಧಾರಕರಾದ ರಾಜರ್ಷಿ
ಮೈಸೂರು ಶ್ರೀಮನ್ಮಹಾರಾಜ ಮುಮ್ಮಡಿ ಕೃಷ್ಣರಾಜ ಒಡೆಯರ್
(ಕೃಷ್ಣರಾಜ ಭೂಪ-ಮನೆಯೆಲ್ಲಾ ದೀಪ)



ಕರ್ನಾಟಕದ ಕರ್ಮಯೋಗಿಗಳೂ "ಕನ್ನಡ ಸಾಹಿತ್ಯ" ದ
ಮಹಾ ಪೋಷಕರೂ ಆದ
ಶ್ರೀ ನಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳು, ಧಾರವಾಡ.

# ನಮ್ಮ ಕರ್ಣಾಟಕ ರಾಜ್ಯ

ಭಾರತದ ಚರಿತ್ರೆಯಲ್ಲಿ ಕರ್ಣಾಟಕ ದೇಶವು ತನ್ನದೇ ಆದ ಕೀರ್ತಿ ಗೌರವಗಳಿಂದ ಮೆರೆಯುತ್ತಿದೆ. "ಕರು ನಾಡು" ಅಂದರೆ ಎತ್ತರವಾದ ದೇಶ, "ಕರಿಯ ನಾಡು" ಅಂದರೆ ಕಪ್ಪು ಬಣ್ಣದ ಭೂಮಿಯಿಂದ ಕೂಡಿದ ದೇಶ ಎಂಬ ಅರ್ಥದಲ್ಲಿ "ಕರ್ಣಾಟಕ" ಎಂಬ ಶಬ್ದವು ಹುಟ್ಟಿದೆ. ಸಂಸ್ಕೃತ ಗ್ರಂಥ ಗಳಲ್ಲಿ "ಕರ್ಣಾಟ" ಎಂಬ ಹೆಸರು ಬಳಕೆಯಲ್ಲಿದೆ. "ಕರ್ಣಯೋಃ ಅಟತಿ ಇತಿ ಕರ್ಣಾಟಃ" ಎಂದು ವೆಂಕಟಾಧ್ವರಿಯು ಹೇಳಿದ್ದಾನೆ. ಇದರರ್ಥ ಕೀರ್ತಿಶಾಲಿಯಾದ ದೇಶವೆಂದು. ಹೀಗೆ ಎತ್ತರವಾದ, ಕಪ್ಪುಬಣ್ಣದ ಭೂಮಿ ಯಿಂದ ಕೂಡಿದ, ಕೀರ್ತಿಶಾಲಿಯಾದ ದೇಶವೆಂಬುದೇ ಈ ಎಲ್ಲ ವಿವರಣೆ ಗಳ ತಾತ್ಪರ್ಯವಾಗಿದೆ. "ಕಮ್ಮಿತು ನಾಡು, ಕನ್ನಾಡು, ಕನ್ನಡು, ಕನ್ನಡ ನಾಡು", ಎಂಬರ್ಥದಲ್ಲಿ ಕೆಲವು ವಿದ್ವಾಂಸರು ವ್ಯಾಖ್ಯಾನ ಮಾಡಿದ್ದಾರೆ. ಕರ್ಣಾಟಕದ ದಕ್ಷಿಣ ಭಾಗವಾದ ಮೈಸೂರು, ಕೊಡಗು ಪ್ರದೇಶಗಳಲ್ಲಿ ಗಂಧದ ಮರಗಳು ಹೆಚ್ಚಾಗಿದ್ದು, ಅದರಮೇಲೆ ಬೀಸುವ ಗಾಳಿಯು ಸುಗಂಧ ಮಯವಾಗಿರುವುದರಿಂದ 'ಕಮ್ಮಿತು ನಾಡು' ಎಂಬ ಹೆಸರು ಬಂದಿದೆಯೆಂದು ತೋರುತ್ತದೆ. ಹೀಗೆ ಭೌಗೋಳಿಕವಾಗಿ, ಪ್ರಾಕೃತಿಕವಾಗಿ, ಕರ್ಣಾಟಕ ದೇಶವೆಂದು ಹೆಸರಾದ ಈ ಪ್ರಾಂತವು "ವಿಶಾಲ ಮೈಸೂರು ರಾಜ್ಯ" ಎಂಬ ಅಭಿಧಾನದಿಂದ ತಾ॥ ೧-೧೧-೧೯೫೬ನೆಯ ಶುಭದಿನ ಭಾರತ ದೇಶದಲ್ಲಿ ಒಂದು ಪ್ರಾಂತವಾಗಿ ನಿರ್ಮಾಣವಾಯಿತು. ಈ ನೂತನ ರಾಜ್ಯದಲ್ಲಿ ಹಳೆಯ ಮೈಸೂರಿನ ೧೦ ಜಿಲ್ಲೆಗಳು, ಪಕ್ಕದ ಕೊಡಗು ಮತ್ತು ಮಂಗಳೂರು ಜಿಲ್ಲೆಗಳು, ಕೊಳ್ಳೇಗಾಲ ತಾಲ್ಲೂಕು, ಮೈಸೂರಿಗೆ ಉತ್ತರದಲ್ಲಿರುವ ಧಾರ ವಾಡ, ಕಾರವಾರ, ಬೆಳಗಾಂವಿ, ವಿಜಾಪುರ ಜಿಲ್ಲೆಗಳು, ರಾಯಚೂರು, ಗುಲ್ಬರ್ಗ ಮತ್ತು ಬೀದರ ಜಿಲ್ಲೆ ನಾಲ್ಕು ತಾಲ್ಲೂಕುಗಳೂಕೂಡಿ ಮೈಸೂರು ರಾಜ್ಯದಲ್ಲಿ ಸಮಾವೇಶಗೊಳ್ಳುತ್ತವೆ. ಇವೆಲ್ಲ ಸೇರಿದರೆ ೧೯ಜಿಲ್ಲೆಗಳಾಗುತ್ತವೆ. ಈ ವಿಶಾಲವಾದ ರಾಜ್ಯಕ್ಕೆ, ಸರ್ವಾಂಗಸುಂದರವಾದ ನೀರು-ಗಾಳಿ-ಬೆಳಕು

ಗಳ ಸೌಕರ್ಯವುಳ್ಳ, ದಿವ್ಯ ಭವ್ಯವಾದ ಕಟ್ಟಡಗಳಿಂದ ಅಲಂಕೃತ ವಾಗಿರುವ, ಬೆಂಗಳೂರು ಪಟ್ಟಣವು (ಕರ್ಣಾಟಕದ) ರಾಜಧಾನಿಯೆನಿಸಿದೆ.

ಭೌಗೋಳಿಕ, ಐತಿಹಾಸಿಕ, ಸಾಂಸ್ಕೃತಿಕ ಕಾರಣಗಳಿಂದಾಗಿ ಈ ರಾಜ್ಯವು'ಕರ್ಣಾಟಕ'ಎಂದು ಹೆಸರು ಪಡೆದಿದೆ. ರಾಜ್ಯಗಳ ಪುನರ್ವಿಂಗಡಣಾ ಸಮಿತಿಯ ವರದಿಯಲ್ಲಿಯೂ ಸಹ (೧೯೫೬) ಇದನ್ನು "ಕರ್ಣಾಟಕ" ಎಂದೇ ಕರೆಯಲಾಗಿದೆ. ಆದರೂ ಕೇಂದ್ರ ಸರ್ಕಾರದವರು ಯಾವುದೋ ಒಂದು ಒಳ್ಳೆಯ ಉದ್ದೇಶದಿಂದ ಇದನ್ನು "ವಿಶಾಲ ಮೈಸೂರು ರಾಜ್ಯ" ಎಂದು ನಾಮಕರಣ ಮಾಡಿದ್ದಾರೆ. ಈ ಸಂದರ್ಭದಲ್ಲಿ "ಮೈಸೂರು" ಎಂಬ ಹೆಸರಿನ ವಿಚಾರವಾಗಿಯೂ ನಾವು ತಿಳಿದುಕೊಳ್ಳುವ ಸಂಗತಿಗಳಿವೆ.

ಹಳೆಯ ಮೈಸೂರು ರಾಜಧಾನಿ ಮೈಸೂರು ಪಟ್ಟಣ. ಒಂದು ಕಾಲ ದಲ್ಲಿ ಮಹಿಷಾಸುರನೆಂಬ ರಾಕ್ಷಸನು ಅಲ್ಲಿದ್ದನೆಂದೂ, ಜಗನ್ಮಾತೆಯಾದ ಪಾರ್ವ ತಿಯು ಚಾಮುಂಡಿಯಾಗಿ ಅವತರಿಸಿ, ಆ ರಾಕ್ಷಸನನ್ನು ಸಂಹರಿಸಿ ಲೋಕ ವನ್ನು ಕಾಪಾಡಿದಳೆಂದೂ ಕಥೆ ಇದೆ. ಮೈಸೂರಿನ ಚಾಮುಂಡೀ ಬೆಟ್ಟದ ಮೇಲೆ ಈಗಲೂ ಮಹಿಷಾಸುರನ ವಿಗ್ರಹವನ್ನು ನಾವು ನೋಡಬಹುದು. ಮತ್ತೆ ಕೆಲವು ವಿದ್ವಾಂಸರು "ಮಹೀ ಶೂರಪುರ"–ಲೋಕದಲ್ಲಿ ಪರಾಕ್ರಮ ಶಾಲಿಗಳಾದವರ ಪಟ್ಟಣ ಎಂದು ಅರ್ಥ ಮಾಡಿದ್ದಾರೆ. ಇನ್ನೂ ಕೆಲವರು "ಮಹೀ ಸುರಪುರ"–ಭೂಲೋಕದ ಅಮರಾವತಿ ಎಂಬುದಾಗಿ ಅರ್ಥ ಹೇಳಿ ದ್ದಾರೆ. ಇವೆಲ್ಲವುಗಳ ತಾತ್ಪರ್ಯವು, ಮಹೀಶೂರ ಪುರ, ಮಹೀಸುರಪುರ, ಮಹಿಷಾಸುರಪುರ ಎಂಬ ಹೆಸರುಗಳಿಂದ 'ಮೈಸೂರು' ಎಂಬ ಶಬ್ದ ಹುಟ್ಟಿರು ವುದೆಂದು ನಾವು ಭಾವಿಸಬೇಕಾಗಿದೆ. ಮೈಸೂರು ಪಕ್ಕದಲ್ಲಿರುವ ಬೆಟ್ಟವನ್ನು ಮಹಾಬಲಾದ್ರಿ ಎಂದೂ ಚಾಮುಂಡಿ ಬೆಟ್ಟವೆಂದೂ ಕರೆಯುತ್ತಾರೆ.

೧೩೯೯ರಲ್ಲಿ ಉತ್ತರ ಭಾರತದಿಂದ ಇಲ್ಲಿಗೆ ಬಂದ ಶ್ರೀಕೃಷ್ಣನ ವಂಶೀ ಯರಾದ ಯದುರಾಯರೆಂಬ ಕ್ಷತ್ರಿಯೋತ್ತಮರು ಮೈಸೂರಿನಲ್ಲಿ ರಾಜ್ಯವನ್ನು ಓರ್ವ ಜಂಗಮ ಒಡೆಯರ ಸಹಾಯದಿಂದ ಸ್ಥಾಪಿಸಿದರು. ತನ್ನಿಮಿತ್ತವಾಗಿಯೇ ಮೈಸೂರು ಮಹಾರಾಜರ ಹೆಸರಿನ ಮುಂದೆ "ಒಡೆ

ಯರು" ಎಂಬ ಶಬ್ದ ಈ ಅರ್ಥದಲ್ಲಿಯೇ ರೂಢಿಗೆ ಬಂದಿದೆ. ೫೭೩ ವರ್ಷಗಳಷ್ಟು ಸುದೀರ್ಘ ಕಾಲದಿಂದ ಮೈಸೂರಿನ ರಾಜವಂಶದ ಅರಸರು ಉತ್ತಮವಾದ ರೀತಿಯಿಂದ ಮೈಸೂರಿನ ರಾಜ್ಯಭಾರವನ್ನು ನಡೆಸಿಕೊಂಡು ಬಂದಿದ್ದಾರೆ. ಈ ರಾಜರುಗಳಲ್ಲಿ ಪರಾಕ್ರಮಶಾಲಿಗಳಾದ, ಚಿಕ್ಕ ದೇವರಾಜ ಒಡೆಯರು, ಕಂಠೀರವ ನರಸರಾಜ ಒಡೆಯರು, ಮುಮ್ಮಡಿ ಕೃಷ್ಣ ರಾಜಒಡೆಯರು ಅತ್ಯಂತ ಪ್ರಾಮುಖ್ಯರು. ಇತ್ತೀಚಿಗೆ ರಾಜ್ಯಭಾರ ಮಾಡಿದ ಶ್ರೀ ಚಾಮರಾಜ ಒಡೆಯರು, ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು ಈ ಉಭಯರೂ ಪ್ರಜಾಪ್ರಭುತ್ವದ ಉಜ್ವಲಾಭಿಮಾನಿಗಳು. ಶ್ರೀ ಚಾಮರಾಜ ಒಡೆಯರು ವಿಶಾಲಮತಿಗಳಾಗಿದ್ದು ೧೮೮೧ರಲ್ಲಿ ಪ್ರಜಾಪ್ರತಿನಿಧಿ ಸಭೆಯನ್ನು ಸ್ಥಾಪಿಸಿದರು. ರಾಜರ್ಷಿಗಳಾದ ಕೃಷ್ಣರಾಜ ಒಡೆಯರು ಮೈಸೂರು ಶಾಸನ ಸಭೆಯನ್ನು ೧೯೦೮ರಲ್ಲಿ ಸ್ಥಾಪಿಸಿದರು. ೧೯೨೩ರಲ್ಲಿ ಈ ಶಾಸನ ಸಭೆಗಳಿಗೆ ಹೆಚ್ಚಿನ ಸ್ವಾತಂತ್ರ್ಯಗಳು ಲಭಿಸಿದವು. ಮೈಸೂರಿನಲ್ಲಿ ಮಹಾರಾಜಾ ಕಾಲೇಜಿನ ಸಂಸ್ಥಾಪಕರು ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರು. ಅದರ ಮೊದಲ ಹೆಸರು 'ರಾಜಾಸ್ಕೂಲ್' ಎಂದು. ೧೮೮೨ರಲ್ಲಿ ಮೈಸೂರಿನಲ್ಲಿ ಮಹಾರಾಣಿ ಬಾಲಿಕಾ ಪಾಠಶಾಲೆ ಪ್ರಾರಂಭವಾಯಿತು. ಬೆಂಗಳೂರಿನಲ್ಲಿರುವ ಸೆಂಟ್ರಲ್ ಕಾಲೇಜ್, ಸೆಂಟ್ರಲ್ ಹೈಸ್ಕೂಲ್ ಆಗಲೇ ಪ್ರಾರಂಭವಾಯಿತು. ಹೀಗೆ ಮೈಸೂರು ರಾಜ್ಯದಲ್ಲಿ ರಾಜಕೀಯ ಮತ್ತು ವಿದ್ಯಾಪ್ರಗತಿಗೆ ಮೂಲ ಪುರುಷರು ಮೈಸೂರಿನ ಜನಪ್ರಿಯ ಒಡೆಯರು ಎಂಬುದು ಇದರಿಂದ ಸಿದ್ಧವಾಗುತ್ತದೆ.

ಭಾರತ ದೇಶದಲ್ಲಿ ಮೈಸೂರು ರಾಜ್ಯವನ್ನು "ಮಾದರಿ ರಾಜ್ಯ"ಎಂದು ಕರೆಯುವ ರೂಢಿ ಇದೆ. ಹಲವಾರು ಮಂದಿ ರಾಜಪುತ್ರರು ಹಿಂದೆ ಇಲ್ಲಿಗೆ ಬಂದು ರಾಜ್ಯಭಾರ ಶಿಕ್ಷಣ ಪಡೆಯುತ್ತಿದ್ದರು. ಸುಮಾರು ೩೫ ವರ್ಷಗಳ ಹಿಂದೆ ಈ ರಾಜ್ಯಕ್ಕೆ ಆಗಮಿಸಿದ್ದ ರಾಷ್ಟ್ರಪಿತ ಗಾಂಧೀಜಿ ಇದನ್ನು "ರಾಮ ರಾಜ್ಯ"ಎಂದು ಕರೆದಿದ್ದಾರೆ. ಕೇಂದ್ರ ಸರ್ಕಾರದವರು ನೂತನ ಕರ್ಣಾಟಕ ಪ್ರಾಂತಕ್ಕೆ "ಮೈಸೂರು ರಾಜ್ಯ" ಎಂದು ಹೆಸರು ಕೊಡುವಾಗ ಮೈಸೂರು ರಾಜಮನೆತನದ ಪ್ರಭಾವ, ಮೈಸೂರು ಸರ್ಕಾರದ ದಕ್ಷತೆ ಮೊದಲಾದವುಗಳ

ಗಳನ್ನು ಗಮನಕ್ಕೆ ತಂದಿರುವರೆಂದು ಭಾವಿಸಬಹುದಾಗಿದೆ. ಮೈಸೂರಿನ ಮಾಜಿ ದಿವಾನರುಗಳಾದ ಶ್ರೀ ರಂಗಾಚಾರ್ಲು, ಸರ್ ಶೇಷಾದ್ರಿಐಯ್ಯರ್, ಸರ್ ಎಂ. ವಿಶ್ವೇಶ್ವರಯ್ಯ,ಸರ್ ಕಾಂತರಾಜ ಅರಸ್, ಸರ್ ಮಿರ್ಜಾ ಇಸ್ಮಾಯಿಲ್ ಮೊದಲಾದವರ ಸೇವೆಯು ಪ್ರಶಂಸಾರ್ಹವಾಗಿದೆ. ಸುಮಾರು ೫೦ ವರ್ಷಗಳಿಂದ ಕನ್ನಡ ಜನರು ಹರಿದು ಹಂಚಿಹೋದ ಕನ್ನಡನಾಡು ಒಂದಾಗಬೇಕೆಂದು ಮಾಡಿದ ಪ್ರಯತ್ನದ ಫಲವಾಗಿ ಇಂದು ಕರ್ಣಾಟಕ ಪ್ರಾಂತ ಅಥವಾ "ವಿಶಾಲ ಮೈಸೂರು" ಸ್ಥಾಪನೆಯಾಗಿದೆ. ಈ ರಾಜ್ಯದ ಪ್ರಮುಖ ಭಾಷೆ ಕನ್ನಡವಾಗಿದ್ದು ಆಡಳಿತ ದೃಷ್ಟಿಯಿಂದ, ವಿದ್ಯಾಭ್ಯಾಸ ದೃಷ್ಟಿಯಿಂದ ಕೂಡ ಇದು ಪ್ರಗತಿದಾಯಕವಾಗಿದೆ. ಈಗ ನಮ್ಮ ನಾಡಿನಲ್ಲಿ ಮೈಸೂರು ಮತ್ತು ಧಾರವಾಡಗಳಲ್ಲಿ ವಿಶ್ವವಿದ್ಯಾಲಯಗಳಿವೆ. ವಿಶಾಲ ಮೈಸೂರಿನ ಪಶ್ಚಿಮ ಭಾಗವು ಅಂದರೆ ಕಾರವಾರ ಮತ್ತು ಮಂಗಳೂರು ಜಿಲ್ಲೆಗಳು ಅರಬ್ಬೀ ಸಮುದ್ರಕ್ಕೆ ಅಂಟಿಕೊಂಡಿದ್ದು,ಕಾರವಾರ, ಹೊನ್ನಾವರ,ಭಟ್ಕಲ್, ಮಾಲ್ಪೆ ಮತ್ತು ಮಂಗಳೂರು ಬಂದರುಗಳಿಂದ ಕೂಡಿದೆ. ಭಾರತ ಸರ್ಕಾರದವರು ನೇಮಿಸಿದ್ದ ಬಂದರು ಪ್ರವೀಣರ ಸಮಿತಿಯು ಮಂಗಳೂರು ಮತ್ತು ಕಾರವಾರ ಬಂದರುಗಳಿಗೆ ಒಳ್ಳೆಯ ಭವಿಷ್ಯವುಂಟೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ವ್ಯಾಪಾರದದೃಷ್ಟಿಯಿಂದ ಇವು ಬಹಳ ಪ್ರಾಮುಖ್ಯವಾದವುಗಳು. ಈ ರಾಜ್ಯದ ಪಶ್ಚಿಮ ಜಿಲ್ಲೆಗಳಾದ ಕಾರವಾರ, ಮಂಗಳೂರು, ಕೊಡಗು, ಶಿವಮೊಗ್ಗ, ಚಿಕ್ಕಮಗಳೂರು ಜಿಲ್ಲೆಗಳೂ ಹಾಸನ ಮತ್ತು ಮೈಸೂರು ಜಿಲ್ಲೆಯ ಕೆಲವು ಪ್ರದೇಶಗಳೂ"ಮಲೆನಾಡು" ಪ್ರದೇಶವೆನಿಸಿವೆ. ಇಲ್ಲಿ ಕಾಫಿ, ಟೀ, ಏಲಕ್ಕಿ, ಅಡಿಕೆ, ಬಾಳೆ, ಬತ್ತ ಮೊದಲಾದ ಬೆಲೆಬಾಳುವ ವಸ್ತುಗಳು ಉತ್ಪನ್ನವಾಗುತ್ತವೆ. ಹಿಂದಿನ ಕಾಲದಲ್ಲಿ ಈ ಭಾಗದಲ್ಲಿದ್ದ ಕೆಳದಿ ಮತ್ತು ಸ್ವಾದಿ ರಾಜ್ಯಗಳು ಏಲಕ್ಕಿ-ಮೆಣಸುಗಳ ವ್ಯಾಪಾರಕ್ಕೆ ಯೂರೋಪು ಖಂಡದಲ್ಲಿ ಕೂಡ ಪ್ರಖ್ಯಾತವಾಗಿದ್ದುವೆಂಬುದು ಇತಿಹಾಸದಲ್ಲಿ ಕಂಡುಬರುವ ವಿಚಾರವಾಗಿದೆ. ಈಗಿನ ಗೋವಾ ಹಿಂದೆ ಕಾರವಾರ ಜಿಲ್ಲೆಯ ಒಂದು ಭಾಗವಾಗಿತ್ತು. ನೂತನ ಮೈಸೂರು ರಾಜ್ಯದ ದಕ್ಷಿಣ ಭಾಗವು, ರಾಗಿ, ಭತ್ತ, ಅವರೆ, ತೊಗರಿ, ಹುರುಳಿ ಮೊದಲಾದ ಧಾನ್ಯಗಳಿಗೂ, ಉತ್ತರ

ಭಾಗವು ಗೋಧಿ, ಜೋಳ, ಉದ್ದು, ಹೆಸರು, ಕುಸುಮೆ ಮೊದಲಾದ ಧಾನ್ಯಗಳಿಗೂ ಉತ್ಪನ್ನ ಸ್ಥಾನಗಳೆನಿಸಿವೆ. ಚಿತ್ರದುರ್ಗ, ಧಾರವಾಡ, ಬೆಳಗಾಂವಿ, ಬಿಜಾಪುರ, ರಾಯಚೂರು, ಗುಲ್ಬರ್ಗ ಜಿಲ್ಲೆಗಳು ಹತ್ತಿ ಬೆಳೆಗೆ ಪ್ರಸಿದ್ಧವಾಗಿವೆ. ಈ ಭಾಗದ ಭೂಮಿ ತುಂಬಾ ಫಲವತ್ತಾದುದು. ತುಮಕೂರು ಜಿಲ್ಲೆಯು ತೆಂಗಿನ ಬೆಳೆಗೆ ಅತ್ಯಂತ ಪ್ರಖ್ಯಾತಿಯನ್ನು ಪಡೆದಿದೆ. ಬೆಂಗಳೂರು, ಮೈಸೂರು ಮತ್ತು ಕೊಳ್ಳೇಗಾಲ ಸ್ಥಳಗಳು ರೇಶಿಮೆಯ ವ್ಯವಸಾಯಕ್ಕೆ ಗಣ್ಯತೆಯನ್ನು ಪಡೆದಿವೆ. ಮೈಸೂರು ರೇಷ್ಮೆ ಭಾರತದಲ್ಲಿಯೇ ಪ್ರಸಿದ್ಧವೆನಿಸಿದೆ. ಹೀಗೆ ನೂತನ ಮೈಸೂರು ರಾಜ್ಯವು ಸಮುದ್ರತೀರ, ಮಲೆನಾಡು ಮತ್ತು ಬಯಲುಸೀಮೆಗಳಿಂದ ಕೂಡಿ ಫಲವತ್ತಾದ ರಾಜ್ಯವೆನಿಸಿದೆ. ಜನಸಂಖ್ಯೆ ಸುಮಾರು ೨,೪೦,೦೦,೦೦೦. ಸುಮಾರು ೧೫,೦೦,೦೦೦ ಜನ ಕನ್ನಡಿಗರು ರಾಜ್ಯದ ಹೊರಗಿನ ಗಡಿಗಳಲ್ಲಿದ್ದಾರೆ.

ಈ ರಾಜ್ಯದಲ್ಲಿ ಜಲಸಂಪತ್ತು ಅತ್ಯಧಿಕವಾಗಿದೆ. ದಕ್ಷಿಣದಲ್ಲಿ ಕಾವೇರಿ, ಕಪಿಲ, ಹೇಮಾವತಿ, ಲೋಕಪಾವನಿ, ಹೊನ್ನುಹೊಳೆ, ಕದಂಬ, ಅರ್ಕಾವತಿ, ಕಣ್ವ, ಲಕ್ಷ್ಮಣತೀರ್ಥ, ವೇದಾವತಿ ಮೊದಲಾದ ನದಿಗಳೂ, ಉತ್ತರದಲ್ಲಿ ತುಂಗಭದ್ರಾ, ಕೃಷ್ಣಾ, ಘಟಪ್ರಭಾ, ಮಲಪ್ರಭಾ, ಭೀಮಾ, ಹಿರಣ್ಯಕೇಶಿ, ಡೋಣಿ ಮೊದಲಾದ ನದಿಗಳೂ, ಪಶ್ಚಿಮದಲ್ಲಿ ಶರಾವತಿ, ವರದಾ, ನೇತ್ರಾವತಿ ನದಿಗಳೂ, ಪೂರ್ವದಲ್ಲಿ ಪಾಲಾರ್, ಪೆನ್ನಾರ್ ದಕ್ಷಿಣ ಪಿನಾಕಿನಿ ನದಿಗಳೂ ಹರಿಯುತ್ತಿವೆ. ಈ ನದಿಗಳು ನೀರಾವರಿಗೆ ತುಂಬಾ ಅನುಕೂಲವನ್ನುಂಟುಮಾಡಿವೆ. , ವೇದಾವತೀ ನದಿಯಿಂದ ಚಿತ್ರದುರ್ಗ ಜಿಲ್ಲೆಯಲ್ಲಿ ವಾಣೀವಿಲಾಸ ಸಾಗರವನ್ನೂ, ಕಾವೇರಿಯಿಂದ ಮಂಡ್ಯ ಜಿಲ್ಲೆಯಲ್ಲಿ ಕೃಷ್ಣರಾಜಸಾಗರವನ್ನೂ, ತುಂಗಭದ್ರಾ ನದಿಯಿಂದ ಬಳ್ಳಾರಿ ಜಿಲ್ಲೆಯಲ್ಲಿ ತುಂಗಭದ್ರಾ ಜಲಾಶಯವನ್ನೂ, ಅಲ್ಲದೆ ತುಂಗ, ಭದ್ರಾ, ನುಗು ಮೊದಲಾದ ಇತರ ಜಲಾಶಯಗಳನ್ನೂ ನಿರ್ಮಿಸಿ ಮೈಸೂರು ಸರ್ಕಾರದವರು ಸಾಹಸ ಕಾರ್ಯವೆಸಗಿದ್ದಾರೆ. ಉತ್ತರದಲ್ಲಿ ಘಟಪ್ರಭಾ ಯೋಜನೆಯು ಗಣನಾರ್ಹವೆನಿಸಿವೆ. ಕರ್ನಾಟಕ ಪ್ರಾಂತ ನಿರ್ಮಾಣವಾದಮೇಲೆ ಘಟಪ್ರಭಾ, ಮಲಪ್ರಭಾ, ಕೃಷ್ಣಾ ಮತ್ತು ಭೀಮಾ ನದಿಗಳಿಗೆ ಹೊಸ ಅಣೆಕಟ್ಟುಗಳನ್ನು ನಿರ್ಮಿ

ಸಲು ಅವಕಾಶವಿದೆ. ಹೀಗಾದರೆ ಕರ್ನಾಟಕವು ಫಲ ಸಮೃದ್ಧ, ಧಾನ್ಯ ಸಮೃದ್ಧವಾದ ಸುಭಿಕ್ಷವಾದ ಸುಂದರತಮವಾದ ರಾಜ್ಯವೆನಿಸುತ್ತದೆ. ಇದ ರಿಂದ ಕರ್ನಾಟಕವು ಆಹಾರದಲ್ಲಿ ಸ್ವಪರಿಪೂರ್ಣವಾಗುತ್ತದೆ. ಅದರಿಂದ ಕರ್ನಾಟಕವು ಆಹಾರದಲ್ಲಿ ಭರತಖಂಡಕ್ಕೆ ನೆರವಾಗಲು ಸಮರ್ಥವಾಗು ತ್ತದೆ. ಕರ್ನಾಟಕ ಪ್ರಾಂತ ಅಥವಾ ವಿಶಾಲ ಮೈಸೂರು ಪ್ರಕೃತಿ ಸಂಪತ್ತಿ ನಿಂದ ಕೂಡಿದ ರಾಜ್ಯವೆನಿಸಿದೆ. ಕಾವೇರಿಯ ಜಲಪಾತಗಳಿಂದ ಶಿವಸಮುದ್ರ ದಲ್ಲಿಯೂ, ಶರಾವತೀ ಜಲಪಾತದಿಂದ ಜೋಗದಲ್ಲಿಯೂ, ಷಿಂಷಾಜಲ ಪಾತದಿಂದ ಷಿಂಷಾ ಕೇಂದ್ರದಲ್ಲಿಯೂ ವಿದ್ಯುಚ್ಛಕ್ತಿಯುತ್ಪಾದನೆಯನ್ನು ಸರ್ಕಾರದವರು ಬಲವಾಗಿ ನಡೆಸಿದ್ದಾರೆ. ಮೈಸೂರಿನ ಸರ್ವಾಂಗೀಣ ಪ್ರಗ ತಿಗೆ ಈ ವಿದ್ಯುಚ್ಛಕ್ತಿಯು ಮುಖ್ಯಕಾರಣವೆನ್ನಬಹುದು. ಅಲ್ಲದೆ ಈ ರಾಜ್ಯದ ಭೂಗರ್ಭದಲ್ಲಿ ಕೋಲಾರದಲ್ಲಿ ಚಿನ್ನ, ತುಮಕೂರಿನಲ್ಲಿ ಮ್ಯಾಂಗ ನೀಸ್, ಚಿಕ್ಕಮಗಳೂರು ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಕಬ್ಬಿಣ ಸಿಕ್ಕುವುದು ಗಮನಾರ್ಹವಾಗಿದೆ. ಅಲ್ಲದೆ ಈ ನಾಡಿನಲ್ಲಿ ಕೆಂಪುಕಲ್ಲು, ಕರಿಯಕಲ್ಲು, ಬಿಳಿಯ ಕಲ್ಲು ಮೊದಲಾದ ಉತ್ತಮವಾದ ಶಿಲಾಸಂಪತ್ತು ತುಂಬಿ ಕೊಂಡಿದೆ. ಮೈಸೂರು ಅರಮನೆಯಲ್ಲಿ ಕಂಗೊಳಿಸುವ ಬಣ್ಣ ಬಣ್ಣದ ಕಲ್ಲು ಗಳೂ ಬಾದಾಮಿಯಲ್ಲಿ ಕಂಗೊಳಿಸುವ ಬಿಳಿಯ ಕಲ್ಲುಗಳೂ ಈ ರಾಜ್ಯದ ಲ್ಲಿಯೇ ಲಭಿಸಿದವುಗಳೆಂಬುದು ಗಮನಾರ್ಹವಾಗಿದೆ.

ಈ ವಿಶಾಲ ಮೈಸೂರು ರಾಜ್ಯವು ಧಾರ್ಮಿಕ ಕ್ಷೇತ್ರಗಳಿಗೂ, ಐತಿ ಹಾಸಿಕ ಸ್ಥಳಗಳಿಗೂ ಪ್ರಖ್ಯಾತವಾಗಿದೆ. ಬಳ್ಳಾರಿ ಜಿಲ್ಲೆಯ ಹಂಪೆ, ಕಾರ ವಾರ ಜಿಲ್ಲೆಯ ಗೋಕರ್ಣ, ಮಂಗಳೂರು ಜಿಲ್ಲೆಯ ಉಡುಪಿ ಮತ್ತು ಧರ್ಮಸ್ಥಳ, ಮೈಸೂರು ಜಿಲ್ಲೆಯ ತಲಕಾಡು ಮತ್ತು ನಂಜನಗೂಡು, ಬಿಜಾಪುರ ಜಿಲ್ಲೆಯ ಮಹಾಕೂಟ, ಮತ್ತು ಬನಶಂಕರಿ, ಬೆಳಗಾಂವಿ ಜಿಲ್ಲೆಯ ಸವದತ್ತಿ, ಚಿಕ್ಕಮಗಳೂರಿನ ಶೃಂಗೇರಿ ಮೊದಲಾದುವು ಪ್ರಖ್ಯಾತ ವಾದ ಧರ್ಮಸ್ಥಳಗಳೆನಿಸಿವೆ. ಅಲ್ಲದೆ ವಿಜಯನಗರ, ಕಲ್ಯಾಣ, ಹಳೇ ಬೀಡು, ಕೆಳದಿ, ಸ್ವಾದಿ, ಮಾನ್ಯಖೇಡ, ಚಿತ್ರದುರ್ಗ, ತಲಕಾಡು, ಬನ ವಾಸಿ, ಶ್ರೀರಂಗಪಟ್ಟಣ, ದೇವಗಿರಿ, ಓರುಂಗಲ್ಲು ಇವು ಪ್ರಸಿದ್ಧ ಇತಿಹಾಸ ಕ್ಷೇತ್ರಗಳೆನಿಸಿವೆ.

ಈ ವಿಶಾಲ ಮೈಸೂರು ರಾಜ್ಯವು ಶಿಲ್ಪಕಲಾ ಸಂಪತ್ತಿಗೂ ಹೆಸರಾಗಿದೆ. ಹಳೇಬೀಡು, ಬೇಲೂರು, ಸೋಮನಾಥಪುರ ದೇವಾಲಯಗಳೂ ಶ್ರವಣಬೆಳಗೊಳ, ಕಾರ್ಕಳ, ಮೂಡಬಿದ್ರೆ, ವೇಣೂರುಗಳಲ್ಲಿರುವ ಗೋಮಟೇಶ್ವರ ವಿಗ್ರಹ ಮತ್ತು ಬಸದಿಗಳೂ, ಕೊಪ್ಪಳ, ಮುಲ್ಕಿ, ಸಿದ್ದಾಪುರಗಳಲ್ಲಿರುವ ಅಶೋಕನ ಶಾಸನಗಳೂ, ಬ್ರಹ್ಮಗಿರಿ, ಚಂದ್ರವಳ್ಳಿಯ ಭೂಸಂಶೋಧನೆಗಳೂ ಈ ರಾಜ್ಯದ ವೈಭವವನ್ನು ಲೋಕಕ್ಕೆ ಎತ್ತಿ ಸಾರುತ್ತವೆ. ಶೃಂಗೇರಿ, ರಂಭಾಪುರಿ, ಉಡುಪಿ, ಮೇಲುಕೋಟೆ, ಚಿತ್ರದುರ್ಗ, ಶ್ರವಣಬೆಳುಗೊಳ, ಹುಬ್ಬಳ್ಳಿ, ಧಾರವಾಡ, ಕಲ್ಬುರ್ಗಿ ಹೊಂಬುಜ, ಉಜ್ಜಯಿನಿ, ಸಿರಿಗೆರೆ, ಸುತ್ತೂರು, ಸಿದ್ದಗಂಗೆ ಕಂಗೊಳಿಸುವ ಧರ್ಮಪೀಠಗಳು.

ಪ್ರಕೃತಿ ಸಂಪತ್ತು, ಧಾನ್ಯ ಸಂಪತ್ತು, ಖನಿಜ ಸಂಪತ್ತು, ಜಲ ಸಂಪತ್ತು, ಕಲಾ ಸಂಪತ್ತು ಇತ್ಯಾದಿಗಳಿಂದ ಕೂಡಿದ ವಿಶಾಲ ಮೈಸೂರು ರಾಜ್ಯವು ಕೊಂಚ ಕಾಲದಲ್ಲಿಯೇ ಸ್ವತಂತ್ರ ಭಾರತದಲ್ಲಿ ತಲೆಯೆತ್ತಿ ನಿಲ್ಲುವುದರಲ್ಲಿ ಅನುಮಾನವಿಲ್ಲ. ಶ್ರೀಗಳಾದ ಸರ್ ಎಂ. ವಿಶ್ವೇಶ್ವರಯ್ಯ, ದಿ|| ಸರ್ ಮಿರ್ಜಾ ಇಸ್ಮಾಯಿಲ್, ಸರ್ ನರಹರಿರಾವ್, ಡಾ||ಆರ್. ಆರ್. ದಿವಾಕರ್, ಕೆ. ಸಿ. ರೆಡ್ಡಿ, ಡಿ. ಪಿ. ಕರಮರ್‌ಕರ್, ಬಿ. ಎನ್. ದಾತಾರ್, ಎಸ್. ವಿ. ಕೃಷ್ಣಮೂರ್ತಿರಾವ್, ಎಸ್. ನಿಜಲಿಂಗಪ್ಪ, ಜನರಲ್ ಕಾರಿಯಪ್ಪ, ಜನರಲ್ ತಿಮ್ಮಯ್ಯ, ಬಿ. ಡಿ. ಜತ್ತಿ, ಡಿ. ಸಿ. ಪಾವಟೆ ಮೊದಲಾದ ಮೇಧಾವಿಗಳಿಂದ ಕೂಡಿದ ಈ ದೇಶವು ಭಾರತಕ್ಕೆ ಅಲಂಕಾರ ಪ್ರಾಯವಾದ ನಾಡೆನಿಸಿದೆ.

ಲೋಹಗಳಲ್ಲಿ ಶ್ರೇಷ್ಠವಾದ ಚಿನ್ನ, ಪ್ರಾಣಿಗಳಲ್ಲಿ ಶ್ರೇಷ್ಠವಾದ ಆನೆ, ಮರಗಳಲ್ಲಿ ಶ್ರೇಷ್ಠವಾದ ಗಂಧ, ನದಿಗಳಲ್ಲಿ ಶ್ರೇಷ್ಠವಾದ ಕಾವೇರಿ ಈ ರಾಜ್ಯದಲ್ಲಿವೆ. ಕೊಡಗಿನ ಕಿತ್ತಲೇಹಣ್ಣು, ಬಾಬಾಬುಡ್ಡನಗಿರಿ ಕಾಫಿ, ನೀಲಗಿರಿ ಟೀ ಪ್ರಪಂಚದಲ್ಲಿಯೇ ಪ್ರಖ್ಯಾತಿ ಗಳಿಸಿವೆ. ಇದೆಲ್ಲವೂ ಮೈಸೂರಿನ ಜನಪ್ರಿಯತೆಗೆ ನಿದರ್ಶನವೆನಿಸಿವೆ.

ಮೈಸೂರು ರಾಜ್ಯದ ಅಧಿಪತಿಗಳಾದ ಶ್ರೀಮನ್ಮಹಾರಾಜ ಜಯಚಾಮರಾಜ ಒಡೆಯರು ೧೯೪೦ ರಿಂದ ರಾಜ್ಯಭಾರ ಮಾಡುತ್ತಿದ್ದಾರೆ. ವಿಶ್ವ

ವಿದ್ಯಾಲಯದ ಪದವೀಧರರಾದ ಇವರು ಮಹಾ ವಿದ್ವಾಂಸರೂ ದೈವಭಕ್ತಿ ಸಂಪನ್ನರೂ ಆಗಿ ಉತ್ತಮ ರಾಜ್ಯಭಾರದಿಂದ ಮೈಸೂರು ಪ್ರಜೆಗಳನ್ನು ಎಲ್ಲ ಬಗೆಯಿಂದ ಅಭಿವೃದ್ಧಿಗೊಳಿಸಿದ್ದಾರೆ. ಇವರು ಸಂಸ್ಕೃತದಲ್ಲಿದ್ದ ವೇದಶಾಸ್ತ್ರ ಪುರಾಣಗಳನ್ನು ಕನ್ನಡಕ್ಕೆ ವಿದ್ವಾಂಸರಿಂದ ಅನುವಾದ ಮಾಡಿಸಿ ಕನ್ನಡ ಸಾಹಿತ್ಯವನ್ನು ಉದ್ಧಾರ ಮಾಡಿದ್ದಾರೆ. ಕ್ರಮಕ್ರಮವಾಗಿ ಪ್ರಜಾಪ್ರಭುತ್ವ ವನ್ನು ವಿಕಾಸಗೊಳಿಸಿ ಇಂದು ಭಾರತದಲ್ಲಿಯೇ ಪ್ರಖ್ಯಾತ ರಾಜನೀತಿಜ್ಞ ರೆನಿಸಿದ್ದಾರೆ. ಗೌರವ ರಾಜ್ಯಪಾಲರಾಗಿದ್ದಾರೆ.

ತಾ|| ೨೯-೭-೫೦ರಂದು ಅವರು ತಮ್ಮ ೩೨ನೇ ವರ್ಷ ವರ್ಧಂತಿಯ ದಿನ ಮೈಸೂರಿನಲ್ಲಿ ಅಪ್ಪಣೆ ಕೊಡಿಸಿದ ಭಾಷಣವೇನಂದರೆ "ಈ ದೇಶದ ಪ್ರಜೆಯಾಗಿರುವುದೇ ನಮಗೊಂದು ಹೆಮ್ಮೆ. ಭಾರತ ಗಣರಾಜ್ಯದ ಪ್ರಗತಿ, ಐಕ್ಯಮತ್ಯ ಮತ್ತು ಯೋಗಕ್ಷೇಮಕ್ಕಾಗಿ ಭಾರತಪುತ್ರನಾಗಿ ಶ್ರಮಿಸು ತ್ತೇನೆ. ಜನತೆಯ ಪ್ರೇಮಕ್ಕಿಂತ ಹೆಚ್ಚಿನ ಐಶ್ವರ್ಯವನ್ನು ನಾವು ಇಚ್ಛಿಸುವು ದಿಲ್ಲ. ಒಡೆಯರ ಮನೆತನದ್ದೆನಿಸಿದ್ದ ಮೈಸೂರು ರಾಜ್ಯವು ಇಂದು ಪ್ರಜಾ ರಾಜ್ಯವಾಗಿ ರೂಪುಗೊಂಡಿರುವುದು ನಮಗೆ ಸಂತೋಷವನ್ನುಂಟುಮಾಡಿದೆ. ಜನತೆಯ ಆಶೋತ್ತರಗಳು ಈಡೇರಲೆಂಬುದೇ ನಮ್ಮ ಬಯಕೆ. ಇದುವರೆಗೆ ನಮ್ಮ ಮನೆತನಕ್ಕೆ ದಾರಿತೋರಿದ ಆ ಮಹಾಜ್ಯೋತಿಯೇ ನಮ್ಮ ಮುಂದಿನ ಜೀವನದಲ್ಲಿಯೂ ಬೆಳಕನ್ನು ತೋರಲಿ'' ಈ ಮಾತುಗಳಲ್ಲಿರುವ ದೇಶಾಭಿ ಮಾನ, ತ್ಯಾಗಶೀಲತೆ, ದೂರದೃಷ್ಟಿ, ಮತ್ತು ವೇದಾಂತ ದೃಷ್ಟಿಗಳು ನಮ್ಮ ಮಹಾರಾಜರು ಎಂತಹ ದಾರ್ಶನಿಕರೆಂಬುದನ್ನು ಲೋಕಕ್ಕೆ ಸಾರಿ ಹೇಳು ತ್ತಿವೆ. ಇಂತಹ ಮಹಾನುಭಾವರಾದ ಮಹಾರಾಜರ ನೇತೃತ್ವದಲ್ಲಿ ಮುಂದುವರಿಯುತ್ತಿರುವ ಮೈಸೂರು ರಾಜ್ಯವು ಭಾಗ್ಯಶಾಲಿಯೇಸರಿ. ಕಾಸರಗೋಡು, ತಾಳವಾಡಿ, ಹೊಸೂರು, ಮಡಕಶಿರ, ಆದವಾನಿ, ಜತ್ತ, ಅಕ್ಕಲಕೋಟೆ, ಸೊಲ್ಲಾಪುರ ಈ ಕನ್ನಡದ ಪ್ರದೇಶಗಳು ಮೈಸೂರಿಗೆ ಸೇರಿದಾಗಲೇ ನಮ್ಮ ರಾಜ್ಯ ಪರಿಪೂರ್ಣವಾಗುತ್ತದೆ. ಅದಕ್ಕಾಗಿ ಶ್ರಮಿಸು ವುದು ನಮ್ಮೆಲ್ಲರ ಕರ್ತವ್ಯ; ಮುಖ್ಯವಾಗಿ ನಮ್ಮ ಸರ್ಕಾರದವರು ಈ ವಿಷ ಯಗಳನ್ನು ತಮ್ಮ ಗಮನಕ್ಕೆ ತಂದುಕೊಂಡು ಕನ್ನಡಿಗರ ಒಕ್ಕೂಟಕ್ಕೆ ನೆರ ವಾಗಬೇಕು.

# ಕರ್ಣಾಟಕದ ತೀರ್ಥಕ್ಷೇತ್ರಗಳು

"ಕನ್ನಡನಾಡು ಪುಣ್ಯದ ಬೀಡು, ಸೊಬಗಿನ ಮಾಡು, ಕಲೆಗಳ ಗೂಡು" ಎಂದು ಕಬ್ಬಿಗರು ಬಣ್ಣಿಸಿರುವುದು ಸರಿಯೇ ಆಗಿದೆ. ಸುಮಾರು ೪೦ ವರ್ಷಗಳಿಂದ ಹಲವಾರು ಕಾರಣಗಳ ದೆಸೆಯಿಂದ ಕನ್ನಡ ನಾಡಿನ ಮೂಲೆ ಮೂಲೆಗಳನ್ನು ಸುತ್ತಿಬಂದಿರುವ ನನಗೆ ಈ ಮಾತು ಮನವರಿಕೆಯಾಗಿದೆ. ರಾಮಾಯಣ, ಮಹಾಭಾರತಾದಿ ಗ್ರಂಥಗಳ ಕಾಲದಿಂದ ಕರ್ಣಾಟಕವು ಹಲವಾರು ಪುಣ್ಯಕ್ಷೇತ್ರಗಳಿಗೂ, ಮಹಾಮಹಿಮರಿಗೂ ಜನ್ಮಸ್ಥಳವಾಗಿದೆ ಎಂಬ ವಿಷಯವನ್ನು ನಾವು ಪ್ರಾಚೀನ ಗ್ರಂಥಗಳ ಅವಲೋಕನದಿಂದ ಅರಿಯಬಹುದಾಗಿದೆ. ಆದಿಕವಿ ಪಂಪನ ವಿಕ್ರಮಾರ್ಜುನ ವಿಜಯದಲ್ಲಿ ಅರ್ಜುನನು ಗೋಕರ್ಣಕ್ಕೆ ಬಂದಂತೆಯೂ, ಮಹಾಕವಿ ಹರಿಹರನ ಗಿರಿಜಾ ಕಲ್ಯಾಣದಲ್ಲಿ ಪರಮೇಶ್ವರನು ಹಂಪೆಯ ಹೇಮಕೂಟದಲ್ಲಿ ತಪಸ್ಸು ಮಾಡಿದಂತೆಯೂ, ಪಂಡಿತಕವಿ ರಾಘವಾಂಕನ ಹರಿಶ್ಚಂದ್ರ ಕಾವ್ಯ ಮತ್ತು ವೀರೇಶ ಚರಿತೆಗಳಲ್ಲಿ ವಶಿಷ್ಠ ಮತ್ತು ದಧೀಚಿ ಮಹರ್ಷಿಗಳು ಪಂಪಾ ಕ್ಷೇತ್ರದಲ್ಲಿ ತಪಸ್ಸುಮಾಡಿದಂತೆಯೂ ಉಲ್ಲೇಖವಿದೆ. ಈ ಮಾತು ಕನ್ನಡ ಕವಿಗಳ ದೇಶಾಭಿಮಾನವೆಂದು ಭಾವಿಸಿದರೂ ರಾಮಾಯಣದಲ್ಲಿ ಶ್ರೀರಾಮ ಚಂದ್ರನು ಹಂಪೆಗೆ ಬಂದಂತೆ ಹೇಳಿರುವುದು ಪ್ರಸಿದ್ಧವಾಗಿದೆ. ಕಿಷ್ಕಿಂಧಾ ಕಾಂಡದ ಕಥೆಯೆಲ್ಲಾ ಹಂಪೆಯಲ್ಲಿಯೇ ನಡೆದಿದೆ. ಭಾಗವತದಲ್ಲಿ ಪ್ರಹ್ಲಾದನು ಗಜಾರಣ್ಯಕ್ಷೇತ್ರಕ್ಕೆ (ತಲಕಾಡು) ಬಂದಿದ್ದನೆಂದು ಹೇಳಿರುವುದು ಇಲ್ಲೆನ್ನಲಾಗುವುದಿಲ್ಲ. ಗೋಕರ್ಣದ ಹೆಸರು ರಾಮಾಯಣದ (ಸುಂ. ಕಾಂ. ೩೫) ರಲ್ಲಿದೆ. ಅರ್ಜುನನು ಇಲ್ಲಿಗೆ ಬಂದಿದ್ದನೆಂದು ಮಹಾಭಾರತ (ಆದಿಪರ್ವ, ೨೪೭) ರಲ್ಲಿ ಹೇಳಿದೆ. ಕನ್ನಡ ರಾಜ್ಯೋದಯವಾದ ಇಂದಿನ ಸಮಯದಲ್ಲಿ ವಿಶಾಲ ಮೈಸೂರು ರಾಜ್ಯದಲ್ಲಿರುವ ತೀರ್ಥಕ್ಷೇತ್ರಗಳ ಪರಿಚಯವು ನಮ್ಮ ಜನರಿಗೆ ಸಂಗ್ರಹವಾಗಿಯಾದರೂ ಆಗಲೆಂಬ ಕಾರಣದಿಂದ ಇಲ್ಲಿ ಈ ಲೇಖನವನ್ನು ಬರೆಯಲಾಗಿದೆ.

## ೧. ಪಂಪಾಕ್ಷೇತ್ರ :

ಕನ್ನಡನಾಡಿನಲ್ಲಿ ಪಂಪಾಕ್ಷೇತ್ರವು ಅತಿ ಪ್ರಾಚೀನಕಾಲದಿಂದ ಪ್ರಖ್ಯಾತಿಯನ್ನು ಪಡೆದಿದೆ. ಆದಿಕಾವ್ಯವಾದ ರಾಮಾಯಣದಲ್ಲಿ ಕೂಡ ಈ ಹೆಸರು ಬಂದಿದೆ. ಅಲ್ಲಿ ಹೇಮಕೂಟ, ಮಾಲ್ಯವಂತ, ಮತಂಗ, ಋಷ್ಯಮೂಕ ಮತ್ತು ಕಿಷ್ಕಿಂದ ಎಂಬ ಐದು ಪರ್ವತಗಳಿವೆ. ಹೇಮಕೂಟದಲ್ಲಿ ವಿರೂಪಾಕ್ಷನ ದೇವಾಲಯವಿದೆ. ಅಲ್ಲಿ ಶ್ರೀ ವಿರೂಪಾಕ್ಷಲಿಂಗ, ಪಂಪಾಂಬಿಕಾ, ಭುವನೇಶ್ವರೀ, ಗುಲಗಂಜಿ ಮಾಧವ–ಮೊದಲಾದ ದೇವರುಗಳಿವೆ. ಇಲ್ಲಿ ಸುಪ್ರಸಿದ್ಧ ವಿಜಯನಗರ ಸಾಮ್ರಾಜ್ಯವು ಸುಮಾರು ಇನ್ನೂರೈವತ್ತು ವರ್ಷಗಳ ಕಾಲ ಆಳಿ ಬಾಳಿದುದರ ಫಲವಾಗಿ ಆ ರಾಯರುಗಳ ಕಾಲದಲ್ಲಿ ವಿಖ್ಯಾತವಾದ ಹಲವು ಗುಡಿಗೋಪುರಗಳು ಕಟ್ಟಲ್ಪಟ್ಟವೆ. ವಿಜಯನಗರವು ಕ್ರಿ. ಶ. ೧೩೩೬ ರಿಂದ ೧೫೬೫ರ ವರೆಗೆ ಬಾಳಿ ಬದುಕಿದ ಸಂಗತಿ ಇತಿಹಾಸದಲ್ಲಿ ಪ್ರಸಿದ್ಧವಾಗಿದೆ. ಆ ಕಾಲದಲ್ಲಿ ಕಟ್ಟಲ್ಪಟ್ಟ ಯೋಗರಾಮ, ಅನಂತಶಯನ, ವರಾಹ, ಯಂತ್ರೋದ್ಧಾರ ಹನುಮಪ್ಪ, ಅಚ್ಯುತರಾಯ, ಭೋಗರಾಮ, ವಿಜಯವಿಠಲ, ಮತಂಗದ ವೀರೇಶ, ಶ್ರೀಕೃಷ್ಣದೇವರು, ಪಟ್ಟಾಭಿರಾಮ, ಉದ್ದಾನ ವೀರಭದ್ರ, ಹಜಾರ ರಾಮ, ಉಗ್ರನರಸಿಂಹ, ಬಡವಿಯ ಲಿಂಗ, ಆಂಜನೇಯಸ್ವಾಮಿ, ಕಡಲೇ ಗಣಪ, ಸಾಸಿವೇ ಗಣಪತಿ ಮೊದಲಾದ ದೇವಾಲಯಗಳು ಅಲ್ಲಿ ಪ್ರಸಿದ್ಧವಾಗಿವೆ.

ಕನ್ನಡ ಸಾಹಿತ್ಯದಲ್ಲಿ ಗಣ್ಯರಾದ ಮಹಾಕವಿ ಹರಿಹರ, ರಾಘವಾಂಕ, ಚಾಮರಸ, ವಿರೂಪಾಕ್ಷ ಪಂಡಿತ ಮೊದಲಾದ ಕವಿಗಳು ಇಲ್ಲಿ ಆಗಿ ಹೋಗಿದ್ದಾರೆ. ದಾಸಕೂಟದ ವೈಷ್ಣವ ಶ್ರೇಷ್ಠರಾದ ಶ್ರೀ ಪುರಂದರ ದಾಸರು, ವ್ಯಾಸರಾಯರು, ವಾದಿರಾಜರು, ಕನಕದಾಸರು–ಮೊದಲಾದ ಮಹಾತ್ಮರು ಇಲ್ಲಿ ಕೃಷ್ಣದೇವರಾಯನ ಕಾಲದಲ್ಲಿ ಇದ್ದಂತೆ ಐತಿಹ್ಯವಿದೆ. ತುಂಗಭದ್ರಾ ನದಿಯ ತೀರದಲ್ಲಿರುವ ಪುರಾಣಪ್ರಸಿದ್ಧವಾದ ಈ ಕ್ಷೇತ್ರದಲ್ಲಿ ಶೈವರ ಶಿವದೇವಾಲಯಗಳು, ವೈಷ್ಣವರ ನವಬೃಂದಾವನಗಳು, ಜೈನರ ಬಸದಿಗಳು ಇವೆ. ಇದೊಂದ ಸಮಗ್ರ ಹಿಂದುಗಳ ಸುಕ್ಷೇತ್ರವೆನಿಸಿದೆ. ಇದು ಮೈಸೂರು ರಾಜ್ಯದ ಬಳ್ಳಾರಿ ಜಿಲ್ಲೆಯಲ್ಲಿದೆ.

೨. ಜಂಬುನಾಥ :

ಇದು ಪೂರ್ವದಲ್ಲಿ ಪಂಪಾಕ್ಷೇತ್ರಕ್ಕೆ ಸೇರಿದಂತೆಯೇ ಇದ್ದಿತು. ಈಗ ಹೊಸಪೇಟೆಯ ಸಮೀಪದಲ್ಲಿ ಕಂಗೊಳಿಸುತ್ತಿದೆ. ಇಲ್ಲಿ ಜಂಬು ನಾಥೇಶ್ವರ ಎಂಬ ಶಿವಲಿಂಗವಿದೆ. ಹಂಪೆಗೆ ಬಂದು ಹೋಗುವವರು ಇಲ್ಲಿಗೂ ಬಂದು ಸ್ವಾಮಿಯ ಸೇವೆಯನ್ನು ಸಲ್ಲಿಸುತ್ತಾರೆ. ಇದು ಒಂದು ಆರೋಗ್ಯಧಾಮವೆನಿಸಿದೆ. ಈ ಗುಡಿ ಗುಡ್ಡದಮೇಲಿದೆ.

೩. ಕುರುಗೋಡು :

ಇಲ್ಲಿ ಬೃಹದಾಕಾರವಾದ ಒಂದು ವೃಷಭನ ವಿಗ್ರಹವಿದೆ. ಈ ತರದ ವಿಗ್ರಹಗಳು, ಕರ್ನಾಟಕದಲ್ಲಿ, ಲೇಪಾಕ್ಷಿ, ಚಾಮುಂಡಿಬೆಟ್ಟ, ಬೆಂಗಳೂರು ಬಸವನಗುಡಿ – ಮೊದಲಾದ ಸ್ಥಳಗಳಲ್ಲಿವೆ. ಹಳೇಬೀಡು ಹೊಯ್ಸಳೇಶ್ವರ, ಪಟ್ಟದಕಲ್ಲು ವಿರೂಪಾಕ್ಷ, ತಂಜಾವೂರು ಬೃಹದೇಶ್ವರ ದೇವಾಲಯಗಳಲ್ಲಿ ಕೂಡ ಈ ತರದ ಮಹತ್ವದ ವೃಷಭ ವಿಗ್ರಹಗಳಿವೆ.

೪. ಲೇಪಾಕ್ಷಿ :

ಇದು ಕರ್ನಾಟಕದ ಗಡಿಯಲ್ಲಿರುವುದು. ಆದರೆ ಈಗ ಅನಂತಪುರ ಜಿಲ್ಲಾ ಹಿಂದೂಪುರ ತಾಲ್ಲೂಕಿನಲ್ಲಿದೆ. ಇಲ್ಲಿ ಶಿಲ್ಪಕಲಾ ವೈಭವದಿಂದ ಕೂಡಿದ ವೀರಭದ್ರ ದೇವಾಲಯವಿದೆ. ಈ ಗುಡಿಯ ಮುಂದೆ ಮಹೋನ್ನತವಾದ ವೃಷಭನ ವಿಗ್ರಹವಿದೆ. ಈ ಗುಡಿ ಶಿಲ್ಪಿಕಲೆಗೂ ಚಿತ್ರಕಲೆಗೂ ಹೆಸರಾಗಿದೆ. ರಾಮಾಯಣದ ಜಟಾಯು ರಾವಣನಿಂದ ಇಲ್ಲಿ ವಧಿಸಲ್ಪಟ್ಟಿತೆಂದು ಐತಿಹಸ್ಯವಿದೆ.

೫. ಕುಮಾರಸ್ವಾಮಿ ಕ್ಷೇತ್ರಗಳು :

ಸೊಂಡೂರು (ಬಳ್ಳಾರಿ ಜಿಲ್ಲಾದಲ್ಲಿ) ಷಣ್ಮುಖಸ್ವಾಮಿಯ ದೇವಾಲಯದಿಂದ ಪ್ರಸಿದ್ಧವಾಗಿದೆ. ತಮಿಳುನಾಡಿನಲ್ಲಿ ಉರೂರಿಗೂ ಕುಮಾರ ಸ್ವಾಮಿ ಗುಡಿ ಇದ್ದರೂ ಕರ್ನಾಟಕದಲ್ಲಿ ಷಣ್ಮುಖನ ಹೆಸರಿನಿಂದ ಈ ಒಂದು ಕ್ಷೇತ್ರಮಾತ್ರ ಪ್ರಸಿದ್ಧವಾಗಿದೆ. ಇಲ್ಲಿ ಅಗಸ್ತ್ಯ ತೀರ್ಥವು ಪ್ರಸಿದ್ಧವಾಗಿದೆ ಇದು ಅತ್ಯಂತ ಮಹಿಮಾಸ್ಥಳವೆನಿಸಿದೆ. ಇಲ್ಲಿಗೆ ಸ್ತ್ರೀಯರ ಪ್ರವೇಶವಿಲ್ಲದಿರುವುದೊಂದು ವೈಶಿಷ್ಟ್ಯವೆನಿಸಿದೆ. ಶ್ರೀ ಸುಬ್ರಹ್ಮಣ್ಯ ಸ್ವಾಮಿಯ ಹೆಸರಿನಲ್ಲಿ

ಬೆಂಗಳೂರು ಜಿಲ್ಲೆಯಲ್ಲಿ ಘಾಟಿ ಸುಬ್ರಹ್ಮಣ್ಯ, ಮಂಗಳೂರು ಜಿಲ್ಲೆಯಲ್ಲಿ ಕುಕ್ಕೆ ಸುಬ್ರಹ್ಮಣ್ಯ ಎಂಬ ಎರಡು ಕ್ಷೇತ್ರಗಳಿವೆ. ಆದರೆ ಅಲ್ಲಿ ಶ್ರೀ ಸುಬ್ರಹ್ಮಣ್ಯ ಸ್ವಾಮಿಯು ಭಕ್ತರ ನಂಬಿಕೆಗೆ ಅನುಗುಣವಾಗಿ ಸರ್ಪಾಕಾರ ವಾಗಿದ್ದಾನೆ. ಸೊಂಡೂರಿನ ಸುಬ್ರಹ್ಮಣ್ಯನು ತಮಿಳು ನಾಡಿನ ಪಳನಿಯ ಸುಬ್ರಹ್ಮಣ್ಯಸ್ವಾಮಿಯನ್ನು ನೆನಪಿಗೆ ತರುತ್ತಾನೆ. ಸೊಂಡೂರು ಗುಡ್ಡದ ಮೇಲಿರುವ ಈ ದೇವಾಲಯವು ಅತ್ಯಂತ ಮನೋಹರವಾಗಿದೆ.

೬. ಕೊಟ್ಟೂರು, ಉಜ್ಜಯಿನಿ, ಕಾನಾಮಡು :

ಬಳ್ಳಾರಿ ಜಿಲ್ಲಾ ಕೊಟ್ಟೂರು ಕ್ಷೇತ್ರದಲ್ಲಿ ಶ್ರೀ ಕೊಟ್ಟೂರು ಬಸವೇಶ್ವರನೆಂಬ ಮಹಾತ್ಮನ ಸಮಾಧಿಯಿದೆ. ಇದು ಅತ್ಯಂತ ಮಹಿಮಾಸ್ಥಾನವೆನಿಸಿದೆ. ಈ ವಿಷಯವು ಕೊಟ್ಟೂರು ಬಸವೇಶ್ವರ ಪುರಾಣದಲ್ಲಿದೆ. ಇದೇ ಜಿಲ್ಲಾ ಉಜ್ಜಯಿನಿಯಲ್ಲಿ ವೀರಶೈವರ ಪಂಚಪೀಠಗಳಲ್ಲಿ ಒಂದಾದ ಧರ್ಮಸಿಂಹಾಸನ ಮಠವಿದೆ. ಹಾಗೂ ಆಚಾರ್ಯ ಶ್ರೀ ಮರುಳ ಸಿದ್ಧೇಶ್ವರನ ದೇವಾಲಯವಿದೆ. ಇದೇ ಜಿಲ್ಲಾ ಕಾನಾಮಡುವಿನಲ್ಲಿ ಒಬ್ಬ ಮಹಿಮಾಶಾಲಿಗಳಾದ ಶರಣರ ಸಮಾಧಿಯಿದೆ. ದಾಸೋಹ ಮಠವಿದೆ. ಮೇಲೆ ಕಂಡ ಈ ಮೂರುಕ್ಷೇತ್ರಗಳನ್ನೂ ವೀರಶೈವರು ಪವಿತ್ರ ಸ್ಥಳಗಳನ್ನಾಗಿ ಭಾವಿಸುತ್ತಾರೆ. ಮತ್ತು ಎಲ್ಲ ಹಿಂದುಗಳೂ ಈ ಕ್ಷೇತ್ರಗಳಿಗೆ ಎರಗುತ್ತಾರೆ.

೭. ಮಂತ್ರಾಲಯ :

ಕರ್ನಾಟಕದ ಪುಣ್ಯಭೂಮಿಗೆ ಸೇರಿದ ಇದು ಈಗ ಆಂಧ್ರರಾಜ್ಯಕ್ಕೆ ಸೇರಿದಂತಿದೆ. ಈ ಸುಕ್ಷೇತ್ರವು ತುಂಗಭದ್ರಾ ತೀರದಲ್ಲಿದೆ. ಇಲ್ಲಿ ಮಾಧ್ವ ಮತೀಯರಲ್ಲಿ ಪ್ರಖ್ಯಾತ ಗುರುಗಳೆನಿಸಿದ ಶ್ರೀ ರಾಘವೇಂದ್ರ ಸ್ವಾಮಿಗಳ ಬೃಂದಾವನವಿದೆ. ಇದನ್ನು ವೈಷ್ಣವರು ಪವಿತ್ರ ಸ್ಥಳವೆಂದು ಭಾವಿಸಿದ್ದಾರೆ.

೮. ಶರಣಬಸವೇಶ್ವರ ಕ್ಷೇತ್ರ :

ಇದು ಕಲ್ಬುರ್ಗಿಯಲ್ಲಿ ಶರಣನಗರದಲ್ಲಿದೆ. ಇಲ್ಲಿ ಮಹಾತ್ಮನಾದ ಶ್ರೀ ಶರಣಬಸವೇಶ್ವರನ ದೇವಾಲಯವಿದೆ, ಹಾಗೂ ದಾಸೋಹದ ಮಠ

ವಿದೆ. ಶರಣಬಸವೇಶ್ವರ ಪುರಾಣದಲ್ಲಿ ಇದರ ಮಹಿಮೆಯಿದೆ. ಈ ಗುಡಿಯ ಆಶ್ರಯದಲ್ಲಿ, ಕಾಲೇಜು, ಹೈಸ್ಕೂಲು, ಬೋರ್ಡಿಂಗು ಮೊದಲಾದುವು ನಡೆಯುತ್ತಿವೆ.

೯. ಕಲ್ಯಾಣ ಪಟ್ಟಣ :

ಇದು ಮೈಸೂರು ರಾಜ್ಯದ ಬೀದರ ಜಿಲ್ಲೆಯಲ್ಲಿದೆ. ಇಲ್ಲಿ ಶ್ರೀ ಬಸವೇಶ್ವರನಿಂದ ಸಂಸ್ಥಾಪಿಸಲ್ಪಟ್ಟ ಅನುಭವ ಮಂಟಪವಿತ್ತು. ಇಲ್ಲಿ ಶಿವ ಶರಣರ ತಪೋಭೂಮಿಯೆನಿಸಿದ ಬಿಲ್ವವನವೂ ನೆಲಗವಿಗಳೂ ಇವೆ. ಇಲ್ಲಿ ಬಸವಣ್ಣನವರು ಮುಹೂರ್ತ ಮಾಡುತ್ತಿದ್ದ ಪರುಷಗಟ್ಟಿಯಿದೆ. ಇಲ್ಲಿರುವ ತ್ರಿಪುರಾಂತಕನ ಕೆರೆಯನ್ನೂ ಮಾಚಯ್ಯನ ಹೊಂಡವನ್ನೂ ಶಿವಭಕ್ತರು ಪವಿತ್ರವೆಂದು ಭಾವಿಸುತ್ತಾರೆ. ಇದು ಚಾಳುಕ್ಯರ ರಾಜಧಾನಿ ಹಾಗೂ ಶಿವಶರಣರ ಧರ್ಮಸ್ಥಳವೆಂದು ಪ್ರಖ್ಯಾತಿಯನ್ನು ಪಡೆದಿದೆ. ಶ್ರೀ ಬಸವೇಶ್ವರ, ಅಕ್ಕನಾಗಮ್ಮ, ಪ್ರಭುದೇವರು, ಮೋಳಿಗೆಮಾರಯ್ಯ, ಶರಣ ಅರಳಯ್ಯ, ನುಲಿಚಂದಯ್ಯ, ರುದ್ರಮುನಿಸ್ವಾಮಿ –ಮೊದಲಾದ ಶರಣರ ಸ್ಮಾರಕಗಳಿವೆ. ಇದನ್ನು ವೀರಶೈವರು ಬಹಳ ಮುಖ್ಯವಾದ ಪುಣ್ಯಕ್ಷೇತ್ರ ವನ್ನಾಗಿ ಭಾವಿಸಿದ್ದಾರೆ. ಇದು ಚಾಲುಕ್ಯರ ರಾಜಧಾನಿಯಾಗಿ ಕೂಡ ಪ್ರಖ್ಯಾತವಾಗಿದೆ. ಇತಿಹಾಸ ಭಕ್ತರಿಗೂ ಇದು ಪ್ರಿಯವಾದ ಸ್ಥಳವೆನಿಸಿದೆ.

೧೦. ಗಾಣಗಾಪುರ :

ಇದು ಗುಲ್ಬರ್ಗ ಜಿಲ್ಲೆಯಲ್ಲಿದೆ. ಇಲ್ಲಿ ದತ್ತಾತ್ರೇಯನ ಪೀಠವಿದೆ. ಪ್ರಖ್ಯಾತವಾದ ಮಾರುತಿಯ ದೇವಾಲಯವಿದೆ. ಭಕ್ತರು ಸದಾ ಇಲ್ಲಿಗೆ ಬಂದು ಹೋಗುತ್ತಾರೆ.

೧೧. ಕೂಡಲಸಂಗಮ ಕ್ಷೇತ್ರ :

ಇದು ಬಿಜಾಪುರ ಜಿಲ್ಲೆಯಲ್ಲಿ ಕೃಷ್ಣಾ ಮತ್ತು ಮಲಪ್ರಭಾ ನದಿಗಳ ಸಂಗಮ ಸ್ಥಳದಲ್ಲಿದೆ. ಇಲ್ಲಿ ಹೊಯ್ಸಳರ ಕಾಲದ ಸುಪ್ರಸಿದ್ಧವಾದ ಶಿವ ದೇವಾಲಯವಿದೆ. ಇದನ್ನು 'ಕೂಡಲ ಸಂಗಮೇಶ್ವರ' ಎಂದು ಕರೆಯುತ್ತಾರೆ.

೧೨ನೆಯ ಶತಮಾನದಲ್ಲಿ ಇಲ್ಲಿ ಜಾತವೇದಸ್ವಾಮಿ ಎಂಬ ದೊಡ್ಡ ಮಹಾತ್ಮನಿದ್ದನು. ಅವನ ಸನ್ನಿಧಿಯಲ್ಲಿ ಶ್ರೀ ಬಸವೇಶ್ವರ, ಚೆನ್ನಬಸವೇಶ್ವರ, ಅಕ್ಕನಾಗಮ್ಮ ಶಿವಸ್ವಾಮಿ ಮೊದಲಾದವರು ಹಲವಾರುವರ್ಷ ವಿದ್ಯಾಭ್ಯಾಸ ಮಾಡಿದಂತೆ ಅಮುಲ ಬಸವ ಪುರಾಣದಲ್ಲಿ ಹೇಳಿದೆ. ವರ್ಷಕ್ಕೊಮ್ಮೆ ಇಲ್ಲಿ ದೊಡ್ಡ ಜಾತ್ರೆ ಸೇರುತ್ತದೆ. ಕೃಷ್ಣಾ ಮತ್ತು ಮಲಪ್ರಭಾ ನದಿಗಳು, ಕರ್ಣಾಟಕದ ಇತರ ನದಿಗಳಾದ, ಕಾವೇರಿ, ತುಂಗಭದ್ರಾ, ಕಪಿಲಾ, ನೇತ್ರಾವತಿ, ಭೀಮಾ, ಘಟಪ್ರಭಾ, ಸುವರ್ಣಾವತಿ, ಹೇಮಾವತಿ, ಅರ್ಕಾವತಿ, ಲಕ್ಷ್ಮಣ ತೀರ್ಥ, ಶರಾವತಿ, ವರದಾ, ಹಿರಣ್ಯಕೇಶಿ, ಜಯಮಂಗಲ ನದಿಗಳಂತೆ ಪವಿತ್ರ ತೀರ್ಥಗಳೆಂದು ಭಾವಿಸಲ್ಪಟ್ಟವೆ.

ಕೂಡಲ ಸಂಗಮಕ್ಕೆ ಅನತಿ ದೂರದಲ್ಲಿಯೇ ವಿಜಯನಗರದ ಅರಸರಿಗೂ, ಬಹಮನೀ ಸುಲ್ತಾನರಿಗೂ ೧೫೬೫ರಲ್ಲಿ ನಡೆದ ಮಹಾಸಂಗ್ರಾಮದ "ರಕ್ಕಸತಂಗಡಗಿ" ಎಂಬ ರಣಭೂಮಿಯಿದೆ. ಅಲ್ಲಿ ಬಸವಣ್ಣನವರ ಧರ್ಮಪತ್ನಿಯರು ನೀಲಾಂಬಿಕೆ ಮತ್ತು ಗಂಗಾಂಬಿಕೆಯರ ಸಮಾಧಿಗಳಿವೆ.

೧೨. ಇಂಗಳೇಶ್ವರ–ಬಾಗೇವಾಡಿ :

ಇಂಗಳೇಶ್ವರವು ಬಿಜಾಪುರ ಜಿಲ್ಲಾದ ಒಂದು ಐತಿಹಾಸಿಕ ಸ್ಥಳ. ಇಲ್ಲಿ ಹನ್ನೊಂದನೆಯ ಶತಮಾನದಲ್ಲಿ ಮಹಾಕವಿ ಅಗ್ಗಳನ ಚಂದ್ರಪ್ರಭ ಪುರಾಣಕ್ಕೆ ಕಥಾನಾಯಕನಾದ ಶ್ರೀ ಚಂದ್ರಪ್ರಭ ತೀರ್ಥಂಕರನ ದೇವಾಲಯವಿತ್ತು. ಅಲ್ಲಿ ಈಗಲೂ ಅನೇಕ ಶಿವ–ವಿಷ್ಣು ದೇವಾಲಯಗಳಿವೆ. ವೀರಶೈವರ ಪ್ರಸಿದ್ಧ ಆಚಾರ್ಯ ರೇವಣಸಿದ್ಧನ ದೇವಾಲಯವು ಅಲ್ಲಿನ ಗುಡ್ಡದಲ್ಲಿದೆ. ಆದರ ಪಕ್ಕದಲ್ಲಿ (ಅದೇ ಗುಡ್ಡದಲ್ಲಿ) ಅಕ್ಕನಾಗಮ್ಮನ ಗವಿ ಯಿದೆ. ಚಾಲುಕ್ಯರ ಕಾಲದಲ್ಲಿ ಇದು ಒಂದು ಉಪರಾಜಧಾನಿಯಾಗಿತ್ತು. ಕಾಲಚೂರ್ಯ ಬಿಜ್ಜಳನು ಈ ಊರಿನವನೆಂದು ಹೇಳಲಾಗಿದೆ. ಇದನ್ನು ತರ್ದೆವಾಡಿನಾಡಿನ ರಾಜಧಾನಿಯೆಂದು ಆಗಣ ಶಾಸನಗಳಲ್ಲಿ ಹೇಳಿದೆ.

ಬಾಗೇವಾಡಿಯು ಬಸವೇಶ್ವರನು ಹುಟ್ಟಿದ ಸ್ಥಳ. ಆತನ ಹೆಸರಿನ ಸುಪ್ರಸಿದ್ಧ ದೇವಾಲಯವು ಅಲ್ಲಿದೆ. ಇದನ್ನು ವೀರಶೈವರು ಪವಿತ್ರವಾದ

ಸ್ಥಳವೆಂದು ಭಾವಿಸಿದ್ದಾರೆ. ಪೂರ್ವಕಾಲದಲ್ಲಿ ಬಾಗೇವಾಡಿಯು ಇಂಗಳೇಶ್ವರದ ಒಂದು ಶಾಖಾನಗರವಾಗಿದ್ದಿತೆಂದು ತಿಳಿದುಬರುತ್ತದೆ. ಈಗ ಅಲ್ಲಿ ಹೊಸ ಗುಡಿ ಕಟ್ಟಿದ್ದಾರೆ.

### ೧೩. ಮಹಾಕೂಟ–ಬನಶಂಕರಿ–ಶಿವಯೋಗಮಂದಿರ :

ಇವು ಬಿಜಾಪುರ ಜಿಲ್ಲಾ ಬಾದಾಮಿ ತಾಲ್ಲೂಕಿನಲ್ಲಿವೆ. ಮಹಾಕೂಟದಲ್ಲಿ ಮಹರ್ಷಿ ಅಗಸ್ತ್ಯರು ವಾತಾಪಿ ಇಲ್ವಲರೆಂಬ ರಾಕ್ಷಸರನ್ನು ಸಂಹರಿಸಿದಂತೆ ಪುರಾಣಗಳಲ್ಲಿ ಕಥೆಯಿದೆ. ಇಲ್ಲಿ ಹಾಟಕೇಶ್ವರ, ಭೈರವೇಶ್ವರ, ಪಿನಾಕಿನಾಥ, ರಾಮಲಿಂಗ, ಕಪಿಲೇಶ, ಮಲ್ಲಿಕಾರ್ಜುನ, ಮಾಕುಭೇಶ್ವರ, ವೀರಭದ್ರ, ಸರಸ್ವತಿ, ಕೋಣೇಶಂಕರ ದೇವಾಲಯಗಳೂ, ವಿಷ್ಣುಪುಷ್ಕರಣಿ ತೀರ್ಥವೂ ಇವೆ. ಈ ಮಹಾಕೂಟ ಕ್ಷೇತ್ರದ ಸುತ್ತಮುತ್ತಲೂ ಚಾಳುಕ್ಯರ ಮನೆದೇವತೆಯಾದ ಬನಶಂಕರಿ, ವೀರಶೈವರ ಪವಿತ್ರ ಕ್ಷೇತ್ರವಾದ ಶಿವಯೋಗಮಂದಿರ, ನಂದಿಕೇಶ್ವರನೆಂಬ ಆಚಾರ್ಯನ ಹೆಸರಿನ ನಂದಿಕೇಶ್ವರ ಗ್ರಾಮ ಶಿಲ್ಪಕಲಾ ವೈಭವದಿಂದ ಪರಿಶೋಭಿಸುತ್ತಿರುವ ಬಾದಾಮಿ, ಐಹೊಳೆ, ಪಟ್ಟಣದ ಕಲ್ಲು (ಕಿಸುಪೊಳಲ್) ಎಂಬ ಐತಿಹಾಸಿಕ ಸ್ಥಳಗಳು ವಿರಾಜಮಾನವಾಗಿವೆ. ಮಹಾಕೂಟವು ಒಂದುಕಾಲದಲ್ಲಿ ಕಾಪಾಲಿಕರ ಹಾಗೂ ಲಕುಲೀಶರ ಮುಖ್ಯಸ್ಥಳವೆನಿಸಿತ್ತೆಂದು ತೋರುತ್ತದೆ. ಪಟ್ಟದಕಲ್ಲು, ಐಹೊಳೆಗಳಲ್ಲಿ ಪ್ರಖ್ಯಾತ ಗುಡಿಗಳಿವೆ.

### ೧೪. ಸಂಕೇಶ್ವರ :

ಇದು ಬೆಳಗಾವಿ ಜಿಲ್ಲೆಯಲ್ಲಿ ಹಿರಣ್ಯಕೇಶೀ ನದಿಯ ತೀರದಲ್ಲಿದೆ. ಇಲ್ಲಿ ಶ್ರೀ ಶಂಕರಾಚಾರ್ಯರ ಮಠವಿದೆ. ಸ್ಮಾರ್ತಮತೀಯರು ಇದನ್ನು ಸುಕ್ಷೇತ್ರವೆಂದು ಭಾವಿಸಿದ್ದಾರೆ. ಇಲ್ಲಿ ಶ್ರೀ ಶಂಕರನ ಪ್ರಾಚೀನ ಗುಡಿಯಿದೆ.

### ೧೫. ಸೌದತ್ತಿ ಎಲ್ಲಮ್ಮನ ಗುಡ್ಡ :

ಇದು ಬೆಳಗಾವಿ ಜಿಲ್ಲೆಯಲ್ಲಿದೆ. ಇಲ್ಲಿ ಶ್ರೀ ಎಲ್ಲಮ್ಮ ದೇವರ ದೇವಾಲಯವಿದೆ. ಶಕ್ತಿದೇವತೆಯ ಭಕ್ತರು ಇಲ್ಲಿಗೆ ಬರುತ್ತಾರೆ. ಬಾದಾಮಿಯಲ್ಲಿ

ಬನಶಂಕರಿ, ಮೈಸೂರಿನಲ್ಲಿ ಚಾಮುಂಡಿ, ಶೃಂಗೇರಿಯಲ್ಲಿ ಶಾರದೆ, ಹಂಪೆ ಯಲ್ಲಿ ಭುವನೇಶ್ವರಿ, ಸೌದತ್ತಿಯಲ್ಲಿ ಎಲ್ಲಮ್ಮ, ಚಂದ್ರಗುತ್ತಿಯಲ್ಲಿ ರೇಣುಕೆ, ಕೊಲ್ಲೂರಿನಲ್ಲಿ ಮೂಕಾಂಬಿಕಾ. ಶಿರಸಿಯಲ್ಲಿ ಮಾರಿಕಾಂಬಾ ಇವು ಕರ್ನಾಟಕದ ಶಕ್ತಿದೇವತೆಯರು. ಕೊಲ್ಲಾಪುರದ ಲಕ್ಷ್ಮೀದೇವಿ, ತುಳಜಾಪುರದ ಭವಾನಿ ಇವುಗಳು ಕರ್ನಾಟಕದ ಗಡಿಯಲ್ಲಿರುವ ಶಕ್ತಿದೇವತೆಗಳು. ಕರ್ನಾಟಕದಲ್ಲಿ ಲಕ್ಷ್ಮೀದೇವಾಲಯಗಳು ಬಹಳವಾಗಿವೆ.

### ೧೬. ಅರಭಾವಿ_ನಿಡಸೋಸಿ_ಅಂಕಲಗಿ :

ಇವು ಬೆಳಗಾವಿ ಜಿಲ್ಲೆಯಲ್ಲಿರುವ ಶಿವಭಕ್ತರ ಸುಕ್ಷೇತ್ರಗಳು. ಅರಭಾವಿಯು ಗೋಕಾಕ ತಾಲ್ಲೂಕಿನಲ್ಲಿದೆ. ಇಲ್ಲಿ ಶ್ರೀ ದುರುದುಂಡೇಶ್ವರ ಸ್ವಾಮಿಗಳ ಗದ್ದುಗೆಯಿದೆ. ಇದರ ಮಹಾತ್ಮ್ಯವನ್ನು ದುರುದುಂಡೇಶ್ವರ ಪುರಾಣದಲ್ಲಿ ಹೇಳಲಾಗಿದೆ. ಇಲ್ಲಿ ಪ್ರಖ್ಯಾತ ದಾಸೋಹ ಮಠವಿದೆ.

ನಿಡಸೋಸಿಯು ಅದೇ ಜಿಲ್ಲಾ ಹುಕ್ಕೇರಿ ತಾಲ್ಲೂಕಿನಲ್ಲಿದೆ. ಇಲ್ಲಿ ಶ್ರೀ ಶಿವಲಿಂಗೇಶ್ವರ ಎಂಬ ಮಹಾತ್ಮರ ಗದ್ದುಗೆ ಇದೆ. ಪ್ರಸಿದ್ಧ ದಾಸೋಹ ಮಠವಿದೆ.

ಅಂಕಲಗಿ ಎಂಬುದು ಬೆಳಗಾಂವಿ ಜಿಲ್ಲೆಯಲ್ಲಿ ಒಂದು ಪ್ರಖ್ಯಾತವಾದ ಶಿವಯೋಗಿಗಳ ಕ್ಷೇತ್ರ. ಇಲ್ಲಿ ಅಡವಿಸ್ವಾಮಿಗಳೆಂಬ ಮಹಾತ್ಮರ ಗದ್ದುಗೆಯಿದೆ. ಸಿದ್ಧಗಂಗೆಯ ಅಡವಿಸ್ವಾಮಿಗಳು ಇಲ್ಲಿಂದ ಬಂದವರೆಂದು ಪ್ರತೀತಿಯಿದೆ.

### ೧೭. ಗೋಕರ್ಣ ಕ್ಷೇತ್ರ :

ಇದರ ಉಲ್ಲೇಖವು ರಾಮಾಯಣ – ಮಹಾಭಾರತಗಳಲ್ಲಿದೆ. ಇದು ಉತ್ತರ ಕನ್ನಡ ಜಿಲ್ಲೆಯಲ್ಲಿ ಪಶ್ಚಿಮ ಸಮುದ್ರದ ತೀರದಲ್ಲಿದೆ. ಇಲ್ಲಿ ಶ್ರೀ ಮಹಾಬಲೇಶ್ವರ ಎಂಬ ಪ್ರಖ್ಯಾತ ಶಿವ ದೇವಾಲಯವಿದೆ. ಇದು ಲಂಕೆಯ ಅಧಿಪತಿ ರಾವಣನಿಂದ ಸಂಸ್ಥಾಪಿಸಲ್ಪಟ್ಟ ಪ್ರಾಣಲಿಂಗವೆಂದು ಪುರಾಣಗಳಲ್ಲಿ ಹೇಳಿದೆ. ಇಲ್ಲಿ ಕುಂಭಕರ್ಣನು ತಪಸ್ಸು ಮಾಡಿದನೆಂದು ರಾಮಾಯಣ



## ಶ್ರೀ ನಿಜಗುಣ ಶಿವಯೋಗಿಗಳ ಇಷ್ಟದೇವತೆ ಶಂಭುಲಿಂಗನ ಗುಡಿ

ಶಂಭುಲಿಂಗನ ಬೆಟ್ಟದಲ್ಲಿ ೧೬ನೇ ಶತಮಾನದಲ್ಲಿದ್ದ ನಿಜಗುಣ ಶಿವಯೋಗಿಯು ಕನ್ನಡದಲ್ಲಿ, ಕೈವಲ್ಯಪದ್ಧತಿ, ಪುರಾತನರ ತ್ರಿವಿಧಿ, ವಿವೇಕ ಚಿಂತಾಮಣಿ, ಅನುಭವಸಾರ, ಪರಮಾನುಭವ ಬೋಧೆ, ಪರಮಾರ್ಥ ಪ್ರಕಾಶಿಕೆ ಮತ್ತು ಪರಮಾರ್ಥ ಗೀತೆ ಎಂಬ ಏಳು ಗ್ರಂಥಗಳನ್ನು ಬರೆದಿದ್ದಾರೆ. ಈತನ ವಿವೇಕ ಚಿಂತಾಮಣಿಯು ಸಂಸ್ಕೃತ, ತಮಿಳು ಮತ್ತು ಮರಾಠಿ ಭಾಷೆಗಳಿಗೆ ಭಾಷಾಂತರವಾಗಿರುವುದು ಗಮನಾರ್ಹವಾಗಿದೆ.

ದಲ್ಲಿದೆ. ಇದು ಭಾರತೀಯರ ಸುಪ್ರಸಿದ್ಧ ಕ್ಷೇತ್ರವೆಂದು ಹೆಸರಾಗಿದೆ. ಇಲ್ಲಿ ದ್ವಿಬಾಹುಗಣಪತಿ, ಶ್ರೀವೆಂಕಟರಮಣಸ್ವಾಮಿ ಮೊದಲಾದ ದೇವಾಲಯುಗಳಿವೆ. ಸಂಸ್ಕೃತ ಮಹಾಭಾರತದಲ್ಲಿಯೂ, ಕನ್ನಡದಲ್ಲಿ ಹೆಸರಾದ ಪಂಪಭಾರತದಲ್ಲಿಯೂ ಅರ್ಜುನನು ಇಲ್ಲಿಗೆ ಬಂದು ಮಹಾ ಬಲೇಶ್ವರನ ದರ್ಶನವನ್ನು ಪಡೆದುಕೊಂಡಂತೆ ಹೇಳಲಾಗಿದೆ. ವೀರಶೈವ ಮತಾಚಾರ್ಯರಾದ ಶ್ರೀ ನೀಲಕಂಠಶಿವಾಚಾರ್ಯರು ಈ ಕ್ಷೇತ್ರದಲ್ಲಿ ಇದ್ದಂತೆಯೂ ಶಂಕರಾಚಾರ್ಯರಲ್ಲಿ ವಾದ ಮಾಡಿದಂತೆಯೂ ಶಂಕರವಿಜಯ ಮೊದಲಾದ ಗ್ರಂಥಗಳಲ್ಲಿ ಹೇಳಲಾಗಿದೆ. ಇವರ ಕಾಲ ಕ್ರಿ.ಶ. ೮ನೇ ಶತಕ. ಮಹಾಮನೆ ಎಂಬ ಗೌರವ ಬಸವ, ಚೆನ್ನಬಸವ ಇವರಿಗೆ ಮಾತ್ರವಿದೆ.

### ೧೮. ಉಳುವೆಯ ಮಹಾಮನೆ :

ಇದು ಕಾರವಾರ ಜಿಲ್ಲೆಯಲ್ಲಿ ಗಗನಚುಂಬಿತವಾದ ಅರಣ್ಯದ ಮಧ್ಯ ದಲ್ಲಿದೆ. ಇಲ್ಲಿ ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣದ ಕ್ರಾಂತಿಯಲ್ಲಿ ಪ್ರಸಿದ್ಧನಾದ ಶ್ರೀ ಚೆನ್ನಬಸವೇಶ್ವರನ ಸಮಾಧಿಯಿದೆ. ಪ್ರತಿವರ್ಷ ಮಾಘಮಾಸದಲ್ಲಿ ಇಲ್ಲಿ ಜಾತ್ರೆಯಾಗುತ್ತದೆ. ಇದನ್ನು ವೀರಶೈವರು ಬಹಳ ಪವಿತ್ರವಾದ ಕ್ಷೇತ್ರವನ್ನಾಗಿ ಭಾವಿಸಿದ್ದಾರೆ. ಇಲ್ಲಿ ಹಲವುಮಂದಿ ಶರಣರ ಗವಿಗಳಿವೆ.

### ೧೯. ಸುಧಾಪುರಿ ಕ್ಷೇತ್ರ ಅಥವಾ ಸ್ವಾದಿ :

ಇದು ಕಾರವಾರ ಜಿಲ್ಲಾ ಶಿರಸಿ ತಾಲ್ಲೂಕಿನಲ್ಲಿದೆ. ಇದು ಒಂದು ಪ್ರಾಚೀನ ರಾಜಧಾನಿ. ಇಲ್ಲಿ ವೈಷ್ಣವಗುರುಗಳಾದ ವ್ಯಾಸರಾಯಸ್ವಾಮಿ ಗಳ ಮತ್ತು ವಾದಿರಾಜಸ್ವಾಮಿಗಳ ಮಠಗಳು, ಜೈನಗುರುಗಳಾದ ಭಟ್ಟಾ ಕಳಂಕಸ್ವಾಮಿಗಳ ಮಠವು ಇವೆ. ಇದನ್ನು ವೈಷ್ಣವರೂ, ಜೈನರೂ, ವೀರಶೈವರೂ ಸುಕ್ಷೇತ್ರವೆಂದು ಭಾವಿಸಿದ್ದಾರೆ. ಇಲ್ಲಿ ವಾದಿರಾಜರ ಮೂಲ ಮಠವೂ, ವೃಂದಾವನವೂ, ಹವ್ಯಕರ ಸ್ವರ್ಣವಲ್ಲಿಮಠವೂ ಇವೆ. ಇದನ್ನು ಈಗ 'ಸ್ವಾದಿ' ಎನ್ನುವರು. ಸೋದೆ, ಸೋಂದ ಎಂಬ ಹೆಸರೂ ಉಂಟು.

೨೦. ಶಿರಹಟ್ಟಿ–ಲಕ್ಷ್ಮೇಶ್ವರ :

ಇವು ಧಾರವಾಡ ಜಿಲ್ಲೆಯಲ್ಲಿವೆ. ಶಿರಹಟ್ಟಿಯಲ್ಲಿ ಶ್ರೀ ಫಕೀರಸ್ವಾಮಿಗಳೆಂಬ ಮಹಾತ್ಮರ ಮಠವಿದೆ. ಹಿಂದುಗಳೂ ಮುಸಲ್ಮಾನರೂ ಎಲ್ಲರೂ ಆ ಮಠಕ್ಕೆ ನಡೆದುಕೊಳ್ಳುತ್ತಾರೆ. ಇಲ್ಲಿ ಆ ಮಹಾತ್ಮರ ಗದ್ದುಗೆಯಿದೆ. ಈ ವಿಷಯ ಫಕೀರೇಶ್ವರ ಪುರಾಣದಲ್ಲಿದೆ.

ಲಕ್ಷ್ಮೇಶ್ವರವು ಧಾರವಾಡ ಜಿಲ್ಲೆಯ ಒಂದು ಪ್ರಾಚೀನ ಐತಿಹಾಸಿಕ ಸ್ಥಾನ. ಇದನ್ನು ಪೂರ್ವದಲ್ಲಿ 'ಹುಲಿಗೆರೆ' ಎಂದು ಕರೆಯುತ್ತಿದ್ದರು. ಇಲ್ಲಿ ಶ್ರೀ ಸೋಮೇಶ್ವರನ ಪ್ರಖ್ಯಾತ ದೇವಾಲಯವಿದೆ. ಜೈನಬಸದಿಗಳಿವೆ. ಇದು ಪೂರ್ವದಲ್ಲಿ ತಿರುಳ್ಗನ್ನಡ ನಾಡಿನ ಕೇಂದ್ರವಾಗಿದ್ದಿತು. ಈ ಪುಲಿಗೆರೆಯ ಸೋಮೇಶ್ವರನ ವಿಷಯವಾಗಿ ಮಹಾಕವಿ ರಾಘವಾಂಕನು 'ಸೋಮನಾಥ ಚರಿತೆ' ಎಂಬ ಕಾವ್ಯವನ್ನು ಬರೆದಿದ್ದಾನೆ. ಆದಿಶೆಟ್ಟಿ ಎಂಬ ಓರ್ವ ವಚನಕಾರನು ಇಲ್ಲಿ ಅನೇಕ ಮಹಿಮೆಗಳನ್ನು ನಡೆಸಿದಂತೆ ಅದರಲ್ಲಿ ಹೇಳಲಾಗಿದೆ. ಕವಿ ಸುರಂಗ, ಕವಿ ಸೋಮ ಇಲ್ಲಿನವರೇ.

೨೧. ಕೆಳದಿ–ಇಕ್ಕೇರಿ–ಬಿದನೂರು :

ಕೆಳದಿ ಮತ್ತು ಇಕ್ಕೇರಿಗಳು ಶಿವಮೊಗ್ಗ ಜಿಲ್ಲಾ ಸಾಗರದ ಪಕ್ಕದಲ್ಲಿವೆ. ಹಿಂದಿನಕಾಲದಲ್ಲಿ ಇವು ರಾಜಧಾನಿಗಳೆನಿಸಿದ್ದುವು. ಕೆಳದಿಯಲ್ಲಿ ಶ್ರೀ ರಾಮೇಶ್ವರ, ಪಾರ್ವತೀದೇವಿ ಮತ್ತು ವೀರಭದ್ರ ದೇವಾಲಯಗಳಿವೆ, ಇವು ಶಿಲ್ಪ ಕಲೆಯಿಂದ ಕೂಡಿವೆ. ಇಕ್ಕೇರಿಯಲ್ಲಿ ಶ್ರೀ ಅಘೋರೇಶ್ವರ ದೇವಾಲಯವು ದಿವ್ಯ ಭವ್ಯವಾಗಿ ವಿರಾಜಿಸುತ್ತಿದೆ. ಈ ಎರಡು ಕ್ಷೇತ್ರಗಳನ್ನೂ ವೀರಶೈವರು ತಮ್ಮ ಪೂಜ್ಯಸ್ಥಾನವನ್ನಾಗಿ ಭಾವಿಸಿದ್ದಾರೆ. ನಗರದಲ್ಲಿ ನೀಲಕಂಠೇಶ್ವರ ದೇವಾಲಯ ಮತ್ತು ದೇವಗಂಗೆಯಿವೆ. ಇದು ಸಹ ಕೆಳದಿ ರಾಜರ ಕಡೆಯ ರಾಜಧಾನಿಯೆನಿಸಿತ್ತು.

೨೨. ಪಂಚನಾರಾಯಣಗಳು :

ಗದಗಿನ ವೀರನಾರಾಯಣನು ಕನ್ನಡ ಭಾರತವನ್ನು ಬರೆದ ಕುಮಾರ ವ್ಯಾಸನ ಇಷ್ಟದೇವತೆ. ಶ್ರೀ ವೀರನಾರಾಯಣಸ್ವಾಮಿಯ ಅನುಗ್ರಹ

ದಿಂದಲೇ ಕುಮಾರವ್ಯಾಸನು ಭಾರತದಂತಹ ಮಹಾಕಾವ್ಯವನ್ನು ಬರೆದನೆಂದು ತಿಳಿಯುಬಹುದು. ಕರ್ಣಾಟಕದಲ್ಲಿ ಗದಗಿನ ವೀರಾನಾರಾಯಣ, ಮೇಲುಕೋಟೆ ಚೆಲುವ ನಾರಾಯಣ, ತಲಕಾಡಿನ ಕೀರ್ತಿನಾರಾಯಣ, ಕೈವಾರದ ಅಮರನಾರಾಯಣ, ಬೇಲೂರಿನ ವಿಜಯನಾರಾಯಣ ಎಂಬ ಪಂಚನಾರಾಯಣಗಳು ಹೊಯ್ಸಳರ ಕಾಲದಲ್ಲಿ ಪ್ರಸಿದ್ಧವಾಗಿವೆ. ಶ್ರೀ ವೈಷ್ಣವರಿಗೆ ಇವು ತಿರುಪತಿ, ಮೇಲುಕೋಟೆ, ಉಡುಪಿ, ಶ್ರೀರಂಗ ಮತ್ತು ಶ್ರೀರಂಗಪಟ್ಟಣಗಳಂತೆಯೇ ಪೂಜ್ಯ ಸ್ಥಾನಗಳೆನಿಸಿವೆ.

೨೩. ಬನವಾಸಿ ಮಧುಕೇಶ್ವರ :

ಬನವಾಸಿಯು ಕಾರವಾರ ಜಿಲ್ಲೆಯಲ್ಲಿದೆ. ಇದು ಕದಂಬರ ರಾಜಧಾನಿ. ಅಲ್ಲಿ ಮಧುಕೇಶ್ವರ ದೇವಾಲಯವೆಂಬ ಪ್ರಖ್ಯಾತ ಶಿವದೇವಾಲಯವಿದೆ. ಶಿವಶರಣರಲ್ಲಿ ಪ್ರಖ್ಯಾತರಾದ ಅಲ್ಲಮ ಪ್ರಭುಗಳ ದೇವಾಲಯವೂ ಇಲ್ಲಿ ಉಂಟು. ಮಧುಕೇಶ್ವರನ ಗುಡಿಯಲ್ಲಿ ಕಲ್ಲುಮಂಚ, ಶಿವಸಿಂಹಾಸನ, ಅರ್ಧಾಂಗ ಗಣಪತಿ ಇವು ಸಂದರ್ಶನಾರ್ಹವಾಗಿವೆ.

೨೪. ಉಡುಪಿ ಕ್ಷೇತ್ರ :

ಇದು ಶ್ರೀ ಮಧ್ವಾಚಾರ್ಯರಿಂದ ಸ್ಥಾಪಿಸಲ್ಪಟ್ಟ ಶ್ರೀ ಕೃಷ್ಣನ ದಿವ್ಯ ಕ್ಷೇತ್ರ ವೆನಿಸಿದೆ. ಇಲ್ಲಿ ಮಾಧ್ವ ಗುರುಗಳಾದ ಅಷ್ಟಮಠದ ಯತಿಗಳ ಮಂದಿರಗಳಿವೆ. ಕನಕದಾಸನ ಭಕ್ತಿಗೆ ಮೆಚ್ಚಿ ಪೂರ್ವಾಭಿಮುಖನಾಗಿದ್ದ ಶ್ರೀ ಕೃಷ್ಣನು ಪಶ್ಚಿಮಾಭಿಮುಖನಾಗಿ, ಕನಕನಕಿಂಡಿಯಲ್ಲಿ ಆ ಭಕ್ತನಿಗೆ ದರ್ಶನವನ್ನು ಕೊಟ್ಟ ವಿಚಾರ ಈ ಕ್ಷೇತ್ರದ ಮಹಾತ್ಮ್ಯೆವನ್ನು ಹೆಚ್ಚಿಸಿದೆ. ಕನಕನ ಮಂಟಪವು ಶ್ರೀ ದೇವಾಲಯಕ್ಕೆ ಸಮೀಪದಲ್ಲಿಯೇ ಇದೆ. ಇದನ್ನು ಎಲ್ಲ ಹಿಂದುಗಳೂ ಅತ್ಯಂತ ಪವಿತ್ರವಾದ ಕ್ಷೇತ್ರವೆಂದು ಭಾವಿಸುತ್ತಾರೆ. ಇಲ್ಲೊಂದು ಪ್ರಾಚೀನ ಜಂಗಮರ ಮಠವಿದೆ.

೨೫. ಧರ್ಮಸ್ಥಳ :

ಇದು ಧರ್ಮದೇವತೆಗಳ ಆವಾಸಸ್ಥಾನವೆಂದು ಪ್ರಸಿದ್ಧವಾಗಿದೆ. ಇದು ಮಂಗಳೂರು ಜಿಲ್ಲೆಯಲ್ಲಿ ನೇತ್ರಾವತೀ ನದಿಯ ತೀರದಲ್ಲಿದೆ. ಇಲ್ಲಿ

ಶ್ರೀ ಮಂಜುನಾಥೇಶ್ವರ ದೇವಾಲಯವಿದೆ. ಇಲ್ಲಿ ಅಣ್ಣಪ್ಪದೇವರು ಎಂಬ ಭೂತಪತಿಯ ಗುಡಿಯೂ ಉಂಟು. ಇಲ್ಲಿ ಪ್ರಾಚೀನ ಜಿನ ಬಸದಿಗಳಿವೆ. ಇಲ್ಲಿ ಧರ್ಮ ದೇವತೆಗಳು ಅವ್ಯಕ್ತವಾಗಿ ವಾಸಿಸುತ್ತಿದ್ದಾರೆ. ಮಹಾನಡಾವಳಿಯ ಕಾಲದಲ್ಲಿ ಈ ಧರ್ಮದೇವತೆಗಳು ಅರ್ಚಕರ ಮೇಲೆ ಬಂದು ಲೋಕದ ಭವಿಷ್ಯವನ್ನು ಹೆಗ್ಗಡೆಯವರಿಗೆ ಸಾರಿ ಹೇಳುತ್ತವೆ. ಇಲ್ಲಿನ ದೇವರು ಶಿವಲಿಂಗ, ಅರ್ಚಕರು ವೈಷ್ಣವ ಬ್ರಾಹ್ಮಣರು, ಈ ಕ್ಷೇತ್ರದ ಅಧಿಪತಿಗಳು ಜೈನಹೆಗ್ಗಡೆಯವರು, ಪ್ರತಿವರ್ಷ ಕಾರ್ತಿಕ ಮಾಸದಲ್ಲಿ ಇಲ್ಲಿ ಲಕ್ಷದೀಪಾರಾಧನೆಯ ಜಾತ್ರೆ ನಡೆಯುತ್ತದೆ. ಇದೊಂದು ಸರ್ವಧರ್ಮ ಸಮನ್ವಯ ಕ್ಷೇತ್ರವೆನಿಸಿದೆ. ಇಲ್ಲಿ ಧರ್ಮಸಮ್ಮೇಳನಾದಿಗಳು ಪ್ರತಿ ವರ್ಷ ನಡೆಯುತ್ತವೆ.

೨೬. ಕಾರ್ಕಳ–ಮೂಡಬಿದರೆ–ವೇಣೂರು :

ಇವು ಮೂರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿವೆ. ಜೈನಧರ್ಮೀಯರ ಸುಕ್ಷೇತ್ರಗಳಿವು. ಕಾರ್ಕಳದಲ್ಲಿ ೪೧ಅಡಿ ೫ ಅಂಗುಲ ಎತ್ತರದ ಗೋಮತೇಶ್ವರ ಸ್ವಾಮಿ ವಿಗ್ರಹವೂ, ಚತುರ್ಮುಖ ಬಸದಿಯೂ ಇವೆ. ಕಾರ್ಕಳದಲ್ಲಿ ಗೋಮತೇಶ್ವರನನ್ನು ಕ್ರಿ.ಶ. ೧೪೩೨ರಲ್ಲಿ ವೀರಪಾಂಡ್ಯನು ಸ್ಥಾಪಿಸಿದನು.

ಮೂಡಬಿದಿರೆಯಲ್ಲಿ ಸಾವಿರ ಕಂಭದ ಬಸದಿಯಿದೆ. ಜೈನರ ಕಾಶಿಯೆಂದು ಕೂಡ ಕರೆಯುತ್ತಾರೆ.

ವೇಣೂರು ಸಹ ಜೈನರ ಕ್ಷೇತ್ರವೆನಿಸಿದೆ. ಇಲ್ಲಿ ೩೫ ಅಡಿ ಎತ್ತರವಾದ ಗೋಮತೇಶ್ವರನ ವಿಗ್ರಹವಿದೆ. ಪ್ರಾಚೀನ ಜೈನರ ಬಸದಿಯಿದೆ. ಈ ಗೋಮತನನ್ನು ಕ್ರಿ.ಶ. ೧೬೦೪ರಲ್ಲಿ ತಿಮ್ಮರಾಜನು ಸಂಸ್ಥಾಪಿಸಿದನು. ಮೈಸೂರು ಜಿಲ್ಲಾ ಗೊಮ್ಮಟಗಿರಿಯಲ್ಲಿ ೨೦ ಅಡಿ ಎತ್ತರದ ಇನ್ನೊಂದು ಗೊಮ್ಮಟವಿದೆ.

೨೭. ಶೃಂಗೇರಿ ಶಾರದಾದೇವಿ :

ಇದು ಚಿಕ್ಕಮಗಳೂರು ಜಿಲ್ಲಾದಲ್ಲಿ ತುಂಗಾನದಿಯ ತೀರದಲ್ಲಿದೆ.

ಇಲ್ಲಿ ಶ್ರೀ ಜಗದ್ಗುರು ಶಂಕರಾಚಾರ್ಯರ ಶಾರದಾಪೀಠವಿದೆ. ಶಿಲ್ಪಕಲಾ ಪೂರ್ಣವಾದ ವಿದ್ಯಾಶಂಕರ ದೇವಾಲಯವಿದೆ. ಇಲ್ಲಿ ಪವಿತ್ರವಾದ ನರ ಸಿಂಹ ವನವಿದೆ. ಈ ಕ್ಷೇತ್ರಕ್ಕೆ ಅನತಿ ದೂರದಲ್ಲಿ 'ಶೃಂಗಗಿರಿ' ಎಂಬ ಬೆಟ್ಟವಿದೆ. ಇದು ಋಷ್ಯಶೃಂಗನೆಂಬ ರಾಮಾಯಣ ಕಾಲದ ಋಷಿಯ ತಪೋಭೂಮಿಯೆಂದು ಪ್ರಸಿದ್ಧವಾಗಿದೆ. ಶ್ರೀ ಶೃಂಗೇರಿಯ ಜಗದ್ಗುರು ಪೀಠಕ್ಕೆ ಆಸೇತುಹಿಮಾಲಯ ಪರ್ಯಂತ ಭಕ್ತರು ಇದ್ದಾರೆ. ಶೃಂಗೇರಿಯ ಶಾರದೆ ಲೋಕಪ್ರಸಿದ್ಧಳಾಗಿರುವಳು.

೨೮. ರಂಭಾಪುರೀ ಕ್ಷೇತ್ರ :

ಇಲ್ಲಿ ವೀರಶೈವರ ಪಂಚಪೀಠಗಳಲ್ಲಿ ಒಂದಾದ ಪ್ರಖ್ಯಾತವಾದ ಜಗದ್ಗುರು ಶ್ರೀ ರೇಣುಕಾಚಾರ್ಯ ಪರಂಪರಾಗತ ವೀರಸಿಂಹಾಸನ ಮಠವಿದೆ. ಇಲ್ಲಿ ಶ್ರೀ ವೀರಭದ್ರ ದೇವಾಲಯವು ಕಂಗೊಳಿಸುತ್ತಿದೆ. ಇದು ಭದ್ರಾ ನದೀತೀರದಲ್ಲಿದೆ. ಪ್ರತಿ ವರ್ಷ ಫಾಲ್ಗುಣ ಮಾಸದಲ್ಲಿ ಇಲ್ಲಿ ಜಾತ್ರೆ ನಡೆಯುತ್ತದೆ. ಇಲ್ಲಿ ಶ್ರೀ ರೇಣುಕಾಚಾರ್ಯರು ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರ ಲಿಂಗವನ್ನು ಕೊಟ್ಟಂತಿರುವ ವಿಗ್ರಹವೊಂದಿದೆ.

೨೯. ಕಳಸ ಕ್ಷೇತ್ರ :

ಇದು ಚಿಕ್ಕಮಗಳೂರು ಜಿಲ್ಲೆಯಲ್ಲಿ ದಟ್ಟವಾದ ಅರಣ್ಯದ ಮಧ್ಯದ ಲ್ಲಿದೆ. ಇಲ್ಲಿ ಪ್ರಾಚೀನತಮವಾದ ಕಳಸೇಶ್ವರ ದೇವಾಲಯವಿದೆ. ಇದು ಮಹರ್ಷಿ ಅಗಸ್ತ್ಯರ ಜನ್ಮಸ್ಥಳವೆಂದು ಕೆಲವರು ಹೇಳುತ್ತಾರೆ. ಪ್ರತಿ ವರ್ಷವೂ ಇಲ್ಲಿ ಜಾತ್ರೆ ನಡೆಯುತ್ತದೆ.

೩೦. ಶ್ರವಣಬೆಳುಗೊಳ :

ಇದು ಹಾಸನ ಜಿಲ್ಲೆಯಲ್ಲಿದೆ. ಇಲ್ಲಿ ೫೭ ಅಡಿ ಎತ್ತರದ ಗೋಮಟೇಶ್ವರ ವಿಗ್ರಹವು ಇಂದ್ರಗಿರಿಯ ಮೇಲೆ ವಿರಾಜಮಾನವಾಗಿದೆ. ಇದನ್ನು ಗಂಗರಾಜ ರಾಚಮಲ್ಲನ ದಂಡನಾಯಕನೂ, ಚಾಮುಂಡರಾಯ ಪುರಾಣಕರ್ತೃವೆನಿಸಿದ ಮಹಾಕವಿಯೂ ಆದ ಚಾಮುಂಡರಾಯನು ಮಾಡಿಸಿ

ದಂತೆ ತಿಳಿದುಬಂದಿದೆ. (ಕ್ರಿ.ಶ. ೯೮೩) ಇಲ್ಲಿನ ಚಂದ್ರಬೆಟ್ಟದ ಮೇಲೆ ಅನೇಕ ಜೈನ ಬಸದಿಗಳಿವೆ. ಇಲ್ಲಿ ಕವಿ ರನ್ನ ಮೊದಲಾದವರ ಸ್ಮಾರಕಗಳಿವೆ. ಇಡೀ ಭಾರತದಲ್ಲಿಯೇ ಇದು ಸುಪ್ರಖ್ಯಾತವಾದ ಜೈನ ಕಾಶಿಯೆನಿಸಿದೆ. ಭರತವರ್ಷದ ಚಕ್ರವರ್ತಿಯಾದ ಚಂದ್ರಗುಪ್ತ ಮೌರ್ಯನೂ ಅವನ ಗುರುವಾದ ಭದ್ರಬಾಹುಮುನಿಯೂ ಇಲ್ಲಿಗೆ ಬಂದು ತಪಸ್ಸು ಮಾಡಿದಂತೆ (ಕ್ರಿ.ಪೂ. ೨೯೭) ಇತಿಹಾಸದಿಂದ ತಿಳಿಯುತ್ತದೆ.

### ೩೧. ಬೇಲೂರು–ಹಳೇಬೀಡು :

ಇವು ಹಾಸನ ಜಿಲ್ಲೆಯಲ್ಲಿವೆ. ಶಿಲ್ಪಕಲೆಯಿಂದ ಪ್ರಖ್ಯಾತವಾದ ದೇವಾಲಯಗಳಿಂದ ಈ ಸ್ಥಳಗಳ ಕೀರ್ತಿ ವಿಶ್ವವಿಖ್ಯಾತವಾಗಿದೆ. ಬೇಲೂರಿನಲ್ಲಿ ಶ್ರೀ ವಿಜಯನಾರಾಯಣಸ್ವಾಮಿಯ ದೇವಾಲಯವಿದೆ. ಹಳೇಬೀಡಿನಲ್ಲಿ ಶ್ರೀ ಹೊಯ್ಸಳೇಶ್ವರ–ಶಾಂತಳೇಶ್ವರ ದೇವಾಲಯಗಳಿವೆ. ಅಲ್ಲದೆ ಹಳೇಬೀಡಿನಲ್ಲಿ ಜೈನರ ಪ್ರಾಚೀನ ಬಸದಿಗಳೂ'ಕೇದಾರೇಶ್ವರ' ಎಂಬ ದೇವಾಲಯವೂ ಇವೆ. ಹಳೇಬೀಡಿನ ಪಕ್ಕದಲ್ಲಿ ಪುಷ್ಪಗಿರಿ ಮಲ್ಲಿಕಾರ್ಜುನ ಎಂಬ ಪ್ರಖ್ಯಾತವಾದ ಶೈವಕ್ಷೇತ್ರವಿದೆ. ಹೊಯ್ಸಳರ ಕಾಲದಲ್ಲಿ ಹಳೇಬೀಡು, ಬೇಲೂರುಗಳು ರಾಜಧಾನಿಯೆನಿಸಿ ದಕ್ಷಿಣ ಭಾರತದಲ್ಲಿಯೇ ಗಣ್ಯತೆ ಪಡೆದಿದ್ದುವು. ಬೇಲೂರು ವಿಜಯನಗರ ದಿಬ್ಬದ ಬದಿಯಲ್ಲಿ ಕವಿ ರಾಘವಾಂಕನ ಸಮಾಧಿಯಿದೆ.

### ೩೨. ತಲಕಾವೇರೀ–ಭಾಗಮಂಡಲ :

ಇದು ಕೊಡಗು ಜಿಲ್ಲೆಯಲ್ಲಿದೆ. ಇದು ದಕ್ಷಿಣದ ಗಂಗೆಯೆನಿಸಿದ ಕಾವೇರೀ ನದಿ ಹುಟ್ಟುವ ಸ್ಥಳ ಬ್ರಹ್ಮಗಿರಿಯಲ್ಲಿದೆ. ತುಲಾ ಸಂಕ್ರಾಂತಿಯಲ್ಲಿ ಇಲ್ಲಿ ಪವಿತ್ರ ತೀರ್ಥಭಾವನೆಯಿಂದ ಜನರು ಸ್ನಾನ ಮಾಡುತ್ತಾರೆ. ಈ ತಲಕಾವೇರಿ ಕನ್ನಡಿಗರ ಗಂಗಾಮೂಲವೆನಿಸಿದೆ. ಪ್ರಕೃತಿಸೌಂದರ್ಯದಿಂದ ಕಂಗೊಳಿಸುತ್ತಿದೆ.

### ೩೩ ಕಗ್ಗೆರೆ–ಎಡೆಯೂರು ಕ್ಷೇತ್ರಗಳು :

ಇವು ತುಮಕೂರು ಜಿಲ್ಲೆಯಲ್ಲಿ ಪ್ರಖ್ಯಾತ ಕ್ಷೇತ್ರಗಳೆನಿಸಿವೆ. ೧೫

ನೆಯ ಶತಮಾನದಲ್ಲಿ ಕರ್ಣಾಟಕದಲ್ಲಿ ಸುಪ್ರಸಿದ್ಧರಾದ ಶ್ರೀ ತೋಂಟದ ಸಿದ್ಧಲಿಂಗೇಶ್ವರರು ಈ ಕಗ್ಗರೆಯಲ್ಲಿ ೧೨ ವರ್ಷಗಳ ಕಾಲ ತಪಸ್ಸು ಮಾಡಿದ್ದಾರೆ. ಈ ತಪೋಭೂಮಿಯು ನಾಗಿಣೀನದೀತೀರದಲ್ಲಿದ್ದು 'ಕಗ್ಗರೆಯ ಹೂದೋಟ' ಎಂದು ಪ್ರಸಿದ್ಧವಾಗಿದೆ. ಇಲ್ಲಿ ಅವರ ದೇವಾಲಯವಿದೆ. ಇಲ್ಲಿಗೆ ಕೆಲವಾರು ಮೈಲಿ ದೂರದಲ್ಲಿ ಸಿದ್ಧಲಿಂಗೇಶ್ವರರು ಕಲ್ಲುಬಸವನಿಗೆ ಹುಲ್ಲು ಮೇಯಿಸಿದ ಮಂಗಳ ಎಂಬ ಕ್ಷೇತ್ರವಿದೆ.

ಎಡೆಯೂರು ಕ್ಷೇತ್ರವು ಕರ್ಣಾಟಕದಲ್ಲಿ ಅತ್ಯಂತ ಪ್ರಖ್ಯಾತವಾದ ಶಿವಯೋಗಿಗಳ ಕ್ಷೇತ್ರವೆನಿಸಿದೆ. "ಷಟ್ಸ್ಥಲಜ್ಞಾನ ಸಾರಾಮೃತ" ಎಂಬ ವಚನ ಗ್ರಂಥವನ್ನು ಬರೆದ ತೋಂಟದ ಸಿದ್ಧಲಿಂಗೇಶ್ವರನ ಸಮಾಧಿ ಮಂದಿರವು ಈ ಕ್ಷೇತ್ರವೆನಿಸಿದೆ. ಕಗ್ಗೆರೆ ಕ್ಷೇತ್ರದಲ್ಲಿ ಹಾವು ಕಚ್ಚಿದವರು ಸಾಯುವುದಿಲ್ಲ ಎಂಬ ನಂಬಿಕೆಯಿದೆ. ಎಡೆಯೂರು ಕ್ಷೇತ್ರದಲ್ಲಿ ಭೂತಗಳು ಶ್ರೀ ದೇವರಿಗೆ ಅಂಜಿ ಓಡಿಹೋಗುತ್ತವೆಂದು ಪ್ರಸಿದ್ಧಿಯಿದೆ.

### ೩೪. ದೇವರಾಯನ ದುರ್ಗ–ಶೀಬಿ :

ಇವೆರಡೂ ತುಮಕೂರು ಜಿಲ್ಲೆಯಲ್ಲಿ ವೈಷ್ಣವ ಕ್ಷೇತ್ರಗಳೆಂದು ಪ್ರಸಿದ್ಧವಾಗಿವೆ. ದೇವರಾಯನದುರ್ಗವು ಪ್ರಕೃತಿ ಸೌಂದರ್ಯದ ಮಧ್ಯದಲ್ಲಿದ್ದು ಶ್ರೀ ನರಸಿಂಹಸ್ವಾಮಿ ದೇವಾಲಯದಿಂದ ಕಂಗೊಳಿಸುತ್ತಿದೆ.

ಶೀಬಿಯು ತುಮಕೂರು-ಸೀರ್‍ಯದ ರಸ್ತೆಯಲ್ಲಿದ್ದು ಒಂದು ಪ್ರಾಚೀನ ನರಸಿಂಹಸ್ವಾಮಿ ದೇವಾಲಯದಿಂದ ಕೂಡಿದೆ. ಈ ಎರಡು ಕ್ಷೇತ್ರಕ್ಕೂ ವೈಷ್ಣವರು ಬಹಳವಾಗಿ ಬಂದು ಹೋಗುತ್ತಾರೆ. ಈ ಉಭಯ ಕ್ಷೇತ್ರಗಳಲ್ಲೂ ಪ್ರತಿ ವರ್ಷ ಜಾತ್ರೆ ನಡೆಯುತ್ತದೆ.

### ೩೫. ಸಿದ್ಧಗಂಗೆ–ಸಿದ್ಧರಬೆಟ್ಟ :

ಇವೆರಡೂ ತುಮಕೂರು ಜಿಲ್ಲೆಯ ಸುಪ್ರಸಿದ್ಧ ಕ್ಷೇತ್ರಗಳು. ಸಿದ್ಧಗಂಗೆಯಲ್ಲಿ ೧೫ನೆಯ ಶತಮಾನದಲ್ಲಿ ಕರ್ಣಾಟಕದಲ್ಲಿ ಪ್ರಸಿದ್ಧರಾದ ಶ್ರೀ ಗೋಸಲ ಸಿದ್ಧೇಶ್ವರ ಸ್ವಾಮಿಗಳು ತಮ್ಮ ಪಾದಸ್ಪರ್ಶದಿಂದ ಸೃಷ್ಟಿಸಿದ

ಪವಿತ್ರ ತೀರ್ಥ–ಸಿದ್ಧಗಂಗೆಯಿದೆ. ಅಲ್ಲದೆ ಶ್ರೀ ಸಿದ್ಧೇಶ್ವರ ದೇವಾಲಯವಿದೆ. ಮತ್ತು ವೀರಶೈವ ಮಠವಿದೆ. ಶಿವರಾತ್ರಿಯಲ್ಲಿ ಇಲ್ಲಿ ಜಾತ್ರೆ ಸೇರುತ್ತದೆ. ಈ ಸಿದ್ಧರ ಬೆಟ್ಟವು ತುಮಕೂರು ಜಿಲ್ಲಾ ಕೊರಟಗೆರೆ ತಾಲ್ಲೂಕಿನಲ್ಲಿದೆ. ಇಲ್ಲಿ ಗೋಸಲ ಸಿದ್ಧೇಶ್ವರಸ್ವಾಮಿಗಳ ಸಮಾಧಿಯಿದೆ. ಸಿದ್ಧಗಂಗೆ–ಸಿದ್ಧರ ಬೆಟ್ಟಗಳೆರಡೂ ಕ್ಷೇತ್ರಗಳು ಈ ಮಹಾತ್ಮರ ಹೆಸರಿನಲ್ಲೇ ಪ್ರಖ್ಯಾತವಾಗಿವೆ. ಇವರ ಪ್ರಶಿಷ್ಯರೇ ಎಡೆಯೂರು ಸಿದ್ಧಲಿಂಗೇಶ್ವರರು.

### ೩೬. ಕೊಲ್ಲೂರು ಮೂಕಾಂಬಿಕಾ ಕ್ಷೇತ್ರ :

ಇದು ಮಂಗಳೂರು ಜಿಲ್ಲೆಯ ಕುಂದಾಪುರ ತಾಲ್ಲೂಕಿನಲ್ಲಿದೆ. ಕೆಳದಿಯ ರಾಜರಿಗೆ ಮನದೇವತೆಯಾದ ಮೂಕಾಂಬಿಕೆಯ ದೇವಾಲಯವು ಇಲ್ಲಿದೆ. ಇಲ್ಲಿಗೆ ಮಲೆಯಾಳಿಗಳು ಬಹಳ ಬರುತ್ತಾರೆ. ಕರ್ಣಾಟಗ ಹಾಗೂ ಕೇರಳ ಎರಡಕ್ಕೂ ಇದು ಪೂಜ್ಯ ಸ್ಥಳವೆನಿಸಿದೆ. ಇದು ಶಕ್ತಿ ಪೂಜಕರ ಸಿದ್ಧಿ ಸ್ಥಳವೆನಿಸಿದೆ.

### ೩೭. ಚಂದ್ರದ್ರೋಣ ಪರ್ವತ :

ಇದು ಚಿಕ್ಕಮಗಳೂರು ಜಿಲ್ಲೆಯಲ್ಲಿ ಪಶ್ಚಿಮ ಘಟ್ಟದ ಮಧ್ಯದಲ್ಲಿದೆ. ಈ ಗಿರಿಯ ಶಿಖರದಲ್ಲಿ ದತ್ತಾತ್ರೇಯ ಪೀಠವಿದೆ. ಬಾಬಾಬುಡರ್ ಎಂಬ ಮುಸಲ್ಮಾನ ಸಾಧುವು ಇಲ್ಲಿ ಸಮಾಧಿಯಾಗಿದ್ದಾನೆ. ಈ ಕ್ಷೇತ್ರವು ಈಗ ಮುಸಲ್ಮಾನರ ವಶದಲ್ಲಿದ್ದು ಹಿಂದೂ ಮುಸ್ಲಿಮರಿಬ್ಬರಿಗೂ ಪವಿತ್ರ ಕ್ಷೇತ್ರವೆನಿಸಿದೆ.

### ೩೮. ಅಮರಗುಂಡ ಕ್ಷೇತ್ರ ಅಥವಾ ಗುಬ್ಬಿ

ಇದು ತುಮಕೂರು ಜಿಲ್ಲೆಯಲ್ಲಿದೆ. ಇಲ್ಲಿ ಗೋಸಲ ಚೆನ್ನಬಸವೇಶ್ವರನ ಗುಡಿಯಿದೆ. ಗದ್ದೆಮಲ್ಲಿಕಾರ್ಜುನ, ಹಾಗೂ ಓಹಿಲಯ್ಯನ ಗುಡಿಗಳೂ ಇವೆ. ವರ್ಷಕ್ಕೊಮ್ಮೆ ಫಾಲ್ಗುಣದಲ್ಲಿ ಜಾತ್ರೆಯು ಸೇರುತ್ತದೆ. ಇದನ್ನು ವೀರಶೈವರು ಪವಿತ್ರ ಕ್ಷೇತ್ರವೆಂದು ಭಾವಿಸಿದ್ದಾರೆ. ಶ್ರೀ ಗೋಸಲ ಚೆನ್ನಬಸವೇಶ್ವರನ ಚರಿತ್ರೆಯು ನಿರಂಜನವಂಶರತ್ನಾಕರ ಹಾಗೂ ಸಿದ್ಧೇಶ್ವರ



ಶ್ರೀ ಬಸವೇಶ್ವರನ ಅಪರಾವತಾರಿ ಶರಣ ಬಸವೇಶ್ವರನ ದೇವಾಲಯ
ಶ್ರಿ ಕ್ಷೇತ್ರಶರಣನಗರ, ಕಲ್ಬುರ್ಗಿ

ಪುರಾಣಗಳಲ್ಲಿ ನಿರೂಪಿಸಲ್ಪಟ್ಟಿದೆ. ಇದನ್ನು ಈಗ ಗುಬ್ಬಿ ಎಂದು ಕರೆಯುತ್ತಾರೆ. ಇಲ್ಲಿ ಮಹಾಕವಿ ಮಲ್ಲಣಾರ್ಯ, ಆಚಾರ್ಯ ಮಲ್ಲಣ್ಣ ಮತ್ತು ಶಾಂತೇಶ, ವೀರೇಶ್ವರ ಕವಿಗಳು ಆಗಿ ಹೋಗಿದ್ದಾರೆ.

### ೩೯. ಜಟ್ಟಂಗಿ ರಾಮೇಶ್ವರ :

ಇದು ಚಿತ್ರದುರ್ಗ ಜಿಲ್ಲಾ ಮೊಳಕಾಲ್ಮೂರು ತಾಲ್ಲೂಕಿನಲ್ಲಿದೆ. ಕುಮ್ಮಟದುರ್ಗದ ಕಂಪಿಲರಾಯ ಮತ್ತು ಕುಮಾರ ರಾಮರಿಗೆ ಇದು ಮನೆ ದೇವತೆಯೆನಿಸಿತ್ತು. ಇತಿಹಾಸದಲ್ಲಿ ಜಟ್ಟಂಗಿ ರಾಮೇಶ್ವರ ಸುಪ್ರಖ್ಯಾತನಾಗಿದ್ದಾನೆ. ವೀರಾಧಿವೀರರ ಮನೆದೇವತೆಯೆನಿಸಿದ್ದಾನೆ.

### ೪೦. ಮೇಲುಕೋಟೆ ಅಥವಾ ಯದುಗಿರಿ :

ಇದು ಮಂಡ್ಯ ಜಿಲ್ಲೆಯಲ್ಲಿದೆ. ಇದು ಶ್ರೀವೈಷ್ಣವರ ಪ್ರಮುಖ ಕ್ಷೇತ್ರ. ಇಲ್ಲಿ ಚೆಲುವನಾರಾಯಣಸ್ವಾಮಿ ದೇವಾಲಯವಿದೆ. ಬೆಟ್ಟದಮೇಲೆ ವರಾಹ ದೇವರ ದೇವಾಲಯವಿದೆ. ಇದನ್ನು ಯದುಗಿರಿ ಎಂದು ಕರೆಯುತ್ತಾರೆ. ಇಲ್ಲಿ ರಾಮಾನುಜಾಚಾರ್ಯರು ೧೨ ವರ್ಷ ತಪಸ್ಸು ಮಾಡಿದಂತೆ ಪ್ರಸಿದ್ಧಿಯಿದೆ. ಇದು ಮಹಿಮಾ ಕ್ಷೇತ್ರವು. ಹೊಯ್ಸಳ ವಿಷ್ಣುವರ್ಧನನ ಕಾಲದಲ್ಲಿ ಇದು ಪ್ರಖ್ಯಾತ ಸ್ಥಳವೆನಿಸಿತು. ಇಲ್ಲಿನ ದೇವಾಲಯಗಳು ವಿಖ್ಯಾತವೆನಿಸಿವೆ.

### ೪೧. ಸ್ವತಂತ್ರ ಸಿದ್ಧಲಿಂಗೇಶ್ವರ :

ಇದು ಮಂಡ್ಯ ಜಿಲ್ಲಾ ಕೃಷ್ಣರಾಜಪೇಟೆಗೆ ಐದು ಮೈಲಿ ದೂರದಲ್ಲಿ ಬೆಟ್ಟ ಮತ್ತು ನದಿಗಳಿಂದ ಕೂಡಿದ ಅರಣ್ಯ ಪ್ರದೇಶದಲ್ಲಿದೆ. "ಸ್ವತಂತ್ರ ಸಿದ್ಧ ಲಿಂಗೇಶ್ವರ ವಚನ" ಎಂಬ ಗ್ರಂಥವನ್ನು ಬರೆದ ಸ್ವತಂತ್ರ ಸಿದ್ಧಲಿಂಗೇಶ್ವರ ಸ್ವಾಮಿಗಳ ತಪೋಭೂಮಿಯಿದು. ಲಿಂಗವಂತರ ಪುಣ್ಯಕ್ಷೇತ್ರವೆನಿಸಿದೆ. ಇಲ್ಲಿ ಪ್ರಖ್ಯಾತ ವಿರಕ್ತಮಠವಿದ್ದೂ ರಕ್ಷಕರಿಲ್ಲದೆ ಅಸ್ತವ್ಯಸ್ತವಾಗಿದೆ. ಈತನ ಕಾಲ ೧೫ನೇ ಶತಕ.

೪೨. ಶ್ರೀರಂಗಪಟ್ಟಣ :

ಇದು ಮಂಡ್ಯಜಿಲ್ಲೆಯಲ್ಲಿ ಕಾವೇರೀನದಿಯಿಂದ ಆವರಿಸಲ್ಪಟ್ಟ ಕ್ಷೇತ್ರ. ಇಲ್ಲಿ ಪ್ರಸಿದ್ಧವಾದ ರಂಗನಾಥಸ್ವಾಮಿ ದೇವಾಲಯವಿದೆ. ಶ್ರೀ ವೈಷ್ಣವರಿಗೆ ಇದು ಮುಖ್ಯವಾದ ಕ್ಷೇತ್ರ. ಕಾವೇರೀ ತೀರದಲ್ಲಿರುವ ಇದು ಆದಿರಂಗವೆಂದೂ, ಶಿವಸಮುದ್ರವು ಮಧ್ಯರಂಗವೆಂದೂ, ಶ್ರೀರಂಗವು ಅಂತ್ಯರಂಗವೆಂದೂ ಹೆಸರಾಗಿವೆ. ಈ ಮೂರೂ ಕ್ಷೇತ್ರಗಳು ಕಾವೇರಿಯಿಂದ ಆವರಿಸಲ್ಪಟ್ಟವೆ. ಅಲ್ಲದೆ ಹಿಂದೂ ಜನರ ಪವಿತ್ರ ಸ್ಥಳಗಳೆನಿಸಿವೆ.

೪೩. ಶ್ರೀಕ್ಷೇತ್ರಗರಳಪುರಿ :

ಇದು ಮೈಸೂರು ಜಿಲ್ಲೆಯಲ್ಲಿ ಕಪಿಲಾನದೀ ತೀರದಲ್ಲಿದೆ. ಇದನ್ನು ನಂಜನಗೂಡು ಎಂದು ಕರೆಯುತ್ತಾರೆ. ಇಲ್ಲಿ ಶ್ರೀಕಂಠೇಶ್ವರನ ಪ್ರಸಿದ್ಧವಾದ ದೇವಾಲಯವಿದೆ. ಇದರಲ್ಲಿ ೬೩ ಮಂದಿ ಪುರಾತನರ ವಿಗ್ರಹಗಳಿವೆ. ಚಾಮರಾಜ ನಗರದ ಶ್ರೀ ಚಾಮರಾಜೇಶ್ವರ ದೇವಾಲಯದಲ್ಲಿ ಕೂಡ ಈ ಅರುವತ್ತುಮೂರು ಮಂದಿ ಪುರಾತನರ ವಿಗ್ರಹಗಳಿವೆ. ಇದನ್ನು ಕರ್ಣಾಟಕದಲ್ಲಿ ಇನ್ನೆಲ್ಲಿಯೂ ನಾವು ಕಾಣಲಾಗುವುದಿಲ್ಲ. ಇಲ್ಲಿ ಕೆಂಡಗಣ್ಣಸ್ವಾಮಿಗಳ ಮಠವಿದೆ. ಇವರ ಸಮಾಧಿಯು ಕಾಡಿನಲ್ಲಿ ಹುಣಸೂರು ಹತ್ತಿರವಿದೆ.

ಹಂಪೆ, ಗೋಕರ್ಣ, ಮಹಾಕೂಟ, ಧರ್ಮಸ್ಥಳಗಳಂತೆ ಇದೂ ಒಂದು ಪ್ರಖ್ಯಾತ ಶೈವಕ್ಷೇತ್ರವೆನಿಸಿದೆ. ಮೈಸೂರು ರಾಜಮನೆತನಕ್ಕೆ ಇದು ಆರಾಧ್ಯ ದೇವತೆಯೆನಿಸಿದೆ. ಈ ಬೆಟ್ಟದ ಬುಡದಲ್ಲಿ ಪಂಚಗವಿಮಠ ಮೊದಲಾದುವಿವೆ.

೪೪ ಶ್ರೀ ಮಹಾಬಲಾದ್ರಿ ಕ್ಷೇತ್ರ :

ಇದನ್ನು ಚಾಮುಂಡಿಬೆಟ್ಟ ಎಂದು ಕರೆಯುತ್ತಾರೆ. ಇಲ್ಲಿ ಶ್ರೀ ಚಾಮುಂಡೇಶ್ವರೀ ದೇವಾಲಯವೂ ಕರೇಕಲ್ಲಿನ ದೊಡ್ಡಬಸವನ ವಿಗ್ರಹವೂ ಇವೆ. ಇದು ಮೈಸೂರುರಾಜರ ಮನೆದೇವತೆ. ಜಗನ್ಮಾತೆಯಾದ ಶ್ರೀ ಚಾಮುಂಡೇಶ್ವರಿಯು ಮಹಿಷಾಸುರಮರ್ದಿನಿ ಎಂಬ ವಿಷಯ ಪುರಾಣಪ್ರಸಿದ್ಧವಾಗಿದೆ.

೪೫. ಗಜಾರಣ್ಯ ಕ್ಷೇತ್ರ :

ಇದು ಮೈಸೂರು ಜಿಲ್ಲೆಯಲ್ಲಿ ಕಾವೇರೀ ತೀರದಲ್ಲಿದೆ. ಗಂಗರ ರಾಜಧಾನಿಯಾದ 'ತಲಕಾಡು' ಎಂದು ಇದನ್ನು ಚರಿತ್ರೆಯಲ್ಲಿ ಕರೆಯಲಾಗಿದೆ. ಇಲ್ಲಿ ಶ್ರೀ ವೈದ್ಯೇಶ್ವರ, ಶ್ರೀ ಭ್ರಮರಾಂಬಾ ಮಲ್ಲಿಕಾರ್ಜುನ, ಶ್ರೀ ಕೀರ್ತಿನಾರಾಯಣ ಎಂಬ ಪ್ರಖ್ಯಾತವಾದ ದೇವಾಲಯವಿವೆ. ೧೨ ವರ್ಷಕ್ಕೊಮ್ಮೆ ಪಂಚಲಿಂಗ ದರ್ಶನಕ್ಕೆ ಈ ಕ್ಷೇತ್ರ ಪ್ರಸಿದ್ಧವಾಗಿದೆ. ಇದು ಗಂಗರಾಜರ ರಾಜಧಾನಿಯಾಗಿ ಚರಿತ್ರೆಯಲ್ಲಿ ಪ್ರಖ್ಯಾತವೆನಿಸಿದೆ.

೪೬ ಮಾದೇಶ್ವರ ಬೆಟ್ಟ :

ಇದು ಮೈಸೂರು ಜಿಲ್ಲಾ ಕೊಳ್ಳೇಗಾಲ ತಾಲ್ಲೂಕಿನಲ್ಲಿದೆ. ಪೂರ್ವ ಘಟ್ಟಗಳ ಮಧ್ಯಪ್ರದೇಶದಲ್ಲಿದೆ. ಸುಮಾರು ೬೦೦ ವರ್ಷಗಳ ಹಿಂದೆ ಸಮಾಧಿಸ್ಥರಾದ ಶ್ರೀ ಮಾದೇಶ್ವರರೆಂಬ ಮಹಾತ್ಮರ ಸಮಾಧಿಯಿದೆ. ಇದು ಅತ್ಯಂತ ಮಹಿಮಾಸ್ಪದವೆನಿಸಿದೆ. ಇದರ ವಿಷಯವನ್ನು ಮಾದೇಶ್ವರ ಸಾಂಗತ್ಯ ಮತ್ತು ಮಾದೇಶ್ವರ ಚರಿತ್ರೆ ಎಂಬ ಗ್ರಂಥಗಳಲ್ಲಿ ಭಕ್ತರು ಓದಬಹುದು. ಈ ದೇವರಿಗೆ ನವಾಬ್ ಹೈದರಲ್ಲಿಖಾನ್ ಕನ್ನಡ ತಾಮ್ರ ಶಾಸನ ಕೊಟ್ಟು ಸೇವೆ ಸಲ್ಲಿಸಿದ್ದಾರೆ. ಕಂಪನಿಯ ಸರ್ಕಾರದವರು ತಮಿಳಿನಲ್ಲಿ ತಹನಾಮೆ ಕೊಟ್ಟಿದ್ದಾರೆ. ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಇವರ ಬಗೆಗೆ ಕನ್ನಡದಲ್ಲಿ ಒಂದು ಗ್ರಂಥ ಬರೆದಿದ್ದಾರೆ–ಅದು ತಮಿಳಿಗೂ ಭಾಷಾಂತರವಾಗಿದೆ.

೪೭. ಶ್ರೀ ಶಂಭುಲಿಂಗನ ಬೆಟ್ಟ :

ಇದು ಕೊಳ್ಳೇಗಾಲಕ್ಕೆ ಆರು ಮೈಲಿ ದೂರದಲ್ಲಿವೆ. ಇಲ್ಲಿ ಶಂಭುಲಿಂಗೇಶ್ವರ ಎಂಬ ಶಿವದೇವಾಲಯವಿದೆ. ಇಲ್ಲಿ ಶ್ರೀ ನಿಜಗುಣ ಶಿವಯೋಗಿ ಎಂಬ ಮಹಾತ್ಮರು ತಪಸ್ಸು ಮಾಡಿದ ಗವಿಯಿದೆ. ಶ್ರೀ ನಿಜಗುಣರು ಕನ್ನಡದಲ್ಲಿ ಕೈವಲ್ಯ ಪದ್ಧತಿ, ವಿವೇಕ ಚಿಂತಾಮಣಿ, ಅನುಭವ ಸಾರ, ಅನುಭವ ಬೋಧೆ, ಪರಮಾರ್ಥ ಗೀತೆ, ಪರಮಾರ್ಥ ಪ್ರಕಾಶಿಕೆ, ಅರುವತ್ತು ಮೂವರ ತ್ರಿಪದಿ ಎಂಬ ಏಳು ಗ್ರಂಥಗಳನ್ನು ಬರೆದು ಕನ್ನಡಿಗರಲ್ಲಿ ಪ್ರಸಿದ್ಧರಾಗಿದ್ದಾರೆ. ಇದೇ ಬೆಟ್ಟದಲ್ಲಿ ವಚನಕಾರರಾದ ಮುಪ್ಪಿನ ಷಡಕ್ಷರಿಗಳ

ಗವಿಯೂ ಇದೆ. ಕರ್ನಾಟಕದ ವೇದಾಂತಿಗಳಿಗೆ ಇದು ಸುಕ್ಷೇತ್ರ ವೆನಿಸಿದೆ. ವರ್ಷಕ್ಕೊಮ್ಮೆ ಇಲ್ಲಿ ಜಾತ್ರೆಯಾಗುತ್ತದೆ.

೪೮. ಸುಕ್ಷೇತ್ರ ಸುತ್ತೂರು:

ಇದು ಮೈಸೂರು ಜಿಲ್ಲಾ ಕಪಿಲಾನದೀತೀರದಲ್ಲಿದೆ. ಇಲ್ಲಿ ಚೋಳರ ಕಾಲದ ಸೋಮೇಶ್ವರ ಮತ್ತು ವೀರಭದ್ರ ದೇವಾಲಯಗಳಿವೆ. ನದೀತೀರ ದಲ್ಲಿ ಶ್ರೀ ಶಿವರಾತ್ರಿಸ್ವಾಮಿಗಳ ಗದ್ದುಗೆಯಿದೆ. ಇಲ್ಲಿ ವೀರಸಿಂಹಾಸನ ಮಠ ಎಂಬ ವೀರಶೈವರ ಪ್ರಖ್ಯಾತವಾದ ಮಠವಿದೆ. ತಪೋಧನರಾದ ಮಾದೇಶ್ವರರ ಕೆಲವು ಸ್ಮಾರಕಗಳು ಇಲ್ಲಿವೆ. ಶ್ರೀ ಮಾದೇಶ್ವರರು ಇಲ್ಲಿ ಕೆಲವು ಕಾಲವಿದ್ದು ಶಿಕ್ಷಣ ಪಡೆದಂತೆ ಸುತ್ತೂರು ಗುರುಪರಂಪರೆಯಲ್ಲಿ ಹೇಳಿದೆ.

೪೯. ಹರದನಹಳ್ಳಿ ಅಥವಾ ವಾಣಿಜ್ಯಪುರ:

ಇಲ್ಲಿ ಶ್ರೀ ಗೋಸಲಸಿದ್ಧೇಶ್ವರ, ಚೆನ್ನಬಸವೇಶ್ವರ ಮತ್ತು ಸಿದ್ಧ ಲಿಂಗೇಶ್ವರರ ಮಠವಿದೆ. ದಿವ್ಯಲಿಂಗೇಶ್ವರ ಎಂಬ ಪ್ರಾಚೀನವಾದ ಶಿವ ದೇವಾಲಯವಿದೆ. ಇದನ್ನು ವಾಣಿಜ್ಯಪುರವೆಂದು ಸಿದ್ಧೇಶ್ವರ ಪುರಾಣದಲ್ಲಿ ಕರೆಯಲಾಗಿದೆ. ಇದನ್ನು ಲಿಂಗವಂತರು ಪವಿತ್ರ ಕ್ಷೇತ್ರವನ್ನಾಗಿ ಭಾವಿಸಿ ದ್ದಾರೆ.

೫೦. ದೇವನೂರು ಮಠ:

ಇದು ನಂಜನಗೂಡು ತಾಲ್ಲೂಕಿನಲ್ಲಿದೆ. ಶ್ರೀ ಗುರುಮಲ್ಲೇಶ್ವರ ಎಂಬ ಮಹಾತ್ಮರ ಸಮಾಧಿ ಮಂದಿರವಿದು. ಅಸಂಖ್ಯಾತ ಭಕ್ತರು ಪ್ರತಿ ವರ್ಷ ಇಲ್ಲಿಗೆ ಬಂದುಹೋಗುತ್ತಾರೆ. ಇಲ್ಲಿ ದಾಸೋಹದ ಮಠವಿದೆ.

೫೧. ತಿರುಮಕೂಡಲು ಕ್ಷೇತ್ರ:

ಇದು ಮೈಸೂರು ಜಿಲ್ಲೆಯಲ್ಲಿ ಕಾವೇರೀ ಮತ್ತು ಕಪಿಲಾ ಸಂಗಮ ಸ್ಥಳದಲ್ಲಿದೆ. ಅಗಸ್ತ್ಯೇಶ್ವರ ದೇವಾಲಯವಿದೆ. ವರದಾನಿಗುಡ್ಡಮ್ಮ ಎಂಬ ಶರಣೆಯು ಇಲ್ಲಿ ತಪಸ್ಸು ಮಾಡಿದಂತೆ ವೀರಶೈವರ ಪುರಾಣಗಳಲ್ಲಿ ಹೇಳಿದೆ.

ತಿರುಮಕೂಡಲು, ಕಾವೇರೀ ಮತ್ತು ಕಪಿಲಾ ನದಿಗಳ ಮಧ್ಯದಲ್ಲಿ ಒಂದು ದ್ವೀಪ ಸದೃಶವಾಗಿದೆ.

೫೨ ಶ್ರೀಕ್ಷೇತ್ರ ಸೊನ್ನಲಿಗೆ :

ಇದು ಕರ್ನಾಟಕದ ಗಡಿಯಲ್ಲಿದೆ. ಇಲ್ಲಿ ಶ್ರೀ ಸಿದ್ಧರಾಮೇಶ್ವರನ ಸಮಾಧಿ ಮಂದಿರವೂ, ಮಲ್ಲಿಕಾರ್ಜುನ ದೇವಾಲಯವೂ ಇವೆ. ಅಲ್ಲದೆ ಶ್ರೀ ರೇವಣಸಿದ್ಧೇಶ್ವರನ ಪ್ರಖ್ಯಾತವಾದ ಒಂದು ದೇವಾಲಯವಿದೆ. ಇದನ್ನು ಈಗ ಸೊಲ್ಲಾಪುರವೆಂದು ಕರೆಯುತ್ತಾರೆ. ಇಲ್ಲಿಗೆ ಅನತಿ ದೂರದಲ್ಲಿ ತುಳಜಾಪುರ, ಪಂಡರಾಪುರ, ಮಂಗಳವಾಡ, ಮಾಸನೂರು ಮತ್ತ ಸಿದ್ಧನಕೆರೆ ಎಂಬ ಕ್ಷೇತ್ರಗಳಿವೆ.

೫೩ ಗುಮ್ಮಳಾಪುರದ ಗೌರಮ್ಮ :

ಇದು ಮೈಸೂರು ರಾಜ್ಯದ ಗಡಿಯಲ್ಲಿ ಸೇಲಂ ಜಿಲ್ಲಾ ಹೊಸೂರು ತಾಲ್ಲೂಕಿನಲ್ಲಿದೆ. ಇಲ್ಲಿ ಸುಪ್ರಸಿದ್ಧ ಗೌರಮ್ಮನ ವೇವಾಲಯವಿದೆ. ಜಂಗಲಿ ವೀರಭದ್ರ ದೇವಾಲಯ ಮತ್ತು ಸಿದ್ಧಲಿಂಗ ಯತಿಗಳ ಮಠವೂ ಇದೆ. ಇದೊಂದು ಐತಿಹಾಸಿಕ ಸ್ಥಳವೆನಿಸಿದೆ ಹಾಗೂ ಸುಕ್ಷೇತ್ರವೆನಿಸಿದೆ.

೫೪. ಶಿವಗಂಗೆ ಅಥವಾ ಕುಕುದ್ಗಿರಿ ಕ್ಷೇತ್ರ :

ಇದು ಬೆಂಗಳೂರು ಜಿಲ್ಲೆಯಲ್ಲಿದೆ. ಇದು ದಕ್ಷಿಣ ಕಾಶಿಯೆನಿಸಿದೆ. ಇಲ್ಲಿ ಗಂಗಾಧರೇಶ್ವರ ಮತ್ತು ಹೊನ್ನಮ್ಮ ದೇವಿಯರ ದೇವಾಲಯಗಳಿವೆ. ಇಲ್ಲಿ ಅಗಸ್ತ್ಯತೀರ್ಥ, ಕಣ್ವತೀರ್ಥ ಮೊದಲಾದ ಪ್ರಖ್ಯಾತ ತೀರ್ಥಗಳಿವೆ. ಮೇಲಣ ಗವಿಮಠ, ಶೃಂಗೇರಿಮಠ, ಕಂಬಾಳುಮಠ, ಹೊನ್ನಮ್ಮ ಗವಿಮಠ ಮೊದಲಾದ ಪ್ರಾಚೀನ ಮಠಮಾನ್ಯಗಳಿವೆ. ಶಿವಗಂಗೆ ಬೆಟ್ಟದ ಪೂರ್ವದಲ್ಲಿ ರೇವಣಸಿದ್ಧೇಶ್ವರ ದೇವಾಲಯವೂ ಇದೆ. ಇಲ್ಲಿ ವರ್ಷಕ್ಕೆ ಎರಡಾವರ್ತಿ ದೊಡ್ಡ ಜಾತ್ರೆಗಳು ನಡೆಯುತ್ತವೆ. ಇದೊಂದು ಇತಿಹಾಸ ಸ್ಥಳವೆನಿಸಿದೆ. ಇಲ್ಲಿನ ಬೆಟ್ಟವು ನಾಲ್ಕು ದಿಕ್ಕಿಗೆ ನಾಲ್ಕು ಆಕಾರವಾಗಿ (ಲಿಂಗ–ವೃಷಭ–ಸರ್ಪ–ಗಣೇಶ) ಕಾಣುತ್ತದೆ. ಇದು ಸುಪ್ರಸಿದ್ಧವಾದ ಶಿವಕ್ಷೇತ್ರವೆನಿಸಿದೆ.

ಇಲ್ಲಿ ಮಾಗಡಿ ಕೆಂಪೇಗೌಡರಿಂದ ಕಟ್ಟಲ್ಪಟ್ಟಿರುವ ಗುಡಿಗೋಪುರಗಳಿವೆ. ಇಲ್ಲಿ ಶ್ರೀಶೈಲದಲ್ಲಿರುವಂತೆ ಪಾತಾಳಗಂಗೆ ಎಂಬ ಸುಪ್ರಸಿದ್ಧವಾದ ತೀರ್ಥವಿದೆ.

### ೫೫. ಹಿಮುವದ್ಗೋಪಾಲಸ್ವಾಮಿ ಕ್ಷೇತ್ರ:

ಇದು ಮೈಸೂರು ಜಿಲ್ಲೆಯಲ್ಲಿದೆ. ಇಲ್ಲಿ ರಂಗನಾಥಸ್ವಾಮಿ ದೇವಾಲಯವಿದೆ. ಇದನ್ನು 'ಶ್ವೇತಾದ್ರಿ' ಎಂದು ಪುರಾಣಗಳಲ್ಲಿ ಕರೆಯಲಾಗಿದೆ. ಶ್ರೀ ವೈಷ್ಣವರ ಪ್ರಸಿದ್ಧ ಕ್ಷೇತ್ರವಿದು. ಪ್ರಕೃತಿ ಸೌಂದರ್ಯದಿಂದ ಕಂಗೊಳಿಸುತ್ತಿದೆ. ಈ ಬೆಟ್ಟದಲ್ಲಿ ಕಾಡುಜನರಿದ್ದಾರೆ.

### ೫೬. ರೇವಣಸಿದ್ಧೇಶ್ವರನ ಬೆಟ್ಟ:

ಇದು ಬೆಂಗಳೂರು ಜಿಲ್ಲಾ ರಾಮನಗರದ ಸಮೀಪದಲ್ಲಿದೆ. ೧೧ನೆಯ ಶತಮಾನದ ಉತ್ತರಾರ್ಧದಲ್ಲಿ ದಕ್ಷಿಣ ಭಾರತದಲ್ಲಿಯೇ ಪ್ರಖ್ಯಾತರಾಗಿದ್ದ ಶ್ರೀ ರೇವಣಸಿದ್ಧೇಶ್ವರರ ತಪೋಭೂಮಿಯಿದು. ಬೆಟ್ಟದಮೇಲೆ ಶ್ರೀ ಸ್ವಾಮಿಯ ದೇವಾಲಯವಿದೆ. ಭೀಮೇಶ್ವರ ಮೊದಲಾದ ಇತರ ದೇವಾಲಯಗಳೂ ಉಂಟು. ಇದು ಎಲ್ಲ ಹಿಂದುಗಳಿಗೂ ವಿಶೇಷವಾಗಿ ವೀರಶೈವರಿಗೂ ಪುಣ್ಯಸ್ಥಳವೆನಿಸಿದೆ. ಹಲವಾರು ಶಿಲಾಶಾಸನಗಳಿವೆ.

### ೫೭. ಗೂಳೂರು ಮತ್ತು ಕೈದಾಳ:

ಇವು ತುಮಕೂರು ಜಿಲ್ಲೆಯಲ್ಲಿವೆ. ಗೂಳೂರಿನಲ್ಲಿ ಸುಪ್ರಸಿದ್ಧ ಗಣಪತಿಯ ದೇವಾಲಯವಿದೆ. ವರ್ಷಕ್ಕೊಮ್ಮೆ ಜಾತ್ರೆಯಾಗುತ್ತದೆ. ನಿಂತ ವೃಷಭನ ಮೇಲೆ ಕುಳಿತಿರುವ ಪಾರ್ವತೀಪರಮೇಶ್ವರರ ವಿಗ್ರಹವಿದೆ. ಸಂಪಾದನೆಯ ಸಿದ್ಧವೀರ, ಪರ್ವತೇಶ್ವರ, ವಿರಕ್ತ ತೋಂಟದಾರ್ಯ ಮೊದಲಾದ ಕವಿಗಳು ಗೂಳೂರಿನವರು.

ಕೈದಾಳದಲ್ಲಿ ಶ್ರೀ ಚೆನ್ನಕೇಶ್ವರಸ್ವಾಮಿ ದೇವಾಲಯವಿದೆ. ಇಲ್ಲಿನ ವಿಗ್ರಹವು ಅತ್ಯಂತ ಸುಂದರವಾಗಿದೆ. ಇದನ್ನು ಪ್ರಸಿದ್ಧ ಶಿಲ್ಪಿ ಜಕಣಾಚಾರ್ಯನು ನಿರ್ಮಿಸಿದಂತೆ ಐತಿಹ್ಯವಿದೆ. ಕೈದಾಳವು ಅವನ ಜನ್ಮಭೂಮಿಯಂತೆ.

### ೫೮. ಮುಳುಬಾಗಿಲು :

ಇದು ಕೋಲಾರ ಜಿಲ್ಲೆಯಲ್ಲಿದೆ. ಇಲ್ಲಿ ಅತ್ಯಂತ ಪ್ರಸಿದ್ಧವಾದ ಆಂಜನೇಯಸ್ವಾಮಿ ದೇವಾಲಯವಿದೆ. ದಾಸಕೂಟದಲ್ಲಿ ಪ್ರಸಿದ್ಧರಾದ ಶ್ರೀಪಾದರಾಯರ ಮಠವಿದೆ. ಪ್ರಾಚೀನತಮಗಳಾದ ಎರಡು ವೀರಭದ್ರ ದೇವಾಲಯಗಳು ಇಲ್ಲಿವೆ. ಇಲ್ಲಿಗೆ ಅನತಿ ದೂರದಲ್ಲಿ ವಿರೂಪಾಕ್ಷ ಎಂಬ ಶಿವ ದೇವಾಲಯವಿದೆ. ಇದು ಮಾಧ್ವರಿಗೂ ವೀರಶೈವರಿಗೂ ಸುಕ್ಷೇತ್ರವೆನಿಸಿದೆ. ವಿಜಯನಗರದ ರಾಜರ ಕಾಲದಲ್ಲಿ ಇದು ಪ್ರಖ್ಯಾತವಾದ ಸ್ಥಳವೆನಿಸಿತ್ತು.

### ೫೯. ನಂದಿಬೆಟ್ಟ ಅಥವಾ ಕೂಷ್ಮಾಂಡ ಪರ್ವತ :

ಇದು ಕೋಲಾರ ಜಿಲ್ಲೆಯಲ್ಲಿದೆ. ಪ್ರಖ್ಯಾತ ಆರೋಗ್ಯ ಮಂದಿರವೆನಿಸಿದೆ. ಇದನ್ನು ಪುರಾಣಗಳಲ್ಲಿ ಕೂಷ್ಮಾಂಡ ಪರ್ವತ ಎಂದು ಕರೆದಿದ್ದಾರೆ. ಬೆಟ್ಟದಮೇಲೆ ಯೋಗನಂದಿ, ಕೆಳಗೆ ಭೋಗನಂದಿ ಎಂಬ ವಿಖ್ಯಾತವಾದ ಎರಡು ದೇವಾಲಯಗಳಿವೆ. ವರ್ಷಕ್ಕೊಮ್ಮೆ ಇಲ್ಲಿ ಜಾತ್ರೆ ಸೇರುತ್ತದೆ. ಶಿವಭಕ್ತರಿಗೆ ಪ್ರಿಯವಾದ ಸುಕ್ಷೇತ್ರವೆನಿಸಿದೆ. ಇಲ್ಲಿಂದ ಪಾಲಾರ್, ಪೆನ್ನಾರ್ ಪಿನಾಕಿನೀ ನದಿಗಳು ಹುಟ್ಟುತ್ತವೆ. ಬೆಟ್ಟದಮೇಲೆ ಅಮೃತ ಸರೋವರವಿದೆ.

### ೬೦ ಕೈವಾರ ಅಮರನಾರಾಯಣ :

ಇದು ಕೋಲಾರ ಜಿಲ್ಲೆಯಲ್ಲಿ ಚಿಂತಾಮಣಿಗೆ ಅನತಿ ದೂರದಲ್ಲಿದೆ. ಇಲ್ಲಿ ಸುಪ್ರಸಿದ್ಧ ಅಮರನಾರಾಯಣನ ದೇವಾಲಯವಿದೆ. ಇಲ್ಲಿ ಪಾಂಡವರ ಸ್ಮಾರಕವಿದೆ. ಬಕಾಸುರನನ್ನು ಭೀಮನು ಇದೇ ಸ್ಥಳದಲ್ಲಿ ಕೊಂದನೆಂದು ಐತಿಹ್ಯವಿದೆ. ಇಲ್ಲಿ ಬಕಾಸುರನು ವಾಸಿಸುತ್ತಿದ್ದ ಸ್ಥಳವನ್ನು ಇಂದಿಗೂ ಜನ ತೋರಿಸುತ್ತಾರೆ. ಇಲ್ಲಿ ಆಧುನಿಕರಾದ ಶ್ರೀ ನಾರಣಪ್ಪ ಎಂಬ ಸಾಧುಗಳ ಸಮಾಧಿಯಿದೆ.

### ೬೧ ಅಂತರಗಂಗೆ_ಶತಶೃಂಗ ಪರ್ವತ :

ಇದು ಕೋಲಾರದ ಶತ ಶೃಂಗಪರ್ವತದಲ್ಲಿದೆ. ಇದನ್ನು ಒಂದು ಪವಿತ್ರ ತೀರ್ಥವನ್ನಾಗಿ ಹಿಂದುಗಳು ಭಾವಿಸಿದ್ದಾರೆ. ಬೆಂಗಳೂರು ಜಿಲ್ಲಾ ಕುದೂರಿನಲ್ಲಿಯೂ ಇಂಥದೇ ಆದ ಅಂತರಗಂಗೆಯಿದೆ.

೬೨. ಕೂಡಮಲೆ ಗಣಪತಿ :

ಇದು ಕೋಲಾರ ಜಿಲ್ಲೆಯಲ್ಲಿದೆ. ಇಲ್ಲಿ ರಾಜರ ಕಾಲದ ಒಂದು ಗಣಪತಿ ವಿಗ್ರಹವಿದೆ. ಇದು ಕರ್ಣಾಟಕದಲ್ಲಿ ಅತ್ಯಂತ ಪ್ರಖ್ಯಾತವಾಗಿದೆ. ತಲಕಾಡಿನ ಶಕ್ತಿಗಣಪತಿ, ಬನವಾಸಿಯ ಅರ್ಧಾಂಗ ಗಣಪತಿ, ಗೋಕರ್ಣದ ಬಾಲಗಣಪತಿ, ಹಂಪೆಯ ಕಡಲೆಗಣಪತಿ ಮತ್ತು ಸಾಸಿವೆಗಣಪತಿ, ಗೂಳೂರಿನ ಬೃಹದ್ಗಣಪತಿ ಮೊದಲಾದವುಗಳನ್ನು ನೋಡಿದವರು ಕೂಡಮಲೆ ಗಣಪತಿಯನ್ನೂ ನೋಡುವುದು ಅಗತ್ಯ. ಇದು ಸುಕ್ಷೇತ್ರವೆಂದು ಪ್ರಸಿದ್ಧವಾಗಿದೆ.

೬೩. ಆವನಿ ಕ್ಷೇತ್ರ :

ಇದು ಕೋಲಾರ ಜಿಲ್ಲೆಯಲ್ಲಿದೆ. ಶ್ರೀ ಶಂಕರಾಚಾರ್ಯರ ಒಂದು ಮಠವಿದೆ. ಇಲ್ಲಿ ಶ್ರೀರಾಮ–ಲಕ್ಷ್ಮಣ–ಭರತ–ಶತ್ರುಘ್ನ–ಹನುಮಂತ ಇವರ ಹೆಸರಿನ ಶಿವಲಿಂಗಗಳಿವೆ. ಕೋಲಾರ ಜಿಲ್ಲೆಯಲ್ಲಿ ಇದೊಂದು ಕ್ಷೇತ್ರವೆನಿಸಿದೆ. ಇದನ್ನು ವಾಲ್ಮೀಕಿಯ ಆಶ್ರಮವೆಂದೂ, ದಕ್ಷಿಣ ಕಾಶಿಯೆಂದೂ ಹೇಳುತ್ತಾರೆ. ಕುಶ–ಲವರು ಇಲ್ಲಿಯೇ ಹುಟ್ಟಿದರೆಂಬ ಪ್ರತೀತಿಯಿದೆ. ಇಲ್ಲಿ ಕೆಲವು ಮಹತ್ವದ ಶಾಸನಗಳಿವೆ. ಕ್ರಿ. ಶ. ೯೬೧ರಲ್ಲಿ ತ್ರಿಭುವನಕರ್ತರ ದೇವ ಎಂಬ ಧಾರ್ಮಿಕ ಗುರುವಿದ್ದಂತೆ ಚರಿತ್ರೆ ಹೇಳುತ್ತದೆ. ಇವನು ರಾಜಗುರುವಾಗಿದ್ದನಂತೆ.

೬೪. ಕಪ್ಪೂರು ಗದ್ದಿಗೆ–ಗೋಡೇಕೆರೆ–ಯಳನಡು :

ಈ ಮೂರೂ ತುಮಕೂರುಜಿಲ್ಲೆಯಲ್ಲಿವೆ. ಕುಪ್ಪೂರಿನಲ್ಲಿ ಶ್ರೀ ಮರುಳಸಿದ್ಧೇಶ್ವರನ ಗದ್ದಿಗೆಯಿದೆ. ಗೋಡೇಕೆರೆಯಲ್ಲಿ ಸಿದ್ಧರಾಮೇಶ್ವರ ದೇವಾಲಯವಿದೆ. ಇವು ಮೂರೂ ಸುಕ್ಷೇತ್ರಗಳೆನಿಸಿವೆ. ವೀರಶೈವರು ಇಲ್ಲಿಗೆ ಅಧಿಕವಾಗಿ ಬಂದುಹೋಗುತ್ತಾರೆ.

೬೫. ಅಮರೇಶ್ವರ ಕ್ಷೇತ್ರ :

ಇದು ರಾಯಚೂರು ಜಿಲ್ಲಾ ಲಿಂಗಸೂಗೂರು ತಾಲ್ಲೂಕಿನಲ್ಲಿದೆ. ಸುಂದರವಾದ ಅಡವಿಯ ಮಧ್ಯದಲ್ಲಿ ಪ್ರಶಾಂತವಾದ ಪ್ರದೇಶದಲ್ಲಿ ಈ ಕ್ಷೇತ್ರ



ಶ್ರವಣಬೆಳಗೊಳದ ಶ್ರೀ ಗೊಮ್ಮಟೇಶ್ವರ

೬೨. ಕೂಡಮಲೆ ಗಣಪತಿ :

ಇದು ಕೋಲಾರ ಜಿಲ್ಲೆಯಲ್ಲಿದೆ. ಇಲ್ಲಿ ರಾಜರ ಕಾಲದ ಒಂದು ಗಣಪತಿ ವಿಗ್ರಹವಿದೆ. ಇದು ಕರ್ಣಾಟಕದಲ್ಲಿ ಅತ್ಯಂತ ಪ್ರಖ್ಯಾತವಾಗಿದೆ. ತಲಕಾಡಿನ ಶಕ್ತಿಗಣಪತಿ, ಬನವಾಸಿಯ ಅರ್ಧಾಂಗ ಗಣಪತಿ, ಗೋಕರ್ಣದ ಬಾಲಗಣಪತಿ, ಹಂಪೆಯ ಕಡಲೆಗಣಪತಿ ಮತ್ತು ಸಾಸಿವೆಗಣಪತಿ, ಗೂಳೂರಿನ ಬೃಹದ್ಗಣಪತಿ ಮೊದಲಾದವುಗಳನ್ನು ನೋಡಿದವರು ಕೂಡಮಲೆ ಗಣಪತಿಯನ್ನೂ ನೋಡುವುದು ಆಗತ್ಯ. ಇದು ಸುಕ್ಷೇತ್ರವೆಂದು ಪ್ರಸಿದ್ಧವಾಗಿದೆ.

೬೩. ಆವನಿ ಕ್ಷೇತ್ರ :

ಇದು ಕೋಲಾರ ಜಿಲ್ಲೆಯಲ್ಲಿದೆ. ಶ್ರೀ ಶಂಕರಾಚಾರ್ಯರ ಒಂದು ಮಠವಿದೆ. ಇಲ್ಲಿ ಶ್ರೀರಾಮ–ಲಕ್ಷ್ಮಣ–ಭರತ–ಶತ್ರುಘ್ನ–ಹನುಮಂತ ಇವರ ಹೆಸರಿನ ಶಿವಲಿಂಗಗಳಿವೆ. ಕೋಲಾರ ಜಿಲ್ಲೆಯಲ್ಲಿ ಇದೊಂದು ಕ್ಷೇತ್ರವೆನಿಸಿದೆ. ಇದನ್ನು ವಾಲ್ಮೀಕಿಯ ಆಶ್ರಮವೆಂದೂ, ದಕ್ಷಿಣ ಕಾಶಿಯೆಂದೂ ಹೇಳುತ್ತಾರೆ. ಕುಶ–ಲವರು ಇಲ್ಲಿಯೇ ಹುಟ್ಟಿದರೆಂಬ ಪ್ರತೀತಿಯಿದೆ. ಇಲ್ಲಿ ಕೆಲವು ಮಹತ್ವದ ಶಾಸನಗಳಿವೆ. ಕ್ರಿ. ಶ. ೧೬೧೦ರಲ್ಲಿ ತ್ರಿಭುವನಕರ್ತರದೇವ ಎಂಬ ಧಾರ್ಮಿಕ ಗುರುವಿದ್ದಂತೆ ಚರಿತ್ರೆ ಹೇಳುತ್ತದೆ. ಇವನು ರಾಜಗುರುವಾಗಿದ್ದನಂತೆ.

೬೪. ಕಪ್ಪೂರು ಗದ್ದಿಗೆ–ಗೋಡೇಕೆರೆ–ಯಳನಡು :

ಈ ಮೂರೂ ತುಮಕೂರುಜಿಲ್ಲೆಯಲ್ಲಿವೆ. ಕುಪ್ಪೂರಿನಲ್ಲಿ ಶ್ರೀ ಮರುಳಸಿದ್ಧೇಶ್ವರನ ಗದ್ದಿಗೆಯಿದೆ. ಗೋಡೇಕೆರೆಯಲ್ಲಿ ಸಿದ್ಧರಾಮೇಶ್ವರ ದೇವಾಲಯವಿದೆ. ಇವು ಮೂರೂ ಸುಕ್ಷೇತ್ರಗಳೆನಿಸಿವೆ. ವೀರಶೈವರು ಇಲ್ಲಿಗೆ ಅಧಿಕವಾಗಿ ಬಂದುಹೋಗುತ್ತಾರೆ.

೬೫. ಅಮರೇಶ್ವರ ಕ್ಷೇತ್ರ :

ಇದು ರಾಯಚೂರು ಜಿಲ್ಲಾ ಲಿಂಗಸೂಗೂರು ತಾಲ್ಲೂಕಿನಲ್ಲಿದೆ. ಸುಂದರವಾದ ಅಡವಿಯ ಮಧ್ಯದಲ್ಲಿ ಪ್ರಶಾಂತವಾದ ಪ್ರದೇಶದಲ್ಲಿ ಈ ಕ್ಷೇತ್ರ



ಶ್ರವಣಬೆಳಗೊಳದ ಶ್ರೀ ಗೊಮ್ಮಟೇಶ್ವರ

ವಿದೆ. ಐದಾರುನೂರು ವರ್ಷಗಳ ಹಿಂದೆ ಇಲ್ಲಿ ಓರ್ವ ವೀರಶೈವ ಶರಣರು ಬಹುಕಾಲ ತಪಸ್ಸುಮಾಡಿ ಅಲ್ಲಿಯೇ ಸಮಾಧಿಸ್ಥರಾಗಿದ್ದಾರೆ. ಅವರ ಹೆಸರು "ಅಮರೇಶ್ವರ" ಎಂದು. ಈ ಹೆಸರಿನಿಂದಲೇ ಈ ಕ್ಷೇತ್ರವು ಗಣ್ಯವಾಗಿದೆ. ವರ್ಷಕ್ಕೊಮ್ಮೆ ಫಾಲ್ಗುಣ ಮಾಸದಲ್ಲಿ ಹುಣ್ಣಿಮೆ ದಿನ ಇಲ್ಲಿ ರಥೋತ್ಸವ ವಾಗುತ್ತದೆ. ಆಗ ದೊಡ್ಡ ಜಾತ್ರೆ ಇಲ್ಲಿ ಸೇರುತ್ತದೆ. ಲಕ್ಷಾಂತರ ಜನ ಕೂಡುತ್ತಾರೆ.

ಅಮರೇಶ್ವರರು ಮಹಿಮಾಶಾಲಿಗಳೆಂದೂ ಪವಾಡಪುರುಷರೆಂದೂ ಅಮರೇಶ್ವರ ಪುರಾಣ, ಅಮರೇಶ್ವರ ಶತಕ ಹಾಗೂ ಅಮರೇಶ್ವರ ಚರಿತೆ ಗಳಲ್ಲಿ ಹೇಳಿದೆ. ಆ ಭಾಗದಲ್ಲಿ ಇದು ಬಹು ದೊಡ್ಡ ಕ್ಷೇತ್ರವೆನಿಸಿದೆ. ಕಲ್ಬುರ್ಗಿ ಶರಣಬಸವೇಶ್ವರ, ಸೊನ್ನಲಗಿ ಸಿದ್ಧರಾಮೇಶ್ವರ, ದೇವನೂರು, ಗುರು ಮಲ್ಲೇಶ್ವರ, ಎಡೆಯೂರು ಸಿದ್ಧಲಿಂಗೇಶ್ವರ, ಗುಬ್ಬಿ ಚೆನ್ನಬಸವೇಶ್ವರ, ಕೊಟ್ಟೂರು ಬಸವೇಶ್ವರ, ಮಲೆಯ ಮಾದೇಶ್ವರ, ಗದ್ದಿಗೆ ಮರುಳಸಿದ್ಧೇಶ್ವರ ಕ್ಷೇತ್ರಗಳಂತೆ ಇದು ಶಿವಯೋಗಸಮಾಧಿ ಕ್ಷೇತ್ರವೆನಿಸಿದೆ. ದೇವಾಲಯವು ಅರಣ್ಯದ ಮಧ್ಯೆ ಒಂದು ತಗ್ಗುಪ್ರದೇಶದಲ್ಲಿದ್ದು ಗರ್ಭಗುಡಿಯ ಸುತ್ತಲೂ ಸದಾ ನೀರು ಹರಿಯುತ್ತಿದ್ದು ಕ್ಷೇತ್ರದ ಸೌಂದರ್ಯವನ್ನು ಹೆಚ್ಚಿಸಿದೆ. ರಾಯ ಚೂರಿಗೆ ಈ ಕ್ಷೇತ್ರ ಸುಮಾರು ೭೦ ಮೈಲಿ ದೂರದಲ್ಲಿದೆ.

ಈ ಕನ್ನಡ ನಾಡಿನಲ್ಲಿ ರಾಮಾಯಣ ಕಾಲದಿಂದ ಇಂದಿನವರೆಗೂ ಪ್ರಸಿದ್ಧವಾದ ಕ್ಷೇತ್ರಗಳನ್ನು ಸಂಗ್ರಹವಾಗಿ ತಿಳಿಸಿದೆ. ಬೆಂಗಳೂರು ಜಿಲ್ಲಾ ದೇವರಹೊಸಹಳ್ಳಿ, ನಿಜಗಲ್ಲುಗಳಲ್ಲಿ ಪ್ರಸಿದ್ಧ ವೀರಭದ್ರ ದೇವಾಲಯಗಳೂ, ಕೆಂಗಲ್ಲು–ಹೊಸಹಳ್ಳಿಗಳಲ್ಲಿ ಶ್ರೀ ಆಂಜನೇಯ ದೇವಾಲಯಗಳೂ ಇವೆ. ಶಿವಮೊಗ್ಗಾ ಜಿಲ್ಲಾದಲ್ಲಿ ಜೈನರ ಪ್ರಾಚೀನ ಕ್ಷೇತ್ರವಾದ ಹೊಂಬುಜವಿದೆ. ಅದೇ ಜಿಲ್ಲೆಯಲ್ಲಿ ಶಿವಶರಣರಾದ ಪ್ರಭುದೇವರ ಬಳ್ಳಿಗಾವಿ, ಮಹಾದೇವಿ ಅಕ್ಕನ ಉಡುತಡಿ, ಸತ್ಯಕ್ಕನ ಜಂಬೂರು, ಏಕಾಂತರಾಮಯ್ಯನ ಮೊರಡಿ, ಮುಕ್ತಾಯಿ ಹಾಗೂ ಅಜಗಣ್ಣನವರ ಮುತ್ತಗಿ ಎಂಬ ಕ್ಷೇತ್ರಗಳಿವೆ. ಮೈಸೂರು ಜಿಲ್ಲಾ ಹುಣಸೂರು ತಾಲ್ಲೂಕಿನಲ್ಲಿ ಕೆಂಡಗಣ್ಣಸ್ವಾಮಿಗಳ

ಗದ್ದುಗೆಯಿದೆ. ಸೋಸಲೆಯಲ್ಲಿ ವ್ಯಾಸರಾಯರ ಮಠವಿದೆ. ಮಲ್ಲನಮೂಲೆ ಯಲ್ಲಿ ಕಂಬಳಿಸ್ವಾಮಿಗಳ ಸಮಾಧಿಯಿದೆ. ಮಡಕೇರಿಯಲ್ಲಿ ಲಿಂಗರಾಜರ, ವೀರರಾಜರ ಸಮಾಧಿಗಳಿವೆ. ಬೆಳಗಾವಿ ಜಿಲ್ಲಾ ಸ್ತವನಿಧಿಯಲ್ಲಿ ಜೈನರ ಬಸದಿಯಿದೆ. ಶಿಂಗಾನಲ್ಲೂರಿನಲ್ಲಿ ಕಟ್ಟೆಬಸವೇಶ್ವರ ದೇವಾಲಯವಿದೆ. ಇವ ನ್ನೆಲ್ಲಾ ಸುಕ್ಷೇತ್ರಗಳೆಂದೇ ಜನ ಭಾವಿಸುತ್ತಾರೆ.

ಕರ್ಣಾಟಕದ ಈ ಕ್ಷೇತ್ರಗಳಲ್ಲಿ ಶಿವಕ್ಷೇತ್ರಗಳಿವೆ, ವೈಷ್ಣವ ಕ್ಷೇತ್ರ ಗಳಿವೆ, ಜೈನರ ಪವಿತ್ರ ಸ್ಥಳಗಳಿವೆ, ಮುಸಲ್ಮಾನರ ಪವಿತ್ರ ಸ್ಥಾನಗಳಿವೆ. ಕನಕದಾಸನ ಇಷ್ಟದೇವತೆ ಕಾಗಿನೆಲೆಯಾದಿಕೇಶವ, ಲಕ್ಷ್ಮೀಶ ಕವಿಯ ದೇವನೂರು ಲಕ್ಷ್ಮೀನಾರಾಯಣ, ಯಳಂದೂರಿನಲ್ಲಿರುವ ಷಡಕ್ಷರ ದೇವರ ಸಮಾಧಿ, ಧನುಗೂರಿನಲ್ಲಿರುವ ಈ ಕವಿಯ ತಪೋಭೂಮಿ, ಬೇಲೂರಿನ ಲ್ಲಿರುವ ರಾಘವಾಂಕನ ಸಮಾಧಿ ಇವನ್ನೆಲ್ಲಾ ಸುಕ್ಷೇತ್ರಗಳೆಂದೇ ಭಾವಿಸಲಾಗಿದೆ.

ಇಂತಹ ಕ್ಷೇತ್ರಗಳ ಸಂದರ್ಶನ ಭಕ್ತರಿಗೆ ಮನಶ್ಶಾಂತಿಯನ್ನೂ, ವಿಮ ರ್ಶಕರಿಗೆ ವಿಪುಲವಾದ ತಿಳಿವಿನ ಆಹಾರವನ್ನೂ ದೊರಕಿಸುತ್ತವೆ. ಪ್ರಕೃತ ಲೇಖನವು ಹಕ್ಕಿಯ ನೋಟದಿಂದ ಕರ್ಣಾಟಕದ ಕ್ಷೇತ್ರಗಳನ್ನು ವಾಚಕರ ಅವಗಾಹನೆಗೆ ತರುತ್ತದೆಂದು ನಂಬಲಾಗಿದೆ. ಹಿಂದೂಧರ್ಮದಲ್ಲಿ ಕ್ಷೇತ್ರ ಮಾಹಾತ್ಮ್ಯವು ಎಲ್ಲ ಪುರಾಣೇತಿಹಾಸಗಳಲ್ಲಿಯೂ ನಿರೂಪಿತವಾಗಿದೆ. ಭಗವದ್ಗೀತೆಯ ಮೊದಲನೆಯ ಶ್ಲೋಕವೇ "ಧರ್ಮಕ್ಷೇತ್ರೇ ಕುರುಕ್ಷೇತ್ರೇ" ಎಂಬ ಕ್ಷೇತ್ರಮಾಹಾತ್ಮ್ಯದಿಂದ ಪ್ರಾರಂಭವಾಗಿದೆ. "ಬಂದ ಕಾಲಗುಣವೋ ನಿಂದನೆಲದ ಗುಣವೋ" ಎಂಬ ರಾಘವಾಂಕ ಕವಿಯ ಮಾತಿನಲ್ಲಿ ನೆಲಕ್ಕೂ ಒಂದು ಗುಣ, ಶಕ್ತಿ ಇದೆ ಎಂಬುದು ವ್ಯಕ್ತವಾಗಿದೆ. ಇದೆಲ್ಲವೂ ತೀರ್ಥ ಕ್ಷೇತ್ರಗಳ ಮಹಿಮೆಯನ್ನೇ ನಿರೂಪಿಸುತ್ತಿಲ್ಲವೆ ?



ಪೂರ್ವಘಟ್ಟಗಳ ನಡುಮಲೆಯಲ್ಲಿರುವ
ಶ್ರೀ ಮಾದೇಶ್ವರ ದೇವಾಲಯ
(ಕೊಳ್ಳೇಗಾಲ ತಾಲ್ಲೂಕು, ಮೈಸೂರು ಜಿಲ್ಲಾ)

# ನೀಲಗಿರಿ ಮತ್ತು ಮೈಸೂರು ಬಾಂಧವ್ಯ A

ದಕ್ಷಿಣಭಾರತದಲ್ಲಿ ಆಂಧ್ರದಷ್ಟೇ ರಭಸದಿಂದ ಭಾಷಾವಾರು ಪ್ರಾಂತಕ್ಕೆ ಹೋರಾಡಿದವರಲ್ಲಿ ಕನ್ನಡಿಗರು ಪ್ರಮುಖರು. ಸುಮಾರು ೫೦ ವರ್ಷಗಳಿಂದ ಕನ್ನಡ ಜನರು ವಿವಿಧ ರೀತಿಗಳಿಂದ ಕರ್ಣಾಟಕ ಪ್ರಾಂತ ನಿರ್ಮಾಣಕ್ಕಾಗಿ ಹೋರಾಡಿದ್ದಾರೆ. ಅವರ ಈ ನ್ಯಾಯವಾದ ಮತ್ತು ಬಲಯುತವಾದ ಬೇಡಿಕೆ ಈಗ ಬಹುಮಟ್ಟಿಗೆ ಈಡೇರಿದೆ. ಉಳಿದಿರುವ ಕನ್ನಡ ಗಡಿಗಳು ರಾಜ್ಯಕ್ಕೆ ಸೇರಬೇಕಾಗಿವೆ.

ಪ್ರಕೃತ ಲೇಖನದಲ್ಲಿ ಮೈಸೂರಿಗೆ ಸೇರಲು ತವಕಪಡುತ್ತಿರುವ ನೀಲಗಿರಿ ಜಿಲ್ಲೆ ಮತ್ತು ವೈನಾಡು ಪ್ರದೇಶಕ್ಕೂ ಮೈಸೂರು ದೇಶಕ್ಕೂ ಇರುವ ಭೌಗೋಲಿಕ, ಐತಿಹಾಸಿಕ, ಸಾಂಸ್ಕೃತಿಕ ಮತ್ತು ವ್ಯಾವಹಾರಿಕ ಸಂಬಂಧಗಳನ್ನು ಕುರಿತು ಕೆಲವು ಅಂಶಗಳನ್ನು ಈಗ ಸೂಚಿಸುವುದು ಆಗತ್ಯವಾಗಿ ಕಾಣುತ್ತದೆ. ಕನ್ನಡ ಜನರು ಇದನ್ನು ಅರಿಯುವುದು ಅಗತ್ಯ.

ನೀಲಗಿರಿ ಜಿಲ್ಲೆಯು ಕರ್ಣಾಟಕದ ದಕ್ಷಿಣ ಭಾಗದಲ್ಲಿ ಮೈಸೂರುಜಿಲ್ಲೆಗೆ ಅಂಟಿಕೊಂಡಿದೆ. ಇದು ಸುಂದರವಾದ ಪರ್ವತಪ್ರದೇಶವೂ, ಉತ್ತಮವಾದ ಹವಾಗುಣದಿಂದ ಸುಶೋಭಿಸತಕ್ಕುದೂ ಆಗಿದೆ. ನೀಲಗಿರಿಯಲ್ಲಿ ದೊಡ್ಡಬೆಟ್ಟ (೮೭೬೦ ಅಡಿ) ಮೂಕರ್ತಿ (೮೪೦೦ ಅಡಿ) ಸ್ನೋರ್ಟ್ (೮೨೯೯ ಅಡಿ) ಎಲ್ಕ್‌ಹಿಲ್ (೮೦೯೦ ಅಡಿ) ಎಂಬ ಉನ್ನತವಾದ ಶಿಖರಗಳಿವೆ. ಉದಕಮಂಡಲ (೭೫೦೦) ಕುನ್ನೂರು, ಕೋತಗಿರಿ, ಗುಡಲೂರು ಎಂಬ ನಾಲ್ಕು ಊರುಗಳಿವೆ. ಪಾಯಿಕೆರೆ, ಕಾಟೇರಿ, ಕಲ್ಪಟ್ಟೆ ಎಂಬ ಸ್ಥಳಗಳಲ್ಲಿ ಜಲಪಾತಗಳಿವೆ. ಪಾಯಿಕೆರೆ ಮತ್ತು ಕಲ್ಪಟ್ಟೆಗಳಲ್ಲಿ ಅಣೆಕಟ್ಟುಗಳನ್ನು ಕಟ್ಟಿ ವಿದ್ಯುದುತ್ಪಾದನೆಯ ಏರ್ಪಾಡು ಮಾಡಲಾಗಿದೆ. ಈ ಜಿಲ್ಲೆಯಲ್ಲಿ ತೊದವರು, ಕೋತರು, ಕುರುಂಬರು, ಬಡಗರು, ಇರುಳರು ಮೊದಲಾದ

---

A ೧೯೫೪ರಲ್ಲಿ ಏಕೀಕರಣ ಚಳುವಳಿಯ ಕಾಲದಲ್ಲಿ ಬರೆದ ಒಂದು ಲೇಖನದ ಸಂಗ್ರಹ.

ಪ್ರಾಚೀನ ದ್ರಾವಿಡ ಸಂಸ್ಕೃತಿಗೆ ಸೇರಿದ ಮೂಲನಿವಾಸಿಗಳಿದ್ದಾರೆ. ಇವರ ನಡೆ, ನುಡಿ, ಆಚಾರ, ವಿಚಾರಗಳು ಕನ್ನಡಿಗರ ಸಂಸ್ಕೃತಿಗೆ ಸೇರಿದ್ದಾಗಿದೆ. ಇವರು ಆಡುವ ಭಾಷೆ ಹಳಗನ್ನಡ ಭಾಷೆಯನ್ನು ಹೋಲುವ ಕನ್ನಡದ ಉಪಭಾಷೆಯಾಗಿದೆ. ಇವರು ಸತ್ತವರನ್ನು ಹೂಳುವ ಪದ್ಧತಿ ಕರ್ಣಾಟಕದ ಲಿಂಗವಂತರ ಶಾಸ್ತ್ರಕ್ಕೆ ಅನುಗುಣವಾಗಿದೆ.

ನೀಲಗಿರಿ ಜಿಲ್ಲೆಯ ವಿಸ್ತಾರ ೯೫೮ ಚದುರ ಮೈಲಿ. ಗ್ರಾಮಗಳ ಸಂಖ್ಯೆ ೬೦. ಜನ ಸಂಖ್ಯೆ ೩.೧೧೭೨೯ [೧೯೫೧]. ಈ ಜಿಲ್ಲೆಯ ವಾರ್ಷಿಕ ಉತ್ಪನ್ನವು ಟೀ ಮತ್ತು ಕಾಫಿಗಳಿಂದಲೇ ವರ್ಷಕ್ಕೆ ಸುಮಾರು ೩ ಕೋಟಿ ರೂಪಾಯಿಗಳಷ್ಟಿದೆ. ಈ ಜಿಲ್ಲೆಯಲ್ಲಿ ಕಿತ್ತಲೆಹಣ್ಣು, ಆಲೂಗಡ್ಡೆ, ಕರ್ಪೂರ ದಗಿಡ ವಿಶೇಶವಾಗಿ ಬೆಳೆಯುತ್ತವೆ. ಪ್ರಕೃತ ಇದು ಮದರಾಸಿನ ಬೇಸಿಗೆ ರಾಜಧಾನಿಯಾಗಿ ಇರುವುದರಿಂದ ಉದಕಮಂಡಲ, ಕುನ್ನೂರುಗಳಲ್ಲಿ ತಮಿಳಿನ ಪ್ರಭಾವ ಹೆಚ್ಚಲು ಕಾರಣವಾಗಿದೆ. ಗುಡಲೂರಿನಲ್ಲಿ ಕೆಲವು ಮಲೆಯಾಳಿಗಳು ವ್ಯಾಪಾರಕ್ಕೆ ಬಂದು ಸೇರಿಕೊಂಡಿದ್ದಾರೆ. ಆದರೆ ಇಡೀ ಜಿಲ್ಲೆಯ ಹಳ್ಳಿಗಾಡಿನ ಜನರ ಭಾಷೆ ಕನ್ನಡವೇ ಆಗಿದೆ. ೧೫೦ ವರ್ಷ ಗಳಿಂದ ಇಲ್ಲಿ ಕನ್ನಡ ಶಾಲೆಗಳು ಇಲ್ಲವಾದರೂ, ಸರ್ಕಾರ ತಮಿಳನ್ನು ಜನತೆಯ ಮೇಲೆ ಬಲವಂತವಾಗಿ ಹೇರಿದರೂ ಗ್ರಾಮಾಂತರಗಳಲ್ಲಿ ಈಗಲೂ ತಮಿಳಿನ ಸಂಪರ್ಕ ಇಲ್ಲವಾಗಿರುವುದು ನಿಜಕ್ಕೂ ಗಮನಾರ್ಹವಾಗಿದೆ.

ಈ ಜಿಲ್ಲೆಯಲ್ಲಿ ಬಡಗರು ಪ್ರಧಾನ ಜನರಾಗಿದ್ದಾರೆ. ಜಿಲ್ಲೆಯ ೬೦ ಹಳ್ಳಿಗಳಲ್ಲಿ ೫೩ ಹಳ್ಳಿಗಳು ಬಡಗಜನರಿಂದ ಕೂಡಿವೆ. ಇಲ್ಲಿ ಜಮೀನ್ದಾರ ರಾಗಿ ಪ್ರಭಾವಶಾಲಿಗಳಾಗಿರುವವರು ಅವರೇ ಆಗಿದ್ದಾರೆ. ಇತ್ತೀಚೆಗೆ ಕೋತಗಿರಿ ಮೊದಲಾದಕಡೆ ವಾಸಮಾಡುವ ತೋದರ ಜನಸಂಖ್ಯೆ ಅವರ ಸಾಮಾಜಿಕ ನಡೆವಳಿಕೆಯ ಫಲವಾಗಿಯೋ ಏನೋ ಕ್ರಮಕ್ರಮವಾಗಿ ಕಡಿಮೆಯಾಗುತ್ತಿರುವುದು ಚಿಂತಾಜನಕವಾಗಿದೆ. ಇತ್ತೀಚೆಗೆ ಮೈಸೂರಿನಿಂದ ಅನೇಕ ಮಂದಿ ಕನ್ನಡಿಗರು ಬಂದು ಉದಕಮಂಡಲ ಮುಂತಾದ ಕಡೆ ನೆಲೆಸಿ ವ್ಯವಸಾಯ ಮತ್ತು ವ್ಯಾಪಾರಗಳಲ್ಲಿ ಗಣ್ಯತೆಯನ್ನು ಪಡೆದಿದ್ದಾರೆ.

ನೀಲಗಿರಿಯು ತನ್ನ ಸಹಜವಾದ ಪ್ರಕೃತಿ ವೈಭವದಿಂದ ದಕ್ಷಿಣ ಹಿಂದೂಸ್ಥಾನದಲ್ಲಿ ಗಣ್ಯತೆಯನ್ನು ಪಡೆದಿದೆ. ಪಾಶ್ಚಾತ್ಯರು ಈ ಪರ್ವತ ಪ್ರದೇಶವನ್ನು ಕಂಡು ಆನಂದಿಸಿ ಇದಕ್ಕೆ "ಪರ್ವತಗಳ ರಾಣಿ" (Queen of hill stations) ಎಂದು ಕರೆದಿದ್ದಾರೆ. ಭಾರತದಲ್ಲಿ ಕಾಶ್ಮೀರದಲ್ಲಿರುವ ಅಮರನಾಥ (೧೩೦೦೦ ಅಡಿ), ಪಂಜಾಬಿನಲ್ಲಿರುವ ಡಾಲ್‌ಹೌಸಿ (೭೪೬೭ ಅಡಿ), ಕರ್ಣಾಟಕದ ಉದಕಮಂಡಲ (೭೫೦೦ ಅಡಿ), ಎತ್ತರ ಉಳ್ಳವಾಗಿವೆ: ಇದರಿಂದ ಉದಕಮಂಡಲವು ಪರ್ವತವಾಸಗಳಲ್ಲಿ ೩ನೇ ಸ್ಥಾನವನ್ನು ಪಡೆದಿದೆ. ಆದರೆ ಹವಾಗುಣ, ಜೀವನ ಸೌಕರ್ಯದ ಸಂದರ್ಭಗಳು, ಪ್ರಯಾಣ ಸೌಕರ್ಯ ಮೊದಲಾದುವುಗಳಿಂದ ಉದಕಮಂಡಲವು ಅಗ್ರಗಣ್ಯವಾಗಿದೆ. ಇಲ್ಲಿ ಬೆಳೆಯುವ ಟೀ (ಸುಮಾರು ೭೦೦೦ ಅಡಿ ಎತ್ತರದ ತೋಟಗಳಲ್ಲಿ) ಪ್ರಪಂಚದಲ್ಲಿ ಪ್ರಖ್ಯಾತಿಯನ್ನು ಪಡೆದಿದೆ. ಮೈಸೂರಿನಲ್ಲಿ ಬಾಬಾಬುಡರ್ಗಿರಿ ಕಾಫಿ ಕೀರ್ತಿಯನ್ನು ಪಡೆದಂತೆ ನೀಲಗಿರಿ ಟೀ ಎನ್ನಬಹುದು. ಇಲ್ಲಿ ಕರ್ಪೂರದ ಗಿಡಗಳು ಯಥೇಚ್ಛವಾಗಿ ಬೆಳೆಯುತ್ತವೆ. ಆ ಗಿಡದಿಂದ ತಯಾರಾಗುವ ನೀಲಗಿರಿ ಎಣ್ಣೆಯು (Eucalyptus oil), ತಲೆನೋವು ಮೊದಲಾದ ರೋಗಗಳಿಗೆ ಉತ್ತಮ ಔಷಧವಾಗಿ ಭಾರತದಲ್ಲೆಲ್ಲಾ ಪ್ರಸಿದ್ಧವಾಗಿದೆ. ಕಾಯಿಪಲ್ಯ ಮತ್ತು ಆಲೂಗೆಡ್ಡೆ ಬೆಳೆಗೂ ಈ ಪ್ರದೇಶವು ಹುಲುಸಾಗಿದೆ.

ಈ ಸಂದರ್ಭದಲ್ಲಿ ನೀಲಗಿರಿಯು ಪೌರಾಣಿಕ ಕಾಲದಿಂದ, ಇತಿಹಾಸ ಯುಗದಿಂದ ಮೈಸೂರಿನೊಂದಿಗೆ ಹೇಗೆ ಸಂಬಂಧಿಸಿದೆ ಎಂಬುದನ್ನು ಪರಿಶೀಲಿಸುವುದು ಈಗ ಅಗತ್ಯವಾಗಿದೆ. ಕ್ರಿ.ಶ. ೧೭೯೯ರಲ್ಲಿ ಶ್ರೀರಂಗಪಟ್ಟಣದ ಪತನಾನಂತರ–ಅದುವರೆವಿಗೆ ಮೈಸೂರಿನದಾಗಿದ್ದ–ನೀಲಗಿರಿಯು ಇಂಗ್ಲಿಷರ ವಶವಾಯಿತು. ರಾಮಾಯಣಕಾಲದಲ್ಲಿ ನೀಲಗಿರಿಗೆ "ದುರ್ದರ ಪರ್ವತ" ಎಂಬ ವಿಖ್ಯಾತ ನಾಮವಿತ್ತು ಎಂಬುದನ್ನು ವಾಲ್ಮೀಕಿ ರಾಮಾಯಣದಲ್ಲಿ ಓದಬಹುದು. ಮಾರ್ಕಂಡೇಯಪುರಾಣ ಮೊದಲಾದುವುಗಳಲ್ಲಿಯೂ 'ಇದಕ್ಕೆ ದುರ್ದರ ಪರ್ವತ' ಎಂದೇ ಹೆಸರಿದೆ. ಕಾಳಿದಾಸನು ರಘುವಂಶದಲ್ಲಿ 'ದುರ್ದರ ಮತ್ತು ಮಲಯ ಪರ್ವತಗಳು

ದಿಗ್ವನಿತೆಯ ಸ್ತನದ್ವಯಗಳಂತಿವೆ' ಎಂದು ವರ್ಣಿಸಿದ್ದಾನೆ. ವರಾಹ ಮಿಹಿರನ ಬೃಹತ್ಸಂಹಿತೆಯಲ್ಲಿ ಪರ್ವತಗಳ ಮಾಲೆಯಲ್ಲಿ ಈ ದುರ್ದರವೂ ಪರಿಗಣಿತವಾಗಿದೆ. "ಶಿಲಪ್ಪದಿಗಾರಂ" ಎಂಬ ತಮಿಳು ಗ್ರಂಥದಲ್ಲಿ ಈ ನೀಲಗಿರಿ ಬೆಟ್ಟದ ಹೆಸರು ಸ್ಪಷ್ಟವಾಗಿ ಉಲ್ಲೇಖಿತವಾಗಿದೆ.

ಹೀಗೆ ಪೌರಾಣಿಕ ಕಾಲವನ್ನು ಮೀರಿದ ಆನಂತರ ಕ್ರಿ. ಶ. ೧೦ನೇ ಶತಮಾನದಲ್ಲಿ ಇದ್ದಿರಬಹುದಾದ ಈ ಬೆಟ್ಟಗಳ ಶಿಖರಗಳಲ್ಲಿ ಸಿಕ್ಕಿರುವ 'ಗೋರಿಯ ಗುಟ್ಟೆ' ಗಳ ಸಂಶೋಧನೆಯಿಂದ, ಲಭಿಸಿರುವ ಸ್ಮಾರಕಗಳ ಮೇಲಿನಿಂದ ಆ ಕಾಲದಲ್ಲಿ ನೀಲಗಿರಿ ಭಾಗದಲ್ಲಿ ಒಂದು ಒಳ್ಳೆಯ ಸಂಸ್ಕೃತಿಯು ಪ್ರಚಾರದಲ್ಲಿತ್ತೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೆ ರೋಮನರ ನಾಣ್ಯಗಳು ಈ ಜಿಲ್ಲೆಯ ಭೂಗರ್ಭದಲ್ಲಿ ಸಿಕ್ಕಿರುವು ದರಿಂದ ಈ ಜಿಲ್ಲೆಯು ಮೊದಲಿನಿಂದಲೂ ಒಂದು ವ್ಯಾಪಾರದ ಕೇಂದ್ರ ವಾಗಿತ್ತೆಂದು ಊಹಿಸಬಹುದು. ಅಲ್ಲಿಂದ ಮುಂದೆ ತಲಕಾಡಿನ ಗಂಗರಾಜ ನಾದ ರಾಚಮಲ್ಲನೆಂಬ ಅರಸನು ಕ್ರಿ. ಶ. ೯೩೪ರಲ್ಲಿ ಬೈಲುನಾಡನ್ನು ಆಳುತ್ತಿದ್ದನೆಂದು ಒಂದು ಶಾಸನ ಹೇಳಿದೆ. ಈ ಬೈಲುನಾಡು ಮಲಬಾರಿಗೆ ಸೇರಿದ ವೈನಾಡು ಮತ್ತು ನೀಲಗಿರಿ ಜಿಲ್ಲೆಯ ಬೈಲುಪ್ರದೇಶ ಎಂಬುದು ಸ್ಪಷ್ಟವಾಗಿದೆ.

ಹಿಂದೆ ಕನ್ನಡಿಗರಾದ ಕದಂಬರು ಸುಮಾರು ೨೦೦ ವರ್ಷಗಳ ಕಾಲ ಈ ಭಾಗಕ್ಕೆ ಅಧಿಪತಿಗಳಾಗಿದ್ದಂತೆ ತಿಳಿದುಬರುತ್ತದೆ. ನೀಲಗಿರಿ ಮತ್ತು ಅಲ್ಲಿನ ನಿವಾಸಿಗಳನ್ನು ಕುರಿತಾದ ಅನೇಕ ಸಂಗತಿಗಳು ಹೊಯ್ಸಳ ವಿಷ್ಣು ವರ್ಧನನ ಶಾಸನದಲ್ಲಿ ಲಭಿಸುತ್ತವೆ. ಹಳೇಬೀಡಿನ ಹೊಯ್ಸಳರು ೧೨ನೇ ಶತಮಾನದ ಪ್ರಾರಂಭದಲ್ಲಿ ನೀಲಗಿರಿಯಮೇಲೆ ದಾಳಿಮಾಡಿ, ಈ ಜಿಲ್ಲೆಯ ತೊದವರು, ಕೊಂಗರು ಮೊದಲಾದವರನ್ನು ಜಯಿಸಿದಂತೆಯೂ, ವಿಷ್ಣು ವರ್ಧನನು ನೀಲಪರ್ವತವನ್ನು ಪಟ್ಟಣವಾಗಿ ಮಾಡಿದಂತೆಯೂ ಶಾಸನ ಗಳಲ್ಲಿ ಉಕ್ತವಾಗಿದೆ. ನೀಲಗಿರಿಯ ಮುಖ್ಯ ನಿವಾಸಿಗಳಾದ ಬಡಗರು, ಹೊಯ್ಸಳರ ಸೈನ್ಯದಲ್ಲಿ ಸೇರಿ ಇಲ್ಲಿಗೆ ಬಂದವರಾಗಿರಬೇಕೆಂದೂ ನೀಲ

ಗಿರಿಯ ಉತ್ತರದಿಂದ ದಂಡೆತ್ತಿ, ಮೈಸೂರಿನಿಂದ ಬಂದ ಇವರಿಗೆ ಬಡಗರೆಂದು ಹೆಸರಾಗಿರಬೇಕೆಂದೂ ಕೆಲವು ಇತಿಹಾಸಜ್ಞರು ತರ್ಕಿಸಿದ್ದಾರೆ.

ಮೈಸೂರು ಜಿಲ್ಲೆಯಲ್ಲಿದ್ದ ಹದಿನಾಡು ಪ್ರಭುವೂ, ಉಮ್ಮತ್ತೂರು ಪಾಳೆಯಗಾರನೂ, ನೀಲಗಿರಿ ಜಿಲ್ಲೆಯಲ್ಲಿ ನೆಲ್ಯಾಳಂ ರಾಣಿಯೂ ಈ ನೀಲಗಿರಿಗೆ ಅನೇಕ ವರ್ಷಗಳಕಾಲ ಅಧಿಪತಿಗಳಾಗಿದುದ್ದನ್ನು ಚರಿತ್ರೆಯಿಂದ ನಾವು ತಿಳಿಯಬಹುದು.

ಹೊಯ್ಸಳರ ಕಾಲವಾದ ಅನಂತರ ನೀಲಗಿರಿಯು ವಿಜಯನಗರದ ಕೈಗೆ ಬಂದುದು ಕ್ರಮಪ್ರಾಪ್ತಗಿದೆ. ಗೂಡಲೂರು ಪಕ್ಕದಲ್ಲಿರುವ ಬುಕ್ಕಾಪುರವು ಇಲ್ಲಿ ಗಮನಾರ್ಹವಾಗಿದೆ. ತಾಳೀಕೋಟೆಯ ಯುದ್ಧಾನಂತರ (೧೫೬೫) ವಿಜಯನಗರವು ನಾಶವಾಗಿ ಮೈಸೂರು ಸ್ವತಂತ್ರವಾಯಿತು. ಅನಂತರ ೧೬೧೦ರಲ್ಲಿ ಮೈಸೂರಿನ ರಾಜಒಡೆಯರು ಶ್ರೀರಂಗಪಟ್ಟಣದಲ್ಲಿದ್ದ ರಾಜ ಪ್ರತಿನಿಧಿಯಾದ ಶ್ರೀರಂಗರಾಯನನ್ನು ಓಡಿಸಿ ಅವನ ಕೈಕೆಳಗಿದ್ದ ರಾಜ್ಯಗಳನ್ನು ವಶಪಡಿಸಿಕೊಂಡ ಮೇಲೆ ಉಮ್ಮತ್ತೂರು ಪಾಳೆಯಗಾರಿಕೆಯೂ ಅವನ ಆಡಳಿತದಲ್ಲಿದ್ದ ನೀಲಗಿರಿಯೂ ಮೈಸೂರಿನ ವಶಕ್ಕೆ ಬಂದಿತು. ೧೬೧೦ರಿಂದ ೧೭೯೯ರ ವರೆವಿಗೆ ಅವಿಚ್ಛಿನ್ನವಾಗಿ ೧೮೯ ವರ್ಷ ನೀಲಗಿರಿಯು ಮೈಸೂರಿನ ಅಧೀನವಾಗಿತ್ತು. ಆ ಮೇಲೆ ಇಂಗ್ಲಿಷರ ಕುಟಿಲೋಪಾಯದಿಂದ ನೀಲಗಿರಿಯು ರಾಜಕೀಯವಾಗಿ ಮೈಸೂರಿನ ಕೈಬಿಟ್ಟಿತು. ಇದು ಮೊದಲು ಕೊಯಮುತ್ತೂರು ಜಿಲ್ಲೆಯ ಭಾಗವಾಗಿತ್ತು. ಅನಂತರ ಪ್ರತ್ಯೇಕ ಜಿಲ್ಲೆ ಆಯಿತು. ಆದರೂ ಮೈಸೂರು ಮತ್ತು ನೀಲಗಿರಿಗಳ ಬಾಂಧವ್ಯ, ವ್ಯಾಪಾರ, ವ್ಯವಹಾರ, ಭಾಷೆ ಮತ್ತು ಸಂಸ್ಕೃತಿಗಳ ದೃಷ್ಟಿಯಿಂದ ಹಿಂದಿನಂತೆಯೇ ಉಳಿದಿರುವುದು ಆಶ್ಚರ್ಯಕರವಾಗಿದೆ ಮತ್ತು ಆನಂದದಾಯಕವಾಗಿದೆ.

ಈಗಿನ ನೀಲಗಿರಿ ಜಿಲ್ಲೆ, ತೊದನಾಡು, ಪರಂಗನಾಡು, ಮೇಕನಾಡು, ಕುಂದೆನಾಡು, ವೈನಾಡು ಎಂದು ೫ ಭಾಗವಾಗಿದೆ. ಈ ವೈನಾಡಿನ ಒಂದು ಭಾಗ ಮಲಬಾರು ಜಿಲ್ಲೆಗೆ ಸೇರಿರುವುದು ಈ ಜಿಲ್ಲೆಯ ಒಂದು

ದುರದೃಷ್ಟ ಸನ್ನಿವೇಶವಾಗಿದೆ. ನೀಲಗಿರಿ ಮೈಸೂರಿಗೆ ಸೇರುವಾಗ ಈ ವೈನಾಡು ಸಹ ಮೈಸೂರಿಗೆ ಸೇರುವುದು ನ್ಯಾಯವಾಗಿದೆ. ನೀಲಗಿರಿ–ಕೊಡಗುಗಳ ಮಧ್ಯೆ ವೈನಾಡಿದೆ. ಕಾರಣ ಪ್ರಾಂತ ರಚನೆಗೆ ವೈನಾಡು ಚಿಕ್ಕದಾದರೂ ಕೀಲಿಯಿದ್ದಂತೆ ಎಂಬುದು ಗಮನಾರ್ಹವಾಗಿದೆ.

ಮೈಸೂರು ಮತ್ತು ನೀಲಗಿರಿಯ ಬಾಂಧವ್ಯವನ್ನು ತಿಳಿಸುವ ಈ ಲೇಖನದಲ್ಲಿ ನೀಲಗಿರಿ ಜನರ ಆಚಾರ ವಿಚಾರಗಳ ಬಗೆಗೆ ಕೆಲವು ಮಾತುಗಳನ್ನು ಹೇಳುವುದು ಅಗತ್ಯವಾಗಿದೆ.

ಈ ಜಿಲ್ಲೆಯ ಕೋತರು ಶಿವರಾತ್ರಿಯನ್ನು ಭಕ್ತಿಯಿಂದ ಆಚರಿಸುತ್ತಾರೆ. ಕೆಲವರು ತಲೆ ಕೂದಲಿನಲ್ಲಿ ಲಿಂಗವನ್ನು ಧರಿಸುತ್ತಾರೆ. ಆದರೆ ಇವರು ಮಾಂಸಾಹಾರಿಗಳಾಗಿದ್ದಾರೆ. ತೊದವರು ಎಮ್ಮೆಗಳನ್ನು ಬಹಳವಾಗಿ ಪ್ರೀತಿಸುತ್ತಾರೆ. ಇವರಲ್ಲಿ ಹೆಣ್ಣನ್ನು ಲಗ್ನಮಾಡಿ ಕೊಡುವಾಗ ಗಂಡಿನವರು ಹೆಣ್ಣಿನವರಿಗೆ ಕೆಲವು ಎಮ್ಮೆಗಳನ್ನು ಕನ್ಯಾಶುಲ್ಕವಾಗಿ ಕೊಡುವುದು ರೂಢಿಯಲ್ಲಿದೆ. ಭಾರತದ ಇತರ ಪ್ರದೇಶದಲ್ಲಿ ಗೋದಾನ, ಅಶ್ವದಾನಗಳಿಗಿರುವ ಹಿರಿಮೆ ಇವರಲ್ಲಿ ಮಹಿಷದಾನಕ್ಕಿದೆ. "ಪಿಂಡೇ ಪಿಂಡೇ ಮತಿರ್ಭಿನ್ನಃ"

ತೋದರಲ್ಲಿ ಒಬ್ಬ ಹೆಂಗುಸನ್ನು ಅಣ್ಣ ತಮ್ಮಂದಿರು ಒಟ್ಟುಗೂಡಿ ಮದುವೆಯಾಗಿ ಸಂಸಾರ ನಡೆಸುವ ಅಭ್ಯಾಸ ಉಂಟಂತೆ. ಇದು ಪಾಂಡವರ ಕಥೆಯನ್ನು ಸ್ಮರಣೆಗೆ ತರುತ್ತದೆ. ತಿಬೆಟ್ಟನಲ್ಲಿ, ಹಿಮಾಲಯದ ತಪ್ಪಲಿನ ಜನರಲ್ಲಿ ಈ ಪದ್ಧತಿ ಈಗಲೂ ಇದೆಯಂತೆ ! ತೊದವರು ಕೆಲವರು ಕೇವಲ ನಂಜುಂಡೇಶ್ವರನ ಭಕ್ತರು. ಕೆಲವರು ಮಾದೇಶ್ವರನ ಭಕ್ತರಾಗಿಯೂ ನಡೆದುಕೊಳ್ಳುತ್ತಾರೆ. ಪಶುಪಾಲನೆಯು ಇವರ ಮುಖ್ಯ ಜೀವನವೃತ್ತಿ. ಇವರಲ್ಲಿ ದೇವಾಲಯದ ಪೂಜಾರಿ ಆಗತಕ್ಕವನು ಬ್ರಹ್ಮಚಾರಿ ಆಗಿರುವ ಪದ್ಧತಿ ಉಂಟು. ಇದು ಮಾದೇಶ್ವರನ ಅರ್ಚಕರ ಪದ್ಧತಿಯನ್ನು ಅನುಕರಿಸುತ್ತಿದೆ. ಕೋತರು ಸಂಗೀತ ಪ್ರಿಯರು. ಕೈಗಾರಿಕೆ ವ್ಯವಸಾಯದಲ್ಲಿಯೂ ಅವರಿಗೆ ಅಭಿರುಚಿಯುಂಟು. ಕೋತಗಿರಿ ಇವರ ಕೇಂದ್ರ ಸ್ಥಳ.

ನೀಲಗಿರಿಯಲ್ಲಿ ಮಹಾಲಿಂಗ, ಮಾದಯ್ಯಲಿಗಂ, ಲಿಗಂ, ಮಾದೇಶ್ವರ ಎಂಬ ಹೆಸರುಗಳು ಬಹಳವಾಗಿವೆ. ಬಡಗರು ಮುಖ್ಯವಾಗಿ ವ್ಯವಸಾಯದಲ್ಲಿ ನಿರತರಾಗಿದ್ದಾರೆ. ಇದರಲ್ಲಿ ಪಶುಪಾಲನೆಯೂ ಪ್ರಧಾನವಾಗಿದೆ. ಮದುವೆಯಲ್ಲಿ ಈ ಜಾತಿಯಲ್ಲಿಯೂ ಕನ್ಯಾಶುಲ್ಕ ಉಂಟು. ಇವರಲ್ಲಿ ವಿಧವಾವಿವಾಹವಿದೆ. ಈ ಜನರಲ್ಲಿ ಹಿರಿಯ, ಅಯ್ಯ, ಅಜ್ಜ, ಶಿವನ, ಲಿಂಗ, ನಂದಿ, ಜೋಗಿ ಎಂಬ ಶಬ್ದಗಳು ಬಹಳವಾಗಿ ವ್ಯವಹಾರದಲ್ಲಿವೆ. ಮಗು ಹುಟ್ಟಿದಾಗ ಹೆಣ್ಣಿನ ಮನೆಯ ಹಿರಿಯರು ಬಂದು ಹೆಸರು ಕಟ್ಟುತ್ತಾರೆ. ಆದರೆ ಇವರು ಸತ್ತವರನ್ನು ಸುಡುತ್ತಾರೆ. ಇದು ನಿಜವಾಗಿ ಆಶ್ಚರ್ಯಕರವಾದ ಸಂಗತಿಯಾಗಿದೆ. ಸತ್ತವರನ್ನು ಸುಡುವುದು ಭಾರತದಲ್ಲಿ ಆರ್ಯರ ಪದ್ಧತಿ. ಅವರನ್ನು ಭೂಮಿಯಲ್ಲಿ ಹೂಳುವುದು ದ್ರಾವಿಡರ ಪದ್ಧತಿ ಎಂಬುದು ಪ್ರಸಿದ್ಧವಾಗಿದೆ. ಆದರೆ ದ್ರಾವಿಡ ಸಂಸ್ಕೃತಿಯ ಈ ಅರಣ್ಯವಾಸಿಗಳು ಆರ್ಯಸಂಸ್ಕೃತಿಯ ಈ ದಹನ ಪದ್ಧತಿಯನ್ನು ಅನುಸರಿಸಲು ಎಂದು ಪ್ರಾರಂಭಿಸಿದರೆಂಬುದು ಸಂಶೋಧನಾರ್ಹ ವಿಷಯವಾಗಿದೆ. ಬಡಗರು ದಹನ ಕಾಲದಲ್ಲಿ ಹೇಳುವ ಬಡಗರ ಭಾಷೆಯ ಹಳೆಯ ಮಂತ್ರ ಒಂದಿದೆ. ಅದು ವೀರಶೈವರು ಸಮಾಧಿಯ ಕಾಲದಲ್ಲಿ ಹೇಳುವ ಪುಷ್ಪಾಂಜಲಿಯ ಪದ್ಯಗಳಂತೆ ಅರ್ಥ ಗರ್ಭಿತವಾಗಿದೆ. ಇದರಿಂದ ಇವರು ದೇವರನ್ನೂ, ಸ್ವರ್ಗನರಕಗಳನ್ನೂ ನಂಬುತ್ತಾರೆಂದು ಹೇಳಬಹುದು.

ಇಲ್ಲಿನ ಮುಖ್ಯ ಜನರಾದ ಬಡಗರು ೩೦ ವರ್ಷಗಳಿಗೊಮ್ಮೆ ನಡೆಸುವ 'ಮನೆ ಮಲೆ' ಎಂಬ ಪಿತೃಪೂಜೆಯು ಬಹು ಸ್ವಾರಸ್ಯವೂ ಆಕರ್ಷವೂ ಆಗಿದೆ. ಸತ್ತವರ ಹೆಸರಿನಲ್ಲಿ ಇವರು ೭–೮ ದಿನಗಳ ಹಬ್ಬವನ್ನು ಆಚರಿಸುತ್ತಾರೆ. ಆಗ ನರ್ತನ ಮಾಡುತ್ತಾರೆ, ಸಂಗೀತ ಹಾಡುತ್ತಾರೆ, ಊಟೋಪಚಾರ ನಡೆಸುತ್ತಾರೆ, ತೇರುಕಟ್ಟಿ ಎಳೆಯುತ್ತಾರೆ, ಆಕಳ ಹಾಲು ಕರೆದು ತಮ್ಮ ಗುರು ಮಾದೇಶ್ವರನಿಗೆ ಅಭಿಷೇಕ ಮಾಡುತ್ತಾರೆ. ಚೀಣಾದೇಶದಲ್ಲಿ ಹಿರಿಯರ ಹಬ್ಬ ಆಚರಿಸುವಾಗ ಆ ಜನರೂ ಹೀಗೆಯೇ

ಸಂಗೀತ ನೃತ್ಯಗಳಿಂದ ಹಬ್ಬ ಆಚರಿಸುವರೆಂದು ತಿಳಿದುಬಂದಿದೆ. ನೀಲಗಿರಿ ಜನಗಳ ಎಲ್ಲ ಆಚಾರ ವಿಚಾರಗಳೂ ಬಹುಮಟ್ಟಿಗೆ ಕರ್ಣಾಟಕದ ನಡೆ ನುಡಿಗಳನ್ನು ಹೋಲುತ್ತವೆ.

ಒಟ್ಟನಲ್ಲಿ ನೀಲಗಿರಿ ಪರ್ವತವಾಸಿಗಳು ದೇಶಭಕ್ತರೂ, ಕಷ್ಟ ಸಹಿಷ್ಣುಗಳೂ, ಅತಿಥಿಪ್ರೇಮಿಗಳೂ, ಪ್ರಾಮಾಣಿಕರೂ, ತಮ್ಮ ಅಪೂರ್ವವಾದ ಗುಣಗಳಿಂದ ಎಲ್ಲರನ್ನೂ ತಮ್ಮ ಕಡೆಗೆ ಆಕರ್ಷಿಸುವವರೂ ಆಗಿರುತ್ತಾರೆ.

ನೀಲಗಿರಿ ಜಿಲ್ಲೆಯಲ್ಲಿ ೧೦೦ಕ್ಕೆ ೫೦ ರಷ್ಟು ಕನ್ನಡವಿದೆ. ಇತ್ತೀಚಿನ ಕಾರಣಗಳಿಂದ ತಮಿಳು ಮತ್ತು ಮಲೆಯಾಳ ಅಲ್ಲಿ ಕಾಲಿಟ್ಟವೆ. ಆದರೆ ಜಿಲ್ಲೆಯ ಜನಸಾಮಾನ್ಯರ ಸಂಪರ್ಕ ತಮಿಳಿಗೆ ಅಂಟಿಲ್ಲ. ನೀಲಗಿರಿಯ ಜನರು ಮೈಸೂರಿನ ಜನರನ್ನೂ ದೇಶವನ್ನೂ ಬಹುಪ್ರೀತಿಸುತ್ತಾರೆ. ಅವರು ತಮ್ಮನ್ನು ಮೈಸೂರಿನ ಒಂದು ಭಾಗದವರೆಂದೇ ತಿಳಿದುಕೊಂಡಿದ್ದಾರೆ. ಮೈಸೂರಿನಲ್ಲಿ ಇದ್ದ ನೆಲ್ಯಾಳಂರಾಣಿ ಕೈ॥ ಬೋರಮ್ಮಣ್ಣಿಯವರ ಬಗೆಗೆ ನೀಲಗಿರಿ ಜನರು ನೆನ್ನೆಮೊನ್ನೆಯವರೆವಿಗೆ ಆದರ ಗೌರವ ವ್ಯಕ್ತಪಡಿಸುತ್ತಿದ್ದುದು ಇಲ್ಲಿ ಗಮನಾರ್ಹವಾಗಿದೆ.

ನೀಲಗಿರಿ ಜಿಲ್ಲೆಯಲ್ಲಿ ಕಾಫಿ, ಟೀಗಳು ಮುಖ್ಯ ಬೆಳೆಗಳಾದರೂ ಕ್ವಿನೈನ್, ಬಣ್ಣದ ಮರ, ಕರ್ಪೂರದ ಗಿಡ, ಆಲೂಗೆಡ್ಡೆ, ಗೋಧಿ, ಬಾರ್ಲಿ, ರಾಗಿ, ಸಾಸಿವೆ, ಕಿತ್ತಲೆ, ಪೀಚಸ್, ಬಾಳೆ, ಭತ್ತ, ವಿಶೇಷವಾಗಿ ಇಂಗ್ಲೀಷ್ ಕಾಯಿಪಲ್ಯಗಳು ಇವನ್ನು ಬೆಳೆಯುತ್ತಾರೆ. ಬೆಟ್ಟಗಳಲ್ಲಿ ಗಂಧ, ಬಿದುರು, ತೇಗ, ಮೊದಲಾದ ವೃಕ್ಷಗಳು ವಿಪುಲವಾಗಿವೆ. ಎಲ್ಲ ದೃಷ್ಟಿಯಿಂದ ನೀಲಗಿರಿ ಜಿಲ್ಲೆಯು ಸಂಪದ್ಯುಕ್ತವೂ, ಆನಂದ ದಾಯಕವೂ ಆಗಿದೆ. ಅಲ್ಲದೆ ಮೈಸೂರು-ನೀಲಗಿರಿಗಳ ಬಾಂಧವ್ಯವೂ ಇದರಿಂದ ದೃಢವಾಗಿದೆ.

ಕರ್ಣಾಟಕದ ಅತ್ಯುನ್ನತ ಸ್ಥಳವೆನಿಸಿದ ನೀಲಗಿರಿಯಲ್ಲಿ, ಹಾವು, ಚೇಳು, ಸೊಳ್ಳೆ, ನೊಣ ಮೊದಲಾದುವು ಇಲ್ಲವೆಂದರೆ ಜನ ಆಶ್ಚರ್ಯಪಡಬೇಕಾಗಿಲ್ಲ. ಅದು ಅಲ್ಲಿನ ಭೂಗುಣವೆನಿಸಿದೆ. ಅದು ಉತ್ತಮ ಆರೋಗ್ಯಧಾಮ. ಮಳೆಗಾಲ ಚಳಿಗಾಲಗಿಂತ ಬೇಸಿಗೆಕಾಲಅಲ್ಲಿಸುಖಕರ. ಮೈಸೂರು ರಾಜರ ಅರಮನೆಯೂ ಅಲ್ಲಿದೆ.

# ಬಳ್ಳಾರಿ ಜಿಲ್ಲೆಯ ಮಹತ್ವ

ಚರಿತ್ರಾರ್ಹವಾದ ತಾ॥ ೧-೧೦-೧೯೫೩ ನೆಯ ಗುರುವಾರದಂದು ಬಳ್ಳಾರಿ ಜಿಲ್ಲೆಯ ಶ್ರೀ ಪಂಪಾವಿರೂಪಾಕ್ಷನ ಅನುಗ್ರಹದಿಂದ ಕರ್ಣಾಟಕ ರತ್ನಸಿಂಹಾಸನಾಧೀಶ್ವರರಾದ ಮೈಸೂರೊಡೆಯರ ಆಡಳಿತಕ್ಕೆ ಒಳಪಟ್ಟ, ಮೈಸೂರು ರಾಜ್ಯಕ್ಕೆ (ಭಾರತ ಸರ್ಕಾರದ ಆಶಯದಂತೆಯೂ, ಬಳ್ಳಾರಿಯ ಮಹಾಜನರ ಬಯಕೆಯಂತೆಯೂ) ಸೇರಿಕೊಂಡಿದೆ. ಈ ಸಂದರ್ಭದಲ್ಲಿ ಮೈಸೂರಿನ ಮಹಾಜನರು ಬಳ್ಳಾರಿಯ ವಿಷಯವನ್ನು ತಿಳಿದುಕೊಳ್ಳುವುದು ಅತ್ಯಗತ್ಯ. ಕರ್ಣಾಟಕ ಪ್ರಾಂತದಲ್ಲಿ ಬಳ್ಳಾರಿ ಜಿಲ್ಲೆಯ ಹಿರಿಮೆ ಎಂತ ಹುದು ಎಂಬುದನ್ನು ಇಲ್ಲಿ ಕಾಣಬಹುದು.

ಇದುವರೆಗೆ ಬಳ್ಳಾರಿಜಿಲ್ಲಾ ರಾಜಕೀಯ ದೃಷ್ಟಿಯಿಂದ ಮದ್ರಾಸ್ ರಾಜ್ಯದಲ್ಲಿ ಸೇರಿದ್ದಿತು. ಬಳ್ಳಾರಿಯು, ಮದ್ರಾಸಿನ ಕರ್ನೂಲ್, ಕಡಪ, ಅನಂತಪುರ, ಚಿತ್ತೂರು ಎಂಬ ಈ ನಾಲ್ಕು ಜಿಲ್ಲೆಗಳ ಗುಂಪಿನಲ್ಲಿ ಕೂಡಿ 'ರಾಯರ ಸೀಮೆ' ಎಂಬ ಹೆಸರಿನಿಂದ ಕರೆಯಲ್ಪಡುತ್ತಿತ್ತು. ಈ ಹೆಸರು ವಿಜಯನಗರದ ರಾಯರ ಆಳ್ವಿಕೆಯ ಕಾಲದಲ್ಲಿ ಬಳಕೆಗೆ ಬಂದುದು, ಈ ಮೇಲೆ ಕಂಡ ಐದೂ ಜಿಲ್ಲೆಗಳು ವಿಜಯನಗರದ ಸಾಮ್ರಾಜ್ಯದ ರಾಜ ಧಾನಿ ವಿದ್ಯಾನಗರಕ್ಕೆ ಸಮೀಪವಾಗಿದ್ದು ಹೆಚ್ಚು ರಾಜಕೀಯ ಚಟುವಟಿಕೆ ಗಳಿಂದ ಕೂಡಿದ್ದು 'ರಾಯರಸೀಮೆ' ಅಥವಾ "ರಾಯಲ ಸೀಮಾ" ಎಂಬ ಹೆಸರಿನಿಂದ ಕರೆಯಲ್ಪಟ್ಟಿರಬೇಕು ಎಂದು ತೋರುತ್ತದೆ. ಹೀಗೆ ಅನೇಕ ವರ್ಷಗಳಿಂದ ಮೇಲೆಕಂಡ ತೆಲುಗು ಜಿಲ್ಲೆಗಳ ಸಂಗಡ ಸೇರಿದ್ದುದರ ಫಲ ವಾಗಿ ಕನ್ನಡ ಜಿಲ್ಲೆಯಾದ 'ಬಳ್ಳಾರಿ' ಇಂದು ವಿಭಾಗವಾಗುವ ದುರದೃಷ್ಟ ಸನ್ನಿವೇಶವನ್ನು ಪಡೆಯಿತು.

ಅವಿಭಕ್ತ ಬಳ್ಳಾರಿ ಜಿಲ್ಲೆಯ ವಿಸ್ತೀರ್ಣ ೫೭೧೪ ಚದುರ ಮೈಲಿ, ಹಳ್ಳಿಗಳ ಸಂಖ್ಯೆ ೯೩೮, ಜನಸಂಖ್ಯೆ [೧೯೪೧ ನೇ ಜನಗಣತಿ ಪ್ರಕಾರ]

೧೦ ಲಕ್ಷದ ೫೧ ಸಾವಿರದ ೨೩೫. ಬಳ್ಳಾರಿ ಜಿಲ್ಲೆಯಲ್ಲಿ ೩೭,೬೪,೩೪೨ ಎಕರೆ ಜಮೀನು ವ್ಯವಸಾಯದಲ್ಲಿದೆ. ೩,೬೫,೦೭೭ ಎಕರೆ ಅರಣ್ಯ ಪ್ರಾಂತವಿದೆ. ತುಂಗಭದ್ರಾನಾಲೆ ಮತ್ತು ಇತರ ನಾಲೆಗಳು ಸೇರಿ ಒಟ್ಟು ೩ ಲಕ್ಷ ೯೦ ಸಾವಿರ ಎಕರೆ ನೀರಾವರಿ ಭೂಮಿ ಇದೆ. ವರ್ಷಕ್ಕೆ ೩೫ ಸಾವಿರ ೯೧೦ ಟನ್ ಭತ್ತವನ್ನು ಬೆಳೆಯುತ್ತಾರೆ. ೩೮೩೪ ಟನ್ ಗೋಧಿ ಮತ್ತು ಬಾರ್ಲಿ, ೮,೨೯,೮೩೦ ಟನ್ ಜೋಳ, ರಾಗಿ, ಸಜ್ಜೆ, ೩,೯೪೬೭೦ ಟನ್ ಎಣ್ಣೆಕಾಳುಗಳು, ೫,೯೮,೩೫೮ ಟನ್ ಹತ್ತಿ ಮೊದಲಾದುವನ್ನು ಈ ಜಿಲ್ಲೆಯಲ್ಲಿ ಬೆಳೆಯುತ್ತಾರೆ. ಅಲ್ಲದೆ ೨ ಲಕ್ಷ ಟನ್ ಆರಕ, ೧-೧|೨ ಲಕ್ಷ ಟನ್ ನೆಲಗಡಲೆ ಕಾಯಿ, ೩೦ ಸಾವಿರ ಟನ್ ಕಬ್ಬು, ಈ ಜಿಲ್ಲೆಯಲ್ಲಿ ಬೆಳೆಯುತ್ತದೆ. ಈ ಜಿಲ್ಲೆಯು ಔದ್ಯೋಗಿಕ ದೃಷ್ಟಿಯಿಂದ ಕೂಡ ಪ್ರಗತಿದಾಯಕವಾಗಿದೆ. ಈ ಜಿಲ್ಲೆಯಲ್ಲಿ ೧೭ ಹತ್ತಿ-ಅರಳೆ ಪ್ರೆಸ್‌ಗಳು, ೩೦ ನೆಲಗಡಲೆ ಎಣ್ಣೆ ಮಿಲ್ಲುಗಳು, ೧ ಸಕ್ಕರೆ ಕಾರ್ಖಾನೆ, ೧ ವನಸ್ಪತಿ ಕಾರ್ಖಾನೆ, ೨ ಬಟ್ಟೆ ಗಿರಣಿಗಳು ಇವೆ. ಸೊಂಡೂರಿನ ಗುಡ್ಡದಲ್ಲಿ ಮತ್ತು ಜಿಲ್ಲೆಯ ಇತರ ಭಾಗಗಳಲ್ಲಿ, ಕಬ್ಬಿಣ, ತಾಮ್ರ, ಮ್ಯಾಂಗನೀಸ್, ಅಭ್ರಕ, ಚಿನ್ನ, ಬೆಳ್ಳಿ ಮೊದಲಾದ ಲೋಹಗಳು ವಿಪುಲವಾಗಿ ಸಿಕ್ಕುತ್ತವೆ. ಕಾಲಕ್ರಮದಲ್ಲಿ ಮೈಸೂರು ಸರ್ಕಾರವೂ ಕೂಡ ಬಳ್ಳಾರಿಯಲ್ಲಿ ಒಂದು ಕಬ್ಬಿಣದ ಕಾರ್ಖಾನೆಯನ್ನು ಸ್ಥಾಪಿಸುವ ಸಂದರ್ಭ ಒದಗಬಹುದು. ಈಗಲೂ ಸಾರ್ವಜನಿಕರನೇಕರು ಸೊಂಡೂರಿನ ಗುಡ್ಡದಿಂದ ಕಬ್ಬಿಣದ ಅದಿರು ಇರುವ ಕಲ್ಲುಗಳನ್ನು ಪರದೇಶಗಳಿಗೆ ರಫ್ತುಮಾಡಿ ತಕ್ಕಷ್ಟು ಲಾಭವನ್ನು ಪಡೆಯುತ್ತಿದ್ದಾರೆ.

ಬಳ್ಳಾರಿ ಜಿಲ್ಲೆಯಲ್ಲಿ ಮಳೆ ಕಡಿಮೆ. ಸರಾಸರಿ ವರ್ಷಕ್ಕೆ ೨೪ ಇಂಚಿನಷ್ಟು ಮಾತ್ರ ಮಳೆ ಬರುತ್ತದೆ. ಈ ಜಿಲ್ಲೆಯಲ್ಲಿ ತಕ್ಕಷ್ಟು ವೃಕ್ಷ ಸಂಪತ್ತನ್ನು ಹೆಚ್ಚಿಸಿದರೆ ಈ ಭಾಗದಲ್ಲಿ ಹೆಚ್ಚು ಮಳೆ ಬೀಳುವ ಸಂಭವವುಂಟಾಗುತ್ತದೆ.

ಬಳ್ಳಾರಿ ಜಿಲ್ಲೆಯಲ್ಲಿ ತುಂಗಭದ್ರಾನದಿಯು ತಾನೇತಾನಾಗಿ ಹರಿಯುತ್ತಿದೆ. ಅಲ್ಲದೆ ಹಗರಿ ಮೊದಲಾದ ಇತರ ಕೆಲವು ನದಿಗಳೂ ಇವೆ. ಈಗ ತುಂಗಭದ್ರಾ ಅಣೆಕಟ್ಟು ಸಿದ್ಧವಾದುದರಿಂದ ಆ ಜಿಲ್ಲೆಯಲ್ಲಿ ಹೆಚ್ಚು ನೀರಾವರಿ ಬೆಳೆಯಾಗಲು ಅವಕಾಶವಾಗಿದೆ. ಈಗ ಮೈಸೂರಿಗೆ ಸೇರಿರುವ ೭ ತಾಲ್ಲೂಕು

ಗಳಲ್ಲಿ ಸುಮಾರು ಒಂದು ಲಕ್ಷ ಎಕರೆಯ ಭೂಮಿ ತುಂಗಭದ್ರಾ ಅಣೆಕಟ್ಟಿನ ಆಶ್ರಯಕ್ಕೆ ಒಳಪಡುತ್ತದೆ. ಮೇಲ್ಮಟ್ಟದ ಕಾಲುವೆ (High Level Channel) ಆದರೆ ಮತ್ತೆ ೧,೧೭ ಲಕ್ಷ ಎಕರೆ ಭೂಮಿ ಹೆಚ್ಚಾಗಿ ನೀರಾವರಿ ಆಗುವುದೆಂದು ಈ ಯೋಜನೆಯ ಪೂರ್ಣ ವಿವರಗಳಿಂದ ತಿಳಿದುಬಂದಿದೆ. ಈ ಮೇಲೆ ಹೇಳಿದ ಮೇಲುಮಟ್ಟದ ಕಾಲುವೆಗೆ ಇಂಡಿಯಾ ಸರ್ಕಾರ ೮ ಕೋಟಿ ರೂಗಳನ್ನು ಉದಾರವಾಗಿ ವೆಚ್ಚಮಾಡುವುದಾದರೆ ಈಗಿನ ಬಳ್ಳಾರಿ ಜಿಲ್ಲೆ ತಮಿಳುನಾಡಿನ ತಂಜಾವೂರು ಜಿಲ್ಲೆಗಿಂತ ಹೆಚ್ಚು ಸಂಪದ್ಯುಕ್ತವಾಗಿ ಆಗುವುದೆಂದು ಪ್ರವೀಣರು ಅಭಿಪ್ರಾಯ ಪಟ್ಟಿದ್ದಾರೆ.

ಇನ್ನು ಬಳ್ಳಾರಿ ಜಿಲ್ಲೆಯ ಭೂಮಿ ಕಪ್ಪುಮಣ್ಣಿನಿಂದ ಕೂಡಿದೆ. ಪ್ರಾಯೇಣ ತುಂಗಭದ್ರೆಯಿಂದ ಕೃಷ್ಣಾನದಿಯವರೆಗೆ ಇರುವ ಭೂಮಿ ಕಪ್ಪುಬಣ್ಣದಿಂದ ಕೂಡಿದ ಕರಿಯನೆಲ ಅಥವಾ ಎರೆಯ ಭೂಮಿಯಾಗಿದೆ. "ಎರೆಯೋ ದೊರೆಯೋ" ಎಂಬ ಗಾದೆಯ ಮಾತು ಎರೆ ಭೂಮಿ ಬಹಳ ಫಲವತ್ತಾದುದು ಎಂಬುದನ್ನು ಹೇಳುವುದರ ತಾತ್ಪರ್ಯವಾಗಿದೆ. ಕನ್ನಡ ನಾಡಿನಲ್ಲಿ ಬಳ್ಳಾರಿ, ಚಿತ್ರದುರ್ಗ, ರಾಯಚೂರು, ಕಲ್ಬುರ್ಗಿ, ಬೀದರ, ಧಾರವಾಡ, ವಿಜಾಪುರ, ಬೆಳಗಾಂವಿ ಈ ಭಾಗಗಳನ್ನು ಎರೆಭೂಮಿ ಪ್ರದೇಶವೆನ್ನುತ್ತಾರೆ.

ಬಳ್ಳಾರಿ ಜಿಲ್ಲೆಯು ಪುರಾಣಗಳ ಕಾಲಗಳಿಂದ ಪ್ರಸಿದ್ಧವಾದ ಪ್ರದೇಶವಾಗಿದೆ. ಭಾರತದ ಅತ್ಯಂತ ಪ್ರಾಚೀನಕ್ಷೇತ್ರಗಳಲ್ಲಿ ಪರಿಗಣಿಸಲ್ಪಟ್ಟಿರುವ, ಆದಿಕಾವ್ಯವೆನಿಸುವ ವಾಲ್ಮೀಕಿಯ ರಾಮಾಯಣದಲ್ಲಿ ಕೂಡ ಅಭಿವರ್ಣಿಸಲ್ಪಟ್ಟಿರುವ ಶ್ರೀ ಪಂಪಾಕ್ಷೇತ್ರವು ಈ ಜಿಲ್ಲೆಯಲ್ಲಿಯೇ ಇದೆ. ಕ್ರಿ. ಶ. ೧೩೩೬ ರಿಂದ ೧೫೬೫ರವರೆಗೆ ದಕ್ಷಿಣ ಭಾರತದ ಚರಿತ್ರೆಯಲ್ಲಿ ವಿಖ್ಯಾತವಾದ ವಿಜಯನಗರ ಸಾಮ್ರಾಜ್ಯವು ಈ ಜಿಲ್ಲೆಯ 'ವಿದ್ಯಾನಗರ'ದಲ್ಲಿ ಆಳಿ–ಬಾಳಿದುದು ಗಮನಾರ್ಹವಾಗಿದೆ. ಇದಕ್ಕೂ ಮೊದಲು ಕುಮ್ಮಟದುರ್ಗ ರಾಜಧಾನಿಯಿಂದ ತುರುಷ್ಕರು ದಕ್ಷಿಣಕ್ಕೆ ಬಾರದಂತೆ ಹಲವು ವರ್ಷ ತಡೆದು ನಿಲ್ಲಿಸಿದ ಕುಮಾರ ರಾಮನ ಕಾರ್ಯಕ್ಷೇತ್ರ ಬಳ್ಳಾರಿ ಜಿಲ್ಲೆ. ಪವಿತ್ರ ಪಂಪಾಕ್ಷೇತ್ರದಲ್ಲಿ, ವಿರೂಪಾಕ್ಷ, ವಿಜಯವಿಠ್ಠಲ, ಹಜಾರರಾಮ, ಅನಂತಶಯನ, ಮತಂಗ

ವೀರಭದ್ರ, ಅಚ್ಯುತರಾಯ, ಕೋದಂಡರಾಮ, ರಘುನಾಥ, ಪಟ್ಟಾಭಿರಾಮ ಮೊದಲಾದ ಪ್ರಸಿದ್ಧ ದೇವಾಲಯಗಳಿವೆ. ಪಂಪಾಸರೋವರ, ಶಬರೀ ಆಶ್ರಮ, ಸಪ್ತತಾಳಾವೃಕ್ಷ. ಕಿಷ್ಕಿಂಧೆ, (ಆನೇಗುಂದಿ) ಮೊದಲಾದ ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಅಭಿವರ್ಣಿಸಲ್ಪಟ್ಟ ಸ್ಮಾರಕಗಳಿವೆ. ಶ್ರೀ ಕ್ಷೇತ್ರ ಹಂಪೆಯಲ್ಲಿ ಹೇಮಕೂಟ, ಮಾತಂಗ, ಮಾಲ್ಯವಂತ, ಋಷ್ಯಮೂಕ ಮತ್ತು ಕಿಷ್ಕಿಂಧ [ಆಂಜನೇಯ ಬೆಟ್ಟ] ಎಂಬ ಪಂಚ ಮಹಾಪರ್ವತಗಳಿವೆ. ಪಂಪಾ ಸರೋವರವು ಪವಿತ್ರರಾದ ಸೀತಾ–ರಾಮ, ಲಕ್ಷ್ಮಣರು ಸ್ನಾನಮಾಡಿದ ಪವಿತ್ರತೀರ್ಥವೆಂದು ಭಾವಿಸಲ್ಪಟ್ಟಿದೆ. ಅಲ್ಲದೆ ಹಂಪೆಯಲ್ಲಿ ಉಗ್ರನರಸಿಂಹ, ಉದ್ದಾನ ವೀರಭದ್ರ, ಬಡವಿಯಲಿಂಗ, ಎದುರು ಕಲ್ಲುಬಸವ, ಕಡಲೆಗಣಪ, ಸಾಸುವೆ ಗಣಪ, ವಿದ್ಯಾರಣ್ಯಸ್ವಾಮಿ, ಭುವನೇಶ್ವರೀದೇವಿ ಮೊದಲಾದ ಪ್ರೇಕ್ಷಣೀಯ ವಿಗ್ರಹಗಳಿವೆ. ವಿಜಯನಗರದ ರಾಯರ ಕಾಲದ ಮಾನೋ ಮಿದಿಬ್ಬ, ಕಮಲಮಹಲು, ಆನೇಸಾಲು, ರಾಣಿ ಸ್ನಾನಗೃಹ, ಗಾಣಗಿತ್ತಿ ಬಸ್ತಿ ಮೊದಲಾದುವು ಅವಲೋಕನೀಯವೆನಿಸಿವೆ. ಹಂಪೆಯ ವಿರೂಪಾಕ್ಷ ದೇವಾಲಯ ಮತ್ತು ವಿಜಯವಿಠಲ ದೇವಾಲಯಗಳು, ವಿಜಯವಿಠಲದಲ್ಲಿರುವ ಕಲ್ಲಿನ ತೇರು ಮೊದಲಾದುವು ವಿರೂಪಾಕ್ಷನ ಗುಡಿಯಲ್ಲಿರುವ ಕೆಲವು ಶಿಲ್ಪಚಿತ್ರಗಳು ಭಾರತದ ಶಿಲ್ಪಕಲೆಯ ಮೇಲೆ ಪರಿಣಾಮವನ್ನುಂಟುಮಾಡ ತಕ್ಕವುಗಳಾಗಿವೆ. ತ್ರೇತಾಯುಗದಲ್ಲಿ ಮಹಾರಾಷ್ಟ್ರದಲ್ಲಿನ ಪಂಚವಟಿಯಲ್ಲಿ [ನಾಸಿಕ್] ತನ್ನ ಧರ್ಮಪತ್ನಿಯನ್ನು ಕಳೆದುಕೊಂಡುಬಂದ ಶ್ರೀರಾಮಚಂದ್ರ ಮತ್ತು ಸೋದರ ಲಕ್ಷ್ಮಣ ಇವರನ್ನು ಸತ್ಕರಿಸಿದವರು ನಮ್ಮ ಕಿಷ್ಕಿಂಧೆಯ ಅಂದರೆ, ಕರ್ನಾಟಕದ ಪ್ರಪ್ರಥಮ ರಾಜಧಾನಿಯಾದ ಆನೇಗೊಂದಿಯ ಅರಸ ಸುಗ್ರೀವ ಮತ್ತು ಅವನ ಮಂತ್ರಿ ಮಾರುತಿ (ಹನುಮಂತ) ರಾಮಾಯಣದ ಈ ವಾನರರು ವಾನರಕುಲದ ಮೂಲಕನ್ನಡಿಗರು. ಇವರು ರಥಗಳಿಗೆ ಕಪಿಧ್ವಜವುಳ್ಳವರಾದ್ದರಿಂದ ಇವರಿಗೆ ವಾನರರೆಂದು ಹೆಸರು ಬಂದಿತೆಂದು ಅನೇಕ ಸಂಶೋಧಕರು ಅಭಿಪ್ರಾಯ ಪಟ್ಟಿದ್ದಾರೆ. ಕಾರಣ ವಾನರರು ಪ್ರಾಚೀನಕಾಲದ ಕನ್ನಡಿಗರಾಗಿದ್ದಾರೆ. ದಕ್ಷಿಣಭಾರತಕ್ಕೆ ಉತ್ತರಭಾರತದಿಂದ ಬರುತ್ತಿದ್ದ ಕ್ರೂರಿಗಳಾದ ಯವನರ ದಾಳಿಯನ್ನು ತಡೆದು ನಿಲ್ಲಿಸಿದ, ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಲು ಅನುಗ್ರಹಿಸಿದ ದೇವರು

ಹಂಪೆಯ ವಿರೂಪಾಕ್ಷ ಎಂಬ ವಿಷಯಗಳನ್ನು ಗಮನಿಸಿದರೆ ಬಳ್ಳಾರಿ ಜಿಲ್ಲೆಯ ಮಹತ್ವ ಎಂತಹುದೆಂಬುದನ್ನು ನಾವು ಸುಲಭವಾಗಿ ಅರಿಯ ಬಹುದು.

ಬಳ್ಳಾರಿ ಜಿಲ್ಲೆಯು ಮತ್ತೆ ಕೆಲವು ಸುಕ್ಷೇತ್ರಗಳಿಗೆ ಹೆಸರುವಾಸಿ ಪಡೆದಿದೆ. ಹೊಸಪೇಟೆಗೆ ೨ ಮೈಲಿ ದೂರದಲ್ಲಿ ೩ ಸಾವಿರ ಅಡಿ ಎತ್ತರದಲ್ಲಿ ರುವ ಉತ್ತಮವಾದ ನೀರು ಮತ್ತು ಗಾಳಿಯಿಂದ ಆರೋಗ್ಯಧಾಮವೆನಿಸಿರುವ ಜಂಬುನಾಥನ ಗುಡ್ಡ, ಅಲ್ಲಿರುವ ಜಂಬುನಾಥನ ದೇವಾಲಯ. ಬಳ್ಳಾರಿ ಜಿಲ್ಲೆಯ ಪ್ರಖ್ಯಾತ ವ್ಯಾಪಾರಸ್ಥಳವಾದ ಕೊಟ್ಟೂರಿನಲ್ಲಿರುವ ೧೬ನೇ ಶತಮಾನದಲ್ಲಿ ಪ್ರಖ್ಯಾತರಾಗಿ ಮಹಾಮಹಿಮರಾದ ಕೊಟ್ಟೂರು ಬಸವೇಶ್ವರರ ದೇವಾಲಯ, ಬಳ್ಳಾರಿ ಜಿಲ್ಲೆಯ ಮತ್ತೊಂದು ಪ್ರಮುಖ ಸ್ಥಳವಾಗಿ ಅಗಸ್ತ್ಯ ಮಹರ್ಷಿಯ ತಪೋಭೂಮಿಯಾದ ಸೊಂಡೂರಿನಲ್ಲಿರುವ ಕುಮಾರಸ್ವಾಮಿ ದೇವಾಲಯ, ವಿಜಯನಗರದ ಕೃಷ್ಣದೇವರಾಯರ ಕಾಲದಲ್ಲಿ ಪ್ರಸಿದ್ಧರಾದ ಬಳ್ಳಾರಿಗೆ ಅನತಿ ದೂರದಲ್ಲಿರುವ ಶ್ರೀ ಕ್ಷೇತ್ರ ಗವಿ ಸಿದ್ಧೇಶ್ವರ ತಪೋಭೂಮಿ, ಇದೇ ಜಿಲ್ಲೆಯಲ್ಲಿರುವ ಶಿವಶರಣರ ಮಹಿಮೆಯಿಂದ ಪ್ರಸಿದ್ಧವಾದ 'ಕಾನಾ ಮಡು' ದಾಸೋಹಮಠ ಮತ್ತು ಇದೇ ಜಿಲ್ಲೆಯ ರೂಪನಗುಡಿ ಫಿರ್ಕಾದಲ್ಲಿನ ಜೋಳ್ಳಗುರ್ಕಿ ಗ್ರಾಮದಲ್ಲಿರುವ ಮಹಾತ್ಮ ಎರ್ರಿ ತಾತನವರ ಜಾಗ್ರತ ಸಮಾಧಿ ಸ್ಥಾನ, ಮಹೋನ್ನತ ಬಸವೇಶ್ವರ ವಿಗ್ರಹದಿಂದ ಕಂಗೊಳಿಸುವ ಕುರುಗೋಡು ಗ್ರಾಮ, ಬಳ್ಳಾರಿ ಪಟ್ಟಣದಲ್ಲಿರುವ ಮರಿಸ್ವಾಮಿಗಳ ಮಠ, ಮತ್ತು ಬಳ್ಳೇಶನ ಗುಡಿ, ಇದೇ ಜಿಲ್ಲೆಯಲ್ಲಿರುವ ವೀರಶೈವ ಪಂಚ ಪೀಠಗಳಲ್ಲಿ ಒಂದಾದ ಉಜ್ಜಯಿನಿ ಧರ್ಮಸಿಂಹಾಸನ ಮಠ, ಸುಕ್ಷೇತ್ರ ಮೈಲಾರ ಮತ್ತು ಕುರುವತ್ತಿ ಮೊದಲಾದುವುಗಳು ಪ್ರಖ್ಯಾತವಾದ ಕ್ಷೇತ್ರಗಳಾಗಿವೆ. ಈ ಹಲವೆಡೆಗಳಲ್ಲಿ ಜಾತ್ರೆಗಳೂ ನಡೆಯುತ್ತಿವೆ.

ಇನ್ನು ಸಾಹಿತ್ಯ ದೃಷ್ಟಿಯಿಂದ ಕೂಡ ಬಳ್ಳಾರಿ ಜಿಲ್ಲೆಯು ಗಣ್ಯತೆ ಪಡೆದಿದೆ. ೧೩ನೇ ಶತಮಾನದಲ್ಲಿ ಕನ್ನಡ ಸಾಹಿತ್ಯದಲ್ಲಿ ಹೊಸ ಯುಗವನ್ನು ಪ್ರಾರಂಭಿಸಿದ ಹರೀಶ್ವರ ಮತ್ತು ರಾಘವಾಂಕ ಮಹಾಕವಿಗಳು ಪಂಪಾ ಕ್ಷೇತ್ರದವರು. ಮುಂದೆ ಚೆನ್ನಬಸವ ಪುರಾಣ, ಪ್ರಭುಲಿಂಗಲೀಲೆ, ಶಿವತತ್ವ

ಚಿಂತಾಮಣಿ, ಪ್ರಭುದೇವರ ವಚನಗಳ ಟೀಕೆ ಮೊದಲಾದುವುಗಳನ್ನು ರಚಿಸಿದ ವಿರೂಪಾಕ್ಷ ಪಂಡಿತ, ಚಾಮರಸ, ಲಕ್ಕಣಾಮಾತ್ಯ, ಜಕ್ಕಣಾಚಾರ್ಯ, ವಚನ ಗ್ರಂಥಕರ್ತೃ ಕಲ್ಲು ಮಠದ ಪ್ರಭುದೇವರು ಮೊದಲಾದ ಮಹಾ ಕವಿಗಳು ಹಂಪೆಯವರು. ಹಿಂದೂ ಸಂಸ್ಕೃತಿಗೆ ತಾಯಿ ಬೇರಿನಂತಿರುವ, ವೇದಗಳಿಗೆ ವ್ಯಾಖ್ಯಾನಮಾಡಿದ ಸಾಯಣಾಚಾರ್ಯರು, ಸರ್ವದರ್ಶನ ಸಂಗ್ರಹ, ಶಂಕರ ದಿಗ್ವಿಜಯ, ವೇದಾಂತ ಪಂಚದಶಿ ಮೊದಲಾದ ಮಹತ್ವದ ಗ್ರಂಥ ಗಳನ್ನು ರಚಿಸಿದ ಮಾಧವಾಚಾರ್ಯರು, ಪ್ರಖ್ಯಾತರಾಗಿ ಜೀವಿಸಿದುದು ಪಂಪಾ ಕ್ಷೇತ್ರದಲ್ಲಿ. ಹರಿದಾಸರ ಚರಿತ್ರೆಯಲ್ಲಿ ಅತ್ಯಂತ ಗಣ್ಯತೆಯನ್ನು ಪಡೆದಿರುವ ವ್ಯಾಸರಾಯಸ್ವಾಮಿಗಳು, ವಾದಿರಾಜಸ್ವಾಮಿಗಳು, ಪುರಂದರದಾಸರು, ಕನಕ ದಾಸರು ಮೊದಲಾದ ಮಹನೀಯರು ಗ್ರಂಥರಚನೆಮಾಡಿದುದು ಪಂಪಾಕ್ಷೇತ್ರ ದಲ್ಲಿ. ಮಹಾಭಾರತದ ೮ ಪರ್ವಗಳನ್ನು ರಚಿಸಿದ ತಿಮ್ಮಣ್ಣಕವಿ ಇದ್ದುದು ನಮ್ಮ ವಿಜಯನಗರದಲ್ಲಿ. ಇತ್ಯಾದಿ ಕಾರಣಗಳಿಂದ ಬಳ್ಳಾರಿ ಜಿಲ್ಲೆಯು ನಮ್ಮ ಸಾಹಿತ್ಯ ಸಂಸ್ಕೃತಿಗಳ ಉದ್ಧಾರಕ್ಕಾಗಿ ಎಷ್ಟುಮಟ್ಟಿಗೆ ಶ್ರಮಿಸಿದೆ ಎಂಬುದನ್ನು ತಿಳಿಯಬಹುದು. ಆಧುನಿಕ ಕಾಲದಲ್ಲಿ ಕೂಡ ದಕ್ಷಿಣ ಭಾರತ ದಲ್ಲಿಯೇ ಮೊಟ್ಟಮೊದಲು ಮುದ್ರಣಾಲಯ ಬಂದುದು ಬಳ್ಳಾರಿಗೆ. ಮೊದಲು ಕನ್ನಡ ಪತ್ರಿಕೆ ಪ್ರಕಟವಾದುದು, ಮೊದಲು ಕನ್ನಡ ಗ್ರಂಥಗಳು ಅಚ್ಚಾದುದು ಬಳ್ಳಾರಿಯಲ್ಲಿ. ಪ್ರಖ್ಯಾತ ನಾಟಕಕಾರರಾದ ದಿ|| ಅ. ರಾಘ ವಾಚಾರ್ಯರು, ದಿ|| ಧ. ಕೃಷ್ಣಾಚಾರ್ಯರು ಎಂಬುವರು ಬಳ್ಳಾರಿಯವರು. ಆಧುನಿಕ ಮಹಾಕವಿಗಳಾಗಿ, ಕಾಳಿದಾಸನ ಕುಮಾರಸಂಭವ ಮತ್ತು ರಘು ವಂಶ ಕಾವ್ಯಗಳನ್ನು ಕನ್ನಡಕ್ಕೆ ಪರಿವರ್ತಿಸಿರುವ ಆಸ್ಥಾನ ವಿದ್ವಾನ್, ಸರ್ವ ದರ್ಶನ ತೀರ್ಥ ವೈ|| ನಾಗೇಶಶಾಸ್ತ್ರಿಗಳವರು ಬಳ್ಳಾರಿಯವರು. ಪ್ರಖ್ಯಾತ ನಾಟಕ ಕರ್ತರಾದ ಗಮಕಕಲಾನಿಧಿ ಕೆ. ದೊಡ್ಡನಗೌಡರು ಬಳ್ಳಾರಿಜಿಲ್ಲಾ ಜೋಳದರಾಶಿಯವರು. ಉತ್ತಮ ವಾಗ್ಮಿಗಳಾದ ಕಲಿಯುಗ ವ್ಯಾಸ, ವಿದ್ಯಾವಾಚಸ್ಪತಿ ಶ್ರೀ ಸಂಗಮೇಶ್ವರಸ್ವಾಮಿಗಳು ಬಳ್ಳಾರಿಯವರು. ಈ ಎಲ್ಲ ನಿದರ್ಶನಗಳೂ ಬಳ್ಳಾರಿಯ ಸಾಹಿತ್ಯದ ಪರಿಪೂರ್ಣತೆ ಮತ್ತು ಹಿರಿಯ ಕನ್ನಡಿಗತನಕ್ಕೆ ಸಾಕ್ಷಿಯಾಗಿದೆ.

"ಕರ್ನಾಟಕ ಸಂದರ್ಶನ"



ಹಂಪೆಯ ಹೇಮಕೂಟದಲ್ಲಿರುವ ಶ್ರೀವಿರೂಪಾಕ್ಷ ದೇವಾಲಯ

ಬಳ್ಳಾರಿ ಜಿಲ್ಲೆಗೂ ಮೈಸೂರು ರಾಜ್ಯಕ್ಕೂ ಇರುವ ಐತಿಹಾಸಿಕ ಬಾಂಧವ್ಯವು ಇಲ್ಲಿ ಗಮನಾರ್ಹವಾಗಿವೆ. ಮೈಸೂರು ಸೈನ್ಯದ ಬೆಂಬಲದಿಂದ ವಿಶಾಲ ಮೈಸೂರನ್ನು ಸ್ಥಾಪಿಸ ಹೊರಟ ಹೈದರಲ್ಲೀಖಾನನು ೧೭೭೫ರಲ್ಲಿ ಈ ಬಳ್ಳಾರಿಯನ್ನು ಅಲ್ಲಿ ಆಳುತ್ತಿದ್ದ ಮುರಾರಿರಾಯನಿಂದ ವಶಪಡಿಸಿಕೊಂಡನು. ಅಲ್ಲಿಂದ ಟೀಪುವಿನ ಮರಣಕಾಲ ಅಂದರೆ ೧೭೯೯ರವರೆಗೆ ಈ ಬಳ್ಳಾರಿಯು ಮೈಸೂರಿಗೆ ಸೇರಿತ್ತು. ಇದಕ್ಕೆ ನಿದರ್ಶನವಾಗಿ ಬಳ್ಳಾರಿಯಲ್ಲಿ ಬೆಂಗಳೂರು ರಸ್ತೆ, ಬೆಂಗಳೂರಿನಲ್ಲಿ ಬಳ್ಳಾರಿ ರಸ್ತೆ ಇರುವುದನ್ನು ನಾವು ಗಮನಿಸಬಹುದು. ಬಳ್ಳಾರಿ ಬೆಟ್ಟದ ಮೇಲಿರುವ ಕೋಟೆಗೆ ಟೀಪುವಿನ ಕೋಟೆ ಎಂಬ ಹೆಸರಿದೆ. ಇದನ್ನು ಹೈದರ್ ಮತ್ತು ಟೀಪು ಕಟ್ಟಿಸಿದರೆನ್ನುತ್ತಾರೆ. ಮೈಸೂರು ನಾಲ್ಕನೇ ಯುದ್ಧಾನಂತರ ವಿಜಯಿಗಳಾದ ಇಂಗ್ಲೀಷರ ಕುತಂತ್ರದ ಫಲವಾಗಿ ಬಳ್ಳಾರಿಜಿಲ್ಲೆ ಮೊದಲು ನೈಜಾಮನ ಪಾಲಿಗೆ ಹೋಗಿ ಅನಂತರ ಮತ್ತೆ ಇಂಗ್ಲೀಷರ ಕೈಸೇರಿ ಆಡಳಿತ ದೃಷ್ಟಿಯಿಂದ ಮದ್ರಾಸ್ ಪ್ರಾಂತಕ್ಕೆ ಸೇರಿದ್ದಿತು. ಇತ್ತೀಚಿಗೆ ಆಂಧ್ರ ರಾಜ್ಯದ ನಿರ್ಮಾಣದ ಚಳುವಳಿಯಲ್ಲಿ ಬಳ್ಳಾರಿ ಜಿಲ್ಲೆಯು ನ್ಯಾಯಮೂರ್ತಿ ವಾಂಛೂ, ನ್ಯಾಯಮೂರ್ತಿ ಮಿಶ್ರಾರವರ ತೀರ್ಮಾನದ ಪರಿಣಾಮವಾಗಿ, ಬಳ್ಳಾರಿಯ ವೀರಕನ್ನಡಿಗರ ಉಗ್ರಚಳುವಳಿಯ ಪರಿಣಾಮವಾಗಿ, ಮೈಸೂರು ರಾಜ್ಯಕ್ಕೆ ಸೇರುವ ಸುವರ್ಣಸಮಯ ಪ್ರಾಪ್ತವಾಯಿತು. ಅಂದರೆ ಬಳ್ಳಾರಿಯು, ಭಾಷೆ, ಸಾಹಿತ್ಯ, ಸಂಸ್ಕೃತಿ ಮೊದಲಾದ ಎಲ್ಲ ದೃಷ್ಟಿಗಳಿಂದಲೂ ಕನ್ನಡ ರಾಜ್ಯವಾದ ಮೈಸೂರಿಗೆ ಸೇರುವಂತಾದುದು ನ್ಯಾಯವಾಗಿಯೇ ಇದೆ. ಇದೇ ಸಂದರ್ಭದಲ್ಲಿ ಈ ಜಿಲ್ಲೆಯ ಆದವಾನಿ, ಆಲೂರು, ರಾಯದುರ್ಗ ಎಂಬ ೩ ತಾಲ್ಲೂಕುಗಳು ಆಂಧ್ರ ಪ್ರಾಂತಕ್ಕೆ ಸೇರಿರುವುದು ಕನ್ನಡಿಗರ ಕಳವಳಕ್ಕೆ ಕಾರಣವಾಗಿದೆ.

ಇನ್ನು ಸಂಶೋಧಕರ ಅಭಿಪ್ರಾಯಗಳ ಪ್ರಕಾರ ಬಳ್ಳಾರಿ ಜಿಲ್ಲೆಯು ಕ್ರಿ. ಪೂ. ೩ನೇ ಶತಮಾನದಲ್ಲಿ ಪ್ರಸಿದ್ಧರಾದ ಶಾತವಾಹನರು, ಅನಂತರ ನಳರು, ಕ್ರಿ. ಶ. ೩ನೇ ಶತಮಾನದಿಂದ ಪ್ರಖ್ಯಾತಿಗೆ ಬಂದ ಕದಂಬರು, ಗಂಗರು, ನೊಳಂಬರು ಇವರುಗಳ ಕಾಲದಲ್ಲಿ ಶುದ್ಧ ಕನ್ನಡ ನಾಡಾಗಿದ್ದಿತೆಂಬುದಕ್ಕೆ ಶಾಸನಗಳ ಆಧಾರವಿದೆ. ಅನಂತರ ಚರಿತ್ರೆಯಲ್ಲಿ ಪ್ರಖ್ಯಾತರಾದ

ಚಾಲುಕ್ಯರು, ರಾಷ್ಟ್ರಕೂಟರು, ಕಾಲಚೂರ್ಯರು, ಹೊಯ್ಸಳರು ಇವರುಗಳ ಕಾಲದಲ್ಲಿ ಕೂಡ ಬಳ್ಳಾರಿ ಜಿಲ್ಲೆಯು ಕನ್ನಡ ಪ್ರಾಂತದ ಭಾಗವಾಗಿಯೇ ಇದ್ದಿತು. ಈ ಜಿಲ್ಲೆಯ ಅದವಾನಿ, ಹರಪನಹಳ್ಳಿ, ಉಚ್ಚಂಗಿದುರ್ಗ, ಕುರುಗೋಡು ಮತ್ತು ಕಂಪಲಿಗಳು ಹಿಂದಿನ ಕಾಲದಲ್ಲಿ ರಾಜಕೀಯ ಕೇಂದ್ರ ಸ್ಥಾನಗಳಾಗಿದ್ದುವೆಂಬುದಕ್ಕೆ ಬೇಕಾದಷ್ಟು ಶಾಸನಗಳ ನಿದರ್ಶನಗಳಿವೆ.

ವಿಜಯನಗರದ ಅರಸರು ಅಲಂಕರಿಸಿದ ಸಿಂಹಾಸನಕ್ಕೆ ಕರ್ಣಾಟಕ ರತ್ನ ಸಿಂಹಾಸನ ಎಂದು ಹೆಸರು. ಅವರ ರಾಜಮುದ್ರಿಕೆ ಶ್ರೀ ವಿರೂಪಾಕ್ಷ ಎಂದು. ರಾಯರ ಅರಮನೆಯ ಮಾತು ಕನ್ನಡ. ಅವರ ಕೈಬರೆಹ ಕನ್ನಡ ಲಿಪಿಯಲ್ಲಿ. ವಿಜಯನಗರದ ಕರ್ಣಾಟಕ ರತ್ನ ಸಿಂಹಾಸನವು ೧೬೧೦ರಲ್ಲಿ ಶ್ರೀರಂಗಪಟ್ಟಣದಲ್ಲಿದ್ದ ವಿಜಯನಗರದ ಮಂಡಲಾಧಿಪತಿ ಶ್ರೀರಂಗರಾಯನಿಂದ ಮೈಸೂರಿನ ರಾಜ ಒಡೆಯರಿಗೆ ಸೇರಿತು. ಆ ಪವಿತ್ರವಾದ ಸಿಂಹಾಸನವನ್ನು ಇಂದು ಅಲಂಕರಿಸುತ್ತಿರುವವರು ಮೈಸೂರಿನ ಪುಣ್ಯಶೀಲರಾದ ಮಹಾಪ್ರಭುಗಳು. ಆ ಸಿಂಹಾಸನವು ಪೂಜೆಗೊಳ್ಳುತ್ತಿರುವುದು ಮೈಸೂರಿನ ದಿವ್ಯಭವ್ಯ ಅರಮನೆಯಲ್ಲಿ. ಹೈದರಲ್ಲಿ ಮತ್ತು ಟೀಪು ಕಟ್ಟಿದ ಕೋಟೆ ಬಳ್ಳಾರಿಯ ಬೆಟ್ಟದ ಮೇಲೆ ಇಂದಿಗೂ ಕಂಗೊಳಿಸುತ್ತಿದೆ. ಬಳ್ಳಾರಿಯ ಬೆಟ್ಟದ ಬುಡದಲ್ಲಿ ಇರುವ ಬಳ್ಳೇಶನುಲ್ಲಾರ್ಯ ಎಂಬಲ್ಲಿ ಶರಣನಿಗೆ ಶಿವನು ಪ್ರತ್ಯಕ್ಷವಾದ ವಿಷಯವನ್ನು ಹೃದಯಂಗಮವಾಗಿ ಅಭಿವರ್ಣಿಸಿರುವರು ಬೆಂಗಳೂರಿನ ಶ್ರೀ ಸರ್ಪಭೂಷಣ ಕವಿಗಳು. ಬಳ್ಳಾರಿಗೂ ಬೆಂಗಳೂರಿಗೂ ವ್ಯಾಪಾರ-ವ್ಯವಹಾರ ಸಂಬಂಧ ಮೊದಲಿನಿಂದ ನಡೆದುಬಂದಿದೆ. ಬಳ್ಳಾರಿಯಲ್ಲಿ ಪ್ರವಹಿಸುತ್ತಿರುವ ತುಂಗ ಮತ್ತು ಭದ್ರಾನದಿ ಅದರಂತೆ ಹಗರೀನದಿ ಹುಟ್ಟಿರುವುದು ಹಳೆಯ ಮೈಸೂರಿನಲ್ಲಿ. ಅವು ಒಟ್ಟುಗೂಡಿ ಸ್ವಚ್ಛಂದವಾಗಿ ಹರಿಯುತ್ತಿರುವುದು ಬಳ್ಳಾರಿ ಜಿಲ್ಲೆಯಲ್ಲಿ. ತುಂಗಭದ್ರಾ ಅಣೆಕಟ್ಟು ಇರುವುದು ಬಳ್ಳಾರಿ ಜಿಲ್ಲೆಯಲ್ಲಿ.

ಬಳ್ಳಾರಿ ಪಟ್ಟಣದ ಮೊದಲ ಹೆಸರು 'ಬಳ್ಳಾರೆ' ಎಂದೂ ಆಮೇಲೆ ೧೨ನೇ ಶತಮಾನದಲ್ಲಿ 'ಬಳ್ಳಾರಿ' ಎಂಬ ಹೆಸರಾಯಿತೆಂದೂ ಅದೇ ಹೆಸರು ಇಂದಿನವರೆಗೂ ಸ್ಥಿರವಾಗಿ ನಿಂತಿದೆಯೆಂದೂ ಸುಮಾರು ೧,೦೦೦ ವರ್ಷಗಳಷ್ಟು ಹಿಂದಿನಿಂದ ಬಳ್ಳಾರಿ ಶುದ್ಧ ಕನ್ನಡದ ಹೆಸರಿನಿಂದ ಕಂಗೊಳಿಸುತ್ತಿದೆ

ಯೆಂದೂ, ರಾಚಮಲ್ಲ, ಭೀಮರಸ, ಅಜ್ಜರಸ ಮೊದಲಾದ ಸಿಂಧವಂಶದ ರಾಜರಿಗೆ ಈ ಪಟ್ಟಣವು ರಾಜಧಾನಿಯಾಗಿತ್ತೆಂದೂ ಸುಪ್ರಸಿದ್ಧ ಸಂಶೋಧಕರಾದ ಶ್ರೀ ದೇಶಾಯಿ ಪಾಂಡುರಂಗರಾಯರು ಹೇಳಿದ್ದಾರೆ. (ಶರಣ ಸಾಹಿತ್ಯ, ಸಂಪುಟ ೧೬-ಸಂಚಿಕೆ-೬) ಇದರಿಂದ ಬಳ್ಳಾರಿಯು ಅಚ್ಚ ಕನ್ನಡ ನಾಡೆಂದು ಸಿದ್ಧವಾಗುತ್ತದೆ. ಬಳ್ಳೇಶ ಮಲ್ಲಾರ್ಯ ಎಂಬ ಶರಣನು ಬಳ್ಳವನ್ನೇ ಶಿವಲಿಂಗವೆಂದು ಪೂಜಿಸಿದ್ದರ ಫಲವಾಗಿ (ಬಳ್ಳಾ, ಅರಿ= ಬಳ್ಳಾರಿ) ಬಳ್ಳಾರಿ ಎಂದಾಯಿತೆಂದು ಕೆಲವರೂ, ಈ ಊರಿನ ಗ್ರಾಮದೇವತೆ 'ಬಲಾರಿ' ಎಂಬ ಹೆಸರಿನಿಂದ ಪ್ರಖ್ಯಾತಳಾದ್ದರಿಂದ ಈ ಊರು ಬಲಾರಿ, ಬಳ್ಳಾರಿ ಆಯಿತೆಂದು ಕೆಲವರೂ ಹೇಳುತ್ತಾರೆ. ನ್ಯಾ॥ ಮಿಶ್ರಾರವರೂ ತಮ್ಮ ತೀರ್ಪಿನಲ್ಲಿ ಬಳ್ಳಾರಿ ಕನ್ನಡವೆಂದು ಹೇಳಿದ್ದಾರೆ. ಭಾರತ ಸರ್ಕಾರದವರೂ ಈ ತೀರ್ಮಾನಕ್ಕೆ ಮನ್ನಣೆ ಕೊಟ್ಟಿದ್ದಾರೆ.

ಬಳ್ಳಾರಿ ಜಿಲ್ಲೆಯ ಜನಗಳ ಆಚಾರ ವಿಚಾರಗಳು ಮೈಸೂರಿನ ಜನರ ಆಚಾರ ವಿಚಾರಗಳಿಗೆ ಹೊಂದಿಕೊಂಡೇ ಇವೆ. ಬಳ್ಳಾರಿಯಲ್ಲಿ ಕರ್ಣಾಟಕ ಸಂಗೀತದ ಪ್ರಾಮುಖ್ಯತೆ ಇದೆ. ಬಳ್ಳಾರಿಯ ಊಟೋಪಚಾರಗಳು ಹುಳಿ ಮುಂದಾದ ಮೈಸೂರಿನ ಊಟೋಪಚಾರವನ್ನು ಹೋಲುತ್ತವೆ. ಬಳ್ಳಾರಿಯ ಜನರು ವಿನಯವಂತರೂ ದೇಶಾಭಿಮಾನಿಗಳೂ, ಸಹೃದಯರೂ ಆಗಿದ್ದಾರೆ. ಬಳ್ಳಾರಿಯು ಮೈಸೂರಿಗೆ ಸೇರುವ ಈ ಸುಸಂದರ್ಭವು ಕರ್ಣಾಟಕ ಪ್ರಾಂತ ರಚನೆಗೆ ಗಣಪತಿ ಪೂಜೆಯಂತಿದೆ ಎಂದು ಹಲವರು ಹೇಳಿರುವುದು ಅರ್ಥ ಗರ್ಭಿತವಾಗಿದೆ. ಹಿಂದೆ ದಕ್ಷಿಣಭಾರತವನ್ನು ತುರುಕರ ದಾಳಿಯಿಂದ ವಿಜಯನಗರದ ಸಾಮ್ರಾಜ್ಯದ ಮೂಲಕ ಉಳಿಸಿದ ಕೀರ್ತಿ ಬಳ್ಳಾರಿ ಜಿಲ್ಲೆಗೆ ಸೇರಿದುದು. ೧೫೬೫ರಲ್ಲಿ ವಿಜಯನಗರದ ಸಾಮ್ರಾಜ್ಯ ವಿನಾಶದಲ್ಲಿ ಕಣ್ಮರೆಯಾದ ಕರ್ಣಾಟಕ ಲಕ್ಷ್ಮಿ, ಮತ್ತೆ ಉದಯಗೊಳ್ಳುತ್ತಿರುವುದು ಬಳ್ಳಾರಿ ಮೈಸೂರುಗಳ ಬಾಂಧವ್ಯಗಳ ಮೂಲಕವಾಗಿ. ಈ ಸಂದರ್ಭ ಸನ್ನಿವೇಶಗಳನ್ನು ಚೆನ್ನಾಗಿ ಆಲೋಚಿಸಿದರೆ ಕರ್ಣಾಟಕ ಏಕೀಕರಣವು ಅರ್ಥಾತ್ ಕರ್ಣಾಟಕ ರಾಜ್ಯಸ್ಥಾಪನೆಯು ಶ್ರೀ ಪಂಪಾ ವಿರೂಪಾಕ್ಷನ ಅನುಗ್ರಹದಿಂದಲೂ ತಾಯಿ ಭುವನೇಶ್ವರಿಯ ಪ್ರಸನ್ನತೆಯಿಂದಲೂ, ಸ್ವಾಮಿ ವಿದ್ಯಾರಣ್ಯರ ಆಶೀರ್ವಾದದಿಂದಲೂ ಕ್ಷಿಪ್ರದಲ್ಲಿಯೇ ಆಗುವುದೆಂದು ನಾವು ಹೇಳಬಹುದಾಗಿದೆ.

# ಜಿಲ್ಲೆಯ ಸಾಹಿತ್ಯ ಸಂಪತ್ತು

ಪೌರಾಣಿಕ ಕಾಲದ ಅರ್ಥಾತ್ ರಾಮಾಯಣದ ಕಿಷ್ಕಿಂಧೆ, ಪಂಪಾ ಸರೋವರ, ಶಬರಿ ಆಶ್ರಮ ಮತ್ತು ಪಂಪಾಕ್ಷೇತ್ರಗಳು ಇರುವುದು ಬಳ್ಳಾರಿ ಜಿಲ್ಲೆಯಲ್ಲಿ. ಅಗಸ್ತ್ಯರ ತಪೋಭೂಮಿಯಾದ ಸೊಂಡೂರು, ನೂತನ ಬಸವೇಶ್ವರನ ಶಿವಯೋಗ ಸಮಾಧಿಸ್ಥಾನವೂ ದಿಲ್ಲಿಯ ಅಕ್ಬರ್ ಬಾದಶಹನನ್ನು ಅನುಗ್ರಹಿಸಿದ ಗುರುವರ್ಯನ ಸಮಾಧಿಸ್ಥಾನವೂ ಇರುವ ಕೊಟ್ಟೂರು, ಶ್ರೀ ಜಗದ್ಗುರು ಮರುಳಸಿದ್ಧ ಶಿವಾಚಾರ್ಯರ ಧರ್ಮಸಿಂಹಾಸನವಿರುವ ಉಜ್ಜಯನಿ, ಮಹಾಶರಣರ ದಾಸೋಹ ಮಠವಿರುವ ಕಾನಾಮಡು, ಮಹಾ ಮಹಿಮರಾದ ಎರ್ರಿತಾತನವರ ತಪೋಭೂಮಿಯಾದ ಚೇಳ್ಳಗುರ್ಕಿ, ಮಹಾ ಮಹಿಮರಾದ ಶ್ರೀ ಮರಿಸ್ವಾಮಿಗಳು, ಶಿವಶರಣರಾದ ಸಕ್ಕರೆ ಕರಡಪ್ಪನವರು, ಬಳ್ಳೇಶ ಮಲ್ಲಾರ್ಯರು ಇವರುಗಳ ಪವಿತ್ರ ಜೀವನ ಚರಿತ್ರೆ ನಡೆದುದು ಬಳ್ಳಾರಿ ನಗರದಲ್ಲಿಯೇ. ಬಳ್ಳಾರಿ ಜಿಲ್ಲೆಯ ಕುರುಗೋಡು ಉನ್ನತವಾದ ಬಸವೇಶ್ವರ ವಿಗ್ರಹದಿಂದ ಕಂಗೊಳಿಸುತ್ತಿದೆ. ಕುರುವತ್ತಿ ಬಸವೇಶ್ವರ, ಮೈಲಾರದ ಶಿವಲಿಂಗ ಇವೂ ಸುಕ್ಷೇತ್ರಗಳೆನಿಸಿವೆ. ಕಂಪಲಿ, ಹರಪನಹಳ್ಳಿ, ಆದವಾನಿ, ಉಚ್ಚಂಗಿದುರ್ಗ ಇವು ಬಳ್ಳಾರಿ ಜಿಲ್ಲೆಯ ಪ್ರಾಚೀನ ರಾಜಕೀಯ ಕೇಂದ್ರಗಳು. ಸ್ವಯಂ ಬಳ್ಳಾರಿ ಪಟ್ಟಣವು ಸುಮಾರು ೧೦೦೦ ವರ್ಷಗಳಿಂದ ಇದೇ ಹೆಸರಿನಿಂದ ಪರಿಶೋಭಿಸಲ್ಪಟ್ಟಿದೆ ಎಂಬುದನ್ನು ಅನೇಕ ಶಾಸನಾಧಾರ ಗಳಿಂದ ಸಿದ್ಧಮಾಡಬಹುದು.

ಪರಮಪವಿತ್ರವಾದ ತುಂಗಭದ್ರಾ ನದಿಯೂ, ಹಗರಿ ಮೊದಲಾದ ಇತರ ನದಿಗಳೂ, ಈ ಜಿಲ್ಲೆಯಲ್ಲಿ ಹರಿಯುತ್ತಿವೆ. ಈಗತಾನೇ ಸುಮಾರು ೫೦ ಕೋಟಿ ರೂ. ವೆಚ್ಚದಿಂದ ನಿರ್ಮಾಣವಾಗಿರುವ ತುಂಗಭದ್ರಾ ಅಣೆಕಟ್ಟು ಈ ಜಿಲ್ಲೆಯನ್ನು ನಂದನ ವನವನ್ನಾಗಿ ಮಾಡಲಿದೆ. ಸೊಂಡೂರು ಗುಡ್ಡದಲ್ಲಿ ಸಿಕ್ಕುವ ಕಬ್ಬಿಣ, ಮ್ಯಾಂಗನೀಸ್ ಮತ್ತು ಜಿಲ್ಲೆಯ ಹಲವು ಭಾಗದಲ್ಲಿ

ಸಿಕ್ಕುವ ಚಿನ್ನ, ಬೆಳ್ಳಿ, ತಾಮ್ರ ಮೊದಲಾದ ಲೋಹಗಳು ಈ ಜಿಲ್ಲೆಯ ಭೂಗರ್ಭವು ಸಂಪದ್ಯುಕ್ತವಾದುದೆಂಬುದಕ್ಕೆ ನಿದರ್ಶನವಾಗಿದೆ. ಈ ಜಿಲ್ಲೆಯಲ್ಲಿ ಜೋಳ, ಗೋಧಿ, ಆರಕ, ಹತ್ತಿ, ಕಬ್ಬು, ಸಜ್ಜೆ ಮೊದಲಾದ ಜನೋಪಯುಕ್ತ ಧಾನ್ಯಗಳು ಮತ್ತು ವಿವಿಧ ಎಣ್ಣೆ ಬೀಜಗಳು ಬೆಳೆಯುತ್ತವೆ. ಜಿಲ್ಲೆಯ ಹವಾಮಾನವು ಆರೋಗ್ಯಕರವಾಗಿದೆ. ಬಳ್ಳಾರಿ, ಹೊಸಪೇಟೆ, ಕೊಟ್ಟೂರು ಮೊದಲಾದ ಪಟ್ಟಣಗಳು ಒಳ್ಳೆಯ ವ್ಯಾಪಾರ ಸ್ಥಳಗಳಾಗಿ ಲಕ್ಷ್ಮೀನಿವಾಸಸ್ಥಳಗಳೆನಿಸಿವೆ. ಬಳ್ಳಾರಿಯ ಜನರು ಸಂಗೀತ, ಸಾಹಿತ್ಯ ಪ್ರೇಮಿಗಳೂ, ದೇಶಾಭಿಮಾನಿಗಳೂ ಆಗಿ ಮೈಸೂರು ದೇಶದ ಪಕ್ಕದ ಜಿಲ್ಲೆಯವರಾದ ಕಾರಣ ಮೈಸೂರು ಜನರ ಆಚಾರ ವಿಚಾರಗಳನ್ನೇ ಹೋಲುವವರಾಗಿದ್ದಾರೆ. ಕರ್ಣಾಟಕ ಸಂಗೀತ, ಹುಳಿಸಾರು, ಕಚ್ಚೆಪಂಚೆ, ಪುಷ್ಪಗಳ ಪ್ರೇಮ ಇತ್ಯಾದಿ ಗುಣಗಳು ಬಳ್ಳಾರಿ-ಮೈಸೂರುಗಳೆರಡಕ್ಕೂ ಸಮಾನವಾಗಿವೆ.

ಮುಖ್ಯವಾಗಿ ಈ ಪ್ರಸಂಗವು ಬಳ್ಳಾರಿ ಜಿಲ್ಲೆಯು ಕನ್ನಡ, ಸಂಸ್ಕೃತ ಮೊದಲಾದ ಭಾಷೆಗಳಲ್ಲಿ ಎಂತಹ ಅಮೌಲ್ಯವಾದ ಸಾಹಿತ್ಯ ಸಂಪತ್ತನ್ನು ಹೊಂದಿದೆ ಎಂಬುದನ್ನು ವಿವರಿಸತಕ್ಕುದಾಗಿದೆ. ಬಳ್ಳಾರಿ ಜಿಲ್ಲೆಯಲ್ಲಿ ವೈದಿಕ ಧರ್ಮ, ವೀರಶೈವ ಧರ್ಮ, ವೈಷ್ಣವ ಧರ್ಮ ಮತ್ತು ಜೈನ ಧರ್ಮದ ಗ್ರಂಥಕಾರರಿಗೆಲ್ಲಾ ಉದಾರ ಪ್ರೋತ್ಸಾಹ ದೊರೆತಿರುವುದು ಶ್ಲಾಘ್ಯವಾದ ಸಂಗತಿಯಾಗಿದೆ. ೧೨ನೇ ಶತಮಾನದ ಉತ್ತರಾರ್ಧದಲ್ಲಿ ಅಥವಾ ೧೩ನೇ ಶತಮಾನದ ಪ್ರಾರಂಭದಲ್ಲಿ ಬಾಳಿಬದುಕಿದ ಕರ್ಣಾಟಕದ ಮಹಾಕವಿಗಳಾಗಿ ಕನ್ನಡದಲ್ಲಿ ನೂತನಮಾರ್ಗವನ್ನು ಸ್ಥಾಪಿಸಿದ ಹರಿಹರ-ರಾಘವಾಂಕರು ಹುಟ್ಟಿ ಬಳೆದುದು ಪಂಪಾಕ್ಷೇತ್ರದಲ್ಲಿ. ಮಹಾಕವಿ ಹರಿಹರನು 'ಗಿರಿಜಾ ಕಲ್ಯಾಣ' 'ರಕ್ಷಾಶತಕ' 'ಪಂಪಾ ಶತಕ' 'ವಿರೂಪಾಕ್ಷ ಶತಕ' ಮುಡಿಗೆಯ ಅಷ್ಟಕ ಮೊದಲಾದ ಕಾವ್ಯಗಳನ್ನೂ, ಬಸವರಾಜ ದೇವರ ರಗಳೆ, ಅಕ್ಕ ಮಹಾದೇವಿ ರಗಳೆ, ನಂಬಿಯಣ್ಣನ ರಗಳೆ ಇತ್ಯಾದಿ ನೂರಾರು ರಗಳೆಗಳನ್ನುಳ್ಳ 'ರಘಟಾಕಾವ್ಯ' ಎಂಬ ಮಹಾ ಗ್ರಂಥವನ್ನೂ ಬರೆದು ಕನ್ನಡ ಸಾಹಿತ್ಯಕ್ಕೆ ಮಹೋಪಕಾರ ಮಾಡಿದ್ದಾನೆ. ಕನ್ನಡದಲ್ಲಿ ರಗಳೆಯ ಶೈಲಿಯಲ್ಲಿ

ಮೊಟ್ಟಮೊದಲು 'ದೀಕ್ಷಾಬೋಧೆ' ಎಂಬ ಗ್ರಂಥವನ್ನು ಬರೆದವನು ಕೆರೆಯ ಪದ್ಮರಸನಾದರೂ ಜನಪ್ರಿಯತೆಯಲ್ಲಿ ಹರಿಹರನ ರಗಳೆಗಳು ಅಗ್ರಗಣ್ಯ ವೆನಿಸಿದೆ. ಈತನ ಗಿರಿಜಾಕಲ್ಯಾಣವು ಮೃದು ಮಧುರ ಪದ ಪುಂಜ ರಂಜಿತವಾಗಿ ಭಕ್ತಿರಸದ ತರಂಗಿಣಿಯನ್ನು ಹರಿಸತಕ್ಕುದಾಗಿದೆ. ಈತನ ಶತಕಗಳು ನೀತಿ ಬೋಧಕಗಳಾಗಿಯೂ ಭಕ್ತಿ, ಜ್ಞಾನ ವೈರಾಗ್ಯ ಬೋಧಕ ಗಳಾಗಿಯೂ ಇವೆ. ಇವನ ಶಿಷ್ಯನಾದ ಮಹಾಕವಿ ರಾಘವಾಂಕ ಪಂಡಿತನು ಕನ್ನಡದಲ್ಲಿ ನೂತನವಾದ ಷಟ್ಪದೀ ಶೈಲಿಯನ್ನು ಪ್ರಾರಂಭಿಸಿ ಹರಿಶ್ಚಂದ್ರ ಕಾವ್ಯ, ಸಿದ್ಧರಾಮಪುರಾಣ, ವೀರೇಶಚರಿತೆ,A ಸೋಮನಾಥಚರಿತೆ, ಶರಭ ಚರಿತೆ ಮತ್ತು ಹರಿಹರ ಮಹತ್ವ ಎಂಬ ಆರು ಗ್ರಂಥಗಳನ್ನು ಬರೆದು ಕನ್ನಡ ಸಾಹಿತ್ಯಕ್ಕೆ ಮಹೋಪಕಾರ ಮಾಡಿದ್ದಾನೆ. ರಾಘವಾಂಕನ ಸಮಾಕಾಲೀನ ನಾದ ಕುಮಾರ ಪದ್ಮರಸನು ವಿವಿಧ ಷಟ್ಪದಿಗಳಲ್ಲಿ ಸಾನಂದ ಚರಿತೆಯನ್ನು ಬರೆದಿದ್ದರೂ ಸಾಹಿತ್ಯ ಪ್ರಪಂಚದಲ್ಲಿ ರಾಘವಾಂಕನ ಹರಿಶ್ಚಂದ್ರ ಕಾವ್ಯ ಮೊದಲಾದುವುಗಳಿಗಿರುವ ಗೌರವ ಇವನ ಗ್ರಂಥಗಳಿಗೆ ಇಲ್ಲವಾಗಿದೆ. ಹರಿಹರ-ರಾಘವಾಂಕರು ಬಳ್ಳಾರಿ ಜಿಲ್ಲೆಯಲ್ಲೇ ಅಲ್ಲದೆ ಕನ್ನಡ ನಾಡಿನಲ್ಲಿಯೇ ನೂತನ ಮಾರ್ಗದ ಮಹಾಕವಿಗಳೆನಿಸಿದ್ದಾರೆ; ಕನ್ನಡದ ಕೀರ್ತಿ ಕಳಶ ವೆನಿಸಿದ್ದಾರೆ. ಹಾಗೂ ಕ್ರಾಂತಿಕಾರಕ ಕವಿಗಳೆನಿಸಿದ್ದಾರೆ.

ಅಲ್ಲಿಂದ ಮುಂದೆ ಬಳ್ಳಾರಿ ಜಿಲ್ಲೆಯಲ್ಲಿ ಸಾಹಿತ್ಯ ವೈಭವ ಮತ್ತೆ ಕಂಗೊಳಿಸಿದುದು ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಅನಂತರ. ಆ ಕಾಲದಲ್ಲಿ ಪ್ರೌಢದೇವರಾಯನ ಕಾಲವು (೧೪೧೯ ರಿಂದ ೧೪೪೬) ಸಾಹಿತ್ಯದಲ್ಲಿ ಹೆಚ್ಚಿನ ಗಣ್ಯತೆಯನ್ನು ಪಡೆದಿದೆ. ಈ ಕಾಲದಲ್ಲಿ ಲಕ್ಕಣ್ಣ ದಂಡೇಶನು 'ಶಿವತತ್ವ ಚಿಂತಾಮಣಿ', ಜಕ್ಕಣಾಚಾರ್ಯನು 'ಪ್ರಭುದೇವರ ವಚನಗಳ ಟೀಕೆ' ನೀಲಕಂಠ ಶಿವಾಚಾರ್ಯನು 'ಕ್ರಿಯಾಸಾರ' ಚಾಮರಸನು 'ಪ್ರಭುಲಿಂಗಲೀಲೆ', ಮಹಾಲಿಂಗದೇವನು 'ಏಕೋತ್ತರ ಶತಸ್ಥಲ' ಕಲ್ಲು ಮಠದ ಪ್ರಭುದೇವನು 'ಲಿಂಗಲೀಲಾ ವಿಲಾಸ', ಕುಮಾರ ಬಂಕನಾಥನು 'ಷಟ್ಸ್ಥಲೋಪದೇಶ' ಎಂಬ ಗ್ರಂಥಗಳನ್ನು ಬರೆದಿದ್ದಾರೆ. ಇದೇ ಸಮಯ

A ವೀರೇಶ ಚರಿತೆ ಶರಣ ಸಾಹಿತ್ಯ ಕಾರ್ಯಾಲಯದಲ್ಲಿ ಪ್ರಕಟವಾಗಿದೆ. (ಸಂ.)

ದಲ್ಲಿ ಕರಸ್ಥಲದ ನಾಗಿದೇವ ಮತ್ತು ವೀರಣ್ಣೊಡೆಯರು ಉತ್ತಮವಾದ ವಚನ ಗ್ರಂಥಗಳನ್ನು ಬರೆದಿದ್ದಾರೆ. ಜಿನಕವಿಗಳಾದ ಕಲ್ಯಾಣಕೀರ್ತಿಯು ಜ್ಞಾನಚಂದ್ರಾಭ್ಯುದಯ ಮತ್ತು ಕಾಮನ ಕಥೆಯನ್ನೂ, ಬಾಹುಬಲಿ ಪಂಡಿತನು ಧರ್ಮನಾಥ ಪುರಾಣವನ್ನೂಬರೆದಿದ್ದಾರೆ. ಮನೋವಿಜಯಾದಿ ಸಪ್ತ ಕಾವ್ಯಗಳನ್ನು ಬರೆದ ಗುರುಬಸವಕವಿ, ಮತ್ತು ಕನ್ನಡ ಸಾಹಿತ್ಯದಲ್ಲಿ ಅತ್ಯಂತ ಪ್ರಸಿದ್ಧವಾದ ಚೆನ್ನಬಸವ ಪುರಾಣವನ್ನೂ ಸಂಸ್ಕೃತದಲ್ಲಿ ಪ್ರಭುಲಿಂಗಲೀಲಾ ಕಾವ್ಯವನ್ನು ಬರೆದ ವಿರೂಪಾಕ್ಷ ಪಂಡಿತ ಇವರು ಈ ಪಂಪಾಕ್ಷೇತ್ರದಲ್ಲಿಯೇ ಇದ್ದವರು. ಸುಪ್ರಸಿದ್ಧ ಕನ್ನಡ ಭಾರತದ ಕಡೆಯ ೮ ಪರ್ವಗಳನ್ನು ಬರೆದ ತಿಮ್ಮಣ್ಣಕವಿ ಶ್ರೀ ಕೃಷ್ಣದೇವರಾಯನ ಆಸ್ಥಾನದವನು. ೧೬೭೮ ರಲ್ಲಿ ಬಸವಲಿಂಗ ಕವಿಯು ಕೊಟ್ಟೂರು ಬಸವೇಶ್ವರ ಪುರಾಣವನ್ನು ಷಟ್ಪದೀ ಶೈಲಿಯಲ್ಲಿ ಬರೆದನು. ಇದರಲ್ಲಿ ಶ್ರೀ ಕೊಟ್ಟೂರು ಬಸವೇಶ್ವರನ ವಿವಿಧ ಮಹಿಮೆಗಳು ವರ್ಣಿಸಲ್ಪಟ್ಟಿವೆ.

ವಿಜಯನಗರದರಸರ ಪರಂಪರೆಯಲ್ಲಿ ಬುಕ್ಕರಾಯನ ಸೊಸೆ, (ಕಂಪಣ ರಾಯನ ಪತ್ನಿ) ಗಂಗಾದೇವಿಯು 'ವೀರಕಂಪಣರಾಯ ಚರಿತಂ' (ಸಂಸ್ಕೃತ) ಎಂಬ ಗ್ರಂಥವನ್ನೂ ಅರಸನಾದ ಸಾಳ್ವ ನರಸಿಂಹನು 'ರಾಮಾಭ್ಯುದಯ' ಎಂಬ ಗ್ರಂಥವನ್ನೂ, ಅಲ್ಲದೆ ರಾಜಬಂಧು ಸಾಳ್ವ ಗೋಪನು ಕಾಮಧೇನು, ತಾಳದೀಪಿಕಾ ಗ್ರಂಥ ಇತ್ಯಾದಿಗಳನ್ನೂ ಬರೆದಿದ್ದಾನೆ. ವಿರೂಪಾಕ್ಷರಾಜನು "ನಾರಾಯಣೀ ವಿಲಾಸಂ" ಎಂಬ ನಾಟಕವನ್ನೂ, ಇಮ್ಮಡಿ ದೇವರಾಯನು "ಮಹಾನಾಟಕ ಸುಧಾನಿಧಿ" ಎಂಬ ಗ್ರಂಥವನ್ನೂ, ಕೃಷ್ಣದೇವರಾಯನು 'ಅಮುಕ್ತ ಮಾಲ್ಯದ' ಎಂಬ ಕಾವ್ಯ ಮತ್ತು "ಜಾಂಬುವತೀ ಕಲ್ಯಾಣ" ಎಂಬ ನಾಟಕವನ್ನೂ (ಇವು ತೆಲುಗು ಗ್ರಂಥಗಳು) ಬರೆದಿರುತ್ತಾರೆ. ಬುಕ್ಕರಾಯನ ಮಂತ್ರಿಗಳಾದ ಸಾಯಣಾಚಾರ್ಯರು ವೇದಗಳಿಗೆ ಭಾಷ್ಯ ವನ್ನು ಬರೆದರು ಮತ್ತು ಮಾಧವಾಚಾರ್ಯರು 'ಸರ್ವದರ್ಶನ ಸಂಗ್ರಹ', 'ವೇದಾಂತ ಪಂಚದಶಿ' ಮತ್ತು 'ಶಂಕರ ದಿಗ್ವಿಜಯ' ಮೊದಲಾದ ಗ್ರಂಥ ಗಳನ್ನು ವಿರಚಿಸಿರುವರು. ಬುಕ್ಕರಾಯನ ಮೊಮ್ಮಗನಾದ ದೇವರಾಯನು 'ಸೊಬಗಿನ ಸೋನೆ' ಮತ್ತು "ಅಮರುಕ" ಎಂಬೆರಡು ಗ್ರಂಥಗಳನ್ನು

ಬರೆದಿದ್ದಾನೆ. ವಿಜಯನಗರದ ಪ್ರಖ್ಯಾತ ರಾಜನಾದ ಪ್ರೌಢದೇವರಾಯ ನನ್ನು ಕುರಿತು ಆದ್ರೀಶಕವಿ "ಪ್ರೌಢರಾಯನ ಕಾವ್ಯ" ಎಂಬ ಉತ್ತಮ ಪುರಾಣ ಗ್ರಂಥವನ್ನು ಬರೆದಿದ್ದಾನೆ.

ಹರಿದಾಸ ಸಾಹಿತ್ಯದಲ್ಲಿ ಪ್ರಖ್ಯಾತರಾದ ದಾಸಕೂಟದ ಹಿರಿಯರು ನರಹರಿತೀರ್ಥರು, ಶ್ರೀ ಪಾದರಾಯರು, ಪುರಂದರದಾಸರು, ವ್ಯಾಸರಾಯರು, ಕನಕದಾಸರು, ಮೊದಲಾದವರು ಹಂಪೆಯನ್ನು ಕೇಂದ್ರವನ್ನಾಗಿ ಮಾಡಿ ಕೊಂಡು ತಮ್ಮ ಲೋಕಪ್ರಿಯ ದಾಸಸಾಹಿತ್ಯವನ್ನು ಪಾರಂಭಿಸಿದರು. ಈ ಹರಿದಾಸರ ಸಾಹಿತ್ಯವು ಅದರಲ್ಲಿಯೂ ಕನಕದಾಸ–ಪುರಂದರದಾಸರ ಹಾಡು ಗಳು ಕನ್ನಡನಾಡಿನಲ್ಲಿ ನವಚೈತನ್ಯವನ್ನುಂಟುಮಾಡಿದುವು. ವ್ಯಾಸರಾಯರು ವಾದಿರಾಜಸ್ವಾಮಿಗಳು ದ್ವೈತಸಿದ್ಧಾಂತಬೋಧಕವಾದ ಹಲವು ಧರ್ಮ ಗ್ರಂಥಗಳನ್ನು ಸಂಸ್ಕೃತದಲ್ಲಿ ರಚಿಸಿದ್ದಾರೆ.

ಉತ್ಸಾಹ ಜನಕವಾದ ವಿಜಯನಗರದ ಅರಸರ ಆಳ್ವಿಕೆಯಲ್ಲಿ ಕವಿ ಗುರುನಂಜನು ಭಟ್ಟ ಭಾಸ್ಕರನ ಯಜುರ್ವೇದ ಭಾಷ್ಯಕ್ಕೆ ಕನ್ನಡ ಟೀಕೆ ಯನ್ನು ಬರೆದನು. ನೀಲಕಂಠಾರಾಧ್ಯನು "ಪರವಾದಿ ಗಜಾಂಕುಶ ತಾರಾ ವಳಿ" ಎಂಬ ಗ್ರಂಥವನ್ನು ರಚಿಸಿದನು. ಹಂಪೆಯ ಚಾಮರಸನು ಬರೆದ ಪ್ರಭುಲಿಂಗಲೀಲೆಯು, ತಮಿಳು, ತೆಲುಗು, ಮರಾಠಿ ಮತ್ತು ಸಂಸ್ಕೃತ ಭಾಷೆಗಳಲ್ಲಿ ಭಾಷಾಂತರವಾಗಿರುವುದನ್ನು ನೋಡಿದರೆ ಆ ಕಾಲದಲ್ಲಿ ಬಳ್ಳಾರಿ ಜಿಲ್ಲೆಯ ಕವಿಗಳ ಪ್ರಭಾವವು ಇಡೀ ದಕ್ಷಿಣ ಭಾರತವನ್ನು ಹೇಗೆ ಆಕರ್ಷಿಸಿ ತೆಂದು ನಾವು ಸುಲಭವಾಗಿ ಅರಿಯಬಹುದು. ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣವು ಸಂಸ್ಕೃತ ಮತ್ತು ತೆಲುಗು ಭಾಷೆಗಳಲ್ಲಿ ಭಾಷಾಂತರ ವಾಗಿರುವುದು ನಮ್ಮ ಮಾತಿಗೆ ಇನ್ನೊಂದು ನಿದರ್ಶನವಾಗಿದೆ. ವಿರುಪ ರಾಜನ ತ್ರಿಭುವನತಿಲಕ, ನಂಜರಾಜನ ಕುಮಾರರಾಜನ ಕಥೆ, ವೀರಭದ್ರ ರಾಜನ ವೀರಭದ್ರವಿಜಯ, ತಿರುಮಲಾಂಬೆಯ ವರದಾಂಬಿಕಾ ಪರಿಣಯಂ, ಸದಾನಂದಯೋಗಿಯ ಕನ್ನಡ ಭಾಗವತ ಇವು ವಿಜಯನಗರದ ಕಾಲದವು. ಒಂದನೇ ಹರಿಹರನ ಆಸ್ಥಾನದಲ್ಲಿದ್ದ ಮಂಗರಸನು ಖಗೇಂದ್ರಮಣಿ ದರ್ಪಣ

ಎಂಬ ಗ್ರಂಥವನ್ನು ರಚಿಸಿದ್ದಾನೆ. ಸಾಳ್ವನರಸಿಂಗರಾಯನ ಆಸ್ಥಾನಕವಿ ಲಿಂಗನು ಪದಗಳನ್ನೂ, ಕೃಷ್ಣದೇವನ ಕಾಲದ ಸಾಳ್ವತಿಮ್ಮನು ಬಾಲ ಭಾರತಕ್ಕೆ ಮನೋಹರ ವ್ಯಾಖ್ಯಾನವನ್ನೂ ಬರೆದಿದ್ದಾರೆ. ಬತ್ತಲೇಶನು "ರಾಮಾಯಣ"ವನ್ನೂ, ಚಂದ್ರಕವಿಯು "ವಿರೂಪಾಕ್ಷನ ಆಸ್ಥಾನ" ಮತ್ತು 'ಗುರುಮೂರ್ತಿ ಶಂಕರ ಶತಕ'ಗಳನ್ನೂ ಬರೆದಿದ್ದಾರೆ. ಮಲ್ಲಿಕಾರ್ಜುನ ರಾಯನ ಕಾಲದಲ್ಲಿ ಕಲ್ಲರಸನು 'ಜನವಶ್ಯ'ವನ್ನೂ, ವಿರೂಪಾಕ್ಷನ ಕಾಲದಲ್ಲಿ ತೋಂಟದ ಸಿದ್ಧಲಿಂಗೇಶನು "ಷಟ್ಸ್ಥಲ ಜ್ಞಾನ ಸಾರಾಮೃತ"ವನ್ನೂ ಸದಾಶಿವರಾಯನ ಆಳಿಕೆಯಲ್ಲಿ ಎಮ್ಮೆಯ ಬಸವನು ಕಾಲಜ್ಞಾನವನ್ನೂ ಪ್ರೌಢರಾಯನ ಕಾಲದಲ್ಲಿ ಮಗ್ಗೆಯ ಮಾಯಿದೇವನು ಶತಕತ್ರಯ, ಅನುಭವಸೂತ್ರ ಮೊದಲಾದ ಗ್ರಂಥಗಳನ್ನು ರಚಿಸಿದ್ದಾನೆ. ಬೊಮ್ಮರಸನು ಸೌಂದರ ಪುರಾಣ, ನೀಲಕಂಠನು ಆರಾಧ್ಯ ಚಾರಿತ್ರ, ಕುಮಾರ ವಾಲ್ಮೀಕಿಯ ತೊರವೆ ರಾಮಾಯಣ ಮೊದಲಾದ ಗ್ರಂಥಗಳು ಈ ಕಾಲದಲ್ಲಿಯೇ ಆಗಿವೆ. ಈ ಕವಿಯು ಬಿಜಾಪುರಜಿಲ್ಲೆ ತೊರವೆಯವನು. ಹಂಪೆಯಲ್ಲಿಯೂ ಇದ್ದವನು. ಹರಿಹರ ಮತ್ತು ಬುಕ್ಕರಾಯರ ಕಾಲದಲ್ಲಿ ಸಂಸ್ಕೃತ ಗ್ರಂಥಗಳಿಗೆ ಹೆಚ್ಚಿನ ಪ್ರೋತ್ಸಾಹವೂ, ಪ್ರೌಢದೇವರಾಯನ ಕಾಲದಲ್ಲಿ ಕನ್ನಡ ಗ್ರಂಥಗಳಿಗೆ ಮಿಗಿಲಾದ ಮನ್ನಣೆಯೂ, ಕೃಷ್ಣದೇವರಾಯನ ಕಾಲದಲ್ಲಿ ಕನ್ನಡ ಮತ್ತು ತೆಲುಗು ಗ್ರಂಥಗಳಿಗೆ ಸಮಸಮವಾದ ಪ್ರೋತ್ಸಾಹವೂ ಬಹುಮಟ್ಟಿಗೆ ಲಭಿಸಿವೆಯೆಂದು ನಾವು ತಿಳಿಯಬಹುದು. ಕೃಷ್ಣದೇವರಾಯನ ಆಸ್ಥಾನದಲ್ಲಿ ಪ್ರಖ್ಯಾತರಾದ ಅಷ್ಟದಿಗ್ಗಜಗಳಿದ್ದುದೂ ಈ ದಿಗ್ಗಜಗಳಲ್ಲಿ ಅಲಸಾನಿ ಪೆದ್ದನ್ನ, ಮಾದಯ್ಯಗಾರಿ ಮಲ್ಲನ್ನ, ನಂದಿ ತಿಮ್ಮನ್ನ, ಅಯ್ಯಲ ರಾಮಭದ್ರಕವಿ, ಧೂರ್ಜಟಿಕವಿ, ಪಿಂಗಳಿಸೂರಣ್ಣ ರಾಮರಾಜಭೂಷಣ, ತೆನಾಲಿ ರಾಜು, ರಾಮಕೃಷ್ಣಕವಿ ಎಂಬುವರು ಮುಖ್ಯರು. ಆಂಧ್ರ ಕವಿ ಶ್ರೇಷ್ಠನಾದ ಶ್ರೀನಾಥನಿಗೆ ಕನಕಾಭಿಷೇಕವೂ, ಅಲಸಾನಿ ಪೆದ್ದನ್ನನಿಗೆ ಪಾದಪೆಂಡೆಯವೂ ರಾಯರಿಂದ ದೊರೆತವು. ಇನ್ನು ಬಳ್ಳಾರಿಜಿಲ್ಲೆಯ ಇತರ ಭಾಗಗಳಲ್ಲಿಯೂ ತಕ್ಕಷ್ಟು ಮಂದಿ ಕನ್ನಡ ಕವಿಗಳು ಆಗಿರುವರೆಂಬುದು ಗಮನಾರ್ಹವಾಗಿದೆ. ಈ ಜಿಲ್ಲೆಯ ಚೀಕಲಮರಿ ಎಂಬಲ್ಲಿ ೧೭೩೫ರಲ್ಲಿದ್ದ

ವಿಜಯರಾಯನು ಕನ್ನಡದಲ್ಲಿ ಕೀರ್ತನಗಳನ್ನು ಬರೆದಿದ್ದಾನೆ. ಕೊಟ್ಟೂರಿನಲ್ಲಿ ೧೭೫೦ರಲ್ಲಿದ್ದ ಬ್ರಹ್ಮಕವಿ 'ವೈದ್ಯಕಂದ' ವನ್ನು ರಚಿಸಿದ್ದಾನೆ. ಕಾಲಜ್ಞಾನವನ್ನು ಬರೆದ ಎಮ್ಮೆಯ ಬಸವನು ಹೊಸಪೇಟೆಯ ಸಮೀಪದಲ್ಲಿರುವ ಜಂಬುನಾಥನ ಬೆಟ್ಟದಲ್ಲಿ ೧೫೪೩ರಲ್ಲಿ ಇದ್ದಂತೆ ತಿಳಿದುಬಂದಿದೆ. ಚೋರಬಸವ'ಚರಿತ್ರೆಯನ್ನು ಬರೆದ ಶಂಕರ ಕವಿಯು ೧೭೬೩ರಲ್ಲಿ ಬಳ್ಳಾರಿ ತಾಲ್ಲೂಕು ಕೋಳೂರಲ್ಲಿ ಇದ್ದವನು. ಬಳ್ಳಾರಿಯ ಅಕ್ಕಪಕ್ಕದಲ್ಲಿ ಪ್ರಖ್ಯಾತ ಕನ್ನಡ ಕವಿಗಳು ಆಗಿರುವರೆಂಬುದನ್ನು ಇಲ್ಲಿ ನೆನಪಿಡುವುದು ಅರ್ಹವಾಗಿದೆ.

ಈಗಿನ ಅನಂತಪುರ ಜಿಲ್ಲೆಯ ಕೊಂಡಕುಂದಿ ಗ್ರಾಮದಲ್ಲಿ ಕ್ರಿ. ಶ. ನಾಲ್ಕನೇ ಶತಮಾನದಲ್ಲಿ ಸುಪ್ರಸಿದ್ಧ ಜೈನಕುಲದ ಕುಂದಕುಂದಾಚಾರ್ಯನು ಜೀವಿಸಿದ್ದನು. ಅಲ್ಲಿ ಅನೇಕ ಕನ್ನಡ ಶಾಸನಗಳು ಕಂಗೊಳಿಸುತ್ತವೆ. ಇದೇ ಜಿಲ್ಲೆಯ ಪೆನುಗೊಂಡೆಯಲ್ಲಿ ೧೪೨೪ರಲ್ಲಿ ಜೀವಂಧರ ಚರಿತೆಯನ್ನು ಬರೆದ ಭಾಸ್ಕರಕವಿಯು ಬದುಕಿದ್ದನು. ಬಳ್ಳಾರಿಜಿಲ್ಲಾ ಹರಪನಹಳ್ಳಿಯು ಸುಪ್ರಸಿದ್ಧ ಪಂಚಾಂಗಕರ್ತರಿಗೆ ಆವಾಸಸ್ಥಾನವಾಗಿದೆ. ಹರಪನಹಳ್ಳಿ ಪಂಚಾಂಗಗಳು ಕನ್ನಡದಲ್ಲಿ ಪ್ರಖ್ಯಾತವೆನಿಸಿ ಜನಪ್ರಿಯವಾಗಿವೆ.

ಇನ್ನು ಬಳ್ಳಾರಿ ಪಟ್ಟಣದಲ್ಲಿ ದಿವಂಗತರಾದ ಅ. ರಾಘವಾಚಾರ್ಯ, ಧ. ಕೃಷ್ಣಾಚಾರ್ಯರು ಹಲವಾರು ಉತ್ತಮ ನಾಟಕಗಳನ್ನು ಬರೆದು ಪ್ರಖ್ಯಾತರಾಗಿದ್ದಾರೆ. ಕಾಳಿದಾಸನ ಮಹಾಕಾವ್ಯಗಳಾದ ರಘುವಂಶ, ಕುಮಾರಸಂಭವ ಗ್ರಂಥಗಳನ್ನು ಕನ್ನಡಕ್ಕೆ ಷಟ್ಪದಿ ಮತ್ತು ಚಂಪು ಶೈಲಿಯಲ್ಲಿ ಪರಿವರ್ತಿಸಿರುವ ಶ್ರೀ ನಾಗೇಶಶಾಸ್ತ್ರಿಗಳು ಬಳ್ಳಾರಿಯವರು. ಸುಪ್ರಸಿದ್ಧ ಕನ್ನಡ ಗಮಕಿಗಳೂ ನಾಟಕಕಾರರೂ ಆದ ಶ್ರೀ ದೊಡ್ಡನಗೌಡರು ಬಳ್ಳಾರಿಜಿಲ್ಲೆಯ ಜೋಳದ ರಾಶಿಯವರು. ಸುಪ್ರಸಿದ್ಧ ಪುರಾಣಕಾರರಾದ ಕಲಿಯುಗ ವ್ಯಾಸ ಶ್ರೀ ಸಂಗಮೇಶ್ವರ ಸ್ವಾಮಿಗಳು ಬಳ್ಳಾರಿಯವರು. ಇವರು ಕನ್ನಡ, ತೆಲುಗು ಮತ್ತು ಸಂಸ್ಕೃತ ಭಾಷೆಗಳಲ್ಲಿ ತುಂಬಾ ಬಲ್ಲಿದರಾಗಿದ್ದಾರೆ. ಬಳ್ಳಾರಿ ಜಿಲ್ಲೆಯ ಎಲ್ಲ ಭಾಗಗಳಲ್ಲಿಯೂ ಕನ್ನಡ ಬಯಲಾಟಗಳೂ ಜಾನಪದ ಗೀತಗಳೂ ಕಾಣಬರುತ್ತಿವೆ ಮತ್ತು ಕೇಳಿಬರುತ್ತಿವೆ. ಬಳ್ಳಾರಿಜಿಲ್ಲೆಯಲ್ಲಿ

ವೇದಭಾಷ್ಯಗಳು, ಮಹಾಕಾವ್ಯಗಳು, ಟೀಕಾಗ್ರಂಥಗಳು, ವಚನಶಾಸ್ತ್ರಗಳು, ದಾಸರ ಕೀರ್ತನೆಗಳು, ನಾಟಕಗಳು, ವೈದ್ಯಗ್ರಂಥಗಳು, ಕನ್ನಡ ಗ್ರಂಥಗಳು, ಸಂಸ್ಕೃತ-ಕನ್ನಡ-ತೆಲುಗು ಭಾಷಾಗ್ರಂಥಗಳು ವಿಪುಲವಾಗಿ ಹುಟ್ಟಿವೆ. 'ಸಾಹಿತ್ಯವು ಸಮಕಾಲೀನ ಜನರ ರನ್ನಗನ್ನಡಿ' ಎಂಬ ಸ್ವಾಮಿ ವಿವೇಕಾನಂದರ ಮಾತನ್ನು ಬಳ್ಳಾರಿ ಜಿಲ್ಲೆಗೆ ಅನ್ವಯಿಸಿದರೆ ಅದರ ಮಹತ್ವ ನಮಗೆ ಸುಲಭವಾಗಿ ತಿಳಿದುಬರುತ್ತದೆ.

ಈ ಮೇಲೆ ಕಂಡ ಎಲ್ಲ ನಿದರ್ಶನಗಳಿಂದ ಬಳ್ಳಾರಿ ಜಿಲ್ಲೆಯ ಮಹತ್ವವು ಎಂತಹುದೆಂಬುದನ್ನು ನಾವು ಸುಲಭವಾಗಿ ಅರಿಯಬಹುದು. ಇಂತಹ ಉತ್ತಮ ಸಂಸ್ಕೃತಿಯಿಂದ ಕೂಡಿದ ಬಳ್ಳಾರಿಯು ತನ್ನ ಮೂಲಸ್ಥಾನವಾದ ಮೈಸೂರಿಗೆ ಮರಳಿ ಸೇರುವಂತಾದುದು ಯಾವ ದೇಶಾಭಿಮಾನಿಗೆ ತಾನೆ ಸಂತೋಷವನ್ನುಂಟು ಮಾಡದೆ ಇರದು.

ನದಿಗಳ ನೀರು ಸಮುದ್ರಕ್ಕೆ ಸೇರುವುದು ಎಷ್ಟು ನ್ಯಾಯವೋ, ಕನ್ನಡ ನಾಡಿನ ಗಡಿಗಳಾದ, ಕಾಸರಗೋಡು, ತಾಳವಾಡಿ, ಹೊಸೂರು, ಮಡಕಶಿರ, ಆಢವಾನಿ, ಅಕ್ಕಲಕೋಟೆ, ಜತ್ತ, ಸೊಲ್ಲಾಪುರ ಮೊದಲಾದ ಗಡಿ ಪ್ರದೇಶಗಳು ವಿಶಾಲ ಮೈಸೂರು ಅಥವಾ ಕನ್ನಡನಾಡಿನಲ್ಲಿ ಸೇರಿಕೊಳ್ಳುವುದು ಅಷ್ಟೇ ನ್ಯಾಯ, ಅದನ್ನು ಸಾಧಿಸುವುದು ಕನ್ನಡಿಗರ ಕರ್ತವ್ಯ.

# ಬಳ್ಳಾರಿಯ ವಿಭೂತಿಗಳು

ರಾಮಾಯಣದ ವಿಭೂತಿ ಪುರುಷರಲ್ಲಿ ಅನೇಕರು ಬಳ್ಳಾರಿಯವರು ! ಎಂಬುದನ್ನು ನಾವು ಅರಿಯಬೇಕು. ಬಳ್ಳಾರಿ ಜಿಲ್ಲೆಯು ಪೌರಾಣಿಕ ದೃಷ್ಟಿಯಲ್ಲಿ, ಸಾಹಿತ್ಯ ಮತ್ತು ತೀರ್ಥ ಕ್ಷೇತ್ರಗಳ ದೃಷ್ಟಿಯಲ್ಲಿ ಕೂಡ ತನ್ನದೇ ಆದ ವೈಶಿಷ್ಟ್ಯವನ್ನು ಪಡೆದಿದೆ. ಪ್ರಕೃತದಲ್ಲಿ ಬಳ್ಳಾರಿ ಜಿಲ್ಲೆಯ ವಿಭೂತಿ ಪುರುಷರನ್ನು ಕುರಿತು ಸ್ವಾರಸ್ಯವಾಗಿ ಸಂಗ್ರಹಿಸಿ ಹೇಳಲಾಗಿದೆ.

## ಪೌರಾಣಿಕ ಕಾಲದಲ್ಲಿ

ವಾಲ್ಮೀಕಿ ಮಹರ್ಷಿಯಿಂದ ವಿರಚಿತನಾಗಿ ಆದಿ ಕಾವ್ಯವೆಂದು ಪ್ರಸಿದ್ಧವಾಗಿರುವ ರಾಮಾಯಣ ಮಹಾಕಾವ್ಯದಲ್ಲಿ ಕಿಷ್ಕಿಂಧಾಕಾಂಡದ ಸಂದರ್ಭದಲ್ಲಿ ನಾವು ಕಾಣುವ ಅನೇಕ ವಿಭೂತಿ ಪುರುಷರು ನಮ್ಮ ಬಳ್ಳಾರಿ ಜಿಲ್ಲೆಯವರು ಎಂದು ಹೇಳಿದರೆ ಹಲವರು ಇಂದಿಗೂ ಆಶ್ಚರ್ಯಪಡಬಹುದು. ಆದರೆ ಪ್ರಾಚೀನ ಕಾಲದ ಇತಿಹಾಸಗಳಲ್ಲಿ ಒಂದಾದ ರಾಮಾಯಣವು ಕೆಲವು ಮಟ್ಟಿಗೆ ನಮ್ಮ ಕರ್ಣಾಟಕಕ್ಕೂ ಅದರಲ್ಲಿಯೂ ಬಳ್ಳಾರಿಜಿಲ್ಲೆಗೂ ಸಂಬಂಧಪಟ್ಟುದಾಗಿದೆ ಎಂಬುದನ್ನು ನಾವು ಮೊದಲು ಸ್ಮರಿಸಿಕೊಳ್ಳಬೇಕು. ರಾಮಾಯಣದ ಕಿಷ್ಕಿಂಧೆಯು ಈಗ ಪಂಪಾಕ್ಷೇತ್ರದಲ್ಲಿರುವ ಆನೆಗುಂದಿ. ಆ ಮಹಾಕಾವ್ಯದಲ್ಲಿ ಅಭಿವರ್ಣಿಸಲ್ಪಟ್ಟಿರುವ ಹೇಮಕೂಟ, ಮಾಲ್ಯವಂತ, ಮತಂಗ, ಋಷ್ಯಮೂಕ ಮತ್ತು ಕಿಷ್ಕಿಂಧ ಎಂಬ ಐದು ಪರ್ವತಗಳೂ ಪಂಪಾ ಸರೋವರ, ಶಬರಿಯ ಆಶ್ರಮ, ಆಂಜನೇಯನ ಜನ್ಮಸ್ಥಳ ಮೊದಲಾದುವುಗಳೂ ಇರುವುದು ಈ ಪ್ರಾಚೀನ ಪಂಪಾಕ್ಷೇತ್ರದಲ್ಲಿಯೇ.

ರಾಮಾಯಣದಲ್ಲಿ ಶ್ರೀರಾಮನಷ್ಟೇ ಪ್ರಸಿದ್ಧನಾದ ವ್ಯಕ್ತಿ ಆಂಜನೇಯ. ಈತನ ತಾಯಿ ಅಂಜನಾ ದೇವಿ ಕಿಷ್ಕಿಂಧೆಯ ಬೆಟ್ಟದಲ್ಲಿ ವಾಸವಾಗಿದ್ದಳು. ವಾಯುದೇವರ ವರದಿಂದ ಈತ ಜನ್ಮಿಸಿದಂತೆ ಕಥೆ ಇದೆ. ಈತನು ಜನಿಸಿದ ಸ್ಥಳವನ್ನು ಕಿಷ್ಕಿಂಧೆಯ ಬೆಟ್ಟದಲ್ಲಿ ಇಂದಿಗೂ ಜನರು ತೋರಿಸುತ್ತಾರೆ.

ಅಲ್ಲಿ ರಮ್ಯವಾದ ಮಾರುತಿ ಗುಡಿಯೂ ಇದೆ. ರಾಮಾಯಣದ ಅತ್ಯಂತ ಮುಖ್ಯವಾದ ಪಾತ್ರಗಳಲ್ಲಿ ಕಿಷ್ಕಿಂಧೆಯ ರಾಜ ಸುಗ್ರೀವನೊಬ್ಬನಾಗಿದ್ದಾನೆ. ಕಿಷ್ಕಿಂಧೆ ಈಗಿನ ಆನೆಗುಂದಿ ಎಂದು ಹಿಂದೆಯೇ ಹೇಳಿದೆ. ಕಿಷ್ಕಿಂಧೆಯ ರಾಜ್ಯ ಈಗಿನ ಬಳ್ಳಾರಿಜಿಲ್ಲೆಯನ್ನೊಳಗೊಂಡಿದೆ. ಕಿಷ್ಕಿಂಧೆಯ ಪ್ರಜೆಗಳಾದ ವಾನರರು ಕನ್ನಡ ನಾಡಿನ ಮೂಲನಿವಾಸಿಗಳು. ಇವರು ಆಡುತ್ತಿದ್ದ ಮಾತು ಹಳೆಗನ್ನಡ. ಈ ಜನರ ಕುಲಕ್ಕೆ ವಾನರಕುಲ ಎಂದು ಹೆಸರು. ಈ ಜನರ ವಂಶೀಯರು ಈಗಲೂ ರಾಜಪುತ್ರ ಸ್ಥಾನದಲ್ಲಿದ್ದಾರೆ ಎಂದು ತಿಳಿದುಬಂದಿದೆ. ವಾನರ ಕುಲದ ಅರಸರಾದ ವಾಲಿ, ಸುಗ್ರೀವರು, ತಮ್ಮ ರಥಗಳ ಮೇಲೆ ಕಪಿಯ ಲಾಂಛನವನ್ನುಳ್ಳವರಾದುದರಿಂದ ಈ ಜನರಿಗೆ ಕಪಿಧ್ವಜರು ಅಥವಾ ವಾನರರು ಎಂಬ ಹೆಸರು ಬಂದಿತೆಂದು ಕೆಲವು ಮಂದಿ ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ. ರಥಗಳ ಮೇಲೆ ಕಪಿಧ್ವಜವನ್ನು ಅಲಂಕರಿಸುವ ಪದ್ಧತಿ ಮಹಾ ಭಾರತದ ಕಾಲದಲ್ಲಿಯೂ ಇತ್ತು. ವೀರನಾದ ಅರ್ಜುನನು 'ಕಪಿಧ್ವಜ'ನೆಂದು ಭಾರತದಲ್ಲಿ ಬರೆಯಲ್ಪಟ್ಟಿದೆ.

ರಾಮಾಯಣದಲ್ಲಿ ಉಕ್ತರಾಗಿರುವ ಅಂಗದ, ನಳ, ನೀಲ, ಜಾಂಬುವಂತ ಮೊದಲಾದವರೆಲ್ಲರೂ ವಾನರ ಕುಲದ ಕನ್ನಡಿಗರೆಂದು ತಿಳಿದುಬಂದಿದೆ. ಇವರೇ ಸಮುದ್ರಕ್ಕೆ ಸೇತುವೆ ಕಟ್ಟಿದ ಮಹಾಶಿಲ್ಪಿಗಳು. ಆ ಕಾಲದಲ್ಲಿ ಪ್ರಸಿದ್ಧರಾದ ಸ್ತ್ರೀಯರು ವಾಲಿಯ ಪತ್ನಿ ತಾರಾ, ಸುಗ್ರೀವನ ಪತ್ನಿ ರುಮಾ ಪ್ರಖ್ಯಾತರಾದ ಕನ್ನಡಿತಿಯರಾಗಿದ್ದಾರೆ.

ಶ್ರೀರಾಮ-ಲಕ್ಷ್ಮಣರಿಗೆ ಬದರೀ ಫಲಗಳನ್ನು(ಬೋರೆಹಣ್ಣು)ಕೊಟ್ಟು ಸತ್ಕರಿಸಿದ ಶಬರಿ ಕಿಷ್ಕಿಂಧೆಯ ಓರ್ವ ಕನ್ನಡಿತಿಯಾಗಿದ್ದಾಳೆ. ಶಬರಿಯ ಆಶ್ರಮ ಪಂಪಾ ಸರೋವರದ ಮೇಲ್ಭಾಗದಲ್ಲಿದೆ. ಶ್ರೀರಾಮನ ಪಾದದ ಗುರುತುಗಳು ಅಲ್ಲಿ ಕಂಗೊಳಿಸುತ್ತಿವೆ. ಭಾರತದ ನಾನಾ ಭಾಗಗಳಿಂದ ಪ್ರತಿದಿನವೂ ಪ್ರವಾಸಿಗಳು ಬಂದು ಕನ್ನಡಿಗರ ಮೂಲನಿವಾಸಸ್ಥಾನವಾದ ಹಂಪೆ, ಆನೆಗುಂದಿ, ಹೇಮಕೂಟ, ಮತಂಗ, ಮಾಲ್ಯವಂತ, ಋಷ್ಯಮೂಕ, ಆಂಜನೇಯಬೆಟ್ಟ (ಕಿಷ್ಕಿಂಧಾಪರ್ವತ) ಮೊದಲಾದುವುಗಳನ್ನು ದಿನವೂ ಸಂದರ್ಶಿಸಿಕೊಂಡು ಹೋಗುತ್ತಾರೆ. ಈ ಕಾರಣದಿಂದಲೇ ವಿಜಯನಗರ

ಸಾಮ್ರಾಜ್ಯ ಕಾಲದಲ್ಲಿ ಕನ್ನಡ ಕುಲಗುರುಗಳೆಂದು ಪ್ರಖ್ಯಾತರಾದ ಶ್ರೀ ವಿದ್ಯಾರಣ್ಯಸ್ವಾಮಿಗಳು ಕರ್ಣಾಟಕಾಭಿಮಾನ ದೇವತೆಯಾದ ಶ್ರೀ ಭುವನೇಶ್ವರೀ ದೇವಿಯನ್ನು ಪಂಪಾಕ್ಷೇತ್ರದಲ್ಲಿ ಸ್ಥಾಪಿಸಿದರೆಂದು ತಿಳಿದುಬಂದಿದೆ. ಈ ಮೇಲೆ ಕಂಡ ರಾಮಾಯಣಕ್ಕೆ ಸಂಬಂಧಪಟ್ಟ ವಿಷಯಗಳಿಂದ ಆಂಜನೇಯ, ಸುಗ್ರೀವ, ವಾಲಿ, ತಾರಾ, ಶಬರಿ, ನಳ, ನೀಲ ಮೊದಲಾದ ವಾನರಕುಲದ ಕನ್ನಡಿಗರು, ಪುರಾಣ ಕಾಲಕ್ಕೆ ಸೇರಿದ ಬಳ್ಳಾರಿ ಜಿಲ್ಲೆಯ ವಿಭೂತಿಗಳೆಂದು ಹೇಳಬಹುದಾಗಿದೆ.

## ಐತಿಹಾಸಿಕ ದೃಷ್ಟಿಯಿಂದ

ರಾಮಾಯಣ ಕಾಲವಾದ ಮೇಲೆ ಬಳ್ಳಾರಿ ಜಿಲ್ಲೆಯಲ್ಲಿ ನಮಗೆ ಐತಿಹಾಸಿಕವಾಗಿ ವಿಭೂತಿಗಳ ಸಂದರ್ಶನವಾಗುವುದು. ಹನ್ನೆರಡನೇ ಶತಮಾನದ ಉತ್ತರಾರ್ಧದಲ್ಲಿ. ಸುಮಾರು ೨೩೦೦ ವರ್ಷಗಳಷ್ಟಂದಿನಿಂದ ಈ ಜಿಲ್ಲೆಯ ಮೇಲೆ ಶಾತವಾಹನರು, ಗಂಗರು, ಕದಂಬರು, ಹೊಯ್ಸಳರು, ರಾಷ್ಟ್ರಕೂಟರು, ಚಾಲುಕ್ಯರು ಮೊದಲಾದ ಕನ್ನಡರಾಜರು ಅರಸುತನ ನಡೆಸಿದ್ದಾರೆ. ಹಂಪೆಯಲ್ಲಿ ಆ ಕಾಲದಲ್ಲಿ ಸುಪ್ರಖ್ಯಾತರಾದ ಮಹಾಕವಿ ಹರೀಶ್ವರ ಮತ್ತು ರಾಘವಾಂಕ ಎಂಬುವರು ಇದ್ದರು. ಈ ಉಭಯರು ಮಹಾಕವಿಗಳಲ್ಲದೆ ಮಹಾ ವಿಭೂತಿಗಳೂ ಆಗಿದ್ದರು ಎಂಬುದಕ್ಕೆ ಪುರಾಣಗಳಲ್ಲಿ ಆಧಾರವಿದೆ. ಹರಿಹರನು ಬೇಲೂರಿನ ಬಲ್ಲಾಳರಾಯನ ಆಸ್ಥಾನದಲ್ಲಿ ಕರಣಿಕರ ಕುಲತಿಲಕನಾಗಿ ಕುಳಿತಿದ್ದ ಸಮಯದಲ್ಲಿಯೇ ಹಂಪೆಯ ವಿರೂಪಾಕ್ಷನ ಗುಡಿಯಲ್ಲಿ ಗರ್ಭಗುಡಿಯ ಮುಂದಣ ತೆರೆಗೆ ಬೆಂಕಿ ಹತ್ತಿದ್ದನ್ನು ಯೋಗದೃಷ್ಟಿಯಿಂದ ತಿಳಿದು ಕುಳಿತ ಸ್ಥಳದಿಂದಲೇ ಆರಿಸಿದನು. ಅದೂ ಅಲ್ಲದೆ ಹರಿಹರನ ದೇವಾಲಯದಲ್ಲಿ ಸೇರಿದ್ದ ಭೂತವನ್ನು ಮಂತ್ರಶಕ್ತಿಯಿಂದ ಓಡಿಸಿದನು. ಹಂಪೆಯ ತುಂಗಭದ್ರಾ ತೀರದ ತನ್ನ ಆಶ್ರಮದಲ್ಲಿ ಕುಳಿತುಕೊಂಡು ಕಾವ್ಯರಚನೆಯಲ್ಲಿ ತೊಡಗಿರುವಾಗ ಅರ್ಧ ರಾತ್ರಿಯ ಸಮಯದಲ್ಲಿ ತಾನಾಗಿ ಮೋಹಿಸಿ ಬಂದ ಆಂಧ್ರದೇಶದ ಸುಂದರಿಯನ್ನು ವಿನಯದಿಂದ ತಿರಸ್ಕರಿಸಿದನು. ಇತ್ಯಾದಿ ಅನೇಕ ಮಹಿಮೆಗಳು ಹರಿಹರನ ಮಹತ್ವ ಹಾಗೂ ಪದ್ಮರಾಜ ಪುರಾಣ ಮುಂತಾದ ಗ್ರಂಥಗಳಲ್ಲಿ ನಿರೂಪಿತವಾಗಿವೆ,

ಹರಿಹರನ ಶಿಷ್ಯನಾದ ರಾಘವಾಂಕನು ಮಹಾಕವಿಯಾಗಿದ್ದಂತೆಯೇ ವಿಭೂತಿ ಪುರುಷನಾಗಿದ್ದನೆಂದೂ ತಿಳಿದುಬರುತ್ತದೆ. ಈ ರಾಘವಾಂಕನು ಓರುಂಗಲ್ಲಿನ ವಿರೇಶ್ವರನ ದೇವಾಲಯದ ಹಿಂಭಾಗದಲ್ಲಿ ನಿಂತು ತನ್ನ ನೂತನ ಗ್ರಂಥವಾದ ವಿರೇಶ ಚರಿತೆಯನ್ನು ಹಾಡಿದನೆಂದೂ ಆಗ ಶ್ರೀ ವೀರಭದ್ರನು ಪ್ರತ್ಯಕ್ಷನಾಗಿ ರಾಘವಾಂಕನಿಗೆ ಕಲ್ಲುಪದಕವನ್ನು ಅನುಗ್ರಹಿಸಿದನೆಂದೂ ಕಥೆಯಿದೆ. ತನ್ನ ಭಕ್ತಿಗೆ ಮೆಚ್ಚಿ ಪ್ರತ್ಯಕ್ಷನಾದ ಪಂಪಾವಿರೂಪಾಕ್ಷನು ತನ್ನನ್ನು ನೇರವಾಗಿ ಕೈಲಾಸಕ್ಕೆ ಕರೆದರೂ ಕೂಡ ಒಪ್ಪದೆ ಶರಣಮಾರ್ಗ ವಿಡಿದು ಗುರುಮುಖದಿಂದ ಬರುವೆನೆಂದು ಹೇಳಿದನೆಂದೂ ಒಮ್ಮೆ ಕಾಶಿಯ ಗಂಗೆಯಲ್ಲಿ ಮುಳುಗಿದ ರಾಘವಾಂಕನು ದಕ್ಷಿಣ ಕಾಶಿಯಾದ ಹಂಪೆಯ ತುಂಗಭದ್ರಾ ನದಿಯಲ್ಲಿ ಮೇಲೆ ಎದ್ದನೆಂದೂ ಇವನ ಸಂಬಂಧವಾದ ರಾಘವಾಂಕ ಕಾವ್ಯ ಮೊದಲಾದ ಗ್ರಂಥಗಳಲ್ಲಿ ಹೇಳಿದೆ. ಈ ಮೊದಲೇ ಹೇಳಿದ ಕಾರಣಗಳಿಂದ ಕನ್ನಡ ಸಾಹಿತ್ಯದಲ್ಲಿ ಮಹಾಕವಿಗಳೆಂದು ಪ್ರಖ್ಯಾತ ರಾದ ಹರಿಹರ–ರಾಘವಾಂಕರು, ಕನ್ನಡ ನಾಡಿನಲ್ಲಿ ಮಹಾ ವಿಭೂತಿಗಳೆಂದು ಕೂಡ ಪ್ರಖ್ಯಾತರಾಗಿದ್ದಾರೆ. ಈ ಉಭಯರ ಮೇಲೂ ಕಾವ್ಯಗಳು ರಚನೆ ಯಾಗಿವೆ ಎಂಬುದು ಅವರ ಮಹಿಮೆಗೆ ನಿದರ್ಶನ. ಈ ಉಭಯ ಮಹ ನೀಯರೂ ಬಳ್ಳಾರಿಜಿಲ್ಲೆಯವರು ಎಂಬುದು ಇಲ್ಲಿ ಗಮನಾರ್ಹವಾಗಿದೆ.

## ನೂತನ ಬಸವೇಶ್ವರ

ಅಲ್ಲಿಂದ ಮುಂದೆ ಬಳ್ಳಾರಿ ಜಿಲ್ಲೆಯ ಕೊಟ್ಟೂರಿನಲ್ಲಿ ಶಿವಸಮಾಧಿ ಹೊಂದಿದ ನೂತನ ಬಸವೇಶ್ವರನು ದೊಡ್ಡ ಮಹಾತ್ಮನೆನಿಸಿದ್ದಾನೆ. ಈತನ ಕಾಲ ಹದಿನಾರನೇ ಶತಮಾನ. ಈತನು ಅಕ್ಬರ್ ಬಾದಷಹನಿಗೂ ಕೂಡ ಅನೇಕ ಮಹಿಮೆಗಳನ್ನು ತೋರಿಸಿದಂತೆ ವದಂತಿ ಇದೆ. ಜನರ ರೋಗ ಗಳನ್ನು ವಾಸಿಮಾಡುವುದು, ಮಕ್ಕಳಿಲ್ಲದವರಿಗೆ ಸಂತಾನಕೊಡುವುದು, ಕುರುಡರಿಗೆ ಕಣ್ಣು ಬರಿಸುವುದು ಮೊದಲಾದ ಹಲವು ಪವಾಡವನ್ನು ಈ ಮಹಾತ್ಮನು ಮೆರೆದಂತೆ ಈತನ ಪುರಾಣದಲ್ಲಿ ಹೇಳಿದೆ. ಬಳ್ಳಾರಿ ಜಿಲ್ಲೆಯ ಹೊಸಪೇಟೆಗೆ ಮೂರು ಮೈಲಿ ದೂರದಲ್ಲಿರುವ ಜಂಬುನಾಥನ ಗುಡ್ಡದಲ್ಲಿ ಸುಮಾರು ಕ್ರಿ. ಶ. ೧೫೫೩ರಲ್ಲಿ ಎಮ್ಮೆಬಸವ ಎಂಬ ಒಬ್ಬ

ಕಾಲಜ್ಞಾನಿ ಇದ್ದನು. ಇವನಿಗೆ ತಿರುಮಲರಾಯನೆಂಬ ರಾಜನು ಕೊಮರ ಕೆರೆ ಎಂಬ ಗ್ರಾಮವನ್ನು ಜಹಗೀರಿಯಾಗಿ ಕೊಟ್ಟಂತೆ ಒಂದು ತಾಮ್ರ ಶಾಸನದಲ್ಲಿ ಹೇಳಿದೆ. ಇವನು ತನ್ನ ಯೋಗಶಕ್ತಿಯಿಂದ ಕಾಲಜ್ಞಾನವನ್ನು ಹಾಡಿದ್ದಾನೆ. ಅದರಲ್ಲಿ ಹಲವು ಮಹತ್ವದ ಸಂಗತಿಗಳಿವೆ.

ಬಳ್ಳಾರಿ ಪಟ್ಟಣದಲ್ಲಿ ಸುಮಾರು ನೂರು ವರ್ಷಗಳ ಹಿಂದೆ ಸಕ್ಕರೆ ಕರಡಪ್ಪ ಎಂಬ ಒಬ್ಬ ಮಹಾಪುರುಷನು ಆಗಿಹೋಗಿದ್ದಾನೆ. ಅವನು ತನ್ನ ಅಪಾರವಾದ ಐಶ್ವರ್ಯವನ್ನೆಲ್ಲಾ ಬಡವರಿಗೆ ಮತ್ತು ಜಂಗಮರಿಗೆ ಸಮರ್ಪಿಸಿ ಭಗವಂತನ ಅನುಗ್ರಹಕ್ಕೆ ಪಾತ್ರನಾಗಿದ್ದಾನೆ. ಇವನ ಗುರುಗಳಾದ ಶ್ರೀ ಮರಿಸ್ವಾಮಿಗಳು ಒಳ್ಳೆಯ ಯೋಗೀಶ್ವರರೆಂದೂ ಅನೇಕ ಮಹಿಮೆಗಳನ್ನು ಮೆರೆದವರೆಂದೂ ಮರಿಯೋಗೀಶ್ವರ ಪುರಾಣದಲ್ಲಿ ಹೇಳಿದೆ. ಬಳ್ಳಾರಿ ನಗರ ದಲ್ಲಿರುವ ಶ್ರೀ ಮರಿಸ್ವಾಮಿಗಳ ಮಠದಲ್ಲಿ ಸಕ್ಕರೆ ಕರಡಪ್ಪನವರ ಮತ್ತು ಅವರ ಗುರುಗಳ ಸಮಾಧಿಗಳನ್ನು ನಾವು ನೋಡಬಹುದು. ಬಳ್ಳಾರಿ ಬೆಟ್ಟದ ಬುಡದಲ್ಲಿ ಬಳ್ಳೇಶ ಮಲ್ಲಾರ್ಯನೆಂಬ ಶರಣನು ಧಾನ್ಯಗಳನ್ನು ಅಳೆಯುವ ಬಳ್ಳವನ್ನೇ ಶಿವಲಿಂಗವಾಗಿ ಪೂಜಿಸಿ ದೇವರನ್ನು ಪ್ರತ್ಯಕ್ಷ ಮಾಡಿ ಕೊಂಡಂತೆ ಕತೆ ಇದೆ. ಈಗಲೂ ಬಳ್ಳಾರಿಯ ಬೆಟ್ಟದ ಬುಡದಲ್ಲಿ ಆ ಗುಡಿ ಯನ್ನು ನಾವು ನೋಡಬಹುದು.

ಬಳ್ಳಾರಿ ಜಿಲ್ಲೆಯ ಚೇಳ್ಳಗುರ್ಕಿ ಎಂಬ ಗ್ರಾಮದಲ್ಲಿ ಎರ್ರಿತಾತ ಎಂಬ ಒಬ್ಬ ಮಹಾತ್ಮರ ಶಿವಯೋಗ ಸಮಾಧಿ ಇದೆ. ಇವರು ಸುಮಾರು ನೂರ ಐವತ್ತು ವರ್ಷಗಳ ಹಿಂದೆ ಇದ್ದಂತೆ ಕಂಡುಬಂದಿದೆ. ಇವರು ಸತ್ತ ಎಮ್ಮೆಯ ಕರುವನ್ನು ಬದುಕಿಸಿದರು. ನದಿ ಪ್ರವಾಹದಲ್ಲಿ ಅಚಲವಾಗಿ ಕುಳಿತಿದ್ದರು. ಯೋಗಶಕ್ತಿಯಿಂದ ಹಲವರ ರೋಗರುಜಿನಗಳನ್ನು ಪರಿಹರಿಸಿದರು. ಇತ್ಯಾದಿ ಹಲವು ಪವಾಡಗಳು ಆ ಜನರ ಬಾಯಲ್ಲಿ ಪರಂಪರೆಯಾಗಿ ಕೇಳಿಬರುತ್ತವೆ. ಈ ಮೇಲೆಕಂಡ ಸಕ್ಕರೆಕರಡಪ್ಪನವರು, ಮರಿಯೋಗೀಶ್ವರರು, ಎಮ್ಮೆ ಬಸವಣ್ಣನವರು ಮೊದಲಾದ ಮಹಿಮಾಶಾಲಿಗಳೆಲ್ಲರೂ ಬಳ್ಳಾರಿ ಜಿಲ್ಲೆಯ ವಿಭೂತಿಗಳೆಂದು ಪರಿಗಣಿಸಲ್ಪಟ್ಟಿದ್ದಾರೆ. ಉಜ್ಜಯನಿಯ ಧರ್ಮಸಿಂಹಾಸನದ ಪರಂಪರೆಯಲ್ಲಿಯೂ, ಶ್ರೀ ಕಾನಾಮಡು ಮಠದ ಶರಣರ ಪರಂಪರೆಯಲ್ಲಿಯೂ

ಅನೇಕಮಂದಿ ಮಹಾಪುರುಷರು ಆಗಿಹೋಗಿದ್ದಾರೆ. ಇಂದಿಗೂ ಈ ಹೆಸರುಗಳು ಅಲ್ಲಿ ಮನೆಮಾತಾಗಿವೆ.

ಇನ್ನು ಜನ್ಮತಃ ಬಳ್ಳಾರಿ ಜಿಲ್ಲೆಯವರಲ್ಲದಿದ್ದರೂ ಹಕ್ಕ-ಬುಕ್ಕರ ಕಾಲದ ಸಾಯಣಾಚಾರ್ಯ ಮತ್ತು ಮಾಧವಾಚಾರ್ಯರೂ, ಪ್ರೌಢ ದೇವರಾಯನ ಕಾಲದ ೧೦೧ ವಿರಕ್ತರೂ, ಗುಬ್ಬಿಯ ಮಲ್ಲಣಾರ್ಯ, ಸ್ವತಂತ್ರ ಸಿದ್ಧಲಿಂಗೇಶ್ವರ, ಗುಮ್ಮಳಾಪುರದ ಸಿದ್ಧಲಿಂಗಯತಿ, ಕಲ್ಲುಮಠದ ಪ್ರಭುದೇವರು, ವೀರಣ್ಣ ಒಡೆಯರು, ಮಹಾಲಿಂಗ ದೇಶಿಕರು, ಜಕ್ಕಣಾಚಾರ್ಯರು ಮೊದಲಾದ ಶಿವಶರಣರೂ, ಶ್ರೀ ಕೃಷ್ಣದೇವರಾಯನ ಕಾಲದ ಶ್ರೀ ವ್ಯಾಸರಾಯಸ್ವಾಮಿಗಳು, ಪುರಂದರದಾಸರು, ಕನಕದಾಸರು, ವಾದಿರಾಜ ಸ್ವಾಮಿಗಳು ಮೊದಲಾದ ಮಹಿಮಾಶಾಲಿಗಳೂ ಈ ಜಿಲ್ಲೆಯ ಪ್ರಖ್ಯಾತ ಸ್ಥಳವಾದ ಪಂಪಾಕ್ಷೇತ್ರ ಮತ್ತು ವಿಜಯನಗರಗಳಿಂದ ಧಾರ್ಮಿಕ ಸ್ಫೂರ್ತಿಯನ್ನು ಪಡೆದವರಾಗಿದ್ದಾರೆ. ಈಗಲೂ ಬಳ್ಳಾರಿ ಜಿಲ್ಲೆಯಲ್ಲಿ ಅನೇಕ ಮಂದಿ ಪ್ರಖ್ಯಾತರಾದ ಮಹರ್ಷಿಯರು ಇದ್ದಾರೆ. ಆಂಜನೇಯನಂಥ ಮಹಾತ್ಮನು ಹುಟ್ಟಿದ ಕಿಷ್ಕಿಂಧೆ, ವಿದ್ಯಾರಣ್ಯರು ಸುವರ್ಣ ವೃಷ್ಟಿಯನ್ನು ಕರೆದ ವಿಜಯನಗರ, ಮಹಾಮಹಿಮರಾದ ನೂತನ ಬಸವೇಶ್ವರರ ತಪೋಭೂಮಿಯಾದ ಕೊಟ್ಟೂರು, ಅಗಸ್ತ್ಯ ಮಹರ್ಷಿಗಳ ಪದವಿನ್ಯಾಸದಿಂದ ಪುನೀತವಾದ ಸೊಂಡೂರು, ಎಮ್ಮೆಬಸವನ ಕಾಲಜ್ಞಾನದಿಂದ ಕೀರ್ತಿಶಾಲಿ ಎನಿಸಿದ ಜಂಬುನಾಥ, ಎರ್ರಿತಾತನವರ ಪವಾಡಗಳಿಂದ ವಿಖ್ಯಾತವಾದ ಚೇಳ್ಳಕುರಿಕೆ, ಮರುಳಸಿದ್ಧರ ಯೋಗಭೂಮಿಯಾದ ಉಜ್ಜಯಿನಿ, ಅನೇಕ ವೀರಧೀರರ ಪವಿತ್ರ ರಕ್ತದಿಂದ ಪುನೀತವಾದ ದೊಡ್ಡಬಸವೇಶ್ವರನ ದಿವ್ಯ ಸ್ಥಾನ ಕುರುಗೋಡು, ಹಲವಾರು ತಪಸ್ವಿಗಳಿಂದ ಅಲಂಕೃತವಾದ ಉಜ್ಜಯಿನಿ ಧರ್ಮಸಿಂಹಾಸನ ಮಠ, ಶರಣರ ದಾಸೋಹ ಸ್ಥಾನವಾದ ಕಾನಾಮಡು, ತೀರ್ಥಕ್ಷೇತ್ರಗಳಾದ ಕುರುವತ್ತಿ ಹಾಗೂ ಮೈಲಾರ ಇತ್ಯಾದಿ ಮಹಿಮಾನ್ವಿತ ಸ್ಥಳಗಳಿಂದಲೂ ತುಂಗಭದ್ರಾ ಅಣೆಕಟ್ಟಿನಂತಹ ಸುಂದರ ಸನ್ನಿವೇಶಗಳಿಂದಲೂ ಕಂಗೊಳಿಸುವ ಬಳ್ಳಾರಿ ಜಿಲ್ಲೆಯು ಮಹಾ ವಿಭೂತಿಗಳ ಜನ್ಮಸ್ಥಳವಾಗಲು ನಿಜವಾಗಿಯೂ ಅರ್ಹವಾಗಿಯೇ ಇದೆ.

# ತುಮಕೂರು ಜಿಲ್ಲೆಯ ಮಹತ್ವ

ದಿನಾಂಕ ೨೭-೧-೧೯೫೬ರಲ್ಲಿ ತುಮಕೂರಿನಲ್ಲಿ ತಮಗೊಪ್ಪಿಸಿದ ಮಾನಪತ್ರಕ್ಕೆ ಪ್ರತ್ಯುತ್ತರವಾಗಿ ವೇ॥ ಬಿ. ಶಿವಮೂರ್ತಿಶಾಸ್ತ್ರಿಗಳು "ತುಮಕೂರು ಜಿಲ್ಲೆಯ ಮಹತ್ವ" ಎಂಬ ವಿಷಯವನ್ನು ಕುರಿತು ನಿರೂಪಿಸಿದ ಭಾಷಣದ ಸಂಗ್ರಹ.

ತುಮಕೂರು ಪಟ್ಟಣ ಮತ್ತು ತುಮಕೂರು ಜಿಲ್ಲೆಯ ವಿಷಯದಲ್ಲಿ ನನಗೆ ಅಪಾರವಾದ ವಾತ್ಸಲ್ಯವಿದೆ. ಯುಗಪುರುಷರಾದ ಮಹಾತ್ಮಾ ಗಾಂಧಿಯವರು ೧೯೩೭ರಲ್ಲಿ ತುಮಕೂರಿಗೆ ಬಂದಿದ್ದಾಗ ನಾನು ಅದರ ಸವಿನೆನಪಿಗಾಗಿ "ಗಾಂಧಿ ಮಹಾತ್ಮನ ತತ್ವಬೋಧೆ" ಎಂಬ ಪದ್ಯಗ್ರಂಥವನ್ನು ಬರೆದು ಒಪ್ಪಿಸಿದ್ದೇನೆ. ೧೯೪೦ನೆಯ ವರ್ಷದಲ್ಲಿ ದಿವಂಗತರಾದ ರಾಜರ್ಷಿ ನಾಲ್ವಡಿ ಶ್ರೀ ಕೃಷ್ಣರಾಜೇಂದ್ರ ಒಡೆಯರು ತುಮಕೂರಿಗೆ ಆಗಮಿಸಿದ್ದಾಗ ನಾನು ನಾಗರಿಕರ ಪರವಾಗಿ "ನಾಲ್ವಡಿ ಕೃಷ್ಣರಾಜ ವಿಲಾಸಂ" ಎಂಬ ಚಂಪೂ ಗ್ರಂಥವನ್ನು ಬರೆದು ಪ್ರಭುವರ್ಯರ ಸನ್ನಿಧಿಗೆ ಒಪ್ಪಿಸಿದ್ದೇನೆ. ಮತ್ತೆ ಅದೇ ಪ್ರಭುಗಳು ೧೯೩೯ರಲ್ಲಿ ತುಮಕೂರಿಗೆ ಬಂದಿದ್ದಾಗ ನಾನು ನಗರಸಭೆಯ ಪರವಾಗಿ "ನವರತ್ನ ಮಾಲಿಕೆ"ಯನ್ನು ಬರೆದು ಅವರ ಸನ್ನಿಧಿಗೆ ಒಪ್ಪಿಸಿದ್ದೇನೆ.

ಅದೇ ಕಾಲದಲ್ಲಿ ನಮ್ಮ "ಸ್ವತಂತ್ರ ಕರ್ಣಾಟಕ" ವಾರಪತ್ರಿಕೆಯಲ್ಲಿ ತುಮಕೂರು ಜಿಲ್ಲೆಯ ಮಹತ್ವ ಮತ್ತು ಐತಿಹ್ಯಗಳನ್ನು ಕುರಿತು ಲೇಖನಗಳನ್ನೂ ಚಿತ್ರಗಳನ್ನೂ ಪ್ರಕಟಿಸಿದ್ದೇನೆ. ತುಮಕೂರು ಕರ್ಣಾಟಕ ಸಂಘ, ಕಳೆದ ವರ್ಷ ತುಮಕೂರಿನಲ್ಲಿ ನಡೆದ ಅಖಿಲ ಭಾರತ ವೀರಶೈವ ಮಹಾಸಭೆ ಮೊದಲಾದವುಗಳಿಗೆಲ್ಲ ನಾನು ಅಳಿಲು ಭಕ್ತಿಯನ್ನು ಸಮರ್ಪಿಸಿರುವುದು ತಮಗೆಲ್ಲ ವಿದಿತವೇ ಆಗಿದೆ. ಆದರೆ ಇದುವರೆಗೆ ನಾನು ಹೇಳಿಕೊಂಡುದೆಲ್ಲ ಮಹತ್ತರವಾದ ಸೇವೆಯೆಂದು ನಾನು ಭಾವಿಸಿಕೊಂಡಿಲ್ಲ. ಆದರೆ

ಆ ವಿಷಯದಲ್ಲಿ ನನ್ನ ಮನಸ್ಸಿನಲ್ಲಿದ್ದ, ಈಗಲೂ ಇರುವ ತುಮಕೂರಿನ ಮೇಲಿರುವ ಮಮತೆ ಅಪಾರವಾದುದು ಎಂಬುದಿಷ್ಟೇ ನನ್ನ ಹೃದ್ಗತ. ಆದರೆ ನಾನು ತುಮಕೂರಿನವರಿಗೆ ಮಾಡಿದ ಸೇವೆಗಿಂತ ತುಮಕೂರಿನ ಮಹನೀಯರು ನನಗೆ ಮಾಡಿದ ಉಪಕಾರವು ಶತಾಧಿಕವೆಂದು ಮಾತ್ರ ನಾನು ಇಲ್ಲಿ ವಿನಯದಿಂದ ವಿಜ್ಞಾಪಿಸಬೇಕಾಗಿದೆ.

ಈ ಸುಸಂದರ್ಭದಲ್ಲಿ ನಾನು ತುಮಕೂರು ಪಟ್ಟಣ ಮತ್ತು ಜಿಲ್ಲೆಯ ವಿಷಯವಾಗಿ ತಿಳಿದುಕೊಂಡಿರುವ ಕೆಲವು ಹೃದಯಂಗಮವಾದ ಸಂಗತಿಗಳನ್ನು ಮಹಾಜನರಲ್ಲಿ ಅರಿಕೆಮಾಡಿಕೊಳ್ಳಲು ಬಯಸುತ್ತೇನೆ. ಭರತಖಂಡದಲ್ಲಿ ಕರ್ಣಾಟಕವು ಹೇಗೆ ಪ್ರಧಾನವೋ ಕರ್ಣಾಟಕದಲ್ಲಿ ತುಮಕೂರು ಜಿಲ್ಲೆ ಅಷ್ಟೇ ಪ್ರಧಾನವಾದುದೆಂದು ಹೇಳಬಹುದು. ಈ ಜಿಲ್ಲೆಯು ಕರ್ಣಾಟಕದ ಮಧ್ಯಭಾಗವಾಗಿದೆ. ಇದರ ಹವ ಪರಿಶುದ್ಧವಾಗಿದೆ. ಭೂಮಿ ಫಲಪ್ರದವಾಗಿದೆ. ಇಲ್ಲಿ ಉತ್ತಮವಾದ ಧಾನ್ಯ, ಹಣ್ಣು-ಹಂಪಲುಗಳು ಚೆನ್ನಾಗಿ ಬೆಳೆಯುತ್ತವೆ. ಈ ಜಿಲ್ಲೆ ತೆಂಗಿನಮರಕ್ಕೆ ಪ್ರಸಿದ್ಧವಾದುದರಿಂದ ಕಲ್ಪವೃಕ್ಷದ ಭೂಮಿ ಎನಿಸಿಕೊಂಡಿದೆ.

ವೃಕ್ಷರಾಜ ಗಂಧವೂ ಇಲ್ಲಿ ಬೆಳೆಯುವುದುಂಟು. ದೇವರಾಯನ ದುರ್ಗ ಮತ್ತು ಸಿದ್ಧರಬೆಟ್ಟಗಳು ಗಿಡಮೂಲಿಕೆಗಳಿಗೆ ಪ್ರಸಿದ್ಧವಾಗಿವೆ. ಜಯಮಂಗಲಾ, ಕದಂಬ ಮತ್ತು ನಾಗಿಣೀನದಿಗಳು ಈ ಜಿಲ್ಲೆಯಲ್ಲಿ ಹುಟ್ಟಿ ಹರಿಯುತ್ತವೆ. ಮಧುಗಿರಿ, ಮಿಡಿಗೇಶಿ, ಹುಲಿಯೂರುದುರ್ಗ, ಉತ್ತರಿ ದುರ್ಗ ಮೊದಲಾದವು ಈ ಜಿಲ್ಲೆಯ ಐತಿಹಾಸಿಕವಾದ ಬೆಟ್ಟಗಳು. ಸಿದ್ಧಗಂಗೆ, ಬಸದಿಬೆಟ್ಟ, ಎಡೆಯೂರು, ಕಗ್ಗೆರೆ, ಗುಬ್ಬಿ, ಕುಪ್ಪೂರುಗದ್ದಿಗೆ, ಎಳೆನಡುವಿನ ಸಿದ್ಧರಾಮೇಶ್ವರ, ದೇವರಾಯನದುರ್ಗ ಮತ್ತು ಸೀಬಿ ಎಂಬಿವು ಈ ಜಿಲ್ಲೆಯ ಪುಣ್ಯ ಕ್ಷೇತ್ರಗಳು. ಮಿಡಗೇಶಿಯಲ್ಲಿ ಮಲ್ಲಮ್ಮನೆಂಬ ಪತಿವ್ರತೆಯು ಸಹಗಮನ ಮಾಡಿದ ವಿಷಯ ಚರಿತ್ರೆಯಲ್ಲಿ ಪ್ರಸಿದ್ಧವಾಗಿದೆ. ಸಿದ್ಧಗಂಗೆಯು ಶ್ರೀ ಗೋಸಲಸಿದ್ಧೇಶ್ವರನ ತಪೋಭೂಮಿ. ಸಿದ್ಧರಬೆಟ್ಟವು ಆ ಮಹಾತ್ಮರ ಸಮಾಧಿಸ್ಥಳ. ಗುಬ್ಬಿಯು ಅಮರಗೊಂಡವೆಂದು ಚರಿತ್ರೆಯಲ್ಲಿ ಪ್ರಸಿದ್ಧವಾಗಿದ್ದು ಗೋಸಲ ಚೆನ್ನಬಸವೇಶ್ವರನೆಂಬ ಮಹಾತ್ಮನ ಸಮಾಧಿಸ್ಥಲವಾಗಿ

ಪುಣ್ಯ ಕ್ಷೇತ್ರವೆನಿಸಿದೆ. ಸುಪ್ರಸಿದ್ಧ ತೋಂಟದಾರ್ಯರಿಗೆ ಕಗ್ಗೆರೆಯು ತಪೋ ಭೂಮಿಯಾಗಿಯೂ, ಎಡೆಯೂರು ಅವರ ಸಮಾಧಿಸ್ಥಳವಾಗಿಯೂ ಇದೆ. ಅದು ನಿಮಿತ್ತವೇ ಅದು ಸುಕ್ಷೇತ್ರವೆನಿಸಿದೆ. ಕಗ್ಗೆರೆಯ ನಾಗಿಣೀನದಿಯಲ್ಲಿ ಸ್ನಾನಮಾಡಲು ನೃಗಚಕ್ರವರ್ತಿಯ ಕುಷ್ಠರೋಗ ಹೋಯಿತೆಂದು ಪುರಾಣ ಗಳಲ್ಲಿ ಕಥೆಯಿದೆ. "ತುರುವೇಕೆರೆಯ ಪಕ್ಕದ ಹಳೇ ತಂಡುಗ ಗ್ರಾಮದಲ್ಲಿ ಶಕಪುರುಷ ಶಾಲಿವಾಹನನು ಹುಟ್ಟಿದನು. ಗುಬ್ಬಿ ತಾಲ್ಲೂಕು ಸಂಪಿಗೆಯಲ್ಲಿ ಸುಧನ್ವನು ರಾಜ್ಯಭಾರ ಮಾಡಿದನು. ದಂಡಕಾರಣ್ಯಕ್ಕೆ ಬಂದಿದ್ದ ಶ್ರೀರಾಮಚಂದ್ರನ ಅಪ್ಪಣೆಯಂತೆ ಕಡಬದಕೆರೆ ಕಟ್ಟಲ್ಪಟ್ಟಿತು. ಸಿದ್ಧಗಂಗಾ ಬೆಟ್ಟದ ಪಕ್ಕದ ರಾಮದೇವರ ಬೆಟ್ಟದಲ್ಲಿ ರಾಮ-ಲಕ್ಷ್ಮಣರು ಕೆಲದಿವಸ ವಾಸಮಾಡಿದರು. ತುಮಕೂರು ಪಕ್ಕದ ಕೈದಾಳವು ಜಕಣಾಚಾರಿಯ ಜನ್ಮಭೂಮಿ ಎಂಬ ದಂತಕಥೆ ಪ್ರಸಿದ್ಧವಾಗಿದೆ. ಅಲ್ಲಿ ಅವನು ಕಟ್ಟಿದ ಕೇಶವಸ್ವಾಮಿ ದೇವಾಲಯವುಂಟು. ಅದಕ್ಕೆ ಸಂಸ್ಕೃತದಲ್ಲಿ ಕೃತಪುರವೆಂದು ಹೆಸರು. ದೇವರಾಯನ ದುರ್ಗದಲ್ಲಿರುವ ಗುಡಿಯು ಮೈಸೂರಿನ ಪ್ರಸಿದ್ಧ ಚಿಕ್ಕದೇವರಾಜರ ಕಾಲದಲ್ಲಿ ಕಟ್ಟಿದ್ದು. ಸುಪ್ರಸಿದ್ಧ ಹೈದರಲ್ಲಿಗೆ ೧೭೬೧ರಲ್ಲಿ ಸೀರ್ಯದಲ್ಲಿ ಇದ್ದಾಗ ಮೈಸೂರರಸರಿಂದ 'ನವಾಬ್' ಎಂಬ ಬಿರುದು ಕೊಡ ಲ್ಪಟ್ಟಿತು. ಸಿರಾದಲ್ಲಿದ್ದ ಖಾಸ್‌ಬಾಗ್ ನೋಡಿ ಬೆಂಗಳೂರಿನ ಲಾಲ್‌ಬಾಗ್ ನಿರ್ಮಿತವಾಯಿತು. ಸೀರ್ಯದ ಕೋಟೆಯ ಮಾದರಿಯಲ್ಲಿ ಬೆಂಗಳೂರು ಕೋಟೆಯನ್ನು ಕಟ್ಟಿದರು. ಜಿಲ್ಲೆಯ ಕೆಲವು ಭಾಗಗಳಲ್ಲಿ ಉತ್ತರ ಪಿನಾಕಿನೀ ನದಿ ಹರಿಯುತ್ತಿದೆ. ಇತ್ಯಾದಿ ವಿಷಯಗಳು ಈ ಜಿಲ್ಲೆಯ ಹಿರಿಮೆಗೆ ನಿದರ್ಶನವಾಗಿವೆ.

ತುಮಕೂರು ಜಿಲ್ಲೆಯ ಭೂಗರ್ಭದಲ್ಲಿ ಚಿನ್ನ, ಕಬ್ಬಿಣ ಸಿಕ್ಕುತ್ತವೆ. ಕೊರಟಗೆರೆ, ಮಧುಗಿರಿ, ಪಾವಗಡ ಮುಂತಾದ ಕಡೆ ಕೆಂಪು ರತ್ನ ಸಿಕ್ಕುತ್ತದೆ. ಕೆಲವು ಕಡೆ ಮ್ಯಾಂಗನೀಸ್ ಸಿಕ್ಕುತ್ತದೆ. ಲೋಹಗಳಲ್ಲಿ ಶ್ರೇಷ್ಠವಾದ ಚಿನ್ನ, ರತ್ನಗಳಲ್ಲಿ ಆಕರ್ಷಕವಾದ ಕೆಂಪು, ವೃಕ್ಷಗಳಲ್ಲಿ ಶ್ರೇಷ್ಠವಾದ ಗಂಧ ಮತ್ತು ತೆಂಗು ಈ ಜಿಲ್ಲೆಯಲ್ಲಿರುವದರಿಂದ ಇದು ಪುಣ್ಯಭೂಮಿ ಎಂಬುವುದರಲ್ಲಿ ಅನುಮಾನವಿಲ್ಲ. ಕೆಲವು ಕಡೆ ಭೂಮಿಯಲ್ಲಿ ಬಳಪದಮಣ್ಣು, ಸ್ಲೇಟುಕಲ್ಲು,

ಕೆಂಗಲ್ಲು, ಕಪ್ಪುಕಲ್ಲು ಸಿಗುತ್ತವೆ. ಭೂಗರ್ಭಶಾಸ್ತ್ರದ ಪ್ರಕಾರ ತುಮಕೂರು ಜಿಲ್ಲೆಯಲ್ಲಿ ಭೂಕಂಪವಾಗುವದಿಲ್ಲ. ಈ ಜಿಲ್ಲೆಯ ಬೆಟ್ಟಗಳು ಕೋಟಿಗಟ್ಟಲೆ ವರ್ಷಗಳಷ್ಟು ಪ್ರಾಚೀನವಾದವು. ಶ್ರೀ ಸಿದ್ಧಗಂಗಾಕ್ಷೇತ್ರದ ಅನ್ನದಾನ, ವಿದ್ಯಾದಾನಗಳೂ, ಅಲ್ಲಿನ ಶ್ರೀಗಳ ಭೂತದಯೆ ಮತ್ತು ಕರ್ಮಯೋಗವೂ ತುಮಕೂರು ಜಿಲ್ಲೆಗೆ ಗೌರವವನ್ನುಂಟುಮಾಡಿದೆ. ಈ ಸಂಗತಿಗಳೆಲ್ಲ ತುಮಕೂರು ಜಿಲ್ಲೆಯ ಹಿರಿಮೆಗೆ ನಿದರ್ಶನವಲ್ಲವೆ ?

ಇನ್ನು ಐತಿಹಾಸಿಕ ದೃಷ್ಟಿಯಿಂದ ಈ ಜಿಲ್ಲೆಯು ತಲಕಾಡಿನ ಗಂಗರು, ಬೇಲೂರಿನ ಹೊಯ್ಸಳರು, ನೊಳಂಬರು, ಚಾಲುಕ್ಯರು, ವಿಜಯನಗರದವರು, ಬಿಜಾಪುರದವರು ಮತ್ತು ಮೊಗಲರು ಇವರ ಆಳ್ವಿಕೆಗೆ ಒಳಪಟ್ಟಿದ್ದಿತು. ಕಡೆಗೆ ಇದು ಚಿಕ್ಕದೇವರಾಜರ ಕಾಲದಲ್ಲಿ ಮೈಸೂರೊಡೆಯರಿಗೆ ಸೇರಿತು.

ಗಂಗರಾಜನಾದ ಮಾರಸಿಂಹನು ಈ ಊರನ್ನು ಕಟ್ಟಿದನು. (ಸು. ಕ್ರಿ. ಶ. ೯೭೦) ಇದಕ್ಕೆ ಮೊದಲು "ತುಮ್ಮೇ ಗುರು, ತುಂಬೆ ಗುರು" ಎಂಬ ಹೆಸರುಗಳಿದ್ದು ಈಚೆಗೆ ತುಮಕೂರಾಯಿತು. ತುಮಕೂರು ಪ್ರದೇಶದಲ್ಲಿ ಗಂಗರ ಶಿಲಾಶಾಸನಗಳು ಬಹಳವಾಗಿವೆ. ಹದಿನೈದನೆಯ ಶತಮಾನದಲ್ಲಿ ಭಗವಾನ್ ತೋಂಟದ ಸಿದ್ಧಲಿಂಗೇಶ್ವರನು ಈ ಊರಿನ ವೀರಶೈವರ ಪ್ರಾರ್ಥನೆಯಂತೆ ಇಲ್ಲಿಗೆ ಬಂದು ಕೆಲಕಾಲ ನೆಲಸಿದ್ದನೆಂದೂ ಅಲ್ಲಿಂದ ಮುಂದೆ ಗೂಳೂರು, ನಾಗವಲ್ಲಿ, ಹೆಬ್ಬೂರುಗಳ ಮಾರ್ಗವಾಗಿ ಕಗ್ಗೆರೆಗೆ ತಪಸ್ಸಿಗಾಗಿ ಪ್ರಯಾಣ ಮಾಡಿದನೆಂದೂ ಸಿದ್ಧೇಶ್ವರ ಪುರಾಣದಲ್ಲಿ ಹೇಳಿದೆ. ಆಗ ತುಮಕೂರಿನಲ್ಲಿ ಪ್ರಭುಶೆಟ್ಟಿ ಎಂಬ ಓರ್ವ ವೀರಶೈವ ಭಕ್ತನು ಭಕ್ತಿಯಿಂದ ಶ್ರೀ ತೋಂಟದಾರ್ಯರ ಅನುಗ್ರಹಕ್ಕೆ ಪಾತ್ರನಾದನೆಂದೂ ಅದೇ ಪುರಾಣದಲ್ಲಿ ಹೇಳಿದೆ. ಆದುದರಿಂದ ಈ ಊರಿನಲ್ಲಿ ಸುಮಾರು ನಾಲ್ಕು ಶತಮಾನಗಳಿಂದ ವೀರಶೈವ ಸಮಾಜವು ಅತ್ಯಂತ ಖ್ಯಾತಿಯಿಂದ ಬಾಳಿದೆ ಎಂದು ಸಿದ್ಧಾಂತವಾಗುತ್ತದೆ. ತುಮಕೂರು ಕೋಟೆಯಲ್ಲಿರುವ ಸಿದ್ಧ ಲಿಂಗೇಶ್ವರ ದೇವಾಲಯವು ಆ ಮಹಾತ್ಮರು ವಾಸಮಾಡಿದ ಸ್ಥಳವೆಂದೂ. ಅನಂತರ ಅಲ್ಲಿ ದೇವಾಲಯವು ನಿರ್ಮಾಣವಾಯಿತೆಂದೂ ಹೇಳಬಹುದಾಗಿದೆ. ತುಮಕೂರು

ಪೇಟೆಯಲ್ಲಿರುವ ಕರಿಬಸವ ಸ್ವಾಮಿಗಳ ಮಠದಲ್ಲಿರುವ ಗದ್ದಿಗೆ ಕರಿಸಿದ್ಧೇಶ್ವರ ನದಾಗಿರಬಹುದು.

ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕು ಹಾಗಲ್ವಾಡಿಯಲ್ಲಿ ಮತ್ತು ಮಧುಗಿರಿ ತಾಲ್ಲೂಕು ಬಿಜ್ಜಾವರದಲ್ಲಿ ಎರಡು ವೀರಶೈವ ರಾಜ ಮನೆತನಗಳು ಆಳಿ ಬಾಳಿವೆ. ಹಾಗಲ್ವಾಡಿಯ ಅರಸರಲ್ಲಿ ಮುದಿಯಪ್ಪನಾಯಕನು ಅತ್ಯಂತ ಪ್ರಸಿದ್ಧನು. ಈತನು ರಾಜರ್ಷಿಯೆಂದು ಪ್ರಖ್ಯಾತನು. ಚಿಕ್ಕನಾಯಕನ ಹಳ್ಳಿ ಈ ರಾಜರ ಕಾಲದಲ್ಲಿ ಕಟ್ಟಿದ್ದು. ಈ ರಾಜರು ಕ್ರಿ. ಶ. ೧೪೭೮ ರಿಂದ ೧೭೫೯ರ ವರೆಗೆ ರಾಜ್ಯಭಾರ ಮಾಡಿದ್ದಾರೆ. ಈ ರಾಜ್ಯಸ್ಥಾಪಕ ಎರಿಮಾದನಾಯಕ. ೧೭೫೯ರಲ್ಲಿ ಹೈದರಲ್ಲಿ ಖಾನನಿಂದ ಈ ಸಂಸ್ಥಾನವು ಆಕ್ರಮಿಸಲ್ಪಟ್ಟಿತು. ಹಾಗಲ್ವಾಡಿಯ ಮುದ್ದುವೀರಪ್ಪ ನಾಯಕನು ೧೭೫೨ ರಲ್ಲಿ ಮೊಗಲರ ದಿಲಾವರ್ ಖಾನನನ್ನು ಯುದ್ಧದಲ್ಲಿ ಸೋಲಿಸಿ ಆತನಿಂದ ರಾಜಾಜಂಗ್ ಬಹದ್ದೂರ್ ಎಂಬ ಬಿರುದನ್ನು ಪಡೆದುಕೊಂಡನು ಎಂಬುದು ಸ್ಮರಣಾರ್ಹವಾದುದು. ಇನ್ನು ಮಧುಗಿರಿ ಪಕ್ಕದ ಬಿಜ್ಜಾವರ ಸಂಸ್ಥಾನವೂ, ಅಲ್ಲಿ ಆಳಿದ ತೋಂಟದ ಸಿದ್ಧಲಿಂಗ ಭೂಪಾಲ, ಮುಮ್ಮಡಿ ಚಿಕ್ಕ ಭೂಪಾಲ ಎಂಬ ಅರಸರೂ ಅತ್ಯಂತ ಪ್ರಸಿದ್ಧರು. ಇವನ ಆಸ್ಥಾನದಲ್ಲಿ ಹಲವು ಕನ್ನಡ ಸಂಸ್ಕೃತ ಕವಿಗಳು ಆಗಿಹೋಗಿದ್ದಾರೆ. ಇವನ ಕಾಲದಲ್ಲಿ ಬರೆದ 'ತೋಂಟದ ರಾಯನ ಸಾಂಗತ್ಯ' ಎಂಬ ತಾಳೆಯೋಲೆಯ ಗ್ರಂಥವು ಇದೆ. ಚಿಕ್ಕ ಭೂಪಾಲನು ಸಂಸ್ಕೃತದಲ್ಲಿ 'ಅಭಿನವ ಭರತಸಾರ ಸಂಗ್ರಹ' ಎಂಬ ಗ್ರಂಥ ಬರೆದಿದ್ದಾನೆ. ಈ ರಾಜರ ಗುರುವಿರಕ್ತ ತೋಂಟದಾರ್ಯರು.

ತುಮಕೂರು ಜಿಲ್ಲೆಯು ಸಾಹಿತ್ಯಕ್ಕೆ ಹಲವು ಶತಮಾನಗಳಿಂದ ಪ್ರಸಿದ್ಧವಾಗಿದೆ. ಗುಬ್ಬಿಯ ಮಲ್ಲಣ್ಣನು ಗಣಭಾಷ್ಯರತ್ನಮಾಲಾ, ವಾತುಲಾ ಗಮವ್ಯಾಖ್ಯಾನ ಎಂಬ ಮಹತ್ವದ ಗ್ರಂಥಗಳನ್ನು ಬರೆದಿದ್ದಾನೆ. ಆತನ ಪೌತ್ರನಾದ ಮಹಾಕವಿ ಮಲ್ಲಣಾರ್ಯನು ವೀರಶೈವ ಮಹಾಪುರಾಣ, ಭಾವಚಿಂತಾರತ್ನ ಎಂಬ ಎರಡು ಮಹಾ ಕಾವ್ಯಗಳನ್ನು ಬರೆದಿದ್ದಾನೆ. ಪುರಾತನ ರಗಳೆಯನ್ನುಸಹ ಬರೆದಂತೆ ಐತಿಹ್ಯವಿದೆ. ಅವನ ಪುತ್ರ ಶಾಂತೇಶನು

ಸಿದ್ಧಲಿಂಗೇಶ ವಿಜಯ ಎಂಬ ಕಾವ್ಯವನ್ನು ಬರೆದಿದ್ದಾನೆ. ವೀರಶೈವಾನ್ವಯ ಚಂದ್ರಿಕೆಯನ್ನು ಬರೆದ ವೀರೇಶ್ವರ ಶಾಸ್ತ್ರಿಗಳು ಗುಬ್ಬಿಯವರೇ ಆಗಿದ್ದಾರೆ. ಕ್ಷೇತ್ರಜ್ಞ ಸುಮನೋವಾದ ಬರೆದವರು ಗುಬ್ಬಿ ಚೆನ್ನಬಸವೇಶ್ವರರು, ವಿಖ್ಯಾತ ವಚನ ಬರೆದವರು ಸಿದ್ಧಲಿಂಗೇಶ್ವರರು. ನಿಟ್ಟೂರಿನ ನಂಜಣಾಚಾರ್ಯರು ಸಂಸ್ಕೃತದಲ್ಲಿ ವೇದಾಂತಸಾರ ವೀರಶೈವ ಚಿಂತಾಮಣಿಯನ್ನೂ ಕನ್ನಡದಲ್ಲಿ ಶಬ್ದಮಣಿ ದರ್ಪಣ ವ್ಯಾಖ್ಯಾನವನ್ನೂ ಬರೆದಿದ್ದಾರೆ. ಗೂಳೂರು ಸಿದ್ಧವೀರನು ಶೂನ್ಯಸಂಪಾದನೆಯನ್ನೂ ಅನಾದಿ ವೀರಶೈವಾಚಾರ ಸಂಗ್ರಹವನ್ನೂ ಪರ್ವತೇಶ್ವರನುಚತುರಾಚಾರ್ಯ ಪುರಾಣವನ್ನೂ ಬರೆದಿದ್ದಾರೆ. ಸಿದ್ಧಗಂಗೆಯಲ್ಲಿದ್ದ ಮತುಕೂರು ನಂಜುಂಡ ಶಿವಯೋಗಿಗಳು ಅಟವೀಶ ಗುರುಭಕ್ತಿಸಾರ, ಅಟವೀಶ ಗೀತಾ ಮಂಜರಿ, ಮಾರ್ಕಂಡೇಯ ಕಥೆ. ಸುರಾಭಾಂಡೇಶ್ವರ ಕಥೆ ಮೊದಲಾದ ಗ್ರಂಥಗಳನ್ನು ಬರೆದಿದ್ದರೆ. ಶ್ರೀ ನಂಜುಂಡ ಶಿವಯೋಗಿಗಳು ಒಂದು ಹಾಡುಗಬ್ಬವನ್ನೂ, ನೊಣವಿನಕೆರೆಯ ಶ್ರೀ ಕರಿಬಸವ ಸ್ವಾಮಿಗಳು ಒಂದು ಹಾಡುಗಬ್ಬವನ್ನೂ ಬರೆದಿದ್ದಾರೆ. ಬಿಜ್ಜಾವರದ ಮಲ್ಲಿಕಾರ್ಜುನ ಕವಿಯು ಸಂಸ್ಕೃತ ಬಸವಪುರಾಣ ಮತ್ತು ಪಂಡಿತಾರಾಧ್ಯ ಚರಿತ್ರೆಗಳಿಗೆ ಟೀಕೆ ಬರೆದಿದ್ದಾನೆ. ಗೂಳೂರು ಮರಿತೋಂಟದಾರ್ಯರು ಸಂಸ್ಕೃತದಲ್ಲಿ ವೀರಶೈವಾನಂದ ಚಂದ್ರಿಕೆ, ಶೈವಸಂಜೀವಿನಿ ಬರೆದಿದ್ದಾರೆ. ವಿರಕ್ತ ತೋಂಟದಾರ್ಯರು ಸಿದ್ಧೇಶ್ವರ, ಪಾಲ್ಕುರಿಕೆ, ಸೋಮೇಶ್ವರ ಪುರಾಣ, ಕರ್ನಾಟಕ ಶಬ್ಧಮಂಜರಿ, ನಿರಂಜನ ಶತಕ ಬರೆದಿದ್ದಾರೆ. ಹೊನ್ನವಳ್ಳಿ ಗೌರಣಾಂಕನು ಮೋಳಿಗಯ್ಯ ಪುರಾಣ ಬರೆದಿದ್ದಾನೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ದಿ|| ಹೊಸಕೆರೆ ಚಿದಂಬರಯ್ಯನವರು, ದಿ|| ಬೆಳ್ಳಾವೆ ವೆಂಕಟನಾರಣಪ್ಪನವರು ಮಾಡಿದ ಸೇವೆಯು ಅಮೋಘವಾದುದು. ದಿ|| ಬೆಳ್ಳಾವೆ ನರಹರಿ ಶಾಸ್ತ್ರಿಗಳ ಕನ್ನಡ ನಾಟಕಗಳು ಎಲ್ಲರಿಗೂ ಸುಪರಿಚಿತವಾಗಿವೆ. ಆಸ್ಥಾನ ಮಹಾ ವಿದ್ವಾನ್ ಪೌರಾಣಿಕ ರತ್ನ ವೇ|| ಹೊಳವನಹಳ್ಳಿ ಶೇಷಾಚಾರ್ಯರು, ಡಾ|| ಹೊಳವನಹಳ್ಳಿ ರಾಘವೇಂದ್ರಾಚಾರ್ಯರು ಇತ್ಯಾದಿ ಸುಪ್ರಸಿದ್ಧ ವಿದ್ವಾಂಸರು ತುಮಕೂರು ಜಿಲ್ಲೆಯ ಕೊರಟಗೆರೆ ತಾಲ್ಲೂಕಿನ ಹೊಳವನಹಳ್ಳಿಯವರು. ಬೆಳ್ಳಾವೆ ವೆಂಕಟರಾಯ ಕವಿಗಳು, ಪ್ರೊ|| ಟಿ.ಎಸ್. ಶ್ರೀಕಂಠಯ್ಯನವರು ತುಮಕೂರು ಜಿಲ್ಲೆಯವರು.

ಕರ್ನಾಟಕ ರಂಗಭೂಮಿಯಲ್ಲಿ ಪ್ರಸಿದ್ಧರಾದ ನಾಟಕರತ್ನ ಶ್ರೀ ವೀರಣ್ಣನವರು ತುಮಕೂರು ಜಿಲ್ಲೆಯ ಗುಬ್ಬಿಯವರು. ಚಿತ್ರಕಲಾನೈಪುಣ್ಯದಿಂದ ರವಿ ವರ್ಮನನ್ನೂ ಮೀರಿಸುವ ಹಲವು ಮಹತ್ವದ ಚಿತ್ರಗಳನ್ನು ಬರೆದ ಕೈ॥ ಮತುಕೂರು ನಂಜುಂಡ ಶಿವಯೋಗಿಗಳು ನಮ್ಮ ತುಮಕೂರು ಜಿಲ್ಲೆಯವರು. ದಕ್ಷಿಣ ದೇಶದಲ್ಲಿ ಸುಪ್ರಸಿದ್ಧ ಶಿಲ್ಪಿಯಾದ ಜಕಣಾಚಾರಿಯು ಹುಟ್ಟಿದ್ದು ತುಮಕೂರು ಪಕ್ಕದ ಕೈದಾಳದಲ್ಲಿ. ಅವನು ಕಡೆಗಾಲದಲ್ಲಿ ಕಟ್ಟಿದ ಕೇಶವ ದೇವಾಲಯವನ್ನು ಅಲ್ಲಿ ಕಾಣಬಹುದು.

ಶಿಲ್ಪ ಕಲಾದೃಷ್ಟಿಯಿಂದ ತುಮಕೂರು ಜಿಲ್ಲೆ ಅಷ್ಟೊಂದು ಪ್ರಸಿದ್ಧ ವಾಗಿಲ್ಲ. ಆದರೆ ಕೈದಾಳದ ಕೇಶವ ದೇವರು, ಗೂಳೂರಿನ ಉಮಾಮಹೇ ಶ್ವರ ವಿಗ್ರಹ, ಇವುಗಳ ಶಿಲ್ಪ ಕಲೆಯು ಸುಪ್ರಸಿದ್ಧವಾಗಿದೆ. ಸೀರ್ಯದಲ್ಲಿರುವ ಜುಮ್ಮಾಮಸೀದಿ ಮತ್ತು ದರ್ಗ ಇವುಗಳ ಶಿಲ್ಪಕಲೆಯು ಈ ಜಿಲ್ಲೆಗೆ ಕೀರ್ತಿಯನ್ನು ತರತಕ್ಕುದಾಗಿದೆ. ತುರುವೇಕೆರೆಯ ಕೆಲವು ದೇವಾಲಯಗಳು ಪ್ರಾಚೀನವೂ ಕಲಾಪೂರ್ಣವೂ ಎನಿಸಿವೆ. ಮಧುಗಿರಿಯ ಕೋಟೆಯು ಕಲಾಪೂರ್ಣವನಿಸಿದೆ. ಈ ದೃಷ್ಟಿಯಿಂದಲೂ ನಾವು ಸ್ವಲ್ಪ ಮಟ್ಟಿಗೆ ಸಮಾಧಾನ ಮಾಡಿಕೊಳ್ಳಬಹುದಾಗಿದೆ. ಇನ್ನು ತುಮಕೂರು, ತಿಪಟೂರು ಪಟ್ಟಣಗಳು ವ್ಯಾಪಾರದಲ್ಲಿ ಪ್ರಸಿದ್ಧಿಯನ್ನು ಪಡೆದಿವೆ. ತುಮಕೂರು ವಿದ್ಯಾ ಕೇಂದ್ರವೂ ಎನಿಸಿದೆ. ಮೇಲೆಕಂಡ ಎಲ್ಲ ದೃಷ್ಟಿಗಳಿಂದಲೂ ತುಮಕೂರು ಜಿಲ್ಲೆಯು ಗಣನಾರ್ಹವಾಗಿಡೆ ಎಂಬ ವಿಷಯವನ್ನು ನಾವು ಮನಗಾಣ ಬಹುದು.

ಕರ್ಣಾಟಕ ಏಕೀಕರಣವಾದ ಮೇಲೆ ತುಮಕೂರಿನ ಪ್ರಾಮುಖ್ಯತೆ ಇನ್ನೂ ಅಧಿಕವಾಗುತ್ತದೆ.



**ಕರ್ನಾಟಕ ರತ್ನ ಸಿಂಹಾಸನ**

ವಿಜಯನಗರದ ಪರಂಪರೆಗೆ ಸೇರಿದ ಮೈಸೂರು ಅರಮನೆಯಲ್ಲಿ ಕಂಗೊಳಿಸುತ್ತಿರುವ, ಈ ಕರ್ನಾಟಕ ರತ್ನ ಸಿಂಹಾಸನವು ಸ್ವತಂತ್ರ ಭಾರತದಲ್ಲಿಯೇ ಅಪೂರ್ವ ವೈಭವಪೂರ್ಣವೆನಿಸಿದೆ.

# ದಕ್ಷಿಣ ಕನ್ನಡದ ಸಾಹಿತ್ಯದ ಸಂಪತ್ತು

ಸ್ವತಂತ್ರ ಭಾರತದಲ್ಲಿ ಕರ್ಣಾಟಕ ರಾಜ್ಯವು ಹಲವಾರು ಕಾರಣಗಳಿಂದ ಪ್ರಖ್ಯಾತಿಯನ್ನು ಗಳಿಸಿರುವಂತೆ ಕನ್ನಡ ನಾಡಿನಲ್ಲಿ ದಕ್ಷಿಣ ಕನ್ನಡ ಜಿಲ್ಲೆಯು ತನ್ನದೇ ಆದ ಕೆಲವು ವೈಶಿಷ್ಟ್ಯಗಳಿಂದ ಪ್ರಖ್ಯಾತಿಯನ್ನು ಗಳಿಸಿದೆ. ಸುಂದರ ಕಡಲತೀರ, ಬೆಟ್ಟಗುಡ್ಡಗಳು, ನೇತ್ರಾವತೀ ಮೊದಲಾದ ನದಿಗಳು, ಶ್ರೀ ಕುಕ್ಕೆ ಸುಬ್ರಹ್ಮಣ್ಯ, ಧರ್ಮಸ್ಥಳ, ಉಡುಪಿ, ಕೊಲ್ಲೂರು ಮೊದಲಾದ ಕ್ಷೇತ್ರಗಳು, ಮಲ್ಪೆ, ಮಂಗಳೂರು ಮೊದಲಾದ ಬಂದರುಗಳು,ಸಾಹಸಿಗಳೂ, ಉದ್ಯಮಶೀಲರೂ ಬುದ್ಧಿಶಾಲಿಗಳೂ ಆದ ಜನರು, ಪ್ರಾಚೀನತಮವಾದ ಯಕ್ಷಗಾನ ಹಾಗೂ ತಾಳಮದ್ದಲೆಯ ಕಲೆ, ಕಾರ್ಕಳ, ಮೂಡಬಿದಿರೆ, ವೇಣೂರು ಮೊದಲಾದ ಕಲಾಕ್ಷೇತ್ರಗಳು, ಕನ್ನಡ ನಾಡಿನಲ್ಲಿ ಇನ್ನೆಲ್ಲಿಯೂ ಕಂಡು ಕೇಳದ ಭೂತಪತಿಯ ರಾಜ್ಯಭಾರ, ಅಳಿಯ ಸಂತಾನದ ಕಟ್ಟು ಮೈಸೂರು ರಾಜ್ಯದಲ್ಲಿ ಇತರ ಕಡೆಗಳಿಗಿಂತ ಅಧಿಕವೆನಿಸಿದ ವಿದ್ಯಾ ಮತ್ತು ಬ್ಯಾಂಕಿಂಗ್ ವ್ಯವಸ್ಥೆಗಳು ಇತ್ಯಾದಿ ಕಾರಣಗಳಿಂದ ದಕ್ಷಿಣ ಕನ್ನಡ ಜಿಲ್ಲೆಯು ಕನ್ನಡ ನಾಡಿಗೆ ಅಲಂಕಾರ ಪ್ರಾಯವೂ ಆಕರ್ಷಣೀಯವೂ ಎನಿಸಿದೆ. ಪೌರಾಣಿಕ ದೃಷ್ಟಿಯಿಂದ ಮಂಗಳೂರು ಜಿಲ್ಲೆಯನ್ನು ಪರಶುರಾಮ ಕ್ಷೇತ್ರ ವೆಂದು ಕರೆಯುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯ ರಾಜಭಾಷೆ ಕನ್ನಡ ವಾದರೂ ಅಲ್ಲಿ ತುಳು ಮತ್ತು ಕೊಂಕಣಿ ಭಾಷೆಗಳು ನಡೆಯುತ್ತಿವೆ. ಕನ್ನಡದ ಸೋದರ ಭಾಷೆಗಳಂತೆ ಅವು ಸಮರಸದಿಂದ ನಡೆದುಕೊಳ್ಳುತ್ತಿವೆ. ಅನೇಕ ಸಂದರ್ಭಗಳಲ್ಲಿ ಈ ಜಿಲ್ಲೆಯನ್ನು ತುಳುನಾಡೆಂದು ಕರೆಯುವು ದುಂಟು. ವಿಜಯನಗರದ ಸಾರ್ವಭೌಮ ಶ್ರೀ ಕೃಷ್ಣ ದೇವರಾಯನು ಈ ತುಳುನಾಡಿನವನೆಂದು ಹೇಳಲಾಗಿದೆ.

ದಕ್ಷಿಣ ಕನ್ನಡ ಜಿಲ್ಲೆಯ ರಾಜಧಾನಿಯಾದ ಮಂಗಳೂರಿನ ಹೆಸರು 'ಮಂಗಲಪುರ' ಎಂದು ಕರೆಯಲಾಗಿದೆ ಎಂದೂ, ಕ್ರಿ. ಶ. ಏಳನೆಯ

ಶತಮಾನದ ಅರಬ್ಬಿ ಗ್ರಂಥಗಳಲ್ಲಿ ಮಂಗಳೂರಿನ ಹೆಸರು ಇದೆಯೆಂದೂ ಪ್ರಖ್ಯಾತ ಸಂಶೋಧಕರಾದ ರಾಷ್ಟ್ರಕವಿ ಎಂ. ಗೋವಿಂದ ಪೈ ಅವರು ಹೇಳುತ್ತಾರೆ (ತೆಂಕನಾಡು, ಪು. ೨೦). ಪ್ರಸ್ಥಾನತ್ರಯಗಳನ್ನು ಬರೆದ ಆಚಾರ್ಯ ಆನಂದತೀರ್ಥರು ಉಡುಪಿಯ ಪಕ್ಕದ ಪಾಜಕಕ್ಷೇತ್ರ ಎಂಬ ಊರಿನಲ್ಲಿ ಹುಟ್ಟಿದವರು. ಉಡುಪಿಯ ಶ್ರೀ ಕೃಷ್ಣದೇವರು ಆ ಮಹನೀಯ ರಿಂದ ಸ್ಥಾಪಿಸಲ್ಪಟ್ಟಿದೆಂದು ಪ್ರಸಿದ್ಧವಾಗಿದೆ. ಉಡುಪಿಯ ಅಷ್ಟಮಠಗಳು ಆ ಮಹಾಚಾರ್ಯರ ಹೆಸರಿನಿಂದಲೇ ಪ್ರಸಿದ್ಧವಾಗಿವೆ. ಭಗವಂತನಾದ ಶ್ರೀ ಕೃಷ್ಣನು ಭಕ್ತಕವಿ ಕನಕದಾಸನಿಗೆ ಪಶ್ಚಿಮಾಭಿಮುಖವಾಗಿ ಪ್ರತ್ಯಕ್ಷನಾದ (ದೇವಾಲಯ ಪೂರ್ವಾಭಿಮುಖವಾಗಿದೆ) ಪ್ರಖ್ಯಾತಿ ಉಡುಪಿಗೆ ಮಾತ್ರ ತಕ್ಕು ದಾಗಿದೆ. ಸುಕ್ಷೇತ್ರ ಧರ್ಮಸ್ಥಲವು ಸಕಲ ಧರ್ಮಸಮನ್ವಯಕ್ಕೆ ಪ್ರಖ್ಯಾತಿ ಯನ್ನು ಪಡೆದಿದೆ. ಇದು ಗಣ್ಯವಾದ ಶೈವ ಕ್ಷೇತ್ರ. ಇಲ್ಲಿನ ಶ್ರೀ ಮಂಜು ನಾಥ ಲಿಂಗದ ಅರ್ಚಕರು ವೈಷ್ಣವ ಬ್ರಾಹ್ಮಣರು. ಆ ಕ್ಷೇತ್ರದ ಯಾಜ ಮಾನ್ಯವು ಮಾನ್ಯರಾದ ಜೈನ ಹೆಗ್ಗಡೆಗಳವರಿಗೆ ಸೇರಿದುದು. ಮೇಲಾಗಿ ಇದು ಭೂತಪತಿಯ ರಾಜಧಾನಿ ಎಂಬ ಕಾರಣದಿಂದ ನಮ್ಮ ಮೈಸೂರು ರಾಜ್ಯದಲ್ಲಿ ಅತ್ಯಂತ ಕೀರ್ತಿಯನ್ನು ಗಳಿಸಿದೆ. ಧರ್ಮಸ್ಥಳದ ಮಹಾ ನಡಾವಳಿ, ಲಕ್ಷ ದೀಪರಾಧನೆ, ಹಾಗೂ ಧರ್ಮಸಮ್ಮೇಳನಗಳು ಸಮಗ್ರ ಕರ್ಣಾಟಕದ ಮೇಲೆ ಪ್ರಭಾವವನ್ನು ಬೀರಿವೆ. ಕುಕ್ಕೆ ಸುಬ್ರಹ್ಮಣ್ಯವು ತಾರಕಾರಿಯಾದ ಕಾರ್ತಿಕೇಯನ ಸಾನ್ನಿಧ್ಯವುಳ್ಳ ಪುಣ್ಯಕ್ಷೇತ್ರ. ಕೊಲ್ಲೂರು ಮೂಕಾಂಬಿಕೆಯು ಕೆಳದಿ ರಾಜ್ಯರ ಮನೆದೇವತೆ ಹಾಗೂ ಶಕ್ತಿ ದೇವತೆಯ ಔಪಾಸಕರಿಗೆ ಇದು ಮಾತೃಸ್ಥಾನವೆನಿಸಿದೆ. ಶಿಲ್ಪಕಲಾ ವೈಭವಕ್ಕೂ ಕೂಡ ಈ ಜಿಲ್ಲೆ ಪ್ರಖ್ಯಾತಿ ಯನ್ನು ಗಳಿಸಿದೆ. ಕಾರ್ಕಳದ ಚತುರ್ಮುಖ ಬಸದಿ ಮತ್ತು ಗೋಮಟೇ ಶ್ವರಸ್ವಾಮಿ, ಮೂಡುಬಿದಿರೆಯ ಸಾವಿರ ಕಂಭಗಳ ಬಸದಿ ಮತ್ತು ಪ್ರಾಚೀನ ಮಠ ಮಾನ್ಯಗಳು, ವೇಣೂರಿನ ಗೋಮಟೇಶ್ವರ ವಿಗ್ರಹ ಮತ್ತು ಬಸದಿ ಇದಕ್ಕೆ ಸಾಕ್ಷಿಯಾಗಿವೆ. ಅಂತೆಯೇ ಕೊಲ್ಲೂರು ಮೂಕಾಂಬಿಕಾ ದೇವಾಲ ಯವೂ ಶಿಲ್ಪಕಲೆಗೆ ಹೆಸರಾಗಿದೆ.

ಮಂಗಳೂರು ಜಿಲ್ಲೆ ವಿಖ್ಯಾತ ಪುರುಷರ ಮಾತೃಸ್ಥಾನವೆನಿಸಿದೆ. ದಿ॥ ಬೆನಗಲ್ ನರಸಿಂಗರಾಯರು ಪ್ರಪಂಚ ನ್ಯಾಯಾಲಯದ ನ್ಯಾಯಾಧೀಶ

ರಾಗಿದ್ದರು. ದಿ|| ಕಾರ್ನಾಡ ಸದಾಶಿವರಾಯರು ಕಾಂಗ್ರೆಸ್ಸಿನ ನಿಸ್ಸೀಮ ಭಕ್ತರಾಗಿದ್ದರು. ದಿವಂಗತರಾದ ಬೆನಗಲ್ ರಾಮರಾಯರು, ಪಂಜೆ ಮಂಗೇಶರಾಯರು, ಪಂಡಿತ ಮುಳಿಯ ತಿಮ್ಮಪ್ಪಯ್ಯನವರು ಪ್ರಖ್ಯಾತ ಸಾಹಿತಿಗಳೆನಿಸಿಕೊಂಡಿರುವುದು ಇಲ್ಲಿ ಸ್ಮರಣಾರ್ಹವಾಗಿದೆ. ಈ ಜಿಲ್ಲೆಯವರೇ ಆದ ಬೆನಗಲ್ ರಾಮರಾಯರು ಭಾರತ ಸರಕಾರದಲ್ಲಿ ಉನ್ನತ ಸ್ಥಾನವನ್ನು ಗಳಿಸಿದುದು, ಮಣಿಪಾಲದ ವಿದ್ಯಾಲಯಗಳ ಕುಲಪತಿಗಳೆನಿಸಿರುವ ಡಾ|| ಟಿ. ಎಂ. ಎ. ಪೈಗಳವರು ಅಸಾಧ್ಯವಾದ ಕೆಲಸಗಳನ್ನು ಲೀಲಾಜಾಲವಾಗಿ ನಡೆಸುತ್ತಿರುವುದು, ಧರ್ಮಸ್ಥಳದ ಮಾನ್ಯ ರತ್ನವರ್ಮ ಹೆಗ್ಗಡೆ ಎಂ.ಎಲ್.ಎ. ಅವರು ದಾಸೋಹಮೂರ್ತಿಗಳೆನಿಸಿರುವುದು, ಇವರೆಲ್ಲರೂ ಸಮಕಾಲೀನ ಮಹಾಪುರುಷರೆನಿಸಿಕೊಂಡು ಈ ಜಿಲ್ಲೆಯ ಕೀರ್ತಿ, ಗೌರವಗಳನ್ನು ಅಧಿಕಗೊಳಿಸಿರುತ್ತಾರೆ. ದಿನಪತ್ರಿಕೆ, ವಾರಪತ್ರಿಕೆ, ಮಾಸಪತ್ರಿಕೆ ಮೊದಲಾದ ಪತ್ರಿಕಾ ಪ್ರಪಂಚದಲ್ಲಿಯೂ, ಹೊಟೇಲು ಮತ್ತು ಬ್ಯಾಂಕಿಂಗ್ ವ್ಯಾಪಾರದಲ್ಲಿಯೂ, ಹಂಚು ತಯಾರಿಕೆ ಮತ್ತು ಮುದ್ರಣ ಕಲೆಯಲ್ಲಿಯೂ ಈ ಜಿಲ್ಲೆಯು ಗಣ್ಯತೆಯನ್ನು ಪಡೆದಿದೆ. ಪ್ರಾಚೀನವೂ, ಅಪೂರ್ವವೂ ಎನಿಸಿರುವ ಯಕ್ಷಗಾನ ಹಾಗೂ ತಾಳಮದ್ದಳೆಯ ಕಲೆ ಇಲ್ಲಿ ತಲೆ ಎತ್ತಿನಿಂತಿದೆ. ಈ ಎಲ್ಲ ಕಾರಣಗಳಿಂದ ಕನ್ನಡ ನಾಡಿನಲ್ಲಿ ಮಂಗಳೂರು ಜಿಲ್ಲೆಯು ತನ್ನದೇ ಆದ ಅಪೂರ್ವ ಸಂಪತ್ತಿನಿಂದ ಕಂಗೊಳಿಸುತ್ತಿದೆ. 'ಮಂಗಳದ ಬೀಡು ತುಳುವರ ನಾಡು' ಎಂಬ ಅಗ್ಗಳಿಕೆಯನ್ನು ಪಡೆದಿದೆ.

ಪ್ರಕೃತ ಲೇಖನದ ಮುಖ್ಯೋದ್ದೇಶ ದಕ್ಷಿಣ ಕನ್ನಡದಲ್ಲಿ ಹುಟ್ಟಿ ಕನ್ನಡನಾಡು ನುಡಿಗಳಿಗೆ ಮಿಗಿಲಾದ ಸೇವೆಯನ್ನು ಸಲ್ಲಿಸಿದ ಮಹಾಕವಿಗಳ ಮತ್ತು ಗಣ್ಯ ಸಾಹಿತಿಗಳ ಪರಿಚಯವನ್ನು ಸಂಗ್ರಹವಾಗಿ ಮಾಡಿಕೊಡತಕ್ಕುದೇ ಆಗಿದೆ.

### ೧. ಮಹಾಕವಿ ಸೋಮರಾಜ (ಕ್ರಿ. ಶ. ೧೨೨೨.)

ಈತನು ಉದ್ಭಟ ಕಾವ್ಯ ಅಥವಾ ಶೃಂಗಾರಸಾರ ಎಂಬ ಗ್ರಂಥವನ್ನು ಬರೆದಿದ್ದಾನೆ. ಇವನು ವೀರಶೈವ ಕವಿ. ದಕ್ಷಿಣ ಕನ್ನಡದ ಒಂದು ರಾಜವಂಶಕ್ಕೆ ಸೇರಿದವನೆಂದು ತಿಳಿದುಬಂದಿದೆ. ಕನ್ನಡ ಕವಿಚರಿತೆಕಾರರು

"ಪಶ್ಚಿಮ ಸಮುದ್ರ ತೀರದಲ್ಲಿ ಆಳುತ್ತಿದ್ದ ವೀರಶೈವ ಮತಾವಲಂಬಿಗಳಾದ ಚೌಟರಾಜರಲ್ಲಿ ತಿರುಮಲರಾಯ, ಚಂದ್ರಶೇಖರ ಎಂಬ ಹೆಸರುಗಳು ದೊರೆಯುತ್ತವೆ. ಕವಿ ಆ ವಂಶದ ದೊರೆಯಾಗಿರಬಹುದೋ ಏನೋ ತಿಳಿಯದು. ಕವಿ ತನ್ನ ಗ್ರಂಥವನ್ನು ರಾಯಸದ ಲಿಂಗರಸನು ಬರೆಸಲು ತಾನು ನಿರ್ಮಿಸಿದಂತೆ ಹೇಳುತ್ತಾನೆ. ಈ ಗ್ರಂಥವನ್ನು ಶಕ ೧೧೪೪ನೆಯ ಚಿತ್ರಭಾನುವಿನಲ್ಲಿ ಅಂದರೆ ಕ್ರಿ. ಶ. ೧೨೨೨ರಲ್ಲಿ ಬರೆದುದಾಗಿ ಹೇಳಿದ್ದಾನೆ. ಪೂರ್ವ ಕವಿಗಳಾದ ಹರೀಶ್ವರ, ಕೆರೆಯ ಪದ್ಮರಸ, ಪಾಲ್ಕುರಿಕೆ ಸೋಮನಾಥ ಈ ಕವಿಗಳನ್ನು ಸ್ತುತಿಸಿದ್ದಾನೆ. ಅಲ್ಲಮ ಪ್ರಭುವಿನ ಬಗೆಗೆ ಹೆಚ್ಚಿನ ಭಕ್ತಿ ವ್ಯಕ್ತಪಡಿಸಿದ್ದಾನೆ."

ಈ ಗ್ರಂಥವು ಕುಮಾರಪಾಲ ಘೂರ್ಜರನ ಅಥವಾ ಉದ್ಭಟದೇವನ ಚರಿತೆಯಾದುದರಿಂದ ಇದಕ್ಕೆ ಉದ್ಭಟ ಕಾವ್ಯ ಎಂಬ ಹೆಸರಿದೆ. ಇದು ಹನ್ನೆರಡು ಅಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಗ್ರಂಥಾದಿಯಲ್ಲಿ ಕವಿ ವಿರೂಪಾಕ್ಷ ಲಿಂಗವನ್ನು ಸ್ತುತಿಸಿದ್ದಾನೆ. ಬಳಿಕ, ಪಂಪಾಂಬಿಕೆ, ವಿಘ್ನೇಶ್ವರ, ವೀರಭದ್ರ, ಷಣ್ಮುಖ, ಅಲ್ಲಮಪ್ರಭು ಮೊದಲಾದ ಮಹೇಶ ಪೂಜಕರನ್ನು ಹೊಗಳಿದ್ದಾನೆ. "ಈ ಕವಿಯ ಬಂಧವು ಲಲಿತವಾಗಿದೆ" ಎಂದು ಕರ್ನಾಟಕ ಕವಿಚರಿತೆ, (ಭಾಗ ೧ ಪು. ೩೩೮–೪೧)ಯಲ್ಲಿ ಬರೆದಿದ್ದಾರೆ. ಮಹಾಕವಿ ಸೋಮರಾಜನು ಉದ್ದಾಮ ಕವಿಯೆಂಬುದಕ್ಕೆ ಅವನ ಕಾವ್ಯದಿಂದ ಈ ಮುಂದಿನ ಪದ್ಯಗಳನ್ನು ನಾವು ಅವಲೋಕಿಸಬಹುದು.

ವೃತ್ತ।। ಪ್ರಮಥಾನೀಕ ಕಥಾರ್ಣವೇಂದು ಹರಿದೇವಾಚಾರ್ಯನಂ
ಧೈರ್ಯನಂ ।
ಸಮುದಂಚಿತ್ ವೃಷಭಸ್ತವಾಮರಮಹೀಜಾರಾಮನಂ ಸೋಮನಂ ॥
ವಿಮಲಜ್ಞಾನ ಸುದೀಪಿಕಾಸ್ಫುರಿತ ಚೇತಸ್ಸದ್ಮನಂ ಪದ್ಮನಂ ।
ಕ್ರಮದಿಂದಂ ಬಲಗೊಂಡು ಪೇಳ್ವೆನೊಸೆದಾನೀಕಾವ್ಯಮಂ ಸೇವ್ಯಮಂ ॥
ಚಂದ್ರಮರೀಚಿಯಂತೆ ತನಿಮಾವಿನ ಪಣ್ಗಳ ತಂದಲಂತೆ ದೇ– ।
ವೇಂದ್ರಮಹೀಜದಂತೆ ಮಲಯಾನಿಲನಂತೆ ವಸಂತನಂತೆ ಸ॥

ದ್ರುಂದ್ರ ಸುಧಾಬ್ಧಿಯಂತೆ ನವಚಂಪಕಮಂಜರಿಯಂತೆ ಸೋಮರಾ
ಜೇಂದ್ರನ ಕಬ್ಬದಿಂಪು ಬುಧರಂ ಬಗೆಗೊಳ್ವುದಿಳಾತಳಾಗ್ರದೊಳ್ ‖

ನಲ್ಲಳಬೇಟವಾತೊ ಶುಕಚಾರುನಿನಾದಮೋ ವಾಗ್ವಧೂಟಿಕಾ ।
ವಲ್ಲಕಿಯೊಪ್ಪುವಿಂಚರವೋ ಚೈತ್ರಪಿಕಧ್ವನಿಯೋ ಸಮಂತು ಪೂ‖
ವಿಲ್ಲನ ಚಾಪಸಂಜನಿತವೋಹನನಾದವೋ ಸೋಮರಾಜ ಭೂ ‖
ವಲ್ಲಭನಿಂಪುವೆತ್ತ ವಚನಾಮೃತವೋ ವಿಬುಧಾನುರಾಗವೋ ‖

ಹಿಮರುಚಿಮಂಡಲಂ ನವಚಕೋರಿಗೆ ಚಾದಗೆಗಂಬುದಾಗಮಂ ।
ವಿಮಲವಸಂತಸಂಪದಮುದನ್ಯಭೃತಕ್ಕೆ ಸುಧಾಬ್ಧಿ ಹಂಸೆಗು ‖
ದ್ಗಮವೆಳದುಂಬಿಗೊಂದಿನಿತರೋಚಕಮಪ್ಪುದೆ ಸೋಮರಾಜ ಚಂ ।
ದ್ರಮನ ವಚಸ್ಸುಧಾಲಹರಿ ಸಜ್ಜನಸಂತತಿಗೇನಸಹ್ಯಮೇ ॥

ಸೋಮರಾಜ ಮಹಾಕವಿಯು ವಿದ್ವತ್ ಕವಿಯೂ ಸರಸಕವಿಯೂ ಎಂಬುದಕ್ಕೆ ಮೇಲಿನ ಪದ್ಯಗಳು ನಿದರ್ಶನವಾಗಿವೆ. ೧೬ನೆಯ ಶತಮಾನದ ಉದ್ದಾಮ ಕವಿಯಾದ ಉಭಯ ಕವಿತಾವಿಶಾರದ ಷಡಕ್ಷರ ದೇವನು ಈ ಮಹಾಕವಿಯ ಪ್ರಭಾವಕ್ಕೆ ಒಳಗಾಗಿರುವನೆಂಬುದನ್ನೂ, ಕೆಲವು ವೇಳೆ ಈತನ ಉಕ್ತಿಗಳನ್ನು ಸ್ವೀಕರಿಸಿರುವನೆಂಬುದನ್ನೂ ನಾವು ಕನ್ನಡ 'ರಾಜ ಶೇಖರ ವಿಲಾಸ' ಮೊದಲಾದ ಅವನ ಗ್ರಂಥಗಳ ಅವಲೋಕನದಿಂದ ಸುಲಭ ವಾಗಿ ಅರಿಯಬಹುದು.

## ೨. ಮಹಾಕವಿ ರತ್ನಾಕರವರ್ಣಿ

(ಕಾಲ ಕ್ರಿ. ಶ. ೧೫೫೭)

ಕರ್ನಾಟಕ ಕವಿಚರಿತೆಯಲ್ಲಿ ಈ ಕವಿಶ್ರೇಷ್ಠನನ್ನು ಕುರಿತು ಈ ಮುಂದೆ ಹೇಳುವಂತೆ ನಿರೂಪಿಸಲಾಗಿದೆ. "ಈತನು ತ್ರಿಲೋಕ ಶತಕ, ಅಪರಾಜಿತೇ ಶ್ವರ, ಭರತೇಶ್ವರ ಚರಿತೆ, ಹಾಡುಗಳು ಇವುಗಳನ್ನು ಬರೆದಿದ್ದಾನೆ. ರತ್ನಾ ಕರಾಧೀಶ್ವರ ಶತಕವನ್ನು ಈತನೇ ಬರೆದನೆಂದು ಪ್ರತೀತಿಯಿದೆ. ಆದರೆ ಆ ಶತಕವು 'ಹಂಸರಾಜ' ಎಂಬ ಬೇರೊಬ್ಬ ಕವಿಯಿಂದ ರಚಿತವಾದಂತೆ ಆ ಗ್ರಂಥದಿಂದ ತಿಳಿಯುತ್ತದೆ. ಅಲ್ಲದೆ ರತ್ನಾಕರ ವರ್ಣಿಯ ಗ್ರಂಥಗಳಲ್ಲಿ

ದೊರೆವ ಅಪರಾಜಿತೇಶ್ವರ ಮಂದರಸ್ವಾಮಿಗಳ ಸ್ತುತಿಯೂ, ಚಿದಂಬರ ಪುರುಷ, ನಿರಂಜನ ಸಿದ್ಧ ಎಂಬ ಅಂಕಿತಗಳೂ ಆ ಶತಕದಲ್ಲಿ ಇಲ್ಲವಾದುದ ರಿಂದ ಅದು ಅನ್ಯಕವಿಕೃತವೆಂಬುದು ದೃಢವಾಗುತ್ತದೆ. ಇವನು ಜೈನ ಕವಿ. ಇವನಿಗೆ ರತ್ನಾಕರಸಿದ್ಧ, ರತ್ನಾಕರ ಅಣ್ಣಗಳು ಎಂಬ ಹೆಸರೂ 'ನಿರಂಜನ ಸಿದ್ಧ' ಎಂಬ ಬಿರುದೂ ಇದ್ದಂತೆ ತಿಳಿಯುತ್ತದೆ. ತನ್ನನ್ನು ಕ್ಷತ್ರಿಯವಂಶಜ ನೆಂದೂ "ಕರ್ನಾಟಕ ಕ್ಷೇತ್ರಗಳಣ್ಣಗಳೆಂದೂ ಧಾತ್ರಿ ನುಡಿವುದು" ಎಂದೂ ಹೇಳುತ್ತಾನೆ. "ಜನನ ಮರಣವುಳ್ಳ ಜನಕರ ನಾಮುವಪೇಳ್ವರು ಉರ್ವಿಯೊಳು, ಶ್ರೀ ಮಂದರ ಸ್ವಾಮಿ ನನ್ನಯ್ಯನೆಂದಾನು ಸುಖಪಡೆದಿಹೆನು" ಎನ್ನುತ್ತಾನೆ. ಇವನ ಸ್ಥಳ ವೇಣುಪುರ (ಮೂಡಬಿದಿರೆ). ದೀಕ್ಷಾಗುರು ದೇಶಿಕಾಗ್ರಣಿ ಚಾರುಕೀರ್ತಿಯೋಗಿ. ಮೋಕ್ಷಗುರು ಹಂಸನಾಥ. ಈ ಹಂಸನಾಥನ ಆಜ್ಞೆಯಿಂದ ಭರತೇಶ್ವರ ಚರಿತೆಯನ್ನು ಬರೆದಂತೆ ಹೇಳುತ್ತಾನೆ. ತ್ರಿಲೋಕ ಶತಕವನ್ನು ಶಕ ೧೪೭೯ರಲ್ಲಿ ಎಂದರೆ ಕ್ರಿ. ಶ. ೧೫೫೭ರಲ್ಲಿ ಬರೆದಂತೆ ತಿಳಿಯು ತ್ತದೆ. ಸುಮಾರು ೧೦ ಸಾವಿರ ಸಾಂಗತ್ಯವುಳ್ಳ ಈ ಗ್ರಂಥವನ್ನು ಕವಿ ಒಂಭತ್ತು ತಿಂಗಳಲ್ಲಿ ರಚಿಸಿದಂತೆ "ವೃಷಭ ಮಾಸದಿ ತೊಡಗಿ ಕುಂಭ ಮಾಸದಿ ಕೃತಿ ಪೂರ್ಣವಾಯಿತು" ಎಂಬ ಪದ್ಯಭಾಗದಿಂದ ತಿಳಿಯುತ್ತದೆ. (ಕರ್ನಾಟಕ ಕವಿ ಚರಿತೆ, ಭಾಗ ೨. ಪುಟ ೨೭೪-೭೫)

ಈತನ ಗ್ರಂಥಗಳು (೧) ತ್ರಿಲೋಕಶತಕ; ಇದು ಕಂದದಲ್ಲಿ ವಿರಚಿತ ವಾಗಿದೆ. ಇದರಲ್ಲಿ ೧೨೮ ಕಂದಗಳಿವೆ. ಈ ಗ್ರಂಥದಲ್ಲಿ ಜೈನದರ್ಶನಾನು ಸಾರವಾಗಿ ಪ್ರಪಂಚದ ಸ್ಥಿತಿ ಹೇಳಿದೆ. ಈ ಗ್ರಂಥದ ಮಾದರಿಗಾಗಿ ಮುಂದಿನ ಪದ್ಯಗಳನ್ನು ವಾಚಕರು ಓದಬಹುದು.

ಕಂದ॥ ತುಂಬಿದ ಚಿದ್ಗುಣಮಂಬರ ।
ಮೆಂಬಂದದ ಬಯಲರೂಪು ಪುರುಷಾಕಾರಮು ॥

ಮೆಂಬಿವು ಮೂರುಂಟವರ್ಗೆ ಚಿ ।
ದಂಬರ ಪುರುಷರ್ಕಳೆಂದು ಸಾರ್ಥಕನಾಮಂ ॥

ಇದರಲ್ಲಿ ಚಿದಂಬರ ಪುರುಷನ ಲಕ್ಷಣವನ್ನು ಹೇಳಿರುತ್ತಾನೆ.

### ೧. ಅಪರಾಜಿತೇಶ್ವರ ಶತಕ

ಇದನ್ನು ಕವಿ ವೃತ್ತಗಳಲ್ಲಿ ಬರೆದಿರುತ್ತಾನೆ. ಇದರಲ್ಲಿ ೧೨೭ ವೃತ್ತಗಳಿವೆ. ಇದರ ಅಂಕಿತ 'ಅಪರಾಜಿತೇಶ್ವರ' ಎಂದು. ಇದರಲ್ಲಿ ನೀತಿ, ವೈರಾಗ್ಯ, ಆತ್ಮವಿಚಾರ ಮೊದಲಾದ ಸಂಗತಿಗಳನ್ನು ಅತ್ಯಂತ ಹೃದಯಂಗಮವಾಗಿ ಹೇಳಿರುತ್ತಾನೆ. ಮಾದರಿಗಾಗಿ ಮುಂದಿನ ಪದ್ಯವನ್ನು ಓದಬಹುದು.

ವೃತ್ತ॥ ನೋಡುವ ನೋಡಿ ಲಾಲಿಸುವ ಲಾಲಿಸುವಾತ್ಮಸುಖಕ್ಕೆ ವಿಸ್ಮಯಂ।
ಮಾಡುವ ಮಾಡಿ ಮೆಚ್ಚುವ ನಿಜಾತ್ಮನೊಳಾಗಳೆ ಮೆಚ್ಚುತೈಕ್ಯದಿಂ॥
ಕೂಡುವ ಕೂಡಿ ಮೆಯ್ಮರೆದು ತನ್ಮಯನಾಗುತೆ ತಾನೆ ತನ್ನಳೋ ॥
ಲಾಡುವ ಯೋಗಿಯೇ ಅಮೃತಭಾಗಿಯಲಾ ಅಪರಾಜಿತೇಶ್ವರಾ ॥

ಇದರಲ್ಲಿ ಪೂರ್ಣಜ್ಞಾನಿಯಾದ ಯೋಗೀಶ್ವರನ ಲಕ್ಷಣವನ್ನು ಕವಿ ಬಣ್ಣಿಸಿದ್ದಾನೆ.

### ೨. ಭರತೇಶ್ವರ ಚರಿತೆ

ಇದನ್ನು ಜನಪ್ರಿಯವಾದ ಸಾಂಗತ್ಯ ಛಂದಸ್ಸಿನಲ್ಲಿ ಬರೆದಿರುತ್ತಾನೆ. ಇದರಲ್ಲಿ ೮೦ ಸಂಧಿಗಳೂ, ೯೯೬೯ ಪದ್ಯಗಳೂ ಇವೆ. ಇದಕ್ಕೆ ಭರತೇಶ ವೈಭವ, ಭರತೇಶ ಸಂಗತಿ ಎಂಬ ಹೆಸರುಗಳೂ ಉಂಟು. ಪ್ರಥಮ ತೀರ್ಥಂಕರನಾದ, ಜೈನಧರ್ಮದಲ್ಲಿ ವಿಖ್ಯಾತನಾದ ಪುರುಪರಮೇಶ್ವರನ ಹಿರಿಯ ಕುಮಾರ ಭರತನು ಕರ್ಮವನ್ನು ಸುಟ್ಟು ಜಿನನಾದ ವೈಭವವನ್ನು ಸ್ವಾರಸ್ಯವಾಗಿ ಹೇಳಲಾಗಿದೆ. ಗ್ರಂಥದ ಆದಿಯಲ್ಲಿ, ಆದಿನಾಥ, ನವಕೋಟಿ ಮುನಿಗಳು, ಹಂಸನಾಥ, ಸರಸ್ವತಿ ಇವರನ್ನು ಸ್ತುತಿಸಿದ್ದಾನೆ. ಸಂಧಿಗಳ ಆದಿಯಲ್ಲಿ 'ನಿರಂಜನ ಸಿದ್ಧ' ಎಂಬ ಅಂಕಿತವೂ ಅಂತ್ಯದಲ್ಲಿ ಅಪರಾಜಿತೇಶ್ವರ, ಮಂದರಸ್ವಾಮಿಗಳ ಸ್ತುತಿಯೂ ಚಿದಂಬರ ಪುರುಷ ಎಂಬ ಅಂಕಿತವೂ ಇವೆ.

ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಭರತೇಶ ವೈಭವವು ಅದ್ವಿತೀಯವಾದ ಕಾವ್ಯರತ್ನವೆನಿಸಿದೆ. ಈ ಗ್ರಂಥದಲ್ಲಿ ಕವಿಯ ಅಗಾಧವಾದ ಶಾಸ್ತ್ರಜ್ಞಾನ, ವಿಪುಲವಾದ ಲೋಕಾನುಭವ, ಅಸದೃಶವಾದ ಪ್ರತಿಭಾಶಕ್ತಿಯನ್ನು ಹೆಜ್ಜೆ ಹೆಜ್ಜೆಗೂ ನಾವು ನೋಡಬಹುದು. ಕನ್ನಡದಲ್ಲಿ ಆದಿಕವಿ ಪಂಪ, ಕವಿಶ್ರೇಷ್ಠ ಹರೀಶ್ವರ, ಮಹಾಕವಿ ಕುಮಾರವ್ಯಾಸ ಇವರನ್ನು ಹೋಲುವ ಮತ್ತೊಬ್ಬ

ಕವಿಯೆಂದರೆ ಈ ರತ್ನಾಕರವರ್ಣಿ ಎಂದು ಹೇಳಬಹುದು. ಭರತೇಶ ವೈಭವ ಸಂಗ್ರಹದ ಸಂಪಾದಕರಾದ ಶ್ರೀ ಟಿ. ಎಸ್. ಶಾಮರಾಯರು ಈ ಕವಿಯನ್ನು ಕುರಿತು "ರತ್ನಾಕರನ ಧರ್ಮ ಪ್ರತಿಪಾದನೆಯಲ್ಲಿ, ಆತನ ತತ್ವಜಿಜ್ಞಾಸೆಯಲ್ಲಿ ಒಂದು ಅಲೌಕಿಕವಾದ ಔದಾರ್ಯವಿದೆ, ಬಹುಶಃ ಮತ್ತಾವ ಜೈನಕವಿಯಲ್ಲಿಯೂ ಕಾಣಬರದ ಒಂದು ಸ್ವತಂತ್ರ ಮನೋವೃತ್ತಿಯಿದೆ. ಮನಗಂಡುದನ್ನು ನಿರ್ದಾಕ್ಷಿಣ್ಯವಾಗಿ ನುಡಿಯಬಲ್ಲ ಕೆಚ್ಚಿದೆ, "ತನು, ರೂಪ, ವಿಭವ, ಯೌವನ, ಧನ, ಸೌಭಾಗ್ಯ, ಆಯುರಾದಿಗಳ್ ಮಿಂಚಿನ ಪೊಳಪಿನಂತೆ, ಮುಗಿಲ ನೆಳಲಂತೆ, ಬೊಬ್ಬುಳಿಕೆಯುರ್ಬಿನಂತೆ" ಕ್ಷಣಭಂಗುರವೆಂಬ ಜೈನರ ಕ್ಷಣಿಕವಾದ ರತ್ನಾಕರನಿಗೆ ರುಚಿಸುವುದಿಲ್ಲ. ಅವೆಲ್ಲ ಕ್ಷಣಿಕವಾದರೂ ಅದು ಭೋಗಕ್ಕೆ ಅಯೋಗ್ಯವಲ್ಲ. ಕ್ಷಣಿಕವೆಂಬುದನ್ನು ಅರಿತು, ಭೋಗವಿಮುಖನಾಗದೆಯೇ ಶಾಶ್ವತಸುಖವನ್ನು ಅರಸುತ್ತಾ ಹೋಗಬೇಕೆಂಬುದು ಆತನ ಸಂದೇಶ. ಇದೇ ಭಾವವು ಭರತೇಶ ವೈಭವದಲ್ಲಿ ತಾನೇತಾನಾಗಿ ತಾಂಡವವಾಡುತ್ತಿದೆ. ಈ ಕವಿಯ ರತ್ನಾಕರ ಶತಕವು ಜೈನರಿಗೆ ಮಾತ್ರವಲ್ಲದೆ ಇತರರಿಗೂ ಆಕರ್ಷಣೀಯವಾದುದು. ಕವಿಯು ಆತ್ಮರೋದನವನ್ನು ಹೃದಯಂಗಮವಾಗಿ ಚಿತ್ರಿಸಿರುವ ಆ ಕಾವ್ಯಜೈನೇತರರೂ ಬಳಸಿಕೊಂಡು ಭೋಗಿಸಬಹುದಾದ ದೊಡ್ಡ ಆಸ್ತಿ". (ಭರತೇಶ ವೈಭವ ಸಂಗ್ರಹ, ಪೀಠಿಕೆ, ಪುಟ ೨೦) ಎಂದು ಹೇಳಿರುವುದನ್ನು ನಾವು ಸಂಪೂರ್ಣವಾಗಿ ಸಮರ್ಥಿಸುತ್ತೇವೆ.

## ೪. ಹಾಡುಗಳು

ಈ ಮಹಾಕವಿಯು ಜನ ಸಾಮಾನ್ಯರ ಉದ್ಧಾರಕ್ಕಾಗಿ ಕೆಲವು ಹಾಡುಗಳನ್ನು ಬರೆದಿರುತ್ತಾನೆ. ಇವು 'ಅಣ್ಣಗಳ ಪದಗಳು' ಅಥವಾ 'ರತ್ನಾಕರಣ್ಣಗಳ ಪದ ಜಾತಿ' ಎಂಬ ಹೆಸರಿನಿಂದ ಪ್ರಸಿದ್ಧವಾಗಿವೆ. ಈ ಹಾಡುಗಳು ಧರ್ಮ, ನೀತಿ, ತತ್ವಗಳನ್ನು ಬೋಧಿಸುತ್ತಿವೆ. ಈ ಕವಿಯ ರಸಮಯವಾದ ಕೆಲವು ಸಾಂಗತ್ಯಗಳನ್ನು ಈ ಮುಂದೆ ವಾಚಕರು ಓದಬಹುದು.

ನೋಟದೊಳಗೆ ಕೊಂದರೊಮ್ಮೆ। ನೋಟಕರನು ನಾಟಿಸಿ ನಸುನಗೆಯಿಂದ।
ಲೂಟಿಮಾಡಿದರು ವೈಯಲೆದಾಟದಿಂದೆದೆ ಗೋಟಿಯ ಕೊಂಡರೇನೆಂಬೆ॥

ಸುಳಿದು ಸುತ್ತುವಳು ನಾಟ್ಯದೊಳು ಸಮ್ಮೋಹನ।
ಜಳಧಿಯ ಸುಳಿಯೋ ಎಂಬಂತೆ
ಬಲಕೆಡದೊಲೆದು ಹರಿವಳೆಳೆಬಿಸಿಲಲ್ಲಿ ಎಳನಾಗ ಹರಿವಂತೆ ಮುರಿದು ॥

ಈ ಪದ್ಯಗಳಲ್ಲಿ ನರ್ತನದ ವಿಷಯವನ್ನು ಕವಿಯು ಸ್ವಾರಸ್ಯವಾಗಿ ಹೇಳಿದ್ದಾನೆ.

ಒಳಗುಣ್ಮಿದಾನಂದ ರಸ ತನ್ನ ತುಂಬಿ
ತುಳುಕಿ ಹೊರಗೆ ಸೂಸುವಂತೆ॥
ತೆಳುವಸುರಿಂದ ಬಾಯ್ದೆರೆಯೊಳು ಸುಸ್ವರ
ಹೊಳೆದು ಮೋಹಿಸುತಿದ್ದುವಾಗ॥
ಸುಳಿನಾಭಿಯೊಳು ಹುಟ್ಟಿ ಮೆಲ್ಲೆದೆಯೊಳು ಬೆಳೆ
ದೊಳಗೊರಲೊಳು ಪ್ರಾಯಪಡೆದು।
ಎಳೆಯಳ ಬ್ರಹ್ಮರಂಧ್ರವನೇರಿ ಬಾಯ್ದೆರೆ
ಗಿಳಿದು ಮೋಹಿಸಿದುದಾಳಾಪ॥
ಉಕ್ಕಂದವಾಗಿ ತುಂಬಿದ ಗಾನರಸವನು
ದಿಕ್ಕುದಿಕ್ಕಿಗೆ ಚಿಮ್ಮುವಂತೆ।
ಚೊಕ್ಕಚೊಕ್ಕನೆ ತಾನಗಳತಂದು ಕೊರಲಲಿ
ಜಕ್ಕುಲಿಸಿದರು ಜಾಣೆಯರು॥

ಈ ಮೇಲೆ ಕಂಡ ಪದ್ಯಗಳಲ್ಲಿ ಸಂಗೀತ ಶಾಸ್ತ್ರವಿಷಯವನ್ನು ಕವಿ ಅತ್ಯಂತ ಹೃದಯಂಗಮವಾಗಿ ನಿರೂಪಿಸಿದ್ದಾನೆ. ಮುಖ್ಯವಾಗಿ ಕನ್ನಡ ಸಾಹಿತ್ಯದಲ್ಲಿಯೇ ಈತನವು ಅಮರಕೃತಿಗಳೆನ್ನಬಹುದು.

### ೩. ಮಹಾಕವಿ ಮುದ್ದಣ:

(ಕಾಲ; ಕ್ರಿ. ಶ. ಸು. ೧೯೦೦)

ಕನ್ನಡ ಸಾಹಿತ್ಯದಲ್ಲಿ ಮರೆಯಲಾಗದ ಮತ್ತೊಬ್ಬ ಮಹಾಕವಿ ಮುದ್ದಣ. ಈತನ ಅಮರಕೃತಿಗಳು ಮೂರು:—(೧) ರಾಮಪಟ್ಟಾಭಿಷೇಕ, (೨) ಅದ್ಭುತ ರಾಮಾಯಣ, (೩) ಶ್ರೀ ರಾಮಾಶ್ವಮೇಧ.

'ಕನ್ನಡ ಕವಿಚರಿತೆ'ಯಲ್ಲಿ ಈತನನ್ನು ಕುರಿತು: "ನಂದಳಿಕೆ ಲಕ್ಷ್ಮೀ ನಾರಣಪ್ಪ–ಈತನು ಸ್ಮಾರ್ತ ಕವಿ; ಈತನ ತಂದೆ ಪಾತಾಳಿ ತಮ್ಮಯ್ಯ, ತಾಯಿ ಮಹಾಲಕ್ಷ್ಮಿ, ಉಡುಪಿ ತಾಲ್ಲೂಕು ನಂದಳಿಕೆ ಇವನ ಊರು. ಬಾಲ್ಯದಲ್ಲಿ ಮನೆಯವರು 'ಮುದ್ದಣ' ಎಂದು ಕರೆಯುತ್ತಿದ್ದರು. ಈತನು ಉಡುಪಿಯಲ್ಲಿ ಕಸರತ್ತನ್ನು ಕಲಿಸುವ ಉಪಾಧ್ಯಾಯನಾಗಿದ್ದನು. 'ಶ್ರೀರಾಮ ಪಟ್ಟಾಭಿಷೇಕ'ವನ್ನು ತಾಯಿಯ ಹೆಸರಿನಲ್ಲೂ 'ರಾಮಾಶ್ವಮೇಧ'ವನ್ನು ತನ್ನ ಬಾಲ್ಯದ ಹೆಸರಿನಲ್ಲಿಯೂ 'ಅದ್ಭುತ ರಾಮಾಯಣ'ವನ್ನು ತನ್ನ ಹೆಸರಿನಲ್ಲಿಯೂ ಬರೆದಿದ್ದಾನೆ. ಆಧುನಿಕನಾದರೂ ಈತನ ಬಂಧವು ಶ್ಲಾಘ್ಯವಾಗಿದೆ. ಈ ಕವಿಯ ಇತರ ಗ್ರಂಥಗಳು:—ಕುಮಾರ ವಿಜಯ, ರತ್ನಾವಳೀ ಕಲ್ಯಾಣ, (ಇವೆರಡೂ ಯಕ್ಷಗಾನಗಳು) ಭಗವದ್ಗೀತೆ (ಭಾ.ಷ.) ಕಾಮಶಾಸ್ತ್ರ....." [ಕರ್ನಾಟಕ ಕವಿಚರಿತೆ, ಭಾಗ ೩, ಪು. ೨೯೯]—ಎಂದು ಬರೆದಿದ್ದಾರೆ.

ಮಹಾಕವಿ ಮುದ್ದಣ್ಣನು ಆಕಾರದಿಂದ ಕಿರಿದಾದ, ಪ್ರಭಾವದಿಂದ ಹಿರಿದಾದ ಕೃತಿಗಳನ್ನು ಕನ್ನಡದಲ್ಲಿ ರಚಿಸಿ ವಿಖ್ಯಾತನಾಗಿದ್ದಾನೆ.

(೧) ಶ್ರೀರಾಮ ಪಟ್ಟಾಭಿಷೇಕ: ಹೆಸರಿಗೆ ತಕ್ಕಂತೆ ಶ್ರೀರಾಮಚಂದ್ರನ ಪಟ್ಟಾಭಿಷೇಕದ ಕಥೆ ಇದರಲ್ಲಿ ನಿರೂಪಿತವಾಗಿದೆ. ಇದರಲ್ಲಿ ೨೪೭ ವಾರ್ಧಕ ಷಟ್ಪದಿಗಳಿವೆ. ಮಾದರಿಗಾಗಿ ಮುಂದಿನ ಪದ್ಯವನ್ನು ಓದಬಹುದು.

ಆಡಿದಂತಯ್ಯನಡವಿಗೆ ಪೋದುದರಿದಲ್ಲ।
ಕಾಡೊಳ್ತೊಳಲ್ದುದತಿಶಯಮಲ್ಲ ರಕ್ಕಸರ–
ಕೂಡ ಕೈಗೆಯ್ದುದಚ್ಚರಿಯಲ್ಲ ದೇವರ್ಕಳಂ
ಪೊರೆಯೆ ದೊಡ್ಡಿತಲ್ಲ॥
ಖೋಡಿ ಘಾತಕಿ ಪಿಸುಣನತಿ ಕೋಪಿ ಪಾಪಿ ಕುಲ–
ಗೇಡಿ ಭ್ರಾತೃದ್ರೋಹಿ ತನ್ನೊಳೊರೆದಂತೆ ಕಾ।
ಪಾಡಲೆಂದೈತಂದುದಿದುವೆ ಪಿರಿದೆಂದು
ಕಾಲ್ಗೆರಗಿದಂ ರಘುರಾಮಗೆ॥

ಲಂಕೆಯಿಂದ ಹಿಂತಿರುಗಿದ ರಾಮಚಂದ್ರನನ್ನು ಭರತನು ಸಂಧಿಸಿದಾಗ ಆಡಿದ ಮಾತುಗಳು ಇವು ಎಂಬುದನ್ನು ನಾವು ಈ ಕಾವ್ಯದಲ್ಲಿ ಮನಗಾಣಬಹುದು.

೨. 'ಶ್ರೀರಾಮಾಶ್ವಮೇಧಂ:' ಇದು ಮುದ್ದಣನ ಅಮರಕೃತಿ. ಹೆಸರಿಗೆ ತಕ್ಕಂತೆ ಉತ್ತರ ರಾಮಾಯಣದ ಕಥೆ—ಶ್ರೀರಾಮಚಂದ್ರನು ಅಶ್ವಮೇಧಯಾಗ ಮಾಡಿದ ಕಥೆಯನ್ನು ಕವಿ ಇಲ್ಲಿ ನಿರೂಪಿಸಿದ್ದಾನೆ. ಕನ್ನಡ ಸಾಹಿತ್ಯದ ಗದ್ಯವಾಙ್ಮಯದಲ್ಲಿ ಈ ಗ್ರಂಥವು ರತ್ನಪ್ರಾಯವೆನಿಸಿದೆ. 'ಚಾವುಂಡರಾಯಪುರಾಣ;' 'ಚಿಕದೇವರಾಜ ವಿಜಯ' ಮೊದಲಾದ ಪ್ರಾಚೀನ ಕನ್ನಡ ಗದ್ಯ ಗ್ರಂಥಗಳನ್ನು ಓದಿದ ಜನಕ್ಕೆ, ಮುದ್ದಣನ ಈ ಗ್ರಂಥವನ್ನು ಓದುವಾಗ, ನವರಸದ ಔತಣ ಎಂದೆನಿಸುವಂತಿದೆ. ಕವಿಯ ಶೈಲಿ ಪ್ರಾಚೀನ ಹಳಗನ್ನಡ. ನಿರೂಪಣೆಯ ರೀತಿ ನವೀನ ಕಾದಂಬರಿಯ ಕಾಲೋಚಿತ ಜ್ಞಾನವನ್ನೂ, ಕಲಾನೈಪುಣ್ಯವನ್ನೂ ನಾವು ಮನಗಾಣ ಬಹುದು.

"ಓವೊ! ಕಾಪುರುಷಂಗೆ ಗುಣಮಣ ಮಿಲ್ಲಂಗಡ! ನಿಸ್ತೇಜಂಗಡ ಜಡಂಗಡ! ಒಡಲೊಳ್ ಗುಡುಗುಟ್ಟುಂಗಡ! ಏನರಮನೆವಾಗಿಲಂ ಮುಗಿ ಲ್ದೆರೆಯಿಂ ಬಾಸಣಿಸಿರ್ಪರ್? ಆರ್ಗಂ ಪುಗಲಾಣತಿಯಿಲ್ಲದಿರ್ಕುಂ. ಮಡದಿ ಬಾನ್ನೀರೆಯೋರ್ವಳ್ ಚಂಚಲದೃಷ್ಟಿಯಿಂ ಅತ್ತಮಿತ್ತಂ ನೋಳ್ಪಳ್"…. ಮೂಲಿಗೆಮುರ್ದಂ ಕೊಂಡೊಯ್ಯುವಡಕ್ಕುಂ. ಸಿಡಿಲಾಳ್ ತಡೆಯದೆಡೆಯ ನಡುವೆಟ್ಟುಗಳ್ಗೆ ಕಟ್ಟುಬ್ಬರದಿಂ ಬಂದೆರಗುಗುಂ ಕುತ್ತಮೇಂ? ಸುಗ್ಗಿ ಯೊಳುಂಡುದಂ ಕಾರೊಳ್ ಕಾರುವನಕ್ಕುಂ. ಕಾಲಂ! ಕಷ್ಟಂ! ಕಷ್ಟಂ!!

—ಎಂಬ ಈ ಗ್ರಂಥದ ಮೊದಲನೆಯ ವಾಕ್ಯದಲ್ಲಿಯೇ ಈ ಕಾವ್ಯದ ಸೌಂದರ್ಯವನ್ನು ನಾವು ಮನಗಾಣಬಹುದು.

೩. 'ಅದ್ಭುತ ರಾಮಾಯಣ:' ಇದನ್ನು ಕವಿ ಹಳಗನ್ನಡದಲ್ಲಿಯೇ ಬರೆದಿದ್ದಾನೆ. ಇದರಲ್ಲಿ ರಾಮಾಯಣಕ್ಕೆ ಸಂಬಂಧಪಟ್ಟ ಸುಂದರ ಕಥೆಗಳಿವೆ. ಅಂಬರೀಷ ವರಪ್ರದಾನ, ನಾರದ ಪರ್ವತರ ಕಲಹ, ರಾಮಜನ್ಮೋಪಕ್ರಮ, ಕೌಶಿಕಾದಿ ವೈಕುಂಠ ಲೋಕಪ್ರಾಪ್ತಿ, ಹರಿಮಿತ್ರೋಪಾಖ್ಯಾನ, ನಾರದ ಗಾಯನಪ್ರಾಪ್ತಿ, ಶ್ರೀ ಸೀತಾಜನ್ಮ ಕಥನ, ಜಾಮದಗ್ನಿ ವಿಶ್ವರೂಪ ದರ್ಶನ, ಹನುಮದ್ವಿಶ್ವರೂಪ ದರ್ಶನ, ಸೀತಾಭಾಷಣ, ಪುಷ್ಕರ ದ್ವೀಪಗಮನ, ಸಂಕುಲ ಯುದ್ಧ, ರಾಮ ಮೂರ್ಛಾಪ್ರಾಪ್ತಿ, ಸೀತಾ-ರಾಮರ ಅಯೋಧ್ಯಾ

ಗಮನ–ಎಂಬಿಷ್ಟು ಕಥೆಗಳು ಇದರಲ್ಲಿ ನಿರೂಪಿತವಾಗಿವೆ. ಈ ಗ್ರಂಥವು ೧೬ ಆಶ್ವಾಸಗಳಾಗಿ ನಿರೂಪಿತವಾಗಿದೆ–ಎಂಬುದು ಗಮನಾರ್ಹವಾಗಿದೆ. ರಾಮಾಶ್ವಮೇಧ ಮತ್ತು ಅದ್ಭುತ ರಾಮಾಯಣಗಳಲ್ಲಿ ಕವಿಯು ಹಳಗನ್ನಡ ದಲ್ಲಿ ಎಂತಹ ಘನಪಂಡಿತನಾಗಿದ್ದನೆಂಬುದನ್ನು ನಾವು ಅರಿಯಬಹುದು.

ಪೂರ್ವೋಕ್ತವಾದ ಈತನ ಯಕ್ಷಗಾನ ಗ್ರಂಥಗಳು ಮಂಗಳೂರು ಜಿಲ್ಲೆಯಲ್ಲಿ ಪ್ರಸಿದ್ಧವಾಗಿವೆ. 'ಯಕ್ಷಗಾನ ಬಯಲಾಟ' ಎಂಬ ಗ್ರಂಥದಲ್ಲಿ ಶ್ರೀಮಾನ್ ಶಿವರಾಮ ಕಾರಂತರು ಈ ಕವಿಯನ್ನು ಕುರಿತು–"ನಂದಳಿಕೆ ಲಕ್ಷ್ಮೀನಾರಾಯಣಪ್ಪ ೧೯೦೬ರಲ್ಲಿ ಗತಿಸಿದ ಮುದ್ದಣ ಕವಿಯು. ಎರಡು ಯಕ್ಷಗಾನ ಪ್ರಬಂಧಗಳನ್ನು ಬರೆದಿದ್ದಾನೆ. ಅವು ರತ್ನಾವತೀ ಕಲ್ಯಾಣ ಮತ್ತು ಕುಮಾರ ವಿಜಯ ಎಂಬುವು. ಆತನ ಕಾವ್ಯ ಪ್ರವೇಶಕ್ಕೆ ಈ ಯಕ್ಷ ಗಾನ ಸಾಹಿತ್ಯವೇ ಪ್ರಥಮ ಸೋಪಾನವಾಗಿದ್ದಿರಬೇಕು. ಈ ಎರಡು ಪ್ರಬಂಧಗಳಲ್ಲಿ ಲಕ್ಷ್ಮೀನಾರಾಯಣಪ್ಪ ತನ್ನ ಗುರುವಾದ ಮುಳಲಿ ಸುಬ್ಬ ರಾಯರಿಗೆ ಕೃತಜ್ಞತೆಯನ್ನು ಸಲ್ಲಿಸಿದ್ದಾನೆ. ಅವನ ಗುರುಗಳಾಗಿದ್ದ ದಿವಂಗತ ಸುಬ್ಬರಾಯರೂ ಕೆಲವು ಯಕ್ಷಗಾನ ಪ್ರಬಂಧಗಳನ್ನು ಬರೆದು ಪ್ರಕಟ ಸಿದ್ದರು....ರತ್ನಾವತೀ ಕಲ್ಯಾಣ ಇದರಲ್ಲಿನ ಹಾಡುಗಳು ಅಷ್ಟೊಂದು ಸರಳ ವಾಗಿಲ್ಲವಾದರೂ ಸುಂದರವಾಗಿವೆ. ಕವಿ ಚೆನ್ನಾದ ಧಾಟಿಗಳನ್ನು ಆರಿಸಿ ಕೊಂಡಿರುವುದು ಕಾಣಿಸುತ್ತದೆ. ಆತನಿಗೆ ಹಿಂದೂಸ್ತಾನಿ ರಾಗಗಳ ಪರಿಚಯು ವಿದ್ದು ಅವನ್ನು ಬಳಸಲು ಪ್ರಯತ್ನಿಸಿದ್ದೂ ಕಾಣಿಸುತ್ತದೆ. ಆತ ಒಂದೆಡೆ ಯಲ್ಲಿ ಭೈರವಿ, ದಕ್ಷಿಣಾದಿಯ ತೋಡಿಗೆ ಸಮವೆಂದು ತಿಳಿಸಿದ್ದಾನೆ.... ಕುಮಾರ ವಿಜಯ ಹಾಡುಗಳ ಬಿಗುಪು ಮತ್ತಷ್ಟು ಅಧಿಕ. ಅದರ ಒಂದು ಸ್ತುತಿ ಪದ್ಯದಲ್ಲಿ ಕವಿಯು ಸ್ವರಪ್ರಸ್ತಾರವನ್ನು ಸೇರಿಸಿಬಿಟ್ಟದ್ದಾನೆ. ಈ ಕವಿಯು ಪ್ರಯೋಗ ಶೀಲನೆಂದು ಅದರಿಂದ ಸ್ಪಷ್ಟವಾಗುತ್ತದೆ....ಆದರೆ ಇಂಥ ಭಾಷಾ ಜಾಣ್ಮೆಯನ್ನು ಮಾತಿನ ಡೊಂಬರನ್ನೂ ಜೀರ್ಣಿಸಿಕೊಳ್ಳುವ ತ್ರಾಣ ಜನಸಾಮಾನ್ಯರಿಗಿರಲಾರದು. ಅಲ್ಲದೆ ಈ ಬಗೆಯ ಚಮತ್ಕಾರ ವನ್ನೂ ಕಲೆಯೆಂದು ತಿಳಿಯಲೇಬೇಕಿಲ್ಲ"—ಎಂದು ಬರೆದಿದ್ದಾರೆ. (ಪೃ. ೨೬೯–೨೭೩.)

## ೪. ಕವಿ ಪಾರ್ತಿಸುಬ್ಬ

"ಈತನು ದಕ್ಷಿಣ ಕನ್ನಡ ಜಿಲ್ಲಾ ಕುಂಬಳೆಯವನು. ಸು. ಕ್ರಿ. ಶ. ೧೭೫೦ರಲ್ಲಿ ಜನಿಸಿ, ಸು. ಕ್ರಿ. ಶ. ೧೮೧೫-೫೦ ರವರೆಗೆ ಬಾಳಿದನು. ಅನೇಕ ಯಕ್ಷಗಾನ ಪ್ರಬಂಧಗಳನ್ನು ಬರೆದ ಉತ್ತಮ ಕವಿಯೂ ಅಲ್ಲದೆ ಸ್ವತಃ ಭಾಗವತನೂ ಆಗಿದ್ದನು"-ಎಂದು ದಿ॥ ಮುಳಿಯ ತಿಮ್ಮಪ್ಪಯ್ಯನವರು ತಮ್ಮ "ಪಾರ್ತಿ ಸುಬ್ಬ" ಎಂಬ ಗ್ರಂಥದ ಮುನ್ನುಡಿಯಲ್ಲಿ ತಿಳಿಸಿದ್ದಾರೆ. ಈ ಜಾನಪದ ಕವಿಯು ಅತ್ಯಂತ ಸ್ವಾರಸ್ಯವಾದ ರಾಮಾಯಣದ ಗ್ರಂಥಗಳನ್ನು ಬರೆದಿರುವಂತೆ ತಿಳಿದುಬಂದಿದೆ. (೧) ಪಟ್ಟಾಭಿಷೇಕ (೨) ಪಂಚವಟಿ (೩) ವಾಲಿ ಸಂಹಾರ (೪) ಉಂಗುರ ಸಂಧಿ ಅಥವಾ ಚೂಡಾಮಣಿ (೫) ಸೇತುಬಂಧನ (೬) ಅಂಗದ ಸಂಧಾನ (೭) ಕುಂಭಕರ್ಣನ ಕಾಳಗ (೮) ಇಂದ್ರಜಿತು ಕಾಳಗ (೯) ರಾವಣನ ವಧೆ-ಈ ವಿಷಯಗಳನ್ನೊಳಗೊಂಡಂತೆ ಯಕ್ಷಗಾನಗಳನ್ನು ಬರೆದಿದ್ದಾನೆ.

## ೫. ಕವಿ ಸಾಳ್ವ

(ಕಾಲ ಸು. ಕ್ರಿ. ಶ. ೧೫೫೦)

ಈತನು ದಕ್ಷಿಣ ಕನ್ನಡ ಜಿಲ್ಲೆಯ ಮತ್ತೊಬ್ಬ ಪ್ರಖ್ಯಾತನಾದ ಕವಿ. ಇವನು ಜೈನ. 'ಸಾಳ್ವ ಭಾರತ', 'ರಸರತ್ನಾಕರ', 'ವೈದ್ಯವಿಲಾಸ' ಮತ್ತು 'ಶಾರದಾ ವಿಲಾಸ'—ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಇವನ ತಂದೆಯ ಹೆಸರು ಧರ್ಮಚಂದ್ರ. ಈತನ ಗುರುವಿನ ಹೆಸರು ಶ್ರುತಿಕೀರ್ತಿ, ಇವನಿಗೆ 'ಸಾಜಕವಿ', 'ಕರ್ಣಾಟ ಲಕ್ಷಣದೋಜ'—ಎಂಬ ಬಿರುದುಗಳಿವೆ.

೧. 'ಸಾಳ್ವ ಭಾರತ': ಇದು ಭಾ. ಷ. ಯಲ್ಲಿ ರಚಿತವಾಗಿದೆ. ಇದರಲ್ಲಿ ಈ ಗ್ರಂಥದ ಉತ್ಕೃಷ್ಟತೆಯನ್ನು ಕವಿ ಹೀಗೆ ಹೇಳುತ್ತಾನೆ:—

ಭಾ. ಷ॥ ನವರಸದನೆಲೆ ಮಧುರಭಾವದ
ತವದಲಂಕಾರಂಗಳಿಂದೊ-
ಪ್ಪುವ ವಿಮಲಲಲಿತಾಂಗ ಮೃದುಪದರಚನೆ
........ ........ ........ ........ ........ ನೆರೆಮೆರೆವ॥

ವಿವಿಧ ಗುಣಗಣನಿಳಯೆ ಸೊಬಗಿನ
ಸವಿಯ ಸೈವರೆಗರೆವ ಮತ್ಕೃತಿ
ಯುವತಿ ಚದುರರ ಮನವನಿಕ್ಕುಳಿಗೊಳ್ವುದಚ್ಚರಿಯೆ॥

೨. 'ರಸರತ್ನಾಕರ': ಇದು ಮುಖ್ಯವಾಗಿ ರಸಪ್ರಕ್ರಿಯೆಯನ್ನು ಪ್ರತಿಪಾದಿಸುತ್ತದೆ. ಶೃಂಗಾರ, ರಸವಿವರ್ಣ, ನಾಯಕ-ನಾಯಿಕಾವಿವರಣ, ಭಾವಾಧಿಕರಣ ಎಂದು ೪ ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಸಾಹಿತ್ಯದ ವಿದ್ಯಾರ್ಥಿಗಳಿಗೆ ಈ ಗ್ರಂಥ ಬಹಳ ಉಪಯುಕ್ತವಾಗಿದೆ.

೩. 'ಶಾರದಾವಿಲಾಸ': ಇದು ಕಾವ್ಯಕ್ಕೆ ಜೀವವೆಂದು ಹೇಳುವ 'ಧ್ವನಿ'ಯನ್ನು ಪ್ರತಿಪಾದಿಸುತ್ತದೆ. 'ಕನ್ನಡದಲ್ಲಿ ಧ್ವನಿ ವಿಷಯಕವಾದ ಗ್ರಂಥವು ಇದೊಂದೇ ಎಂದು ತೋರುತ್ತದೆ'-ಎಂಬುದಾಗಿ ಕವಿಚರಿತೆಕಾರರು ಹೇಳಿದ್ದಾರೆ.

—['ಕವಿಚರಿತೆ, ಭಾಗ ೨. ಪು. ೨೪೯'] ಕವಿ ಈ ಗ್ರಂಥವನ್ನು ತನ್ನ ಪೋಷಕನಾದ ಸಾಳ್ವಮಲ್ಲನ ಖ್ಯಾತಿಗಾಗಿ ಬರೆದಂತೆ ಐತಿಹ್ಯವಿದೆ.

೪. 'ವೈದ್ಯ ಸಾಂಗತ್ಯ': ಇದರಲ್ಲಿ ಕವಿಯು ಅನೇಕ ಔಷಧಿಗಳ ವಿಚಾರವನ್ನೂ, ರೋಗಗಳ ಕಾರಣವನ್ನೂ, ಅದರ ಪರಿಹಾರದ ಮಾರ್ಗ ವನ್ನೂ ನಿರೂಪಿಸಿರುತ್ತಾನೆ.

ಕವಿ ಸಾಳ್ವನು ದಕ್ಷಿಣ ಕನ್ನಡ ಜಿಲ್ಲೆಯ ಯಾವ ಊರಿನವನು ಎಂಬ ವಿಷಯ ನಮಗೆ ತಿಳಿಯದು. (ಸಂಶೋಧಕರು ತಿಳಿಸಿದರೆ ನಮಗೆ ಉಪಕಾರ ವೆನಿಸುವುದು.) ಸಂ.

## ೬. ಕವಿ ಪದ್ಮನಾಭ

(ಕಾಲ: ಸು. ಕ್ರಿ. ಶ. ೧೬ನೆಯ ಶತಮಾನ)

ಇವನು ಬರೆದಿರುವ ಗ್ರಂಥ 'ಶ್ರೀ ಪದ್ಮಾವತೀ ಮಹಾತ್ಮ್ಯೆ' ಅಥವಾ 'ಜಿನದತ್ತರಾಯನ ಚರಿತ್ರೆ'. ಇವನು ದಕ್ಷಿಣ ಕನ್ನಡ ಜಿಲ್ಲೆಯ ಮೂಲ್ಕಿ ಯವನೆಂದು ತಿಳಿದುಬಂದಿದೆ. ಹೊಂಬುಜ ಕ್ಷೇತ್ರದಲ್ಲಿ ಪದ್ಮಾವತಿಯನ್ನು

ಪ್ರತಿಷ್ಠಿಸಿದ ಜಿನದತ್ತರಾಯನ ಚರಿತ್ರೆ ಈ ಗ್ರಂಥದಲ್ಲಿ ನಿರೂಪಿತವಾಗಿದೆ. ಇದನ್ನು ಸಾಂಗತ್ಯದಲ್ಲಿ ಬರೆಯಲಾಗಿದೆ. ಇವನ ಕವಿತೆಯ ಮಾದರಿಗಳು—

ಸಾಂಗತ್ಯ ॥ ಶ್ರೀಸುರನರ ನಾಗರಾಜ ಪೂಜಿತ ಪಾದ।
ಭಾಸುರ ಜ್ಞಾನಪ್ರಕಾಶ॥
ಸಾಸಿರ ನಾಮದೊಡೆಯ ಪಾರಿಶ್ವೇತ।
ಲೇಸನಿತ್ತೆಮ್ಮ ರಕ್ಷಿಪುದು॥

ಭೇದಿಸಿ ಸಕಲಕರ್ಮವನು ನಾ ಬಲು ಬೇಗ
ಸಾಧಿಪೆನೆನುತ ಮೋಕ್ಷವನು॥
ಭೇದವಿಲ್ಲದೆ ಚಿಂತಿಸುತಿರುತಿಹ ಸರ್ವ।
ಸಾಮ್ಯಗಳಿಗೆ ನಮೋ ಎಂಬೆ॥

—ಈತನ ಗ್ರಂಥವು ಸುಲಲಿತವಾದದ್ದು ದ್ರಾಕ್ಷಾಪಾಕದಲ್ಲಿ ರಚಿತ ವಾಗಿದೆ.

ಮೇಲೆ ಕಂಡಂತೆ ಗಣ್ಯವಾದ ಪ್ರಾಚೀನ ಕವಿಗಳೇ ಅಲ್ಲದೆ ಆಧುನಿಕ ಕಾಲದಲ್ಲಿ ಕೂಡಾ ಪ್ರಖ್ಯಾತರಾದ ಸಾಹಿತಿಗಳು ಅನೇಕರು ಈ ಜಿಲ್ಲೆಯಲ್ಲಿ ಆಗಿಹೋಗಿರುವರೆಂಬುದು ಗಮನಾರ್ಹವಾಗಿದೆ.

ದಿ॥ ಪಂಜೆ ಮಂಗೇಶರಾಯರು ಸಣ್ಣ ಕತೆಗಳ ಆಚಾರ್ಯರೆನಿಸಿ ಮತ್ತು ನವೀನ ಸಾಹಿತ್ಯದಲ್ಲಿ ಪ್ರಖ್ಯಾತರಾಗಿಹೋಗಿದ್ದಾರೆ. ಇವರು ಬರೆದ ಕತೆಗಳು ೧೯೦೧ರಲ್ಲಿ ಸುವಾಸಿನಿ ಪತ್ರಿಕೆಯಲ್ಲಿ ಪ್ರಕಟವಾಗಿವೆ. ಸಂಶೋಧನಾತ್ಮಕ ಲೇಖನಗಳನ್ನು ಬರೆದು ಬಾಲಸಾಹಿತ್ಯವನ್ನು ರಚಿಸಿ ಇವರು ಕನ್ನಡಿಗರಲ್ಲಿ ಆದ್ಯ ಪ್ರವರ್ತಕರಾಗಿದ್ದಾರೆ. ಇವರ ಕೋಟಿಚನ್ನಯ್ಯ, ಕೊಕ್ಕೊಕೋಳಿ, ಗುಡು ಗುಡು, ಗುಮ್ಮಟದೇವರು ಮೊದಲಾದ ಕಲಾಕೃತಿಗಳು ಪ್ರಖ್ಯಾತ ವಾಗಿವೆ. ಇವರ ಕಾಲ (ಕ್ರಿ. ಶ. ೧೮೭೪-೧೯೩೭.) ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿದ್ದರು.

ದಿ॥ ಬೆನಗಲ್ ರಾಮರಾಯರು ಮದರಾಸಿನ ಶ್ರೇಷ್ಠ ಭಾಷಾಂತರ ಕಾರರಾಗಿದ್ದರು (ಸು. ಕ್ರಿ. ಶ. ೧೮೭೬-೧೯೪೩.) ಇವರು ಶಿವತತ್ವರತ್ನಾಕರ,

ಬೀಳಿಗೆ ಅರಸರ ವಂಶಾವಳಿ, ಕೊಡಗಿನ ರಾಜೇಂದ್ರನಾಮೆ ಮೊದಲಾದ ಗ್ರಂಥಗಳನ್ನು ಪ್ರಕಟಿಸಿ ಸಾಹಿತ್ಯಕ್ಕೆ ಮಹೋಪಕಾರ ಮಾಡಿದ್ದಲ್ಲದೆ ಸತ್ಯರಾಜ ಪೂರ್ವದೇಶ ಯಾತ್ರೆಗಳು, ಕೃಷ್ಣಾಕುಮಾರಿ, ರಮಾಮಾಧವ, ಕರ್ಣಾಟಕ ಘೋಷಯಾತ್ರೆ, ಪಂಚಮಾಲೆ, ಸುಭದ್ರಾವಿಜಯ, ಕಲಹಪ್ರಿಯ, ಸುಭದ್ರಾ ಹರಣ, ಪದ್ಮಾವತಿ, ಪುರಾಣನಾಮ ಚೂಡಾಮಣಿ, ಸದಾಚಾರವಿವೇಕ, ಇರಾವತಿ, ಮಹನೀಯರ ಚರಿತ್ರಮಾಲೆ, ಚಿಕ್ಕಕತೆಗಳು, ದೂತಾಂಗದ, ಜಯದೇವ ವಿಜಯ, ತರೂಬಾಲ, ಪೌರ್ವಾತ್ಯರ ವರ್ಣವ್ಯವಸ್ಥೆ ಮತ್ತು ಪಾಶ್ಚಾತ್ಯರ ವರ್ಗವ್ಯವಸ್ಥೆ, ಕನ್ನಡ ಹಾಡುಗಳು ಮೊದಲಾದುವುಗಳನ್ನು ವಿರಚಿಸಿದ್ದಾರೆ. ಅಲ್ಲದೆ ಇವರು ಕರ್ನಾಟಕ ಏಕೀಕರಣಕ್ಕೆ ಆಚಾರ್ಯ ಪುರುಷರೆನಿಸಿದ್ದಾರೆ. ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿದ್ದರು.

ಧಿ|| ಮುಳಿಯ ತಿಮ್ಮಪ್ಪಯ್ಯನವರು ಪಾಂಡಿತ್ಯದಿಂದಲೂ, ಪ್ರತಿಭೆ ಯಿಂದಲೂ, ಅನುಭವದಿಂದಲೂ ವಿಖ್ಯಾತರಾದ ಮಹನೀಯರು. ಇವರು ನಾಡೋಜ ಪಂಪ, ಆದಿಪುರಾಣ ಸಂಗ್ರಹ, ಸಮಸ್ತಭಾರತಸಾರ, ಪಾರ್ತಿ ಸುಬ್ಬ, ನವನೀತ ರಾಮಾಯಣ, ಹಗಲಿರಳು, ಪಾಶ್ಚಾತ್ತಾಪ, ಸೊಬಗಿನ ಬಳ್ಳಿ, ಚಂದ್ರಾವತೀವಿಲಾಸ, ನಡತೆಯ ನಾಡು, ಬಡಹುಡುಗಿ, ಕವಿರಾಜ ಮಾರ್ಗವಿವೇಕ ಮೊದಲಾದ ಕೃತಿಗಳನ್ನು ರಚಿಸಿ ಸಾಹಿತ್ಯಕ್ಕೆ ಮಹದುಪಕಾರ ಮಾಡಿದ್ದಾರೆ. ಕಾರವಾರದ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿದ್ದರು.

ಕನ್ನಡ ನಾಡಿನ ಇತಿಹಾಸ ಪ್ರಪಂಚದಲ್ಲಿ ಪ್ರಖ್ಯಾತರೆನಿಸಿರುವ ರಾಷ್ಟ್ರ ಕವಿ ಎಂ. ಗೋವಿಂದ ಪೈಗಳವರು ಈ ಜಿಲ್ಲೆಯ ಪ್ರಖ್ಯಾತ ಸಾಹಿತಿಗಳು ಹಾಗೂ ಆಚಾರ್ಯಪುರುಷರು. ಈ ಮಹನೀಯರು, ಗಿಳಿವಿಂಡು, ವೈಶಾಖಿ, ಗೊಲ್ಗೊಥಾ–ಹೆಬ್ಬೆರಳು ಮೊದಲಾದ ಗ್ರಂಥಗಳನ್ನು ರಚಿಸಿರುತ್ತಾರೆ. ಇವರ ಪ್ರಖ್ಯಾತವಾದ ಹರಿಹರ–ರಾಘವಾಂಕರು–ದೇವರ ದಾಸಿಮಯ್ಯ–ಮೊದಲಾ ದವರ ಕಾಲನಿರ್ಣಯವು ಕನ್ನಡ ಸಾಹಿತ್ಯದಲ್ಲಿಯೇ ವಿಖ್ಯಾತವೆನಿಸಿದೆ. ಇವರು ಧಾರವಾಡದಲ್ಲಿ ಮಾಡಿದ ೩ ಭಾಷಣಗಳು. (೧) ರನ್ನನ ಪರಶುರಾಮ ಚರಿತ, ಚಕ್ರೇಶ್ವರ ಚರಿತೆಯನ್ನೂ ಗದಾಯುದ್ಧದ ರಚನಾಕಾಲವನ್ನೂ ಕುರಿತು. (೨) ಬಸವೇಶ್ವರ ಕಾಲ ನಿರ್ಣಯ. (೩) ಕನ್ನಡ ಸಾಹಿತ್ಯದ

ಪ್ರಾಚೀನತೆ.-ಎಂಬ ಭಾಷಣಗಳು ಇವರ ಅಗಾಧವಾದ ವಿದ್ವತ್ತಿಗೆ ನಿದರ್ಶನ ಗಳಾಗಿವೆ. ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿದ್ದರು.

ಈ ಮೇಲೆ ಕಂಡ ವಿದ್ವಾಂಸರುಗಳೇ ಅಲ್ಲದೆ, ವಿದಾನ್ ಭುಜಬಲಿ ಶಾಸ್ತ್ರಿಗಳು, ಶ್ರೀ ಶಿವರಾಮ ಕಾರಂತರು, ಶ್ರೀ ಕಡೆಂಗೋಡ್ಲು ಶಂಕರಭಟ್ಟರು, ಕಯ್ಯಾರ ಕಿಯ್ಯಂಣರೈ ಮೊದಲಾದ ಮಹನೀಯರು ಈ ಜಿಲ್ಲೆಯ ಸಾಹಿತಿ ಗಳಲ್ಲಿ ವಿಖ್ಯಾತರೂ ಕನ್ನಡ ನಾಡುನುಡಿಗಳಿಗೆ ಸೇವೆಯನ್ನು ಸಲ್ಲಿಸಿಯೂ ಸಲ್ಲಿಸುತ್ತಲೂ ಇರುವವರೂ ಆಗಿದ್ದಾರೆ.

ಮಂಗಳೂರು ಜಿಲ್ಲೆಯ ಸಾಹಿತ್ಯ ಸಂಪತ್ತನ್ನು ಕುರಿತಾದ ಈ ಲೇಖನ ದಲ್ಲಿ ಧರ್ಮಸ್ಥಳದ ಪೂಜ್ಯ ಹೆಗ್ಗಡೆಯವರಾಗಿದ್ದು, ಸರ್ವಧರ್ಮ ಸಮನ್ವ ಯಾಚಾರ್ಯರೆನಿಸಿ, ಚಿತ್ರಕಲಾ ವಿಶಾರದರೆನಿಸಿದ ದಿ|| ಮಂಜಯ್ಯ ಹೆಗ್ಗಡೆ ಯವರ ಪುಣ್ಯನಾಮವನ್ನು ನಾನಿಲ್ಲಿ ಸ್ಮರಿಸದಿರಲಾರೆನು.

ಮಂಗಳೂರು ಜಿಲ್ಲೆಯ ಜನರು ಸಾಹಿತ್ಯ ಪ್ರೇಮಿಗಳೆಂಬುದಕ್ಕೆ ೧೯೬೦ ರಲ್ಲಿ ಉಡುಪಿಯ ಮಣಿಪಾಲದಲ್ಲಿ ನಲವತ್ತೆರಡನೇ ಸಾಹಿತ್ಯ ಸಮ್ಮೇ ಳನ ಸೇರಿದುದೇ ಅಲ್ಲದೆ, ೧೯೩೭ರಲ್ಲಿ ಮಂಗಳೂರಿನಲ್ಲಿಯೂ, ೧೯೪೮ರಲ್ಲಿ ಕಾಸರಗೋಡಿನಲ್ಲಿಯೂ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಗಳನ್ನು ನಾವು ಇಲ್ಲಿ ನೆನಸಿಕೊಳ್ಳಬಹುದು.

ಕನ್ನಡಕ್ಕೆ ಮೊತ್ತ ಮೊದಲು ಉತ್ತಮವಾದ ನಿಘಂಟನ್ನು ನಿರ್ಮಿಸಿ ಕೊಟ್ಟ, ಶಬ್ದಮಣಿ ದರ್ಪಣ, ಛಂದೋಂಬುಧಿ, ಪ್ರಾಕ್ಕಾವ್ಯಮಾಲಿಕೆಗಳನ್ನು ಪ್ರಕಟಿಸಿ ಕನ್ನಡಕ್ಕೆ ಮಹೋಪಕಾರ ಮಾಡಿದ ದಿ|| ಕಿಟ್ಟೆಲ್‌ರವರು ದಕ್ಷಿಣ ಕನ್ನಡ ಜಿಲ್ಲೆಯ ಮುಖ್ಯಪಟ್ಟಣವಾದ ಮಂಗಳೂರಿನಲ್ಲಿಯೇ ನೆಲಸಿದ್ದ ರೆಂಬುದನ್ನು ಇಲ್ಲಿ ನೆನೆಯುವುದು ಅನಿವಾರ್ಯವೂ ಅಗತ್ಯವೂ ಆಗಿದೆ.

ಕನ್ನಡ ಕವಿಯಾದ ಕನಕದಾಸನಿಗೆ, ತನ್ನ ದಿವ್ಯ ಸಾಕ್ಷಾತ್ಕಾರವನ್ನು ಅನುಗ್ರಹಿಸಿದ ಉಡುಪಿಯ ಶ್ರೀಕೃಷ್ಣ ಪರಮಾತ್ಮನು ಎಲ್ಲರಿಗೂ ತಿಳಿಯು ವಂತೆ ಮಂಗಳೂರು ಜಿಲ್ಲೆಯ ಹಿರಿಮೆ ಗರಿಮೆಗಳನ್ನು ಸಾರಿ ಹೇಳಿದ್ದಾನೆ. ದಾಸಸಾಹಿತ್ಯಕ್ಕೆ ಸ್ಫೂರ್ತಿಯನ್ನು ಕೊಟ್ಟ ಆಚಾರ್ಯ ಆನಂದ ತೀರ್ಥರು ಮಂಗಳೂರು ಜಿಲ್ಲೆಯವರೇ ಅಲ್ಲವೆ?

# ಸಂಸ್ಕೃತಿ ಮತ್ತು ಸಮಾಜ ಜೀವನ

ಮಾನವ ಜಾತಿಯು ಸಾವಿರಾರು ವರ್ಷಗಳ ಬಾಳಿನ ಅನುಭವ, ಆಲೋಚನಾ ಫಲ, ನಂಬಿಕೆಗಳು, ನಡೆವಳಿಕೆಗಳು ಇವುಗಳನ್ನೇ ನಾವು ಸಂಸ್ಕೃತಿಯ ಮೂಲವೆಂದು ತಿಳಿಯಬಹುದು. "ಸಂಸ್ಕೃತಿ" ಎಂಬುದು ಮಾತಿಗೆ ನಿಲುಕದೆ, ಜನರ ಆಚರಣೆಯ ರೀತಿ-ನೀತಿಗಳಿಂದ ಅನುಭವಕ್ಕೆ ಗೋಚರವಾಗುವ ವಿಷಯ. ಈ ಸಂಸ್ಕೃತಿಯು ವ್ಯಕ್ತಿಗಾಗಲಿ, ಸಮಾಜ ಕ್ಕಾಗಲಿ, ಒಂದೇ ದಿನ ಒಟ್ಟುಗೂಡಿ ಬರತಕ್ಕುದಲ್ಲ. ತೆಂಗಿನಮರದಲ್ಲಿರುವ ಕಾಯಿಯಲ್ಲಿ ರುಚಿಕಟ್ಟಾದ ನೀರು ಮತ್ತು ತಿರುಳು ಆ ವೃಕ್ಷದ ಹಲವಾರು ದಿನಗಳ ಪ್ರಯತ್ನದ ಫಲವಾಗಿ ಒಟ್ಟುಗೂಡುವಂತೆ ಜನತೆಯ—ಸಾವಿರಾರು ವರ್ಷಗಳ ನಡೆವಳಿಕೆ, ತಿಳಿವಳಿಕೆಗಳ ಫಲವಾಗಿ ಸಮಾಜಕ್ಕೆ ಕೂಡಿಬರುವ ಸಂಸ್ಕಾರ ವಿಶೇಷವನ್ನು ನಾವು 'ಸಂಸ್ಕೃತಿ' ಎಂದು ಕರೆಯಬಹುದು. ಸಮಾಜ ಜೀವನಕ್ಕೆ ಸಂಸ್ಕೃತಿಯು ಸ್ಫೂರ್ತಿಯನ್ನು ಕೊಡತಕ್ಕುದು. ಆದುದರಿಂದ ಸಂಸ್ಕೃತಿಯ ಬಲವಿಲ್ಲದ ವ್ಯಕ್ತಿ, ಕುಟುಂಬ ಮತ್ತು ಸಮಾಜ ಇವು ವಾಸನೆ ಯಿಲ್ಲದ ಹೂವು, ಮಾಧುರ್ಯವಿಲ್ಲದ ಗಾನ, ರುಚಿಕಟ್ಟಿಲ್ಲದ ಊಟ, ಮಂಗಳ ವಾದ್ಯಗಳಿಲ್ಲದ ಮದುವೆ, ಲಾವಣ್ಯವಿಲ್ಲದ ಲಲನೆ-ಇವುಗಳ ಹಾಗೆ ವ್ಯರ್ಥ ವಾದುದೇ ಸರಿ. ಜೇನುಹುಳುಗಳು ಗುಂಪು ಕೂಡಿ ಹಲವಾರು ಕಾಡು ಮೇಡುಗಳನ್ನು ಸುತ್ತಾಡಿ ಸಾವಿರಾರು ಪುಷ್ಪಗಳ ರಸವನ್ನು ಹೀರಿ ತಂದು ಮಧುರ ತಮವಾದ ಜೇನುತುಪ್ಪವನ್ನು ತಮ್ಮ ಗೂಡುಗಳಲ್ಲಿ ಸಿದ್ಧಗೊಳಿಸಿ ದಂತೆ, ನಮ್ಮ ಹಿರಿಯರ ಸಾವಿರಾರು ವರ್ಷಗಳ ಜೀವಾನುಭವದ, ಪ್ರತಿಭೆ ಮತ್ತು ಪಾಂಡಿತ್ಯಗಳ ಫಲವಾಗಿ ನಮಗೆ ಇಂದು ಅಮೂಲ್ಯವಾದ'ಸಂಸ್ಕೃತಿ' ಹಸ್ತಗತವಾಗಿದೆ. ಅದನ್ನು ಉಳಿಸಿ, ಬಳಸಿ, ಬೆಳೆಸುವುದೂ ಅದರ ಪ್ರಯೋಜನಗಳನ್ನು ಪಡೆಯುವುದೂ ನಮ್ಮಗಳ ಕರ್ತವ್ಯವಾಗಿದೆ. ಹೂವು ಮತ್ತು ವಾಸನೆ, ಹಾಲು ಮತ್ತು ರುಚಿ, ಸಂಗೀತ ಮತ್ತು ಸುಖ, ಬೆಳುದಿಂಗಳು ಮತ್ತು ತಂಪು, ಮಂದಮಾರುತ ಮತ್ತು ಆನಂದ-ಇವುಗಳು

ಹೇಗೆ ಪರಸ್ಪರ ಅವಿನಾಭಾವ ಸಂಬಂಧದಿಂದ ಕೂಡಿವೆಯೋ ಹಾಗೆಯೇ 'ಸಂಸ್ಕೃತಿ ಮತ್ತು ಸಮಾಜ ಜೀವನ' ಇವು ನಿಕಟವಾದ ಸಂಬಂಧವನ್ನು ಉಳ್ಳವುಗಳಾಗಿವೆ.

ವಿಶ್ವದ ಸೃಷ್ಟಿಯಲ್ಲಿ ಪ್ರಾಣಿವರ್ಗಕ್ಕಿಂತ ಮನುಷ್ಯ ಜಾತಿಯು ಕೆಲವು ಶ್ರೇಷ್ಠವಾದ ಗುಣಗಳಿಂದ ಕೂಡಿದೆ. ದೇಹ ಸೌಂದರ್ಯ, ಶರೀರ ಬಲ ಮತ್ತು ವ್ಯಾವಹಾರಿಕ ಪಟುತ್ವ ಮೊದಲಾದ ಸಾಮಾನ್ಯ ಗುಣಗಳಲ್ಲಿ ಪ್ರಾಣಿಗಳು ಮಿಗಿಲಾಗಿವೆ. 'ಮೊಲನಿಂದ ಕರಕಷ್ಟ ಕಾಣಾ ನರನ ಬಾಳುವೆ' ಎಂಬ ವಚನದಲ್ಲಿ ಶ್ರೀ ಬಸವೇಶ್ವರರು ಈ ಅರ್ಥವನ್ನೇ ಹೇಳಿದ್ದಾರೆ. ಆದರೆ ಮಾನವರು ಆತ್ಮಶಕ್ತಿ, ಬುದ್ಧಿಶಕ್ತಿ, ಪ್ರತಿಭಾಶಕ್ತಿ ಮೊದಲಾದ ಮಹದ್ಗುಣಗಳಿಂದ ಸಕಲ ಪ್ರಾಣಿಗಳಿಗಿಂತಲೂ ಶ್ರೇಷ್ಠರಾಗಿದ್ದಾರೆ. ಕರುಣಾಳುವಾದ ಪರಮೇಶ್ವರನು ಇತರ ಯಾವ ಪ್ರಾಣಿಗಳಿಗೂ ಇಲ್ಲದಿರುವ (೧) ಆ ಲೋ ಚ ನಾ ಶ ಕ್ತಿ (ಮಿದುಳು), (೨) ಮಾತನಾಡುವಶಕ್ತಿ (ವಾಕ್), (೩) ಆನಂದಪಡುವಶಕ್ತಿ (ನಗುವಿಕೆ) ಇವುಗಳನ್ನು ಮನುಷ್ಯರಿಗೆ ಮಾತ್ರ ಕೊಟ್ಟಿದ್ದಾನೆ. ಹೀಗೆ ಭಗವದನುಗ್ರಹ ದಿಂದ ಬಂದಿರುವ ಈ ಮೇಲೆ ಕಂಡ ಶಕ್ತಿತ್ರಯಗಳನ್ನು ಸದುಪಯೋಗಪಡಿಸಿ ಕೊಂಡ ಮನುಷ್ಯರೇ ಸುಸಂಸ್ಕೃತರೆನಿಸಿಕೊಳ್ಳುತ್ತಾರೆ. ಹಾಗೂ ಸಮಾಜ ಜೀವನದ ಸುಖಸಂತೋಷಗಳಿಂದ ಆನಂದಿತರಾಗುತ್ತಾರೆ.

ಯೋಗ್ಯನಾದ ಮನುಷ್ಯನು ತಾನು ಸುಖವಾಗಿಯೂ, ಸಂತೋಷ ವಾಗಿಯೂ ಬದುಕುವುದಕ್ಕೆ ಪ್ರಯತ್ನಿಸುವುದಲ್ಲದೆ, ತನ್ನ ನೆರೆಹೊರೆ, ಸಮಾಜ ಮತ್ತು ದೇಶಬಾಂಧವರ ಕೂಡ ಸುಖ ಸಂತೋಷಗಳಿಂದ ಬದುಕಿ ಬಾಳಲು ಪ್ರಯತ್ನಿಸುತ್ತಾನೆ. ಏತಕ್ಕೆಂದರೆ, ಇಂದು ನಾವು ಪಡುವ ಸುಖ ಸಂತೋಷಗಳಿಗೆ—ನಾವು ವಾಸಮಾಡುವ ಮನೆ, ಓದುವ ಪುಸ್ತಕ, ತೊಡುವ ವಸ್ತ್ರಾಭರಣಗಳು, ಉಪಯೋಗಿಸುವ ಭೋಜನ ಸಾಮಗ್ರಿಗಳು ಇವೆಲ್ಲವೂ ನಮ್ಮ ನಾಡಿನ ಹಿರಿಯರಿಂದ ಮತ್ತು ದೇಶಬಾಂಧವರಿಂದ ಆರ್ಜಿಸಲ್ಪಟ್ಟವು. ಅವರೆಲ್ಲರೂ ಸಮಾಜ ಜೀವನದ ಸುವ್ಯವಸ್ಥೆಗಾಗಿ ಪ್ರಯತ್ನಿ ಸಿದ್ದರ ಫಲವೇ ಇಂದಿನ ನಮ್ಮ ಸುಖಸಂತೋಷಗಳು. ಆದುದರಿಂದ ವ್ಯಕ್ತಿ, ಕುಟುಂಬ, ಸಮಾಜ ಮತ್ತು ದೇಶ ಇವು ಪರಸ್ಪರ ಸಂಬಂಧವುಳ್ಳವುಗಳು.

ಈ ಸಂಬಂಧಗಳು ಗಂಗಾಪ್ರವಾಹದಂತೆ ಮುಂದುವರಿದುಕೊಂಡು ಬರುವಂತೆ ಮಾಡುವುದೇ ನಮ್ಮ ಸಂಸ್ಕೃತಿಯ ಪ್ರಭಾವ ಹಾಗೂ ಸಂಸ್ಕೃತಿಯ ಮಂತ್ರಶಕ್ತಿ.

"ಸಂಸ್ಕೃತಿ" ಎಂಬ ಶಬ್ದವು ಧರ್ಮ, ದೇವರು, ಸತ್ಯ, ಮೋಕ್ಷ ಇತ್ಯಾದಿ ಶಬ್ದಗಳ ಹಾಗೆ ವಿಶಾಲವೂ, ನಿಗೂಢವೂ ಆದ ಅರ್ಥವುಳ್ಳುದು. ಅಜಂತೆಯ ಪದ್ಮಪಾಣಿ ಬುದ್ಧನ (ಚಿತ್ರದ) ದೃಷ್ಟಿಯಂತೆ ಇದು ಬಹುಮುಖವಾದುದು; ಅಥವಾ ಭಗವದ್ಗೀತೆಯ ಶ್ಲೋಕಗಳಂತೆ ವಿಶಾಲಾರ್ಥವುಳ್ಳುದು; 'ಸಂಸ್ಕೃತಿ' ಎಂಬ ಶಬ್ದಕ್ಕೆ ಇದುವರೆಗೆ ಹೀಗೆಯೇ ಸರಿ ಎಂಬಂತೆ ಯಾರೂ ಅರ್ಥವನ್ನು ಹೇಳಿದಂತೆ ಕಂಡುಬಂದಿಲ್ಲ. ಆದರೆ ಪಾಶ್ಚಾತ್ಯ ಭಾಷೆಗಳಲ್ಲಿ ಬಳಕೆಯಲ್ಲಿರುವ 'Culture' ಎಂಬ ಶಬ್ದಕ್ಕೆ ಪ್ರತಿಯಾಗಿ ನಾವು 'ಸಂಸ್ಕೃತಿ' ಎಂಬ ಶಬ್ದವನ್ನು ಬಳಸುತ್ತೇವೆ. ಸಭ್ಯತೆ, ನಾಗರಿಕತೆ, ವಿನಯಶೀಲತೆ, ಗುಣಗ್ರಾಹಕತೆ, ಕೃತಜ್ಞತೆ, ರಸಿಕತೆ, ವಿಚಾರಪರತೆ, ಇಂಗಿತಜ್ಞತೆ, ಕರ್ತವ್ಯದಕ್ಷತೆ, ಸತ್ಯಶೀಲತೆ, ಗುರುದೇವತಾ ಭಕ್ತಿ, ದೇಶ ಭಾಷಾಭಿಮಾನ, ತ್ಯಾಗಗುಣ, ಶುಚಿತ್ವ, ಸ್ನೇಹಪರತೆ ಇತ್ಯಾದಿ ಎಲ್ಲ ಸದ್ಗುಣ ಸಂಪತ್ತಿನ ಸಾರಸರ್ವಸ್ವವೇ 'ಸಂಸ್ಕೃತಿ' ಎಂದು ಒಟ್ಟಿನಲ್ಲಿ ಹೇಳಬಹುದು.

'ಸಂಸ್ಕೃತಿ' ಎಂಬುದಕ್ಕೆ ಪ್ರಪಂಚದ ವಿದ್ವಾಂಸರು ಬಗೆಬಗೆಯಾಗಿ ಅರ್ಥಗಳನ್ನು ಮಾಡಿದ್ದಾರೆ. "ನಾಗರಿಕ ಜನಾಂಗದ ಪಾಮರ ಕುಲಗಳಲ್ಲಿ ಕಾಣಬರುವ ತಿಳಿವು, ಅರಿವು, ಅದೇ ಜನತೆಯ ಸಂಸ್ಕೃತಿ" ಎಂದು ಒಬ್ಬರೂ, "ಒಂದು ದೇಶದಲ್ಲಿರುವ ವ್ಯಕ್ತಿಗಳ, ಕುಲಗಳ, ಗುಂಪುಗಳ, ಪದ್ಧತಿಗಳು, ಆಚಾರಗಳು, ನಂಬಿಕೆಗಳು–ಇವು ಜನತೆಯ ಸಂಸ್ಕೃತಿ" ಎಂದು ಇನ್ನೊಬ್ಬರೂ, "ವೈದುಷ್ಯಾದಿಗಳಿಂದ ಬದಲಾಯಿಸಿರುವ, ಕುಲಗಳಲ್ಲಿ ಬಳಕೆಯಲ್ಲಿರುವ, ಪುರಾಣಗಳು, ಆಚಾರಗಳು, ನಂಬಿಕೆಗಳು–ಇವು ಜನತೆಯ ಸಂಸ್ಕೃತಿ" ಎಂದು ಇನ್ನೊಬ್ಬರೂ, "ವೈದುಷ್ಯಾದಿಗಳಿಂದ ಬದಲಾಯಿಸಿರುವ, ಕುಲಗಳಲ್ಲಿ ಬಳಕೆಯಲ್ಲಿರುವ, ಪುರಾಣಗಳು, ಆಚಾರಗಳು, ನಂಬಿಕೆಗಳು, ಸಂಸ್ಕೃತಿ" ಎಂದು ಇನ್ನೊಬ್ಬರೂ, "ಪ್ರಾಚೀನಕಾಲದ ಮನೋವೇದನೆಯ ಪ್ರಕಟರೂಪವೇ ಈ ಜನತೆಯ ಸಂಸ್ಕೃತಿ' ಎಂದು ಮಗದೊಬ್ಬರೂ ಹೇಳಿರು

ತ್ತಾರೆ. ಹೀಗೆ ಸಂಸ್ಕೃತಿಯ ಅರ್ಥವು ಸರಸ್ವತೀ ನದಿಯಂತೆ ಗುಪ್ತಗಾಮಿನಿಯಾಗಿ, ಹಿಮಾಲಯದ ಗೌರೀಶಂಕರನಂತೆ ಗಗನ ಚುಂಬಿತವಾಗಿ, ಶಾಂತ ಸಾಗರದ ವೈಶಾಲ್ಯದಂತೆ ಅತಿ ವ್ಯಾಪಕವಾಗಿ, ಕಂಡುಬಂದರೂ ಅದರ ಪ್ರಭಾವವು ಎಲ್ಲ ನಾಗರಿಕ ಸಮಾಜಗಳ ಮೇಲೆಯೂ ಉಂಟಾಗಿಯೇ ಇದೆ. ಇದರಲ್ಲಿಯೇ ಸಂಸ್ಕೃತಿಯ ಚೈತನ್ಯ, ಮಹತ್ವ ಮತ್ತು ಅದರ ಅವ್ಯಕ್ತ ಶಕ್ತಿ ತುಂಬಿಕೊಂಡಿದೆ ಎಂದು ಹೇಳಬಹುದು.

ಮನುಷ್ಯನು ಸಮಾಜ ಜೀವಿ. ಕೆಲಮಟ್ಟಿಗೆ ಪ್ರಾಣಿಗಳಲ್ಲೂ ನಾವು ಈ ಗುಣಗಳನ್ನು ಕಾಣಬಹುದು. ಇರುವೆಗಳು, ಜೇನುಹುಳುಗಳು, ಕಪಿಗಳು, ಆನೆಗಳು, ಪಕ್ಷಿಗಳು, ಹಿಂಡುಹಿಂಡಾಗಿ ವಾಸಿಸುವುದನ್ನು ನಾವು ನೋಡುತ್ತಿದ್ದೇವೆ. ಆದರೆ ಯಾವುದೊಂದು ಪ್ರಾಣಿಯೂ ಒಂಟಿಯಾಗಿ ನಿಂತು ಬದುಕಿದರೂ ಬದುಕೀತು. ಆದರೆ ಇದು ಮನುಷ್ಯನಿಗೆ ಮಾತ್ರ ಸಾಧ್ಯವಿಲ್ಲ. ಮಾನವನು ಹುಟ್ಟುವಾಗ, ಸಾಯುವಾಗ, ರೋಗಿಯಾದಾಗ, ಇನ್ನೊಬ್ಬರ ಆಶ್ರಯವಿಲ್ಲದೆ ಜೀವಿಸುವುದು ಕಷ್ಟ. ನರನ ಬಾಲ್ಯವು "ಎತ್ತಿದವರ ಕೈಕೂಸು" ಆಗಿರುವುದೆಂಬುದನ್ನು ನೆನಸಿಕೊಂಡಾಗ ಮಾನವನು ಅದೆಷ್ಟರಮಟ್ಟಿಗೆ ಸ ಮಾ ಜ ಜೀ ವಿ ಎಂಬುದನ್ನು ಅರಿಯಬಹುದು. ಮನುಷ್ಯನು ಸುಖದುಃಖ ಕಾಲಗಳಲ್ಲಿ, ಆಲೋಚನಾ ಸಂದರ್ಭಗಳಲ್ಲಿ, ಕಷ್ಟನಷ್ಟಗಳಲ್ಲಿ ಇತರರ ನೆರವನ್ನು ಬಯಸುತ್ತಾನೆ. ಆದುದರಿಂದಲೇ 'ಮಾನವನು ಸಮಾಜ ಜೀವಿ' ಎಂಬುದು ಸಿದ್ಧಾಂತವಾಗುತ್ತದೆ. ಇದನ್ನು ಮಾನವ ಜಾತಿಯ ಸೃಷ್ಟಿನಿಯಮ (Natural Law) ಎಂದು ಹೇಳಬಹುದು. ಈ ಕಾರಣದ ದೆಸೆಯಿಂದ ವ್ಯಕ್ತಿ ಮತ್ತು ಸಮಾಜಗಳ ಸುಖ ಸಂತೋಷಗಳೂ, ಆಗುಹೋಗುಗಳೂ, ಹಿತಾಹಿತಗಳೂ, ಪ್ರಯೋಜನ ಪ್ರಗತಿಗಳೂ ಪರಸ್ಪರ ಸಂಬಂಧಗಳೆಂದು ಸಿದ್ಧಾಂತವಾಗುತ್ತದೆ. ಆದಕಾರಣ ವ್ಯಕ್ತಿ ಮತ್ತು ಸಮಾಜ ಪರಸ್ಪರ ಹಿತದೃಷ್ಟಿಯಿಂದ ನಡೆಯುವುದು ಅಗತ್ಯ ಮತ್ತು ಅನಿವಾರ್ಯವಾಗಿದೆ. ಇದಕ್ಕೆ ವಿರುದ್ಧವಾಗಿ ಹೋದಾಗ ವ್ಯಕ್ತಿ ಅಥವಾ ಸಮಾಜವು ಕಂಬಿಗಳನ್ನು ಬಿಟ್ಟ ರೈಲುಗಾಡಿಯಂತೆ ಅಪಾಯಕ್ಕೆ ಈಡಾಗುವ ಹಾಗೆ ಸಮಾಜ ಜೀವನವು ಸುಗಮವಾಗಿ ಸುಖವಾಗಿ ನಡೆಯು

ವಂತೆ ಹಿನ್ನೆಲೆಯಾಗಿ ನಿಂತು ರಕ್ಷಿಸುವ ಮಂತ್ರ ಶಕ್ತಿಯೇ ಜನತಾ ಸಂಸ್ಕೃತಿ ಅಥವಾ ಜನತೆಯ ಸಭ್ಯತೆ. ಸಾವಿರಾರು ವರ್ಷಗಳ ಅನುಭವದಿಂದ ಪ್ರಪಂಚದ ಹಿತಾಕಾಂಕ್ಷಿಗಳಾದ ಋಷಿಗಳು, ಆಚಾರ್ಯರು, ಪ್ರವಾದಿಗಳು, ಅವತಾರ ಪುರುಷರು, ಶರಣರು, ಭಾಗವತರು, ಸಾಧುಸಂತರು, ಕಲೆಗಾರರು, ಕವಿಶ್ರೇಷ್ಠರು ಮೊದಲಾದವರುಗಳೆಲ್ಲಾ, ತಮ್ಮ ತಮ್ಮ ಜೀವಾನುಭವಗಳನ್ನು ಮುಂದಿನವರ ಏಳಿಗೆ ನಿಮಿತ್ತ ಬೋಧನ ರೂಪವಾಗಿ, ಗ್ರಂಥಗಳ ರೂಪವಾಗಿ ಅನುಗ್ರಹಿಸಿರುತ್ತಾರೆ. ಪ್ರಪಂಚದ ಎಲ್ಲ ಕಾಲ ದೇಶಗಳಲ್ಲಿಯೂ ಮಹಾತ್ಮರು ಉದಯಿಸಿರುವರೆಂದು ಚರಿತ್ರೆಯಲ್ಲಿ ಓದಬಹುದು. ಕಳ್ಳತನ, ಸುಳ್ಳು, ಮದ್ಯಪಾನ, ವ್ಯಭಿಚಾರ, ಆತ್ಮಶ್ಲಾಘನೆ, ಪರನಿಂದೆ, ಧರ್ಮದ್ರೋಹ, ದೇಶದ್ರೋಹ ಮೊದಲಾದ ದುರ್ಗುಣಗಳು ಸಮಾಜಕ್ಕೆ ಕಂಟಕಪ್ರಾಯ ವಾದವುಗಳೆಂದು ಎಲ್ಲ ದೇಶಗಳ ಜ್ಞಾನಿಗಳೂ ಏಕಮುಖವಾಗಿ ಹೇಳಿದ್ದಾರೆ. ಈ ಅರ್ಥದಲ್ಲಿ ಭಾರತದ ಓರ್ವ ಸಮಾಜ ಸುಧಾರಕರಾದ ಪೂಜ್ಯ ಬಸವೇ ಶ್ವರರು "ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಮುನಿಯ ಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ, ಅದೇ ಅಂತರಂಗ ಶುದ್ಧಿ, ಅದೇ ಬಹಿರಂಗ ಶುದ್ಧಿ, ಇದೇ ನಮ್ಮ ಕೂಡಲ ಸಂಗಮದೇವರನೊಲಿಸುವ ಪರಿ" ಎಂದು ಹೇಳಿರುವ ಉಪದೇಶವು ಸಮಾಜ ಜೀವನವು ಸುಗಮವಾಗಿ ನಡೆಯಲು ಸಾಧಕವಾಗಿದೆ. ಶ್ರೀ ಬಸವೇ ಶ್ವರರು ಸಂಸ್ಕೃತಿಯ ಸಾರಸರ್ವಸ್ವವನ್ನೇ ಈ ವಚನದಲ್ಲಿ ನಿರೂಪಿಸಿದ್ದಾರೆ ಎಂದು ಹೇಳಬಹುದು.

ವಿಶ್ವದ ಮಾನವ ಸಮಾಜದ ಮುಂದಾಳುಗಳು ತಮ್ಮ ಬಹುಕಾಲದ ಆಲೋಚನೆ ಮತ್ತು ಅನುಭವಗಳ ಫಲವಾಗಿ ಸಮಾಜವು ಸುಸ್ಥಿರವಾಗಿ ನಿಲ್ಲಲು ಬೇಕಾದ ಹಲವು ಸದ್ಗುಣ ಸಂಪತ್ತುಗಳನ್ನು ಜಗತ್ತಿಗೆ ಬೋಧಿ ಸಿರುತ್ತಾರೆ. ತತ್ವಜ್ಞಾನಿಗಳಾದ ಶ್ರೀ ರಾಮತೀರ್ಥರು ಪ್ರಪಂಚದ ಮಾನವರನ್ನೆಲ್ಲಾ ಶಿಲಾವರ್ಗ, ಸಸ್ಯವರ್ಗ, ಪ್ರಾಣಿವರ್ಗ, ಮನುಷ್ಯವರ್ಗ ಮತ್ತು ದೇವವರ್ಗ ಎಂದು ಐದು ಗುಂಪುಗಳಾಗಿ ವಿಂಗಡಿಸಿದ್ದಾರೆ. ಈ ಐದು ಗುಂಪುಗಳಲ್ಲಿ ಮಾನವ ಮತ್ತು ದೇವವರ್ಗದವರು ಸಂಸ್ಕೃತಿಯನ್ನು ಉಳ್ಳವ

ರೆಂದೂ, ಶಿಲಾ, ಸಸ್ಯ, ಪ್ರಾಣಿವರ್ಗದವರು ಸಂಸ್ಕೃತಿ ರಹಿತರೆಂದೂ, ಅವರ ಅಭಿಪ್ರಾಯವಿರಬೇಕು. ಪ್ರಪಂಚದ ಚರಿತ್ರೆಯಲ್ಲಿ ಯಾರಲ್ಲಿ ಸಮಾಜ ಜೀವನಕ್ಕೆ ಅತ್ಯಗತ್ಯವಾದ ಸದ್ಗುಣಗಳು ತುಂಬಿವೆಯೋ ಅಂತಹವರ ಹೆಸರು ಮಾತ್ರ ಸ್ಥಿರವಾಗಿ ನಿಂತು ಮಿಕ್ಕವರ ಹೆಸರುಗಳು ಅಳಿದುಹೋಗಿವೆಯೆಂಬು ದನ್ನು ನಾವಿಂದು ಕಣ್ಣಾರ ನೋಡುತ್ತಿದ್ದೇವೆ.

ಭಾರತದ ವಿಖ್ಯಾತ ಸಾರ್ವಭೌಮನಾದ ದಿಲೀಪನು, ಋಷಿ ವಶಿಷ್ಠನ ಆಶ್ರಮದಲ್ಲಿ ಕಾಮಧೇನು ಪುತ್ರಿ ನಂದಿನಿಯು ಸಿಂಹದ ಬಾಯಿಗೆ ತುತ್ತಾಗುವ ಸನ್ನಿವೇಶವು ಕಂಡಾಗ ತನ್ನ ದೇಹವನ್ನು ಅದಕ್ಕಿತ್ತು ಪೂಜ್ಯ ನಂದಿನಿಯನ್ನು ಬಿಡಿಸಲು ಪ್ರಯತ್ನಿಸುತ್ತಾನೆ. ಧರ್ಮಾತ್ಮನಾದ ಶಿಬಿ ಚಕ್ರವರ್ತಿಯು ತನ್ನನ್ನು ಮೊರೆಹೊಕ್ಕ ಪಕ್ಷಿಯೊಂದರ ರಕ್ಷಣಾರ್ಥವಾಗಿ ತನ್ನ ತೊಡೆಯ ಮಾಂಸವನ್ನು ಕೊಟ್ಟು ಪ್ರಾಣಿ ದಯೆಯನ್ನು ವ್ಯಕ್ತಪಡಿಸಿದ್ದಾನೆ. ತಂದೆಯ ಒಂದು ಬಯಕೆಯ ಪೂರೈಕೆಗಾಗಿ ಭೀಷ್ಮಾಚಾರ್ಯನು ಅಜೀವ ಬ್ರಹ್ಮಚರ್ಯ ವನ್ನು ಕೈಗೊಳ್ಳುತ್ತಾನೆ. ದಾನಶೂರನಾದ ಕರ್ಣನು, ದೇವೇಂದ್ರನೂ ಕುಂತೀದೇವಿಯೂ ಬಂದು ಬೇಡಿದಾಗ—ಮುಂದೆ ತನಗೆ ಅಪಾಯವಾದೀ ತೆಂಬುದನ್ನು ಲೆಕ್ಕಿಸದೆ ಅವರ ಅಭೀಷ್ಟಗಳನ್ನು ಸಲ್ಲಿಸುತ್ತಾನೆ. ಸತ್ಯವ್ರತನಾದ ಹರಿಶ್ಚಂದ್ರನು ವಿಶ್ವಾಮಿತ್ರನಿಗೆ ಆಕಸ್ಮಾತ್ತಾಗಿ ತಾನು ಕೊಟ್ಟ ಮಾತನ್ನು ಕಾಪಾಡಿಕೊಳ್ಳಲಿಕ್ಕಾಗಿ ಅಪಾರವಾದ ಕಷ್ಟನಷ್ಟಗಳನ್ನು ಅನುಭವಿಸುತ್ತಾನೆ. ಪುಣ್ಯಶ್ಲೋಕನಾದ ನಳಮಹಾರಾಜನು ತಾನು ಆಡಿದ ಮಾತಿನಂತೆ ನಡೆಯುವ ಶೀಲಶುದ್ಧಿಗಾಗಿ ರಾಜ್ಯಭ್ರಷ್ಟನಾಗಿ ಪರರ ಸೇವೆಮಾಡಿ ಅಪಾರ ಕಷ್ಟನಷ್ಟಗಳನ್ನು ಅನುಭವಿಸುತ್ತಾನೆ. ಮಹಾನುಭಾವನಾದ ದ ಶ ರ ಥ ಮಹಾರಾಜನು ತಾನು ಕೈಕೇಯಿಗೆ ಕೊಟ್ಟ ಮಾತನ್ನು ಕಾಪಾಡಿಕೊಳ್ಳು ವುದಕ್ಕಾಗಿ ತನ್ನ ಪ್ರಾಣಸದೃಶನಾದ ಶ್ರೀರಾಮನನ್ನು ಅಡವಿಗೆ ಕಳುಹಿಸಲು ಸಮ್ಮತಿಸುತ್ತಾನೆ. ಇತ್ಯಾದಿ ಪುರಾಣ ಇತಿಹಾಸ ಪ್ರಸಿದ್ಧವಾದ ಕಥೆಗಳು ಭಾರತೀಯರ ಪವಿತ್ರವಾದ ಸಂಸ್ಕೃತಿನಿಷ್ಠೆ ಮತ್ತು ಸಮಾಜಜೀವನದ ನಿದರ್ಶನ ವಾಗಿದೆಯಲ್ಲವೆ ?

ಉಪನಿಷತ್ ಕಾಲದಲ್ಲಿ ಪ್ರಸಿದ್ಧನಾದ ಸತ್ಯಕಾಮ ಜಾಬಾಲನ ಆದರ್ಶ ಇಲ್ಲಿ ಸ್ಮರಣಾರ್ಹವಾಗಿದೆ. ಆಶ್ರಮವಾಸಿಯಾದ ಸತ್ಯಕಾಮ ಜಾಬಾಲನು

ಹಾರಿದ್ರುಮತ ಗೌತಮನು ಎಂಬ ಗುರುವಿನ ಸನ್ನಿಧಿಗೆ ಹೋಗಿ ತನಗೆ ವಿದ್ಯಾಭ್ಯಾಸ ಮಾಡಿಸಬೇಕೆಂದು ಪ್ರಾರ್ಥಿಸುತ್ತಾನೆ. ಆಗ ಗೌತಮನು ನಿನ್ನ ಗೋತ್ರವಾವುದು ? ಎಂದು ಸಂಪ್ರದಾಯದಂತೆ ಪ್ರಶ್ನಿಸುತ್ತಾನೆ. ಅದಕ್ಕೆ ಸತ್ಯಕಾಮನು ಗುರುವೇ, ನನ್ನ ಗೋತ್ರವನ್ನು ಕುರಿತು ನನ್ನ ತಾಯಿಯನ್ನು ಕೇಳಿದಾಗ ಅವಳು ನನ್ನ ಗೋತ್ರವನ್ನು ಹೇಳಲು ತನಗೆ ಸಾಧ್ಯವಿಲ್ಲವೆಂದೂ, ಬಡತನದ ಬವಣೆಯಲ್ಲಿ ಪರರ ಸೇವೆಯಲ್ಲಿ ನಿರತಳಾದಾಗ ನಾನು ಹುಟ್ಟಿದೆ ನೆಂದೂ ಹೇಳಿದಳು. ಆದುದರಿಂದ ನಮ್ಮ ತಂದೆಯ ಹೆಸರು ತಿಳಿಯದ ಕಾರಣ ಗೋತ್ರವನ್ನು ಹೀಗೆಯೇ ಸರಿ ಎಂದು ಹೇಳಲು ಸಾಧ್ಯವಿಲ್ಲವೆಂದು, ನನ್ನ ತಾಯಿಯು ಇದನ್ನು ಇದ್ದಕ್ಕಿದ್ದಂತೆ ಗುರುವಿಗೆ ಹೇಳಬೇಕೆಂದು ತಿಳಿಸಿರುವಳೆಂದೂ, ನನ್ನ ಹೆಸರು ಸತ್ಯಕಾಮ, ತಾಯಿಯ ಹೆಸರು ಜಾಬಾಲ ಆದುದರಿಂದ ಸತ್ಯಕಾಮ ಜಾಬಾಲನೆಂಬ ಹೆಸರಿನಿಂದ ನನ್ನನ್ನು ಕರೆಯ ಬಹುದೆಂದೂ ಗುರುವಿನ ಸನ್ನಿಧಿಯಲ್ಲಿ ವಿನಮ್ರನಾಗಿ ಅರಿಕೆ ಮಾಡುತ್ತಾನೆ. ಸತ್ಯಕಾಮನ ಈ ನಿಶ್ಚಲವಾದ ಬಿನ್ನಹವನ್ನು ಕೇಳಿ ಗೌತಮನು ಆನಂದ ಭರಿತನಾದನು. ಸತ್ಯನಿಷ್ಠರಾದ ಈ ತಾಯಿ ಮಗನ ನಡೆನುಡಿಗಳಿಗೆ ಮೆಚ್ಚಿ ಕೊಂಡನು. ಇಂತಹ ಸತ್ಯವಂತರ ಗೋತ್ರವು ಉತ್ತಮವಾಗಿಯೇ ಇರ ಬೇಕೆಂದು ತರ್ಕಿಸಿದನು. ಸತ್ಯಕಾಮನಿಗೆ ಪ್ರೀತಿಯಿಂದ ವಿದ್ಯಾಭ್ಯಾಸ ಮಾಡಿಸಿದನು. ಶಿಷ್ಯನನ್ನು ಅನುಗ್ರಹಿಸಿದನು. ಅಲ್ಲಿಂದ ಮುಂದೆ ಸತ್ಯ ಕಾಮ ಜಾಬಾಲನು ಬ್ರಹ್ಮಜ್ಞಾನಿಯೂ ಕೀರ್ತಿವಂತನೂ ಆದನು ಎಂದು ಉಪನಿಷತ್ತಿನ ಕಥೆ ಹೇಳುತ್ತದೆ.

ಇದೇ ಪ್ರಕಾರ ಯೂರೋಪು ಖಂಡದ ಗ್ರೀಸ್ ದೇಶದಲ್ಲಿ ಅಥೆನ್ಸ್‌ನಗರ ನಿವಾಸಿಯಾಗಿದ್ದ, ಸುಮಾರು ೨೪೦೦ ವರ್ಷಗಳಷ್ಟು ಹಿಂದಣವನಾದ ಸಾಕ್ರಟೀಸ್ ಮಹಾಶಯನು ಆ ಕಾಲದಲ್ಲಿ ಸತ್ಯವಾದ ಸಂಗತಿಗಳನ್ನು ಪ್ರಚಾರ ಮಾಡಿದುದಕ್ಕಾಗಿ ಅಲ್ಲಿನ ಸರ್ಕಾರದವರ ಉಗ್ರ ಶಿಕ್ಷೆಗೆ ಒಳಗಾಗಿ ಸೆರೆಮನೆಯಲ್ಲಿ ವಿಷವನ್ನು ಕುಡಿಯುವ ಪ್ರಸಂಗ ಒದಗುತ್ತದೆ. ಸಾಕ್ರ ಟೀಸನು ಒಂದು ಸುಳ್ಳು ಹೇಳಿ ಪ್ರಾಣವನ್ನು ರಕ್ಷಿಸಿಕೊಳ್ಳಬಹುದಾಗಿದ್ದರೂ ದೇವಮಾನವನಾದ ಆತನು ಪ್ರಾಣಕ್ಕಿಂಗಿಲೂ ಮಿಗಿಲಾಗಿ ಸತ್ಯವನ್ನೇ

ಅಪ್ಪಿಕೊಳ್ಳುತ್ತಾನೆ. ಭೌತಿಕ ದೇಹವನ್ನು ಬಲಿಕೊಟ್ಟು ಕೀರ್ತಿ ಶರೀರವನ್ನು ಧರಿಸುತ್ತಾನೆ. ಆದುದರಿಂದಲೇ ವಿಶ್ವದ ಚರಿತ್ರೆಯಲ್ಲಿ ಸತ್ಯಕಾಮ ಜಾಬಾಲ, ಸತ್ಯವಂತ ಸಾಕ್ರಟೀಸ್, ಸತ್ಯ ಹರಿಶ್ಚಂದ್ರ ಮೊದಲಾದ ಪುಣ್ಯಾತ್ಮರ ಹೆಸರುಗಳು ಇಂದಿಗೂ ಪ್ರಖ್ಯಾತವಾಗಿವೆ.

ಪುಣ್ಯದ ಬೀಡಾದ ಕನ್ನಡ ನಾಡಿನಲ್ಲಿ ಸತ್ಯದ ಬಲ ಮತ್ತು ಬೆಲೆ ಮೊದಲಿನಿಂದಲೂ ಅಧಿಕವಾಗಿಯೇ ಇದ್ದಂತೆ ಕಂಡುಬರುತ್ತದೆ. ಮಹಾಕವಿಯಾದ ರಾಘವಾಂಕನು ತನ್ನ ಕೃತಿರತ್ನವಾದ ಹರಿಶ್ಚಂದ್ರ ಕಾವ್ಯದಲ್ಲಿ "ಹರನೆಂಬುದೇ ಸತ್ಯ, ಸತ್ಯವೆಂಬುದೆ ಹರನು" (God is Truth ; Truth is God) ಎಂದು ಎಂಟು ನೂರು ವರ್ಷಗಳ ಹಿಂದೆಯೇ ಸಾರಿ ಹೇಳಿದ್ದಾನೆ. ಭಕ್ತಿಭಂಡಾರಿ ಬಸವಣ್ಣನವರು "ಸತ್ಯವ ನುಡಿವುದೇ ದೇವಲೋಕ, ಮಿಥ್ಯೆಯ ನುಡಿವುದೇ ಮರ್ತ್ಯಲೋಕ" ಎಂದು ಹೇಳಿ ಸತ್ಯ, ಮಿಥ್ಯೆಗಳ ವ್ಯತ್ಯಾಸವನ್ನು ಬೋಧಿಸಿದ್ದಾರೆ. ನಮ್ಮ ಕನ್ನಡ ನಾಡಿನಲ್ಲಿ ಎಲ್ಲರಿಗೂ ಪ್ರಿಯವಾದ ಗೋವಿನ ಕಥೆಯಲ್ಲಿ ಕೂಡ, ಸತ್ಯದ ಹಿರಿಮೆ ಕಂಡು ಬರುತ್ತದೆ. ಹುಲಿಯ ಬಾಯಿಗೆ ತುತ್ತಾಗಲು ಸಿದ್ಧವಾಗಿದ್ದ ಒಂದು ಗೋವು–ಕನ್ನಡ ನಾಡಿನ ಗೋವು—

ಸಾಂಗತ್ಯ॥ ಸತ್ಯವೆಂಬುದೆ ತಾಯಿ ತಂದೆ॥
ಸತ್ಯವೆಂಬುದೆ ಬಂಧು ಬಳಗವು॥
ಸತ್ಯವಾಕ್ಯಕೆ ತಪ್ಪಿ ನಡೆದರೆ॥
ಮೆಚ್ಚನಾ ಜಗದೀಶನು॥

ಎಂಬ ಸತ್ಯ ಸಂದೇಶವನ್ನು ತನ್ನ ಕರುವಿಗೆ ಕೊಟ್ಟು ಹೋಗುತ್ತದೆ. ಈ ಗೋವಿನ ಕಥೆಯು ಸತ್ಯವು ಕೇವಲ ಮಾನವ ಜಾತಿಗೇ ಅಲ್ಲ, ಪ್ರಾಣಿಗಳಿಗೂ ಅಗತ್ಯ ಎಂಬ ಘನವಾದ ತತ್ತ್ವವನ್ನು ಬೋಧಿಸುತ್ತದೆ. ಸ್ವಾಮಿಭಕ್ತಿ ಸಂಪನ್ನವಾದ ನಾಯಿ ಮೊದಲಾದ ಕೆಲವು ಪ್ರಾಣಿಗಳಲ್ಲಿ ಕೂಡ, ನಾವು ಸತ್ಯದ ಕಿಂಚಿತ್ತು ಬೆಳಕನ್ನು ಕಾಣುತ್ತೇವೆ. ಕೃತಜ್ಞತೆಯ ಸದ್ಗುಣವನ್ನು ನೋಡುತ್ತೇವೆ. ಅಂದ ಮೇಲೆ ಸಮಾಜ ಜೀವಿಯಾದ ಮಾನವನು

ಸಂಸ್ಕೃತಿ ಸಾರವಾದ ಸತ್ಯವನ್ನು ಆಶ್ರಯಿಸಬೇಕಾದುದು ಅಗತ್ಯವಲ್ಲವೆ? ನಮ್ಮ ದೇಶದಲ್ಲಿ ಸಮಾಜ ಜೀವನವು ಪರಿಶುದ್ಧವಾಗಿರಬೇಕಾದರೆ ಸತ್ಯದ ಜತೆಯಲ್ಲಿಯೇ, ಅಹಿಂಸೆ, ಕಾರ್ಯಶ್ರದ್ಧೆ, ಸ್ನೇಹಪರತೆ, ಅನುಕಂಪ, ಪರಮತ ಸಹಿಷ್ಣುತೆ, ಸಹೃದಯಭಾವ, ಪರೋಪಕಾರಬುದ್ಧಿ ಮೊದಲಾದ ಸದ್ಗುಣಗಳು ಜನಜೀವನದಲ್ಲಿ ಅಳವಡುವುದು ಅತ್ಯಗತ್ಯ. ಇಂತಹ ಉದಾತ್ತ ಗುಣಗಳನ್ನು ಜಗತ್ತಿಗೆ ಬೋಧಿಸುವ ಸಲುವಾಗಿಯೋ ಎಂಬಂತೆ ಜಗತ್ತಿನಲ್ಲಿ ಅನೇಕ ಮಂದಿ ದೇವಮಾನವರು ಆಗಿಹೋಗಿರುತ್ತಾರೆ. ಅವರ ಉಪದೇಶಗಳನ್ನು ಸ್ಮರಿಸಿಕೊಂಡು ಆಚರಿಸುವುದು ಸಮಾಜ ಜೀವನದ ಪ್ರಗತಿಯ ದೃಷ್ಟಿಯಿಂದ ಸಂಸ್ಕೃತಿಯ ಸಂರಕ್ಷಣೆಯ ದೃಷ್ಟಿಯಿಂದ ಅತ್ಯವಶ್ಯವಲ್ಲವೆ?

ಸುಮಾರು ೨೫೦೦ ವರ್ಷಗಳ ಹಿಂದೆಯೇ ನಮ್ಮ ಪವಿತ್ರ ಭಾರತ ದೇಶದಲ್ಲಿ ಅವತಾರ ಪುರುಷನಾದ ಭಗವಾನ್ ಬುದ್ಧದೇವನೂ ಜಿನಮುನಿಯಾದ ಮಹಾವೀರಸ್ವಾಮಿಯೂ ಜನಿಸಿ ನಮ್ಮ ಜನರಿಗೆ ಧರ್ಮನಿಷ್ಠೆ ಮತ್ತು ಅಹಿಂಸಾತತ್ತ್ವಗಳನ್ನು ಬೋಧಿಸುತ್ತಾರೆ. ಸುಮಾರು ಅದೇ ಕಾಲದಲ್ಲಿ ಚೀಣಾದೇಶದಲ್ಲಿ ಕಾಣಿಸಿಕೊಂಡ ಕಾನ್‌ಫ್ಯೂಷಿಯಸ್ ಮತ್ತು ಲಾವೊಟ್ಸೆ ಎಂಬ ಮಹಾತ್ಮರು, ಮಾನವರು ಸರಳಜೀವಿಗಳಾಗಬೇಕೆಂದೂ, ಪರಸ್ಪರ ವಿನಾಶಕ್ಕೆ ಕಾರಣವಾದ ದ್ವೇಷ ಅಸೂಯೆಗಳನ್ನು ಬಿಡಬೇಕೆಂದೂ ಉಪದೇಶಿಸಿರುತ್ತಾರೆ. ಸುಮಾರು ಎರಡು ಸಾವಿರ ವರ್ಷಗಳ ಹಿಂದೆ ಪ್ಯಾಲೆಸ್ಟೈನ್ ದೇಶದಲ್ಲಿ ಅವತರಿಸಿದ ದೇವಪುತ್ರನಾದ ಏಸು ಸ್ವಾಮಿಯು ಲೋಕದ ಪಾಪಗಳಿಗಾಗಿ ಮರುಗಿ ಕಡೆಗೆ ತನ್ನ ಪ್ರಾಣವನ್ನೇ ಶಿಲುಬೆಯಲ್ಲಿ ಬಲಿದಾನ ಮಾಡಿರುತ್ತಾನೆ. ಅಲ್ಲದೆ "ನೀನು ನಿನ್ನನ್ನು ಪ್ರೀತಿಸುವಂತೆಯೇ ನಿನ್ನ ನೆರೆಹೊರೆಯವರನ್ನು ಪ್ರೀತಿಸು, ನಿನ್ನ ಮನಸ್ಸು ಸದಾ ಮಕ್ಕಳ ಮನಸ್ಸಿನಂತೆ ನಿರ್ಮಲವಾಗಿರಲಿ, ಅದರಿಂದ ನೀನು ದೇವರ ಕೃಪೆಗೆ ಅರ್ಹನಾಗುವೆ" ಎಂದು ಧರ್ಮೋಪದೇಶ ಮಾಡಿದ್ದಾನೆ. ಸುಮಾರು ೧೩೦೦ ವರ್ಷಗಳ ಹಿಂದೆ ಅರಬಸ್ತಾನದಲ್ಲಿ ಜನ್ಮಿಸಿದ ಹಜರತ್ ಮುಹಮ್ಮದ್ ಪೈಗಂಬರರು ಕೂಡ ಭಗವದ್ಭಕ್ತಿ, ಬಂಧುಪ್ರೇಮ, ಸರ್ವಸಮಾನತೆ ಇವು ಸಮಾಜದ ಅಭ್ಯುದಯಕ್ಕೆ ಅಗತ್ಯವೆಂದು ಬೋಧಿಸಿದ್ದಾರೆ. ಅಮೆರಿಕಾದೇಶದ ಪ್ರಖ್ಯಾತ

ಪುರುಷನಾದ ಏಬ್ರಹಾಂ ಲಿಂಕನ್ ಮಹಾಶಯನು ಆ ದೇಶದಲ್ಲಿ ಹಿಂದುಳಿದಿರುವ ನೀಗ್ರೋ ಜನಗಳ ಉದ್ಧಾರ ಕಾರ್ಯಕ್ಕೆ ಕೈ ಹಾಕಿದ್ದರ ಫಲವಾಗಿ ಕ್ರೂರಿಗಳ ಗುಂಡಿಗೆ ಆಹುತಿಯಾಗಿದ್ದಾನೆ. ಹೀಗೆ ಪ್ರಪಂಚದ ವಿವಿಧ ದೇಶಗಳ ಮಹಾಪುರುಷರೆಲ್ಲರೂ ಒಂದೇ ಬಗೆಯಾಗಿ ಸಮಾಜದ ಸುಖ ಶಾಂತಿಗಳಿಗಾಗಿ ಪ್ರಯತ್ನಿಸಿ ತಾವು ಬಲಿಯಾಗಿ ಜಗತ್ತನ್ನು ಕಾಪಾಡಿರುತ್ತಾರೆ. ಇವರೆಲ್ಲರ ಜೀವನದ ಸ್ಫೂರ್ತಿಯು ಉತ್ತಮ ಸಂಸ್ಕೃತಿಯೇ ಅಲ್ಲವೆ?

ಜಗತ್ತಿನ ಯಾವ ಭಾಗದಲ್ಲಿ ಯಾವ ಕಾಲದಲ್ಲಿ ನೋಡಿದರೂ ಮಾನವಜಾತಿಯ ಆಶೆ–ಆಕಾಂಕ್ಷೆ, ಸುಖ–ದುಃಖ, ಕಾಮ–ಪ್ರೇಮ, ಹಸಿವು–ತೃಷೆ, ಕ್ರೋಧ–ಲೋಭ, ನಿದ್ರೆ–ಆಲಸ್ಯ, ಅಹಂಕಾರ–ಮಮಕಾರ ಮೊದಲಾದ ಗುಣಗಳು ಸಮಾನವಾಗಿಯೇ ತೋರಿಬರುತ್ತವೆ. ಒಬ್ಬನೇ ಆದ ಭಗವಂತನಿಂದ ಸೃಷ್ಟಿಸಲ್ಪಟ್ಟಿರುವ ಈ ಮಾನವ ಜಾತಿಗೆ ಏಕಪ್ರಕಾರವಾದ ಗುಣಗಳಿರುವುದು ಸಹಜವಾಗಿಯೇ ಇದೆ.

ರಷ್ಯಾದೇಶದಲ್ಲಿ ೧೯ನೇ ಶತಮಾನದಲ್ಲಿ ಪ್ರಖ್ಯಾತನಾಗಿದ್ದು ತನ್ನ ಶ್ರೇಷ್ಠವಾದ ಗ್ರಂಥಗಳ ಮೂಲಕವಾಗಿಯೂ, ಉಪದೇಶಗಳ ಮೂಲಕವಾಗಿಯೂ ಜನಸಾಮಾನ್ಯರನ್ನೂ ದೀನದರಿದ್ರರನ್ನೂ ಉದ್ಧಾರಮಾಡಲು ತನ್ನ ಜೀವನವನ್ನು ಸವೆಸಿದ ಟಾಲಸ್ಟಾಯ್ ಮಹಾಶಯನೂ, ಇದೇ ಇಪ್ಪತ್ತನೇ ಶತಮಾನದಲ್ಲಿ ತನ್ನ ವಿಖ್ಯಾತ ನಾಟಕ ಮತ್ತು ಸಾಹಿತ್ಯ ಕೃತಿಗಳ ಮೂಲಕ ಇಂಗ್ಲೆಂಡಿನಲ್ಲಿ ಜನಿಸಿ ವಿಶ್ವಕ್ಕೆ ಚಿರಪರಿಚಿತನಾದ ಜಾರ್ಜ್ ಬರ್ನಾರ್ಡ್‌ಷಾ ಮಹಾಕವಿಯೂ "ಎಲ್ಲ ಜನರೂ–ಸುಖ ಸಂತೋಷಗಳಿಂದ ತೃಪ್ತರಾಗಿ ಬಾಳಬೇಕು. ಸುಂದರವಾದ ಜಗತ್ತಿನಲ್ಲಿ ಜೀವಿಸುವವರು ಸದಾ ಸಂತೋಷಚಿತ್ತರಾಗಿರಬೇಕು. ಪರಸ್ಪರ ದ್ವೇಷ, ಲೋಭ ಮೊದಲಾದ ಗುಣಗಳು ಹೋಗಿ ಸಮಾಜವು ಪರಸ್ಪರ ಸದ್ಗುಣಗಳಿಂದ ಕಂಗೊಳಿಸಬೇಕು" ಎಂದು ಹೇಳಿದ್ದಾರೆ. ನಮ್ಮ ಸಮಕಾಲೀನನಾಗಿ ಭಾರತದ ಸ್ವಾತಂತ್ರ್ಯದ ಜನಕರೆನಿಸಿ, ಭಾರತೀಯ ಸಮಾಜದ ಲೋಪದೋಷಗಳನ್ನು ಬಗೆಬಗೆಯಿಂದ ಸಂಸ್ಕರಿಸಿ, ಜನರಲ್ಲಿ ದೇಶಭಕ್ತಿ, ಸತ್ಯಸಂಧತೆ, ಅಹಿಂಸಾ ಬುದ್ಧಿ, ಸ್ವದೇಶ ಪ್ರೇಮ ಮೊದಲಾದ ಸದ್ಗುಣಗಳು ಬೇರೂರುವಂತೆ ಮಾಡಿದ ಮಹಾತ್ಮ

ಗಾಂಧಿಯವರೂ, ಚೀಣಾದೇಶದ ಕೋಟಿಗಟ್ಟಲೆ ಜನಗಳ ಅನ್ನ ಬಟ್ಟೆಗಳ ಸಮಸ್ಯೆಯನ್ನು ಬಗೆಹರಿಸಿ ಆ ಪ್ರಾಚೀನ ಸಂಸ್ಕೃತಿಯ ಜನಗಳು ಜಗತ್ತಿನ ಜನರ ಮುಂದೆ ಇಂದು ತಲೆಯೆತ್ತಿ ನಿಲ್ಲುವಂತೆ ಮಾಡಿದ ಮಾವೊತ್ಸೆತುಂಗನೂ ವಿಶ್ವ ಮಾನವ ಸಮಾಜಗಳ ಉದ್ಧಾರಕರಾಗಿ ವಂದನಾರ್ಹರಾಗಿದ್ದಾರೆ.

ವಿಶಾಲವಾದ ವಿಶ್ವದ ಇತಿಹಾಸದಲ್ಲಿ ನಮ್ಮ ಭಾರತ ದೇಶವು ಅತ್ಯಂತ ಪ್ರಾಚೀನವೂ ಪವಿತ್ರವೂ ಆದುದೆನಿಸಿದೆ. ಈ ದೇಶದಲ್ಲಿ ವೇದಪೂರ್ವಕಾಲ ದಿಂದಲೂ ಒಂದು ಉನ್ನತವಾದ ಸಂಸ್ಕೃತಿಯು ಬಳೆದುಬಂದಿದೆಯೆಂಬುದೂ ಹರಪ್ಪ-ಮೊಹೆಂಜದಾರೋ ಮೊದಲಾದ ಸಂಶೋಧನೆಗಳಿಂದ ಈಗ ಸ್ಪಷ್ಟ ಗೊಂಡಿದೆ. ಈ ದೇಶದಲ್ಲಿ ಮೊದಲು ದ್ರಾವಿಡರಿದ್ದರೆಂದೂ ಅನಂತರ ಆರ್ಯರು ಆಗಮಿಸಿದರೆಂದೂ ಕಾಲಕ್ರಮದಲ್ಲಿ ಈ ಉಭಯರೂ ಗಂಗೆ-ಯಮುನೆಯಂತೆ, ತುಂಗ-ಭದ್ರೆಯಂತೆ, ಕಾವೇರೀ-ಕಪಿಲೆಯಂತೆ ಬೆರತು ಇಂದಿನ ಭಾರತೀಯ ಸಂಸ್ಕೃತಿ ಉದಯಿಸಿತೆಂದೂ ವಿದ್ವಾಂಸರು ನಿರ್ಣಯಿ ಸಿದ್ದಾರೆ. ಈಗಿನ ಹಿಂದೂಸಮಾಜದಲ್ಲಿ ದ್ರಾವಿಡರ ಭಕ್ತಿಪಂಥ, ಆರ್ಯರ ತತ್ತ್ವಜ್ಞಾನ, ಬೌದ್ಧರ ಧರ್ಮೈಕನಿಷ್ಠೆ, ಜೈನರ ಅಹಿಂಸಾಧರ್ಮ ಇವೆಲ್ಲವೂ ಒಟ್ಟುಗೂಡಿ ಸೇರಿವೆ. ಕಾರಣ ಕಾಶ್ಮೀರದಿಂದ ಕನ್ಯಾಕುಮಾರಿಯ ವರೆಗಿರುವ ಕೋಟಿ ಕೋಟಿಗಟ್ಟಲೆ ಸನಾತನ ಧರ್ಮಾನುಯಾಯಿಗಳಾದ ಜನಗಳಲ್ಲಿ ನಾವಿಂದು ಕಾಣುತ್ತಿರುವುದು ಏಕಪ್ರಕಾರವಾದ ಭಾರತೀಯ ಸಂಸ್ಕೃತಿಯನ್ನು. ಹಿಮಾಲಯದ ಕೈಲಾಸದಿಂದ ಹಿಡಿದು ದಕ್ಷಿಣದ ರಾಮೇಶ್ವ ರದವರೆಗೆ ಇರುವ ಕ್ಷೇತ್ರಗಳಲ್ಲಿ ಒಂದೇ ವಿಧವಾದ ದೇವರ ಪೂಜಾದಿ ವಿಧಾನ ಗಳಿಂದ ವೈದಿಕ ಕಾರ್ಯಕಲಾಪಗಳು ನಡೆಯುವುದನ್ನು ನಾವಿಂದು ನೋಡು ತ್ತಿದ್ದೇವೆ. ಈ ಸಂಸ್ಕೃತಿಯು ಸಾವಿರಾರು ವರ್ಷಗಳಿಂದ ಒಂದೇ ಪ್ರಕಾರವಾಗಿ ನಡೆದುಕೊಂಡು ಬರುತ್ತಿರುವುದು ನಾವು ನೆನಪಿನಲ್ಲಿಟ್ಟುಕೊಳ್ಳುವ ಸಂಗತಿ ಯಾಗಿದೆ. ವಿವಾಹ, ನಾಮಕರಣ, ಉಪನಯನ ಮೊದಲಾದುವುಗಳಲ್ಲಿಯೂ ಇವೇ ಪ್ರಕಾರವಾದ ಆಚರಣೆಗಳನ್ನು ನಾವು ನೋಡುತ್ತಿದ್ದೇವೆ. ಇದೆಲ್ಲವೂ ನಮ್ಮ ಸನಾತನ ಸಂಸ್ಕೃತಿಯ ಪ್ರಭಾವವಲ್ಲವೇನು ?

ಆಸೇತು ಹಿಮಾಚಲ ಪರ್ಯಂತರವಾಗಿ ವ್ಯಾಪಿಸಲ್ಪಟ್ಟಿರುಯ ವಿಶಾಲ ಭಾರತ ವರ್ಷದಲ್ಲಿ ವೇದ, ಶಾಸ್ತ್ರ, ಆಗಮ, ಪುರಾಣ, ಗೀತೆ, ದರ್ಶನ,

ರಾಮಾಯಣ, ಭಾರತ ಮೊದಲಾದುವು ನಮ್ಮ ಸಂಸ್ಕೃತಿಯ ಭಂಡಾರವೆಂದು ಭಾವಿಸಲ್ಪಟ್ಟವೆ. ನಾಟ್ಯಶಾಸ್ತ್ರ, ಅರ್ಥಶಾಸ್ತ್ರ, ಕಾಮಶಾಸ್ತ್ರ ಮೊದಲಾದ ಶಾಸ್ತ್ರ ಗ್ರಂಥಗಳು ಭಾರತೀಯರ ಪ್ರಾಬಲ್ಯಕ್ಕೆ ನಿದರ್ಶನಗಳಾಗಿವೆ. ನಮ್ಮ ಶಾಸ್ತ್ರಗಳಲ್ಲಿ "ಏಕಂ ಸತ್ ವಿಪ್ರಾ ಬಹುಧಾ ವದಂತಿ", "ಅಣೋರಣೀಯಾ಼ ಮಹತೋಮಹೀಯಾ಼", "ಸಚ್ಚಿದಾನಂದ ಸ್ವರೂಪ" ಎಂದು ಮೊದಲಾಗಿ ದೇವರನ್ನು ಕುರಿತು ವರ್ಣಿಸಲ್ಪಟ್ಟಿದೆ. ಇವುಗಳ ಅರ್ಥ, ದೇವರು ಒಬ್ಬನೇ, ಪಂಡಿತರು ಬಹು ವಿಧವಾಗಿ ಹೇಳುತ್ತಾರೆ. ಭಗವಂತನು ಚಿಕ್ಕದಕ್ಕೆ ಚಿಕ್ಕದಾಗಿಯೂ ದೊಡ್ಡದಕ್ಕೆ ದೊಡ್ಡದಾಗಿಯೂ ಇದ್ದಾನೆ. ಆ ದೇವರು ಸತ್, ಚಿತ್, ಆನಂದ ಎಂಬ ಮೂರು ಗುಣಗಳಿಂದ ಕೂಡಿದವನಾಗಿದ್ದಾನೆ ಎಂಬಂತಿದೆ. ಇದೇ ಅರ್ಥವನ್ನು ಕನ್ನಡ ನಾಡಿನ ಉದ್ಧಾರಕರಾದ ಬಸವಣ್ಣನವರು "ದೇವನೊಬ್ಬ ನಾಮ ಹಲವು, ಇಬ್ಬರು ಮೂವರು ದೇವರೆಂಬುದು ಪುಸಿ. ದೇವನೊಬ್ಬನೇ ಕಾಣಿರೋ" ಎಂದು ಮೊದಲಾಗಿ ಹೇಳಿದ್ದಾರೆ. ಇಲ್ಲಿ ಭಾಷೆ ಬೇರೆಯಾದರೂ ಭಾವ ಒಂದೇ ಆಗಿದೆಯಲ್ಲವೆ?

ಬಹಳ ಹಿಂದಿನ ಕಾಲದಿಂದಲೂ ತಂದೆ, ತಾಯಿ, ಗುರು ಮತ್ತು ಅತಿಥಿಗಳಿಗೆ ಹೆಚ್ಚಿನ ಮನ್ನಣೆಯನ್ನು ಕೊಡುವ ಸಂಪ್ರದಾಯ ನಮ್ಮ ಸಮಾಜದಲ್ಲಿ ಉಂಟು. ಇದಕ್ಕೆ ಮೂಲ "ಮಾತೃದೇವೋ ಭವ, ಪಿತೃದೇವೋ ಭವ, ಅತಿಥಿದೇವೋ ಭವ" ಎಂಬ ವೇದ ವಾಕ್ಯಗಳು. ಅದೇ ವೇದದಲ್ಲಿ 'ಸತ್ಯಂ ವದ, ಧರ್ಮಂಚರ' ಎಂಬ ಮುತ್ತಿನಂಥ ಮಾತುಗಳೂ ಉಂಟು, 'ಸತ್ಯವನ್ನು ಹೇಳು, ಧರ್ಮವನ್ನು ಮಾಡು' ಎಂದು ಇದರ ಅರ್ಥ. ವೇದವ್ಯಾಸರೆಂಬ ದೊಡ್ಡ ಋಷಿಗಳು ೧೮ ಪುರಾಣಗಳು, ಉತ್ತರ ಮೀಮಾಂಸೆ ಮತ್ತು ಮಹಾಭಾರತಗಳನ್ನು ಬರೆದಿದ್ದಾರೆ. ಈ ಎಲ್ಲ ಗ್ರಂಥಗಳ ಸಾರವನ್ನೂ "ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ" ಅಂದರೆ ಇತರರಿಗೆ ಉಪಕಾರ ಮಾಡುವುದು ಪುಣ್ಯವೆಂದೂ, ಇತರರನ್ನು ಹಿಂಸಿಸುವುದು ಪಾಪವೆಂದೂ ಹೇಳಿರುತ್ತಾರೆ. ಹೀಗೆಯೇ ನಮ್ಮ ದೇಶದಲ್ಲಿ ಋಷಿಗಳೂ, ಕವಿಗಳೂ, ಸಮಾಜದ ಅಭ್ಯುದಯಕ್ಕಾಗಿ ಅನೇಕ ಉತ್ತಮವಾದ ವಿಷಯಗಳನ್ನು ಹೇಳಿರುತ್ತಾರೆ. ಇವೆಲ್ಲವೂ ನಮ್ಮ ಸಮಾಜ ಜೀವನದ ಪರಿಶುದ್ಧತೆಗಾಗಿಯೇ ಆಗಿವೆ.

ಸಾಧ್ವಿಯಾದ ಸಾವಿತ್ರಿಯು, ಸತ್ಯವಂತನು ಅಲ್ಪಾಯುವೆಂಬುದನ್ನು ನಾರದ ಮುನಿಗಳು ಪ್ರತ್ಯಕ್ಷವಾಗಿ ಹೇಳಿದರೂ, 'ತಾನು ಒಮ್ಮೆ ಮೆಚ್ಚಿದ ಗಂಡನನ್ನು ಯಾವ ಕಾರಣದಿಂದಲೂ ಬದಲಾಯಿಸಿ ಮತ್ತೊಬ್ಬನನ್ನು ವರಿಸಲಾರೆ' ಎಂದು ಸ್ಪಷ್ಟವಾಗಿ ಹೇಳುತ್ತಾಳೆ. ಕಡೆಗೆ ಆತನನ್ನೇ ಲಗ್ನವಾಗಿ ಪತಿಗೆ ಅಪಮೃತ್ಯು ಬಂದಾಗ ಯಮಧರ್ಮನನ್ನು ಭಕ್ತಿ-ಯುಕ್ತಿಗಳಿಂದ ಒಲಿಸಿಕೊಂಡು, ಸತ್ಯವಂತನನ್ನು ಬದುಕಿಸಿ ಅಪಾರವಾದ ಕೀರ್ತಿ ಗೌರವ ಗಳನ್ನು ಪಡೆದಿರುತ್ತಾಳೆ. ಕಣ್ವರ ಆಶ್ರಮಕ್ಕೆ ಹೋದ ದುಷ್ಯಂತನು ಸುಂದರಿಯಾದ ಶಕುಂತಲೆಯನ್ನು ಕಂಡು ಮೋಹಿಸುತ್ತಾನೆ. ಆದರೆ ತನ್ನ ಈ ಚಿತ್ತಚಾಪಲ್ಯವು ಋಷಿ ಪುತ್ರಿಯ ಒಗ್ಗೆ ನಡೆದುದು ಅನುಚಿತವೆಂದು ತಿಳಿಯುತ್ತಾನೆ. ಸುಸಂಸ್ಕೃತನಾದ ತಾನು ಹೀಗೆ ಮಾಡಬಾರದೆನ್ನುತ್ತಾನೆ. ಅನಂತರ ಸಖಿಯರ ಮುಖದಿಂದ ಅವಳು ಕ್ಷತ್ರಿಯ ಪುತ್ರಿಯೆಂದರಿತು ಚಿತ್ತ ಶಾಂತಿಯನ್ನು ಹೊಂದುತ್ತಾನೆ. ಇಲ್ಲಿ ದುಷ್ಯಂತನಿಗೆ ಉಂಟಾದ ಧರ್ಮ ಸಂಕಟಕ್ಕೆ ಅವನ ಸದ್ವಂಶ ಸಂಭವತ್ವವೇ ಕಾರಣ. ಉತ್ತಮ ಸಂಸ್ಕೃತಿ ಯುಳ್ಳವರು ಹೀಗೆ ಪ್ರತಿಯೊಂದು ಸಂದರ್ಭದಲ್ಲಿಯೂ ಆತ್ಮ ಪರೀಕ್ಷೆಯನ್ನು ಮಾಡಿಕೊಳ್ಳುತ್ತಾರೆ. ಈ ಮೇಲೆ ಹೇಳಿದಂತೆ ಸಾವಿತ್ರಿಯ ಶೀಲಶುದ್ಧಿಗೂ, ದುಷ್ಯಂತನ ಚಿತ್ತಸಂಸ್ಕಾರಕ್ಕೂ, ಧರ್ಮಶ್ರದ್ಧೆಗೂ ಮುಖ್ಯಕಾರಣ್ನ ವಾದುದು ಉಜ್ವಲವಾದ ಭಾರತೀಯ ಸಂಸ್ಕೃತಿಯೇ ಆಗಿದೆ ಎಂಬುದನ್ನು ನಾವು ಸುಲಭವಾಗಿ ಅರಿಯಬಹುದು.

ನಮ್ಮ ಕನ್ನಡ ಭಾಷೆಯಲ್ಲಿ ಕೂಡ ಶಿವಶರಣರು, ಹರಿದಾಸರು, ಕವಿ ಶ್ರೇಷ್ಠರು, ಸಮಾಜಕ್ಕೆ ಒಳ್ಳೆಯ ನೀತಿಗಳನ್ನು ಬೋಧಿಸಿರುತ್ತಾರೆ. ಉದಾಹರಣೆಗಾಗಿ :—

ಎನಗಿಂತ ಕಿರಿಯರಿಲ್ಲ, ಶಿವಶರಣರಿಗಿಂತ ಹಿರಿಯರಿಲ್ಲ.

ದಯೆಯಿಲ್ಲದ ಧರ್ಮವಾವುದಯ್ಯಾ, ದಯೆಯಿರಬೇಕು
ಸಕಲ ಪ್ರಾಣಿಗಳಲ್ಲಿ, ದಯೆಯೇ ಧರ್ಮದ ಮೂಲವು.

ಲೋಕದಲ್ಲಿ ಹುಟ್ಟಿದ ಬಳಿಕ ಸ್ತುತಿ ನಿಂದೆಗಳಿಗೆ ಅಂಜ
ಬಾರದು, ಅಳುಕಬಾರದು, ಸಮಾಧಾನಿಯಾಗಿರಬೇಕು.

ಕಾಯಕವೇ ಕೈಲಾಸ, ಮೃದುವಚನಂಗಳೇ ಸಕಲ ಜಪಂಗಳಯ್ಯಾ,
ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ
ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು.

ಕಲ್ಲನಾಗರ ಕಂಡರೆ ಹಾಲನೆರೆ ಎಂಬರು, ದಿಟದ ನಾಗರ
ಕಂಡರೆ ಕೊಲ್ಲು ಎಂಬರು, ಇದೇತರ ಭಕ್ತಿ ?

ಜನ ಮೆಚ್ಚಿ, ನಡಕೊಂಡರೆ ಏನುಂಟು ಲೋಕದಿ,
ಮನಮೆಚ್ಚಿ, ನಡಕೊಳ್ಳುವುದೆ ಚೆಂದವು.

ಮನದ ಮುಂದಣ ಆಸೆಯೇ ಮಾಯೆ,
ಹೊನ್ನು, ಹೆಣ್ಣು, ಮಣ್ಣು, ಮಾಯೆಯಲ್ಲ.
ಪರವಧುವನು ಮಹಾದೇವಿಯೆಂಬೆನು.

ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟವ ಹೊರಿಸದಿರಯ್ಯಾ,
ಶರಣರ ಸೂಳ್ ನುಡಿಯನು ಒಂದರಘಳಿಗೆ ಬಿಟ್ಟಿರಲಾರೆ.

ಶ್ರೀ ಗುರುವಚನೋಪದೇಶವನಾಲಿಸಿದಾಗಳಹದು ನರರಿಗೆ ಮುಕುತಿ,

ಇತ್ಯಾದಿಯಾಗಿ ಶಿವಶರಣರ ಉಪದೇಶಗಳೂ,

ಹೊಲೆಯ ಹೊರಗಿಹನೆ ಊರೊಳಗಿಲ್ಲವೆ?
ಶ್ರೀಹರಿಯ ನಾಮವನು ಬಲ್ಲವರು ಹೇಳಿ ?
ಸ್ನಾನ ಮಾಡಿರೊ ಜ್ಞಾನತೀರ್ಥದಲಿ, ನಾನು ನೀನೆಂಬ
ಅಹಂಕಾರವ ಬಿಟ್ಟು.
ಕಲ್ಲುಸಕ್ಕರೆ ಕೊಳ್ಳಿರೋ ನೀವೆಲ್ಲರೂ ಹರಿನಾಮವೆಂಬ
ಪಾಪಿ ಬಲ್ಲನೆ ಪರರ ಸುಖದುಃಖವ—
ಕೋಪಿ ಬಲ್ಲನೆ ಸತಿಯ ಶೀಲ ಗುಣವ.
ನಾನೇಕೆ ಬಡವನು, ನಾನೇಕೆ ಪರದೇಶಿ, ಶ್ರೀನಿಧೇ ಹರಿಯೆನಗೆ
ನೀನಿರುವತನಕ.

ದಾಸೋऽಹಂ ತವ ದಾಸೋऽಹಂ
ವಾಸುದೇವ ವಿಗತಾಘಸಂಘ ತವ.
ಎಲ್ಲಾ ರೂಪವು ತಾನಂತೆ, ಶಿವ ಎಲ್ಲೆಲ್ಲಿಯು ತುಂಬಿಹನಂತೆ.
ದುರ್ಜನರ ಸಂಗವನು ತ್ಯಜಿಸು ಮನವೇ.–
ಸಾಧು ಸಜ್ಜನರ ಸಂಗವನು ಭಜಿಸಿ ಸುಖಿಯಾಗು.

ಇತ್ಯಾದಿಯಾದ ಹರಿದಾಸರ ವಚನಗಳೂ ಕನ್ನಡಿಗರ ವಿಶಾಲವಾದ ಜೀವನ ಸೌಂದರ್ಯಕ್ಕೆ, ಸಂಸ್ಕೃತಿ ನಿಷ್ಠೆಗೆ ನಿದರ್ಶನಗಳಾಗಿವೆ.

ಭಾರತ ದೇಶದಲ್ಲಿ ರಾಮಾಯಣ, ಮಹಾಭಾರತಗಳು ನಮ್ಮ ಸಮಾಜ ಮತ್ತು ಸಂಸ್ಕೃತಿಗಳನ್ನು ಬಹುಮಟ್ಟಿಗೆ ಕಾಪಾಡಿಕೊಂಡು ಬಂದಿವೆ. ಶ್ರೀರಾಮನ ಪಿತೃಭಕ್ತಿ, ದಶರಥನ ಪುತ್ರ ಪ್ರೇಮ, ಶ್ರೀರಾಮನ ಪರನಾರೀ ಸೋದರತ್ವ, ಸೀತಾದೇವಿಯ ಪಾತಿವ್ರತ್ಯ, ಭರತ–ಲಕ್ಷ್ಮಣರ ಭ್ರಾತೃಪ್ರೇಮ, ಸುಗ್ರೀವ–ವಿಭೀಷಣರ ಸ್ನೇಹಪರತೆ, ಮಾರುತಿಯ ಸ್ವಾಮಿಭಕ್ತಿ, ಕಪಿ ವೀರರ ಸೇತು ಬಂಧನದಂತಹ ಮಹತ್ಕಾರ್ಯಸಾಧನೆ ಇವು ಯಾವ ಕಾಲ ದಲ್ಲಿಯೂ ಯಾವ ದೇಶದಲ್ಲಿಯೂ ಆದರ್ಶವಾದ ಗುಣಗಳೇ ಆಗಿವೆ. ಆದುದರಿಂದಲೇ ಕಾಲಿದಾಸ ಮಹಾಕವಿಯು ರಾಮಾಯಣದ ಹಿರಿಯರನ್ನು ಕುರಿತು ಹೇಳುವಾಗ ರಘುವಂಶದಲ್ಲಿ:

ಶ್ಲೋಕ|| ಸೋಹಮಾಜನ್ಮಶುದ್ಧಾನಾಂ ಆಫಲೋದಯಕರ್ಮಣಾಂ|| ।
ಆಸಮುದ್ರಕ್ಷಿತೀಶಾನಾಂ ಆನಾಕರಥವರ್ತ್ಮನಾಂ||
ಶೈಶವೇऽಭ್ಯಸ್ತವಿದ್ಯಾನಾಂ ಯೌವನೇ ವಿಷಯೈಷಿಣಾಂ||
ವಾರ್ಧಕೇ ಮುನಿವೃತ್ತೀನಾಂ ಯೋಗೇನಾಂತೇ ತನುತ್ಯಜಾಂ||

ಎಂದರೆ, ರಘುವಂಶದ ರಾಜರು ಹುಟ್ಟಿದಂದಿನಿಂದ ಮರಣ ಪರ್ಯಂತ ಪರಿಶುದ್ಧರಾದವರು, ಹಿಡಿದ ಕಾರ್ಯಗಳಲ್ಲಿ ಪ್ರಯೋಜನವನ್ನು ಹೊಂದ ತಕ್ಕವರು, ಸಮುದ್ರವೇ ಮೇರೆಯಾಗಿ ಉಳ್ಳ ರಾಜ್ಯವನ್ನು ಪಡೆದವರು. ಸ್ವರ್ಗಲೋಕದವರೆಗೆ ರಥವನ್ನು ಬಿಡತಕ್ಕವರು. ಬಾಲ್ಯದಲ್ಲಿ ವಿದ್ಯಾಭ್ಯಾಸ ವನ್ನುಮಾಡಿ, ಯೌವನದಲ್ಲಿ ಸಂಸಾರ ಸುಖವನ್ನು ಅನುಭವಿಸಿ, ವಾರ್ಧಕ್ಯದಲ್ಲಿ

ಮುನಿವೃತ್ತಿಯನ್ನು ಅವಲಂಬಿಸಿ ಅಂತ್ಯದಲ್ಲಿ ಪರಬ್ರಹ್ಮನಲ್ಲಿ ಐಕ್ಯವನ್ನು ಪಡೆಯುತಕ್ಕವರು ಎಂದು ಮೊದಲಾಗಿ ಬಣ್ಣಿಸಿರುತ್ತಾನೆ. ಈ ರಘುವಂಶದ ರಾಜರ ಸದ್ಗುಣಗಳು ಭಾರತೀಯ ಸಂಸ್ಕೃತಿಯ ನಿದರ್ಶನಗಳೇ ಆಗಿವೆ. ರಾಮಾಯಣವು ಇಂತಹ ಉತ್ತಮವಾದ ಗ್ರಂಥವಾದುದರಿಂದಲೇ ಸಂತ ತುಲಸೀದಾಸನು, ಅದನ್ನು 'ರಾಮಚರಿತ ಮಾನಸ' ಎಂದು ಕರೆದಿದ್ದಾನೆ. ಮಾನಸ ಸರೋವರದಲ್ಲಿ ಸ್ನಾನಮಾಡತಕ್ಕವರು ಸಕಲ ಪಾಪಗಳನ್ನೂ ಕಳೆದು ಕೊಳ್ಳುವಂತೆ ರಾಮಾಯಣವನ್ನು ಪಾರಾಯಣ ಮಾಡತಕ್ಕವರು ಸಕಲ ಪಾಪನಿವೃತ್ತಿಯನ್ನೂ ಮಾಡಿಕೊಂಡು ಪುಣ್ಯವಂತರಾಗುತ್ತಾರೆಂದು ಇದರ ತಾತ್ಪರ್ಯ. ಶ್ರೀ ರಾಮಾನುಜಾಚಾರ್ಯರು ರಾಮಾಯಣವು ವೇದಕ್ಕೆ ಸಮಾನ ವಾದ ಗ್ರಂಥವೆಂದು ಭಾವಿಸಿದ್ದಾರೆ. ರವೀಂದ್ರನಾಥ ಠಾಕೂರರು ರಾಮಾ ಯಣ ಮಹಾಭಾರತಗಳು ವಿಶ್ವದ ಮಾನವ ಜಾತಿಯನ್ನು ಉದ್ಧಾರಮಾಡುವ ಗ್ರಂಥಗಳೆಂದು ತಮ್ಮ "ಪ್ರಾಚೀನ ಸಾಹಿತ್ಯ ವಿಮರ್ಶೆ"ಯಲ್ಲಿ ಹೇಳಿದ್ದಾರೆ.

ಮಹಾಭಾರತವು ನಮ್ಮ ದೇಶದಲ್ಲಿ ಅತ್ಯಂತ ಪ್ರಖ್ಯಾತವಾದ ಗ್ರಂಥ. "ಭಾರತಃ ಪಂಚಮೋ ವೇದಃ" ಎಂದರೆ 'ಭಾರತವು ಐದನೇ ವೇದ' ಎಂದು ಪ್ರಾಚೀನರು ಹೇಳಿದ್ದಾರೆ. ಧರ್ಮಾತ್ಮ ಪಂಡಿತ ಮದನಮೋಹನ ಮಾಳ ವೀಯರು ಮಹಾ ಭಾರತವು ನಮ್ಮ ದೇಶದ ವಸ್ತುಕೋಶ 'Bharatha is the Encyclopaedia of India' ಎಂದು ಹೇಳಿದ್ದಾರೆ. 'ಬಾರದುದನ್ನು ಭಾರತದಲ್ಲಿ ಕಲಿ' ಎಂದು ನಮ್ಮ ಕನ್ನಡ ಜನರು ಹೇಳುತ್ತಾರೆ. ಕನ್ನಡ ಸಾಹಿತ್ಯದಲ್ಲಿ ಪ್ರಖ್ಯಾತರಾದ ಇಬ್ಬರು ಮಹಾಕವಿಗಳು ಭಾರತವನ್ನು ಕುರಿತು ಹೇಳಿದ ಎರಡು ಪದ್ಯಗಳನ್ನು ಇಲ್ಲಿ ಉದಾಹರಿಸಲಾಗಿದೆ:—

ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ
ಗಂಡಿನೊಳ್ ಭೀಮಸೇನಂ।

ಬಲದೊಳ್ ಮದ್ರೇಶಂ ಅತ್ಯುನ್ನತಿಯೊಳಮರಸಿಂಧೂದ್ಭವಂ
ಚಾಪವಿದ್ಯಾ॥

ಬಲದೊಳ್ ಕುಂಭೋದ್ಭವಂ ಸಾಹಸದ ಮಹಿಮೆಯೊಳ್ ಫಲ್ಗುಣಂ
ಧರ್ಮದೊಳ್ನಿ।

ರ್ಮಲಚಿತ್ತಂ ಧರ್ಮಪುತ್ರಂ ಮಿಗಿಲಿವರ್ಗಳಿನೀ ಭಾರತಂ ಲೋಕ
ಪೂಜ್ಯಂ॥

ಎಂದರೆ ಹಟದಲ್ಲಿ ದುರ್ಯೋಧನನೂ, ಸತ್ಯದಲ್ಲಿ ಕರ್ಣನೂ, ಪರಾಕ್ರಮದಲ್ಲಿ ಭೀಮಸೇನನೂ,ಬಲದಲ್ಲಿ ಮದ್ರರಾಜನಾದ ಶಲ್ಯನೂ, ಶ್ರೀಷ್ಮತನದಲ್ಲಿ ಭೀಷ್ಮನೂ, ಯುದ್ಧ ವಿದ್ಯೆಯಲ್ಲಿ ದ್ರೋಣನೂ, ಸಾಹಸದಲ್ಲಿ ಅರ್ಜುನನೂ, ಧರ್ಮದಲ್ಲಿ ನಿರ್ಮಲಚಿತ್ತನಾದ ಧರ್ಮರಾಯನೂ ಶ್ರೇಷ್ಠರಾದವರೆಂದು ಇದರ ತಾತ್ಪರ್ಯ. ಎಂದ ಮೇಲೆ ಇಂಥವರು ನಾಯಕರಾಗಿರುವ ಮಹಾಭಾರತವು ಲೋಕಮಾನ್ಯವಾಗಿರಲೇಬೇಕು. ಈ ಮಾತನ್ನು ಹೇಳಿದವನು ಕನ್ನಡದ ಮೊದಲನೇ ಮಹಾಕವಿಯಾದ ಆದಿಪಂಪನು. ಇನ್ನು ಇನ್ನೊಬ್ಬ ಕನ್ನಡ ಮಹಾಕವಿಯಾದ ಕುಮಾರವ್ಯಾಸನು ಭಾರತದ ಹಿರಿಮೆಯನ್ನು ಕುರಿತು ಸುಂದರವಾಗಿ ಹೇಳಿರುವುದನ್ನು ನೋಡೋಣ.

ಅರಸುಗಳಿಗಿದು ವೀರ ಬುಧರಿಗೆ।
ಪರಮ ವೇದದ ಸಾರ ಯೋಗೀ।
ಶ್ವರರ ತತ್ತ್ವವಿಚಾರ ಮಂತ್ರೀಜನಕೆ ಬುದ್ಧಿ ಗುಣ॥
ವಿರಹಿಗಳ ಶೃಂಗಾರ ವಿದ್ಯಾ।
ಪರಿಣತರಿಗಾಧಾರ ಕಾವ್ಯಕೆ ।
ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ॥

ಎಂದರೆ, ಈ ಮಹಾಭಾರತ ಗ್ರಂಥದಲ್ಲಿ ಅರಸರುಗಳಿಗೆ ವೀರಗುಣವೂ, ವಿದ್ವಾಂಸರಿಗೆ ವೇದಗಳ ಸಾರಭೂತವಾದ ಜ್ಞಾನವೂ, ಯೋಗಿಗಳಿಗೆ ಭಗವದ್ಗೀತಾದಿ ತತ್ತ್ವ ವಿಚಾರವೂ, ಮಂತ್ರಿಗಳಿಗೆ ರಾಜನೀತಿ ವಿಚಾರವೂ, ರಸಿಕರಿಗೆ ಶೃಂಗಾರಸಾರವೂ, ವಿದ್ವಾಂಸರಿಗೆ ಸಕಲ ಶಾಸ್ತ್ರಗಳ ಆಧಾರವೂ ಭಾರತದಲ್ಲಿ ಲಭಿಸುತ್ತವೆ. ಆದುದರಿಂದ 'ಕಾವ್ಯಗಳ ಗುರು'ಎಂದು ಕುಮಾರ

ವ್ಯಾಸನು ಹೇಳುತ್ತಾನೆ. ಈ ಮಹಾಗ್ರಂಥದಲ್ಲಿ ಇಷ್ಟೊಂದು ಗುಣಸಂಪತ್ತು ಇರುವುದರಿಂದಲೇ ಈ ಮಹಾಭಾರತವನ್ನು ವಿಶ್ವಕವಿ ಠಾಕೂರರು 'ಮಾನವ ಲೋಕದ ಆದರ್ಶ ಗ್ರಂಥ'ಎಂದು ಕರೆಯುತ್ತಾರೆ. ಇದು ಸರ್ವಥಾ ನ್ಯಾಯ ವಾಗಿಯೇ ಇದೆ.

ಹೀಗೆ ಮೇಲೆ ಕಂಡ ಗ್ರಂಥಗಳಾದ ರಾಮಾಯಣ, ಮಹಾಭಾರತಗಳು, ನಮ್ಮ ಸಮಾಜ ಜೀವನಕ್ಕೆ ನೆಲೆಗಟ್ಟಿನಂತೆ ಸಂರಕ್ಷಕವಾಗಿವೆ. ರಾವಣನ ಪರಸ್ತ್ರೀಲಂಪಟತ್ವ, ಕುಂಭಕರ್ಣನ ಅತಿಯಾದ ನಿದ್ರಾಲಸ್ಯ, ಕೌರವನ ದುರಾಸೆ, ದುಶ್ಯಾಸನನ ದುರ್ನೀತಿ, ಕೀಚಕನ ಕಾಮುಕತ್ವ, ಕೈಕೇಯಿಯ ಅಲ್ಪತನ, ಮಂಥರೆಯ ಪಿತೂರಿ, ವಾಲಿಯ ಭ್ರಾತೃದ್ರೋಹ ಮೊದಲಾದ ದುರ್ಗುಣಗಳನ್ನು ಇಂದಿಗೂ ನಮ್ಮ ಜನರು ಪ್ರೀತಿಸುವುದಿಲ್ಲ. ನಮ್ಮ ದೇಶದ ಜನಜೀವನದಲ್ಲಿ ರಾಮ, ಲಕ್ಷ್ಮಣ, ಭೀಮ, ಅರ್ಜುನ ಎಂಬ ಪವಿತ್ರವಾದ ಹೆಸರುಗಳನ್ನು ಜನರು ಪ್ರೀತಿಸುವಂತೆ, ರಾವಣ, ಕುಂಭಕರ್ಣ, ದುರ್ಯೋಧನ, ದುಶ್ಯಾಸನ, ಶಕುನಿ ಎಂಬ ಹೆಸರುಗಳನ್ನು ಇಂದಿಗೂ ನಮ್ಮ ದೇಶದಲ್ಲಿ ಯಾರೂ ಪ್ರೀತಿಸುತ್ತಿಲ್ಲವೆಂದು ನಿರ್ಧರವಾಗಿ ಹೇಳಬಹುದು. ಈ ರಾಮಾಯಣ-ಮಹಾಭಾರತ ಗ್ರಂಥಗಳು ನಮ್ಮ ಸಮಾಜ ಜೀವನದ ಮೇಲೆಯೇ ಅಲ್ಲ, ನಮ್ಮ ದೇಶದ ರಾಜಕೀಯದ ಮೇಲೆ ಕೂಡ ಪ್ರಭಾವ ವನ್ನು ಬೀರಿವೆ ಎಂಬುದಕ್ಕೆ ನಿದರ್ಶನಗಳಿವೆ. ಛತ್ರಪತಿ ಶಿವಾಜಿ ಮಹಾ ರಾಜನು ಹಿಂದೂರಾಜ್ಯ ಸಂಸ್ಥಾಪನೆಯ ಆದರ್ಶ ಪಡೆದುಕೊಂಡುದು ರಾಮಾಯಣ, ಮಹಾಭಾರತಗಳಿಂದ ಎಂದು ಆತನ ಚರಿತ್ರೆಯಲ್ಲಿ ಹೇಳಿದೆ. ಇಂದು ಭಾರತಕ್ಕೆ ಸ್ವರಾಜ್ಯವನ್ನು ದೊರಕಿಸಿಕೊಟ್ಟಿರುವ ಮಹಾತ್ಮ ಗಾಂಧಿ ಯವರೂ ಕೂಡ ಈ ಉಭಯ ಮಹಾಕಾವ್ಯಗಳಿಂದಲೇ ಸ್ಫೂರ್ತಿಯನ್ನು ಪಡೆದುಕೊಂಡಿದ್ದರೆಂಬುದಕ್ಕೆ ಅವರು ದಿನವೂ ನಡೆಸುತ್ತಿದ್ದ ಭಜನೆಗಳಲ್ಲಿ

ರಘುಪತಿ ರಾಘವ ರಾಜಾರಾಮ್<br>
ಪತಿತ ಪಾವನ ಸೀತಾರಾಮ್।<br>
ಈಶ್ವರ ಅಲ್ಲಾ ತೇರೇ ನಾಮ್<br>
ಸಬಕೋ ಸನ್ಮತಿ ದೇ ಭಗವಾನ್।

ಎಂಬ ಭಜನೆಯೂ, ಭಗವದ್ಗೀತೆಯ ಬಗ್ಗೆ ಗಾಂಧೀಜಿಯವರು ತೋರಿದ ಶ್ರದ್ಧೆಯೂ ತಳೆದ ಅನಾಸಕ್ತಿಯೋಗವೂ, ಮರಣಕಾಲದಲ್ಲಿಯೂ ಕೂಡ "ಹರೇ ರಾಮ್" ಎಂಬ ಪವಿತ್ರ ಶಬ್ದವನ್ನು ಸ್ಮರಿಸಿಕೊಂಡುದೂ ನಿದರ್ಶನಗಳಾಗಿವೆ. ಲೋಕಮಾನ್ಯ ತಿಲಕರು, ಯೋಗಿ ಅರವಿಂದ ಘೋಷರು, ಡಾ|| ಅನಿಬೆಸೆಂಟ್ ಅಮ್ಮನವರು, ಸ್ವಾಮಿ ವಿವೇಕಾನಂದರು ಮೊದಲಾದ ಆಧುನಿಕಕಾಲದ ಮಹಾನುಭಾವರುಗಳೆಲ್ಲರೂ ಭಾರತ ಮತ್ತು ಭಗವದ್ಗೀತೆಗಳಿಂದ ಸ್ಫೂರ್ತಿಯನ್ನು ಪಡೆದುಕೊಂಡಿರುವುದು ಗಮನಾರ್ಹವಾಗಿದೆ.

ಭಾರತ ದೇಶದ ಸಾವಿರಾರು ವರ್ಷಗಳ ಚರಿತ್ರೆಯಿಂದ ನಾವು ನಮ್ಮ ಸಂಸ್ಕೃತಿಯ ಪ್ರಭಾವವನ್ನು ಹಲವಾರು ಸನ್ನಿವೇಶಗಳಲ್ಲಿ ಅರಿಯಬಹುದಾಗಿದೆ. ಅರ್ಥಶಾಸ್ತ್ರವನ್ನು ಬರೆದ ಕೌಟಿಲ್ಯನು, ಚಕ್ರವರ್ತಿ ಚಂದ್ರಗುಪ್ತನಿಗೆ ಗುರುವಾಗಿದ್ದರೂ ಅರಮನೆಯ ರಾಜಭೋಗಗಳನ್ನು ಬಯಸದೆ ಸಾಮಾನ್ಯರಂತೆ ಒಂದು ಪರ್ಣಶಾಲೆಯಲ್ಲಿ ವಾಸಿಸಿದನು; ಸಾರ್ವಭೌಮ ಅಶೋಕನು ಮಹಾ ಶೂರನೆನಿಸಿದ್ದರೂ ನಮ್ಮ ಸಂಸ್ಕೃತಿಯ ಪ್ರಭಾವದಿಂದ ಸ್ಫೂರ್ತಿಗೊಂಡು ತನ್ನ ರಾಜ್ಯದ ಯಾವುದೊಂದು ಪ್ರಾಣಿಗೂ ಹಿಂಸೆಯಾಗಬಾರದೆಂದು ತನ್ನ ರಾಜ್ಯದಲ್ಲೆಲ್ಲಾ ಶಿಲಾಶಾಸನ ಬರೆಸಿದನು. ಬಾದಾಮಿ ಚಾಲುಕ್ಯರ ಇಮ್ಮಡಿ ಪುಲಿಕೇಶಿಯು ತನ್ನ ರಾಜ್ಯದಲ್ಲಿ ಸುಂದರಿಯಾದ ಸ್ತ್ರೀಯೊಬ್ಬಳು ವಿದ್ಯಾಭರಣಗಳನ್ನಿಟ್ಟುಕೊಂಡು ಏಕಾಂಗಿಯಾಗಿ ಸಂಚರಿಸಿದರೂ ಅವಳನ್ನು ಜನರು ಕಣ್ಣೆತ್ತಿ ನೋಡದಷ್ಟು ದರ್ಪದಿಂದ ಧರ್ಮದಿಂದ ರಾಜ್ಯಭಾರ ಮಾಡಿದನು. ರಾಷ್ಟ್ರಕೂಟ ರಾಜನಾದ ನೃಪತುಂಗ ಮಹಾರಾಯನು ಸಕಲವಿದ್ವಾಂಸರನ್ನೂ ಆಸ್ಥಾನಕ್ಕೆ ಬರಮಾಡಿಕೊಂಡು ಅವರೆಲ್ಲರಿಗೆ ಉದಾರಾಶ್ರಯವಿತ್ತು, ತಾನು 'ಕವಿರಾಜಮಾರ್ಗ'ದಂತಹ ಶ್ರೇಷ್ಠ ಗ್ರಂಥವನ್ನು ವಿರಚಿಸಿ ಲೋಕೋಪಕಾರ ಮಾಡಿದನು. ಕಲ್ಯಾಣದ ಚಾಲುಕ್ಯ ವಿಕ್ರಮನು, ಬಿಲ್ಹಣ, ವಿಜ್ಞಾನೇಶ್ವರರಂತಹ ದೂರ ದೂರದ ಕವಿಗಳನ್ನು ಆಹ್ವಾನಿಸಿ ಅವರಿಂದ ವಿಕ್ರಮಾಂಕದೇವ ಚರಿತೆ ಮತ್ತು ಮಿತಾಕ್ಷರಿ ಮೊದಲಾದ ಉದ್ಗ್ರಂಥಗಳನ್ನು ವಿರಚಿಸಿ ನಮ್ಮ ಸಂಸ್ಕೃತಿಯನ್ನು ವಿಕಾಸಗೊಳಿಸಿದನು. ಹೊಯ್ಸಳ ವಿಷ್ಣುವರ್ಧನ ಮಹಾರಾಜನು, ಜೈನ, ಶೈವ, ವೈಷ್ಣವ ಧರ್ಮಗಳನ್ನು ಸಮನ್ವಯಗೊಳಿಸಿ ಕಲೆಯ ಬೀಡಾದ ಬೇಲೂರಿನಲ್ಲಿ ಚೆನ್ನಕೇಶವನ ಮಹೋನ್ನತ ದೇವಾಲಯವನ್ನು

ನಿರ್ಮಿಸಿ ಸಂಸ್ಕೃತಿಯನ್ನು ಸಂರಕ್ಷಿಸಿದನು. ಕೆಳದಿಯ ಶಿವಪ್ಪನಾಯಕನು ಗೋ ಬ್ರಾಹ್ಮಣ ಸಂರಕ್ಷಣೆಯನ್ನು ಮಾಡಿ, ಕವಿಗಳಿಗೆ ಉದಾರಾಶ್ರಯವಿತ್ತು ಬಿಸಿಲಿನಲ್ಲಿ ಪ್ರಯಾಣಮಾಡುವ ಜನರಿಗೆ ತನ್ನ ರಾಜ್ಯದಲ್ಲಿ ಅರವಂಟಿಕೆಗಳನ್ನು ಇಡಿಸಿ, ಮಠಗಳಿಗೆ ಉಂಬಳಿಗಳನ್ನು ಕೊಟ್ಟು ಸಮಾಜದ ಅಭ್ಯುದಯಕ್ಕೆ ನೆರವಾದನು. ಮೈಸೂರಿನ ಚಿಕದೇವರಾಜ ಒಡೆಯರು, ವಿದ್ಯೈಕಪಕ್ಷಪಾತಿ ಗಳಾಗಿ, ತಿರುಮಲಾರ್ಯ, ಸಿಂಗರಾರ್ಯ, ಚಿಕುಪಾಧ್ಯಾಯ ಮೊದಲಾದ ಕವಿಗಳಿಗೆ ಆಶ್ರಯವಿತ್ತು ಉತ್ಕೃಷ್ಟ ಗ್ರಂಥಗಳನ್ನು ಬರೆಯಿಸಿ ಅರಮನೆಯ ಊಳಿಗದವಳಾದ ಸಂಚಿಯ ಹೊನ್ನಮ್ಮನೂ ಕೂಡ 'ಹದಿಬದೆಯ ಧರ್ಮ' ದಂತಹ ಕಾವ್ಯವನ್ನು ಬರೆಯುವಂತಹ ಉತ್ತಮ ಸನ್ನಿವೇಶವನ್ನು ತಮ್ಮ ಉದಾರ ಬುದ್ಧಿಯ ಫಲವಾಗಿ ಕಲ್ಪಿಸಿಕೊಟ್ಟರು. ಆಲಸಾನಿ ಪೆದ್ದನ್ನನೆಂಬ ಕವಿಗೆ ನವರತ್ನ ಖಚಿತವಾದ। ಪಾದಪೆಂಡೆಯಗಳನ್ನು ವಿಜಯನಗರದ ಕೃಷ್ಣದೇವರಾಯ ಮಹಾರಾಜನು ಅವನ ಪಾದಗಳಿಗೆ—ತನ್ನ ಹಸ್ತದಿಂದ ತೊಡಿಸಿದನು. ಅಲ್ಲದೆ, ಆ ಮಹಾಕವಿಯನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ರಾಜಧಾನಿಯಲ್ಲಿ ಮೆರೆಯಿಸಿದನು. ವಿದ್ವತ್ತನ್ನು ಗೌರವಿಸುವ ದೃಷ್ಟಿಯಿಂದ ಆ ಪಲ್ಲಕ್ಕಿಗೆ ತಾನು ಹೆಗಲು ಸಹ ಕೊಟ್ಟನು. ಕೆಳದಿಯ ಚೆನ್ನಮ್ಮಾಜಿಯು ಔರಂಗಜೇಬನ ಅಂಜಿಕೆಯಿಂದ ತನ್ನನ್ನು ಮರೆಹೊಕ್ಕ ಶಿವಾಜಿಯ ಮಗ ರಾಜಾರಾಮನನ್ನು ಸಂರಕ್ಷಿಸಿದಳು. ಶಿವಾಜಿಗೆ ಸೋತು ಬಂದ ಗಂಡನಿಗೆ ಪುರಪ್ರವೇಶ ಮಾಡಗೊಡದೆ ಬೆಳವಡಿ ಮಲ್ಲಮ್ಮನು ತನ್ನ ರಾಜಧಾನಿಯ ಕೋಟೆಯ ಬಾಗಿಲನ್ನು ಮುಚ್ಚಿಸಿ ತಾನು ಶಿವಾಜಿಯ ಸೇನೆಯೊಡನೆ ಯುದ್ಧಮಾಡಿ ಮರಾಟೆಯವರನ್ನು ಜಯಿಸಿ ಸೋತುಬಂದ ಗಂಡನ ಗೌರವ ವನ್ನು ಕಾಪಾಡಿದಳು. ಛತ್ರಪತಿ ಶಿವಾಜಿ ಮಹಾರಾಜನು ದಿಗ್ವಿಜಯ ಕಾಲದಲ್ಲಿ ತನ್ನ ಸೇನಾಪತಿಯೊಬ್ಬನು ತನಗೆ ಕಾಣಿಕೆಯಾಗಿ ತಂದೊಪ್ಪಿಸಿದ ಸುಂದರ ಸ್ತ್ರೀರತ್ನವೊಂದನ್ನು ತನ್ನ ಮಾತೃಸಮಾನವಾಗಿ ಭಾವಿಸಿ, ಆ ತರುಣಿ ಯನ್ನು ಅವಳ ಪತಿಯ ಸಮೀಪಕ್ಕೆ ತನ್ನ ಕ್ಷಮಾಪಣೆಯೊಡನೆ ಅತ್ಯಂತ ಗೌರವದಿಂದ ಕಳುಹಿಸಿಕೊಟ್ಟನು. ಹೊಯ್ಸಳ ರಾಜನಾದ ವೀರಬಲ್ಲಾಳನ ದಂಡನಾಯಕ ಕುಮಾರ ಲಕ್ಷ್ಮನು, ತನ್ನ ರಾಜನು ಯುದ್ಧದಲ್ಲಿ ಮಡಿದ ಕೂಡಲೇ ತಾನು ಆ ಮೊದಲೇ ಮಾಡಿದ ಪ್ರತಿಜ್ಞೆಯ ಪ್ರಕಾರ ಹಳ್ಳೇಬೀಡಿ

ನಲ್ಲಿ ತನ್ನ ಪತ್ನಿ ಸುಗ್ಗಲೆಯೊಡನೆ ಅಗ್ನಿಪ್ರವೇಶಮಾಡಿ ತನ್ನ ಸಾವಿರ ಮಂದಿ ಬಂಟರು ಸಹಿತ ಸತ್ತು ವೀರಸ್ವರ್ಗವೇರಿದರು.

ಈ ಮೇಲೆ ಕಂಡ ಕಥೆಗಳೆಲ್ಲವೂ ನಮ್ಮ ದೇಶದ ಚರಿತ್ರೆಗೆ ಸಂಬಂಧ ಪಟ್ಟವು. ಈ ಎಲ್ಲ ಕಥೆಗಳಲ್ಲಿಯೂ ನಮ್ಮ ದೇಶದಲ್ಲಿ ವಿಖ್ಯಾತವಾದ ಧರ್ಮಶ್ರದ್ಧೆ, ಪರಾಕ್ರಮ, ವಿದ್ಯಾಭಿಮಾನ, ಉದಾರಭಾವನೆ, ಸ್ವಾಮಿನಿಷ್ಠೆ, ಆತ್ಮಗೌರವ ಸಂರಕ್ಷಣೆ, ವೈರಾಗ್ಯಜೀವನ ಮೊದಲಾದ ಮಹದ್ಗುಣಗಳನ್ನು ನಾವು ನೋಡುತ್ತಿದ್ದೇವೆಯಲ್ಲವೆ ? ಇವೆಲ್ಲಕ್ಕೂ ಹಿನ್ನಲೆ ನಮ್ಮ ಉದಾತ್ತ ಸಂಸ್ಕೃತಿಯೇ ಅಲ್ಲವೆ ?

ಭರತಖಂಡವು ಉತ್ತರದಲ್ಲಿ ಹಿಮಾಲಯದಂತಹ ಲೋಕೋನ್ನತ ಪರ್ವತದಿಂದ ಸಂರಕ್ಷಿಸಲ್ಪಟ್ಟಿದೆ. ಪೂರ್ವ, ಪಶ್ಚಿಮ, ದಕ್ಷಿಣ ದಿಕ್ಕುಗಳಲ್ಲಿ ಸಾಗರದಿಂದ ಆವರಿಸಲ್ಪಟ್ಟಿದೆ. ಸಿಂಧು, ಗಂಗಾ, ಬ್ರಹ್ಮಪುತ್ರಾ, ಗೋದಾವರಿ, ಕೃಷ್ಣಾ, ಕಾವೇರಿ, ನರ್ಮದಾ, ತಾಮ್ರಪರ್ಣಿ ಮೊದಲಾದ ನದಿಗಳಿಂದ ಭಾರತವು ಪವಿತ್ರವೆನಿಸಿದೆ. ಕಾಶಿ, ರಾಮೇಶ್ವರ, ಕೈಲಾಸ, ಕೇದಾರ, ಶ್ರೀಶೈಲ, ಶ್ರೀರಂಗ, ಸೋಮನಾಥ, ಪರಳಿ, ಪಂಪಾ, ಗೋಕರ್ಣ ತಿರುಪತಿ, ಉಡುಪಿ, ಪಂಡರಾಪುರ ಮೊದಲಾದ ಕ್ಷೇತ್ರಗಳಿಂದ ವಿಖ್ಯಾತಿಗಳಿಸಿದೆ. ನಮ್ಮ ಜನರು ಕೈಗೊಳ್ಳುವ ದೇಶಾಟನೆ, ತೀರ್ಥಾಟನೆ, ಹಬ್ಬ-ಹುಣ್ಣಿಮೆ, ಮದುವೆ-ಮುಂಜಿ, ಊಟ-ಉಪಚಾರ ಮೊದಲಾದುವುಗಳಲ್ಲೆಲ್ಲಾ ನಾವು ನಮ್ಮ ಉಜ್ವಲ ಸಂಸ್ಕೃತಿಯನ್ನು ನೋಡುತ್ತೇವೆ. ಯುಗಾದಿಯ ದಿನ ಬೇವು-ಬೆಲ್ಲ ತಿನ್ನುವುದು, ಶಿವರಾತ್ರಿಯ ದಿನ ಉಪವಾಸ-ಜಾಗರಣೆ ಮಾಡುವುದು, ಶ್ರೀರಾಮನವಮಿಯ ದಿನ ರಾಮಾಯಣ, ಪಾರಾಯಣಪೂಜೆ ನಡೆಸುವುದು, ನವರಾತ್ರಿಯಲ್ಲಿ ಸೀಮೋಲ್ಲಂಘನ ಮಾಡುವುದು, ದೀಪಾವಳಿಯಲ್ಲಿ ದೀಪಗಳನ್ನು ಹಚ್ಚುವುದು ಇವೆಲ್ಲವೂ ನಮ್ಮ ಸಂಸ್ಕೃತಿಯ ಪುರಾತನ ದ್ಯೋತಕಗಳೇ ಆಗಿವೆಯಲ್ಲವೆ ?

ಹಿಮಾಲಯದಿಂದ ರಾಮೇಶ್ವರದ ವರೆಗಿರುವ ಭಾರತದಲ್ಲಿ ನಾವು ಕಾಣುವುದು ಒಂದೇ ಒಂದು ದಿವ್ಯ ಭವ್ಯ ಸಂಸ್ಕೃತಿಯನ್ನು. ಆದುದರಿಂದಲೇ ಕಾಶ್ಮೀರದ ನೆಹರು, ಬಿಹಾರದ ರಾಜೇಂದ್ರಪ್ರಸಾದ್, ಮಹಾರಾಷ್ಟ್ರದ

ಗೋಖಲೆ-ತಿಲಕರು, ಬಂಗಾಳದ ದಾಸ್-ಬೋಸರು, ಗುಜರಾತಿನ ಗಾಂಧಿ, ಪಟೇಲರು, ಆಂಧ್ರದ ಡಾ|| ರಾಧಾಕೃಷ್ಣನ್, ಕರ್ಣಾಟಕದ ಸರ್ ಎಂ. ವಿಶ್ವೇಶ್ವರಯ್ಯ, ತಮಿಳುನಾಡಿನ ಸರ್ ಸಿ. ವಿ. ರಾಮನ್ ಇವರೆಲ್ಲರೂ ನಮಗೆ ಭಾರತೀಯರಾಗಿಯೇ ಕಂಡುಬರುತ್ತಿದ್ದಾರೆ. ನಮ್ಮ ದೇಶದಲ್ಲಿ ಭಾಷೆ ಬೇರೆಯಾದರೂ, ವೇಷ ಭಿನ್ನವಾದರೂ, ಜನರ ಭಾವನೆ ಒಂದೇ, ಜನರ ಧರ್ಮ ಒಂದೇ ಆಗಿವೆ ಎಂಬುದನ್ನು ಇಲ್ಲಿ ಗಮನಿಸಬೇಕು. ಮೇಲೆ ಕಂಡ ಮಹಾಪುರುಷರೆಲ್ಲರೂ ಭಾರತೀಯ ಮಹಾಪುರುಷರಾಗಿಯೇ ನಮಗೆ ಕಂಡು ಬರುತ್ತಿದ್ದಾರೆ. ಇದರಲ್ಲಿಯೇ ನಮ್ಮ ಸಭ್ಯತೆಯ ಮಹತ್ವವಿದೆ; ನಮ್ಮ ಸಂಸ್ಕೃತಿಯ ವ್ಯಾಪಕತ್ವವಿದೆ.

ದೇವರು ಒಬ್ಬನೇ; ಎಲ್ಲ ಭಾಷೆಗಳ ತಾಯಿ ಸರಸ್ವತಿ; ದಯೆಯೇ ಧರ್ಮದ ಮೂಲವು; ಯಾವ ಮತಗಳನ್ನು ನಂಬಿ ನಡೆದರೂ ಮೋಕ್ಷವಾಗುತ್ತದೆ. ಎಲ್ಲರ ಹಿತವನ್ನೂ ಬಯಸುವುದೇ ನಮ್ಮ ಧರ್ಮದ ಹೆಗ್ಗುರಿ. ಆತ್ಮಸಾಕ್ಷಿಯಾಗಿ ಬಹುಜನೋಪಕಾರಿಯಾಗಿ ನಡೆಯುವುದೇ ನಮ್ಮ ಭಾರತೀಯ ಸಂಸ್ಕೃತಿಯ ಮುಖ್ಯವಾದ ಧ್ಯೇಯ ಎಂಬುದನ್ನು ನಾವು ಸದಾ ನೆನಸಿಕೊಳ್ಳಬೇಕು.

ನಮ್ಮ ಕನ್ನಡ ನಾಡಿನಲ್ಲಿ ಇಂದಿಗೂ ಕಂಗೊಳಿಸುತ್ತಿರುವ ದಿವ್ಯ ಭವ್ಯವಾದ ದೇವಾಲಯಗಳು, ಗೋಮಟೇಶ್ವರನಂತಹ ಉನ್ನತ ಮೂರ್ತಿಗಳು, ಶಿಲಾಶಾಸನಗಳು, ಮಹಾಸತಿ ಕಲ್ಲುಗಳು, ನಿಷದಿ ಕಲ್ಲುಗಳು, ಗೋಗ್ರಹಣ ಕಲ್ಲುಗಳು, ತಾಳಿಯೋಲೆ ಗ್ರಂಥಗಳು, ಬಗೆಬಗೆಯ ವಿಗ್ರಹಗಳು, ಅಜಂತೆಯ ಚಿತ್ರಗಳು ಇವೆಲ್ಲವೂ ನಮ್ಮ ಜನರ ಶ್ರೇಷ್ಠ ಗುಣಗಳ ನಿದರ್ಶನವೇ ಆಗಿವೆ. ವೀರಗಲ್ಲುಗಳು ಪರಾಕ್ರಮಕ್ಕೂ, ಶಿಲಾಶಾಸನ ತಾಮ್ರ ಶಾಸನಗಳು ದಾನ ಗುಣಕ್ಕೂ, ಮಹಾಸತಿ ಕಲ್ಲುಗಳು ಸತಿಯರ ಪಾತಿವ್ರತ್ಯಕ್ಕೂ, ನಿಷದಿ ಗಲ್ಲುಗಳು ಅಹಿಂಸಾ ತತ್ತ್ವಕ್ಕೂ, ಗೋಗ್ರಹಣಗಲ್ಲುಗಳು ರಾಜರ ಮಹತ್ವಾಕಾಂಕ್ಷೆಗೂ, ಸ್ಪಷ್ಟವಾದ ಸಂಕೇತವೆಂಬಂತಿವೆ. ಇವೆಲ್ಲವೂ ನಮ್ಮ ಸಂಸ್ಕೃತಿಯು ಜೀವಂತವಾದುದು, ಬಲಶಾಲಿಯಾದುದು ಎಂಬುದನ್ನು ಜಗತ್ತಿಗೆ ತೋರಿಸಿ ಕೊಡಲು ಸಹಾಯವಾಗಿವೆ. ನಮ್ಮ ಜನಗಳಲ್ಲಿರುವ ಆಚಾರ ವಿಚಾರಗಳು

ಅವರು ಯಾವ ಮಟ್ಟದವರೇ ಆಗಿರಲಿ, ಎಂತಹ ಸ್ಥಾನವುಳ್ಳವರೇ ಆಗಿರಲಿ, ಅದರ ಹಿನ್ನೆಲೆಯ ಸೂತ್ರ ಒಂದೇ ಆಗಿರುತ್ತದೆ. ವಿದ್ವಾಂಸನಾದ ಬ್ರಾಹ್ಮಣನು ಬೆಳಗಾದ ಕೂಡಲೇ ನಡೆಸುವ ಸಂಧ್ಯಾವಂದನೆಗೂ ಹಳ್ಳಿಯ ರೈತನು ಬೆಳಗ್ಗೆ ಎದ್ದು ಮುಖ ತೊಳೆದುಕೊಂಡು ಪೂರ್ವಕ್ಕೆ ತಿರುಗಿ ಸೂರ್ಯನಿಗೆ ಭಕ್ತಿಯಿಂದ ಕೈಮುಗಿಯುವುದಕ್ಕೂ ಮೂಲದಲ್ಲಿ ವ್ಯತ್ಯಾಸ ವೇನೂ ಇಲ್ಲ. ವೀರಶೈವರು ಮಾಡುವ ಇಷ್ಟಲಿಂಗಪೂಜೆಗೂ, ವೈಷ್ಣವ ಶ್ರೀಷ್ಮರು ಮಾಡುವ ಸಾಲಿಗ್ರಾಮ ಪೂಜೆಗೂ ತತ್ತ್ವಶಃ ಭೇದ ಕಾಣಿಸುವುದಿಲ್ಲ. ಶಿವಶರಣರ ಪುರಾತನರ ಸ್ತೋತ್ರಕ್ಕೂ, ಜಿನಮುನಿಗಳ ತೀರ್ಥಂಕರ ಸ್ತೋತ್ರಕ್ಕೂ ಅಷ್ಟಾಗಿ ವ್ಯತ್ಯಾಸ ಕಂಡು ಬರುವುದಿಲ್ಲ. ಭಗವದ್ಗೀತೆಯ ಶ್ಲೋಕಗಳಿಗೆ, ಒಬ್ಬರು ದ್ವೈತ, ಇನ್ನೊಬ್ಬರು ಅದ್ವೈತ, ಒಬ್ಬರು ಶಕ್ತಿ ವಿಶಿಷ್ಟಾದ್ವೈತ, ಇನ್ನೊಬ್ಬರು ವಿಶಿಷ್ಟಾದ್ವೈತ ಮೊದಲಾದ ದರ್ಶನಗಳ ಪರವಾಗಿ ಅರ್ಥಮಾಡಿದರೂ ಮೂಲವಾದ ಗೀತೆಯ ತಾತ್ಪರ್ಯ ಬದಲಾಗುವುದಿಲ್ಲವಷ್ಟೆ? ಅಥವಾ ಅದನ್ನು ಹೇಳಿ-ಕೇಳಿದ ಶ್ರೀಕೃಷ್ಣಾರ್ಜುನರಲ್ಲಿ ವ್ಯತ್ಯಾಸವಿಲ್ಲವಷ್ಟೆ? ಜಾತ್ರೆಗಳಲ್ಲಿ ಹೋಗಿ ದೇವರನ್ನು ರಥದಲ್ಲಿ ಕುಳ್ಳಿರಿಸಿ ಎಳೆಯುವಾಗ ಆ ರಥದ ಹಗ್ಗಗಳಿಗೆ ಕೈಗೊಟ್ಟು ಎಲ್ಲ ಕುಲ ಜಾತಿಯ ಪಂಥದವರೂ ಎಳೆಯುವುದರ ತಾತ್ಪರ್ಯವೇನು? ನಾವೆಲ್ಲರೂ ಒಂದೇ ಬುಡಕಟ್ಟಿನವರು ಎಂಬುದಕ್ಕಷ್ಟೆ ಈ ಒಕ್ಕೂಟ, ಈ ಜಾತ್ರೆಯ ಸಮಾರಂಭ. ಒಂದು ಸಂಗೀತ ಕಛೇರಿಯಲ್ಲಿ ಹೋಗಿ ನಾವು ಕುಳಿತುಕೊಳ್ಳೋಣ, ಅಲ್ಲಿ ನಮ್ಮ ಕಣ್ಣಿಗೆ ಕಾಣುವುದೇನು? ತಂಬೂರಿ, ಮೃದಂಗ, ಪಿಟೀಲು, ವೀಣೆ, ಕೊಳಲು, ಸಿತಾರ, ಘಟಂ, ಕಂಜರಿ ಮೊದಲಾದ ಭಿನ್ನಭಿನ್ನ ವಾದನಗಳಲ್ಲವೆ? ಸಂಗೀತವನ್ನು ಹಾಡತಕ್ಕವರು ಭಿನ್ನಭಿನ್ನರು, ಸಂಗೀತ ವಾದ್ಯಗಳು ಭಿನ್ನಭಿನ್ನವಾದವುಗಳು. ಆದರೂ ಅಲ್ಲಿ ನಾವು ಕೇಳುವುದು ಗಾಯನದ ನಾದ ಮಾಧುರ್ಯವೊಂದನ್ನು ಮಾತ್ರ. ನಾದಬ್ರಹ್ಮನ ಆನಂದಸುಖವನ್ನು ಮಾತ್ರವಲ್ಲವೆ? ಹೀಗೆಯೇ ನಮ್ಮ ಜಾತಿ ಜಾತಿಗಳ ಸಮನ್ವಯವೆಂದು ಪರಮಹಂಸ ರಾಮಕೃಷ್ಣರು ಹಲವು ವೇಳೆ ಹೇಳಿರುತ್ತಾರೆ. ಇದೇ ನಮ್ಮ ಸಂಸ್ಕೃತಿಯ ಸಾರಸರ್ವಸ್ವ.

# ಕನ್ನಡ-ಬಂಗಾಳಿ ಬಾಂಧವ್ಯ A

ಭಾರತ ರಾಷ್ಟ್ರದಲ್ಲಿ ಭಾಷಾವಾರು ರಾಜ್ಯಗಳು ಸ್ಥಾಪನೆಯಾಗಿ ಕೆಲವು ವರ್ಷಗಳು ಕಳೆದ ಈ ಸುಸಂದರ್ಭದಲ್ಲಿ, ಭಾರತದ ರಾಜ್ಯಭಾಷೆಗಳೆನಿಸಿದ ೧೪ ಭಾಷಾ ಸಾಹಿತ್ಯಗಳಲ್ಲಿ ಪರಸ್ಪರ ಬಾಂಧವ್ಯ ಕುದುರಿ ತನ್ಮೂಲಕವಾಗಿ ಭಾರತದ ಸಾಹಿತ್ಯ ಸಂಸ್ಕೃತಿಗಳ ಉನ್ನತಿಯಾಗಬೇಕಾದ ಈ ಸದವಕಾಶದಲ್ಲಿ, ಕರ್ಣಾಟಕ ರಾಜ್ಯದ ರಾಜಧಾನಿಯಾದ ಬೆಂಗಳೂರು ಪಟ್ಟಣದಲ್ಲಿ ಅಖಿಲ ಭಾರತ ಬಂಗಾಳಿ ಸಾಹಿತ್ಯ ಸಮ್ಮೇಳನ ನಡೆಯುವುದನ್ನು ನಾನು ಒಂದು ಅಪೂರ್ವ ಯೋಗವೆಂದು ಭಾವಿಸುತ್ತೇನೆ. ಕನ್ನಡ ನಾಡಿನ ಪರವಾಗಿ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ, ಇಂದು ನೆರೆದಿರುವ ಸಭೆಯ ಪರವಾಗಿ ಈ ಮಹಾ ಸಮ್ಮೇಳನಕ್ಕೆ ಆಗಮಿಸಿರುವ, ವಿದ್ವಾಂಸರು, ಕವಿಗಳು, ಕಲಾವಿದರು ಮೊದಲಾದರೆಲ್ಲರಿಗೂ ನನ್ನ ಹಾರ್ದಿಕವಾದ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಸ್ವಾಗತಸಮಿತಿಯವರು ಕನ್ನಡ ಸಾಹಿತ್ಯ ಪರಿಷತ್ತಿಗೆ ಗೌರವವನ್ನು ಸಲ್ಲಿಸುವ ದೃಷ್ಟಿಯಿಂದ ನನ್ನನ್ನು ಇಂದಿನ ಅಧಿವೇಶನಕ್ಕೆ ಅಧ್ಯಕ್ಷನನ್ನಾಗಿ ಬರಮಾಡಿಕೊಂಡಿರುವರೆಂದು ಭಾವಿಸಿ ಸ್ವಾಗತ ಸಮಿತಿಯವರಿಗೆ ನನ್ನ ಮನಸಾರ ವಂದನೆಗಳನ್ನು ಸಮರ್ಪಿಸುತ್ತೇನೆ.

ಮಾನವ ಜೀವನವು ಪ್ರಾಣಿಗಳ ಜೀವನಕ್ಕಿಂತ ಮಿಗಿಲಾದುದೆಂದೆನಿಸಿಕೊಳ್ಳಲು ಅವನಿಗೆ ಈಶ್ವರದತ್ತವಾಗಿರುವ ವಿವೇಚನಾಶಕ್ತಿ, ವಾಕ್‌ಶಕ್ತಿ ಮತ್ತು ಆನಂದ ಶಕ್ತಿಗಳೇ ಮುಖ್ಯ ಕಾರಣವೆನಿಸಿವೆ. ಈ ಮೂರು ಮಹಾ

---

A ತಾ|| ೨೫-೧೨-೧೯೫೯ ರಂದು ಬೆಂಗಳೂರಿನಲ್ಲಿ ನಡೆದ ಬಂಗಾಳಿ ಸಾಹಿತ್ಯ ಸಮ್ಮೇಳನದಲ್ಲಿ, ಕನ್ನಡ ಸಾಹಿತ್ಯ ಅಧಿವೇಶನದ ಅಧ್ಯಕ್ಷರಾದ ಆಸ್ಥಾನ ವಿದ್ವಾನ್, ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು (ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು) ನಿರೂಪಿಸಿದ ಪ್ರಾಸ್ತಾವಿಕ ಭಾಷಣ.

ಶಕ್ತಿಗಳಲ್ಲಿ ವಾಕ್‌ಶಕ್ತಿಯು, ಅತ್ತ ವಿವೇಚನಾಶಕ್ತಿಗೂ ಇತ್ತ ಆನಂದ ಶಕ್ತಿಗೂ ಮಧ್ಯವರ್ತಿಯಾಗಿದ್ದು ಮನುಷ್ಯತ್ವದ ವಿಕಾಸಕ್ಕೆ ಬಹು ಮುಖ್ಯವಾದ ಸಾಧನವೆನಿಸಿದೆ.

ಮಾನವನು ತನ್ನ ಅನುಭವಗಳನ್ನು ಇತರರಿಗೆ ತಿಳಿಸುವ ಸಾಧನ ಮಾತು ಮತ್ತು ಬರೆಹ. ಅನುಕರಣೆಯ ಯುಗದಿಂದ ಮಾತಿನ ಯುಗಕ್ಕೆ ಮನುಷ್ಯನು ಬಂದಂದಿನಿಂದ ಅವನ ಪ್ರಗತಿಯು ದಿನದಿನವೂ ಹೆಚ್ಚುತ್ತಾ ಬಂದಿವೆಯೆಂದು ವಿಶ್ವದ ಮಾನವ ಚರಿತ್ರೆಯಿಂದ ವಿದಿತವಾಗುತ್ತದೆ. ಈ ಮಾನವನ ಪ್ರಗತಿಗೆ ಅವನಿಗೆ ದೈವದತ್ತವಾದ ಭಾಷೆ, ಸಾಹಿತ್ಯ, ಸಂಸ್ಕೃತಿ ಮತ್ತು ಲಲಿತಕಲೆಗಳ ಉನ್ನತಿಗಾಗಿ ಸತತವಾಗಿ ಪ್ರಯತ್ನಿಸುತ್ತಿರುವುದನ್ನು ನಾವು ಕಾಣುತ್ತಿದ್ದೇವೆ.

ಪ್ರಪಂಚದಲ್ಲಿ ಸಾವಿರಾರು ಭಾಷೆಗಳಿವೆ. ಬಲದಿಂದ ಎಡಕ್ಕೆ, ಎಡದಿಂದ ಬಲಕ್ಕೆ, ಮೇಲಿನಿಂದ ಕೆಳಕ್ಕೆ ಬರೆಯುವ, ಲಿಪಿರೂಪದಿಂದ, ಚಿತ್ರರೂಪದಿಂದ ಬರೆಯುವ, ವಿವಿಧವಾದ ಭಾಷೆಗಳ ವಿಚಾರವನ್ನು ನಾವು ಕೇಳಿರುತ್ತೇವೆ. ವಿಶ್ವದ ಎಲ್ಲ ಭಾಷೆಗಳೂ ವಾಗ್‌ರೂಪಳಾದ ಸರಸ್ವತಿಯ ವಿವಿಧರೂಪಗಳೆಂದು ನಮ್ಮ ಹಿರಿಯರು ಹೇಳಿದ್ದಾರೆ. ವ್ಯಾಕರಣ ಶಾಸ್ತ್ರಜ್ಞರು 'ಶ್ರಾವಣ' ಎಂದರೆ–ಕೇಳುವ, 'ಚಾಕ್ಷುಷ' ಎಂದರೆ–ಓದುವ ಭಾಷೆಯೆಂದು ಮಾತನ್ನು ಎರಡು ಭಾಗ ಮಾಡಿದ್ದಾರೆ. ಜಗತ್ತಿನ ಎಲ್ಲ ದೇಶಗಳ ಭಾಷೆಗಳಲ್ಲಿಯೂ ಓದುವ ಮತ್ತು ಕೇಳುವ ಭಾಷೆಗಳಲ್ಲಿ ವ್ಯತ್ಯಾಸ ಇರುವುದನ್ನು ನಾವು ನೋಡುತ್ತೇವೆ. ಕೇಳುವ ಭಾಷೆ ಜನಸಾಮಾನ್ಯರ ಹೃದಯದಿಂದ ಬಂದುದು. ಅದನ್ನು 'ಜಾನಪದಭಾಷೆ' ಎಂದು ಕರೆಯುತ್ತಾರೆ. ಇದು ಅರಣ್ಯದ ಪುಷ್ಪಗಳಂತೆ ಸಹಜಸೌಂದರ್ಯದಿಂದ ಕಂಗೊಳಿಸುತ್ತದೆ. ಚಾಕ್ಷುಷ–ಅಂದರೆ ಓದುವ ಭಾಷೆಯು ಕವಿ ಪಂಡಿತರ ಮುಖದಿಂದ ಬಂದುದು. ಇದು ಉದ್ಯಾನದ ಪುಷ್ಪಗಳಂತೆ ರಮಣೀಯವಾಗಿ ಶೋಭಿಸುತ್ತದೆ. ಈ ಶ್ರಾವಣ ಮತ್ತು ಚಾಕ್ಷುಷ ಭಾಷಾ ಭೇಧಗಳು ವಿಶ್ವದ ಎಲ್ಲ ರಾಷ್ಟ್ರಗಳಲ್ಲಿಯೂ ಎಲ್ಲ ಕಾಲಗಳಲ್ಲಿಯೂ ಕಾಣಬರುವುದನ್ನು ನಾವು ನೋಡುತ್ತಿದ್ದೇವೆ.

ಭರತಖಂಡವು ಉತ್ತುಂಗವಾದ ಹಿಮಾಲಯ, ಪರಿಶುದ್ಧವಾದ ಗಂಗಾನದಿ, ಪ್ರಾಚೀನವಾದ ಸಾಹಿತ್ಯ ಸಂಸ್ಕೃತಿಗಳಿಂದ ಇಡೀ ವಿಶ್ವದಲ್ಲಿಯೇ ಗಣ್ಯತೆ ಪಡೆದಿದೆ. ಭಾರತೀಯರ ಪ್ರಾಚೀನ ಧರ್ಮಗ್ರಂಥಗಳೆನಿಸಿದ ವೇದ ಗಳು, ಉಪನಿಷತ್ತುಗಳು ಮತ್ತು ಆಗಮಗಳು, ಲೋಕದ ಮತ್ತೆಲ್ಲ ಧರ್ಮ ಗ್ರಂಥಗಳಿಗಿಂತಲೂ ಪ್ರಾಚೀನ ತಮವೆನಿಸಿವೆ. ಋಗ್ವೇದವು ಜಗತ್ತಿನ ಅತಿ ಪ್ರಾಚೀನ ಗ್ರಂಥವೆಂದು—ಸುಮಾರು ಆರುಸಾವಿರ ವರ್ಷಗಳಷ್ಟು ಹಿಂದಿನ ದೆಂದು ವಿದ್ವಾಂಸರು ಒಪ್ಪಿಕೊಂಡಿದ್ದಾರೆ. 'ಶೈವ, ವೈಷ್ಣವ, ಆಗಮಗಳು, ಷಟ್‌ದರ್ಶನಗಳು, ವ್ಯಾಸೋಕ್ತ ಪುರಾಣಗಳು, ಸ್ಮೃತಿಗಳು, ಜಿನಾಗಮ ಗಳು, ಬೌದ್ಧ ಜಾತಕಗಳು, ಭಾರತ ರಾಮಾಯಣಾದಿ ಕಾವ್ಯಗಳು, ಭಾರ ತೀಯರ ಪ್ರಾಚೀನತಮವಾದ ಜ್ಞಾನಭಂಡಾರವೆನಿಸಿವೆ. ಪ್ರಖ್ಯಾತ ಶಾಸ್ತ್ರಜ್ಞರಾದ ಮಹರ್ಷಿಗಳು ರಚಿಸಿದ ಗ್ರಂಥಗಳು ಅಂದರೆ, ಕೌಟಿಲ್ಯನ ಅರ್ಥಶಾಸ್ತ್ರ, ಪಾಣಿನಿಯ ವ್ಯಾಕರಣಶಾಸ್ತ್ರ, ಭರತನ ನಾಟ್ಯಶಾಸ್ತ್ರ, ವಾತ್ಸ್ಯಾಯನನ ಕಾಮಶಾಸ್ತ್ರ, ಗೌತಮನ ಯೋಗಶಾಸ್ತ್ರ, ಚರಕ-ಸುಶ್ರು ತರ ವೈದ್ಯಶಾಸ್ತ್ರ ಮೊದಲಾದುವು ವಿಶ್ವದಲ್ಲಿಯೇ ಮಾನ್ಯತೆಯನ್ನು ಪಡೆ ದಿರುವುದಲ್ಲದೆ ಸಮಗ್ರ ಭಾರತೀಯ ಭಾಷೆಗಳ ಮೇಲೆಲ್ಲಾ ತಮ್ಮ ಪ್ರಭಾವ ವನ್ನು ಬೀರಿವೆ.

ಭಾರತೀಯ ಕವಿಶ್ರೇಷ್ಠರಾದ ಭಾಸ, ಕಾಳಿದಾಸ, ಶೂದ್ರಕ, ಬಾಣ, ಅಶ್ವಘೋಶ, ಭವಭೂತಿ, ಮಾಘ, ಭಾರವಿ, ಸುಬಂಧು, ದಂಡಿ, ಶ್ರೀಹರ್ಷ, ಭೋಜ ಮೊದಲಾದವರ ಸಂಸ್ಕೃತ ಕಾವ್ಯ ನಾಟಕಗಳ ಪ್ರಭಾವವನ್ನು ನಾವು ಭಾರತದ ಎಲ್ಲ ಭಾಷಾಸಾಹಿತ್ಯಗಳಲ್ಲಿಯೂ ನೋಡಬಹುದು. ಒಂದು ಮಾತಿನಲ್ಲಿ ಹೇಳುವುದಾದರೆ, ಭಾರತದಲ್ಲಿ ಸಂಸ್ಕೃತ ಸಾಹಿತ್ಯವು ಎಲ್ಲ ಭಾಷೆ ಗಳಿಗೂ ಪೋಷಕವೆನಿಸಿ ಭಾರತೀಯ ಭಾಷೆಗಳ ಮಾತೃಸ್ಥಾನದಲ್ಲಿದೆ. ಭರತಖಂಡದಲ್ಲಿ, ಹಿಂದಿ, ಬಂಗಾಳಿ, ಅಸ್ಸಾಮಿ, ಕಾಶ್ಮೀರಿ, ಪಂಜಾಬಿ, ಮರಾಠಿ, ಒರಿಯ, ನೇಪಾಳಿ, ಗುಜರಾತಿ ಮೊದಲಾದ ಭಾಷೆಗಳು ಗೌಡ ಭಾಷೆಗಳೆಂದೂ, ದಕ್ಷಿಣಭಾರತದ, ಕನ್ನಡ, ತೆಲುಗು, ತಮಿಳು, ಮಲೆ ಯಾಳ ಮತ್ತು ತುಳು ಭಾಷೆಗಳು ದ್ರಾವಿಡ ಭಾಷೆಗಳೆಂದೂ ಪರಿಗಣಿಸ

ಲ್ಪಟ್ಟವೆ. ಕನ್ನಡ ಮೊದಲಾದ ದ್ರಾವಿಡ ಭಾಷೆಗಳು ಸಂಸ್ಕೃತದಿಂದ ಪೋಷಿಸಲ್ಪಟ್ಟವುಗಳೇ ಹೊರತು ಸಂಸ್ಕೃತಜನ್ಯವಾದುವಲ್ಲವೆಂದೂ ಇವು ದ್ರಾವಿಡ ಭಾಷೆಗಳೆಂದೂ ಭಾಷಾಶಾಸ್ತ್ರಜ್ಞರಾದ ಡಾ|| ಕಾಲ್ಡ್‌ವೆಲ್, ಸಿ. ಪಿ. ಬ್ರೌನ್, ಇ. ಪಿ. ರೈಸ್, ರೆ|| ಕಿಟೆಲ್, ಆರ್. ನರಸಿಂಹಾಚಾರ್ಯ ಮೊದಲಾದ ಪಂಡಿತರು ನಿರ್ಣಯಿಸಿರುತ್ತಾರೆ. ದಕ್ಷಿಣದ ಭಾಷೆಗಳಲ್ಲಿ ತೆಲುಗು ಮತ್ತು ಮಲೆಯಾಳ ಸಂಸ್ಕೃತದ ಹೆಚ್ಚಿನ ಸಂಪರ್ಕವನ್ನೂ, ಕನ್ನಡ ಸಮಸಮವಾದ ಬಾಂಧವ್ಯವನ್ನೂ, ತಮಿಳು ಅತಿಕಡಿಮೆ ಸಂಬಂಧ ವನ್ನೂ ಪಡೆದಿವೆಯೆಂದು ವಿದ್ವಾಂಸರ ಅಭಿಪ್ರಾಯವಿದೆ. ಸಂಸ್ಕೃತವು ದ್ರಾವಿಡ ಭಾಷೆಗಳ ಹೆತ್ತತಾಯಿಯಲ್ಲ ದಿದ್ದರೂ ' ಸಾಕುತಾಯಿ ' ಎಂಬ ಮಾತು ನಿರ್ವಿವಾದವಾದುದು. ನಮ್ಮ ನಾಡಿನಲ್ಲಿ ಜನರ ಬಳಕೆಯಲ್ಲಿ ದ್ದರೂ, ತುಳು, ಕೊಂಕಣಿ, ಕೊಡಗ, ಬಡಗ ಮೊದಲಾದ ಭಾಷೆಗಳಿಗೆ ಸ್ವಂತ ಲಿಪಿ ಇಲ್ಲವೆಂಬ ಮಾತು ಈ ಪ್ರಸಂಗದಲ್ಲಿ ಗಮನಾರ್ಹವಾಗಿದೆ.

ಕನ್ನಡ ಭಾಷೆಯು ಭಾರತ ಪ್ರಭುತ್ವದಿಂದ ಮನ್ನಣೆಯನ್ನು ಪಡೆದ ಹದಿನಾಲ್ಕು ರಾಷ್ಟ್ರ ಭಾಷೆಗಳಲ್ಲೊಂದಾಗಿದೆ. ಸುಮಾರು ಎರಡು ಕೋಟಿ ಜನಕ್ಕೂ ಮೇಲ್ಪಟ್ಟಷ್ಟು ಮಂದಿ ಕನ್ನಡವನ್ನು ತಮ್ಮ ಮಾತೃಭಾಷೆ ಯನ್ನಾಗಿ ತಿಳಿದಿದ್ದಾರೆ. ಕನ್ನಡವು, ಬಡಗ, ತೋದ, ಕೊಡಗ, ತುಳು, ಮೊದಲಾದ ಭಾಷೆಗಳಿಂದ ಕೂಡಿ ಒಂದು ಮಹಾ ವೃಕ್ಷದಂತೆ ಪರಿಶೋಭಿಸು ತ್ತಿದೆ. ಐತಿಹಾಸಿಕ ಕಾಲದಲ್ಲಿ, ಗಂಗ, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ಯಾದವ, ವಿಜಯನಗರ, ಮೈಸೂರು, ಕೆಳದಿ ಮೊದಲಾದ ರಾಜ್ಯ ಮಹಾರಾಜ್ಯಗಳ ಪ್ರಭುತ್ವದ ಭಾಷೆಯಾಗಿ ಕನ್ನಡವು ಕಂಗೊಳಿಸಿದೆ. ಹಲವಾರು ಐತಿಹಾಸಿಕ ಕಾರಣಗಳಿಂದ ಕನ್ನಡಕ್ಕೆ ಸುಮಾರು ೨,೦೦೦ ವರ್ಷಗಳ ಪ್ರಾಚೀನತೆಯನ್ನು ನಾವು ಹೇಳಬಹುದು. ಕ್ರಿ. ಶ. ೨ನೇ ಶತ ಮಾನದ ಗ್ರೀಕ್ ನಾಟಕಗಳಲ್ಲಿ ಕನ್ನಡ ಶಬ್ದಗಳು ಕಂಡು ಬಂದಿರುವುದೂ, ಕ್ರಿ. ಶ. ೪೫೦ರಲ್ಲಿ ಹಾಸನ ಜಿಲ್ಲೆ ಹಲ್ಮಿಡಿಯಲ್ಲಿ (ಕದಂಬರ) ಒಂದು ಕನ್ನಡ ಶಾಸನ ಲಭಿಸಿರುವುದೂ, ಕ್ರಿ. ಶ. ೬ನೇ ಶತಕದಲ್ಲಿ ಬಾದಾಮಿಯ ಮೇಣದ ಬಸದಿಗಳಲ್ಲಿ ಚಾಲುಕ್ಯ ಮಂಗಳೇಶನ ಶಾಸನಗಳು ಕಂಗೊಳಿಸುತ್ತಿರುವುದೂ

ಕರ್ಣಾಟಕದಲ್ಲಿ ಭಾಷಾ ಸಾಹಿತ್ಯದ ಮೊದಲನೆಯ ಘಟ್ಟವೆನಿಸಿದೆ. ಕ್ರಿ.ಶ. ೬ನೇ ಶತಮಾನದಲ್ಲಿ ತಲಕಾಡಿನಲ್ಲಿ ಆಳುತ್ತಿದ್ದ ಗಂಗರಸ ದುರ್ವಿನೀತನು ಭಾರವಿಯ ಕಿರಾತಾರ್ಜುನೀಯಕ್ಕೆ ಕನ್ನಡದಲ್ಲಿ ಟೀಕೆ ಬರೆದನೆಂಬ ವಿಚಾರ, ಕ್ರಿ. ಶ. ೯ನೆಯ ಶತಮಾನದಲ್ಲಿ ಆಳುತ್ತಿದ್ದ ರಾಷ್ಟ್ರಕೂಟರ ಚಕ್ರವರ್ತಿ ನೃಪತುಂಗನು ಕನ್ನಡದ ಲಕ್ಷಣ ಗ್ರಂಥವಾದ ಕವಿರಾಜಮಾರ್ಗವನ್ನು ಬರೆದಿರುವ ವಿಚಾರ, ಅದೇ ಗ್ರಂಥದಲ್ಲಿ ನೃಪತುಂಗನ ಹಿಂದೆ ಇದ್ದ ಕನ್ನಡ ಗದ್ಯ ಪದ್ಯ ಗ್ರಂಥಗಳ ವಿಚಾರವನ್ನು ಪ್ರಸ್ತಾಪಿಸಿರುವ ಸಂಗತಿ, ಅದೇ ಶತಮಾನದಲ್ಲಿ 'ವಡ್ಡಾರಾಧನೆ' ಗ್ರಂಥವನ್ನು ಆಚಾರ್ಯ ಶಿವಕೋಟಿಯು ಬರೆದಿರುವ ವಿಚಾರ, ಕನ್ನಡದ ಅಭಿಮಾನಿಗಳು ಹೆಮ್ಮೆ ಪಡತಕ್ಕ ಸಂಗತಿಗಳೇ ಅಲ್ಲದೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಇದು ಎರಡನೆಯ ಘಟ್ಟವೆನಿಸಿದೆ. ಮಹಾಕಾವ್ಯಗಳಾದ ಪಂಪಭಾರತ, ಆದಿಪುರಾಣಗಳನ್ನು ಬರೆದ ಆದಿಪಂಪ, ಗದಾಯುದ್ಧ ಮತ್ತು ಅಜಿತ ತೀರ್ಥಂಕರ ಪುರಾಣಗಳನ್ನು ಬರೆದ ರನ್ನ, ಶಾಂತೀಶ್ವರ ಪುರಾಣ, ಭುವನೈಕ ರಾಮಾಭ್ಯುದಯ ಬರೆದ ಪೊನ್ನ, ಯಶೋಧರ ಚರಿತೆ ಹಾಗೂ ಅನಂತನಾಥ ಪುರಾಣಗಳನ್ನು ಬರೆದ ಜನ್ನ, ಗಿರಿಜಾ ಕಲ್ಯಾಣ, ರಘಟಾ ಕಾವ್ಯಗಳನ್ನು ಬರೆದ ಹರೀಶ್ವರ, ಜಗನ್ನಾಥ ವಿಜಯವನ್ನು ಬರೆದ ರುದ್ರಭಟ್ಟ, ಪಂಚತಂತ್ರವನ್ನು ಬರೆದ ದುರ್ಗಸಿಂಹ, ದೀಕ್ಷಾ ಬೋಧೆಯನ್ನು ಬರೆದ ಕೆರೆಯ ಪದ್ಮರಸ, ಕನ್ನಡ ಸಾನಂದ ಚರಿತೆಯನ್ನು ಬರೆದ ಕುಮಾರ ಪದ್ಮರಸ, ಉದ್ಭಟಕಾವ್ಯ ರಚಿಸಿದ ಸೋಮರಾಜ, ತ್ರಿಷಷ್ಟಿ ಪುರಾತನ ವಿಳಾಸದ ಕವಿ ಸುರಂಗ, ಧರ್ಮಾಮೃತದ ನಯಸೇನ, ಮಲ್ಲಿನಾಥ ಪುರಾಣ, ಪಂಪರಾಮಾಯಣಗಳ ನಾಗಚಂದ್ರ, ಲೀಲಾವತಿಯ ನೇಮಿಚಂದ್ರ, ಕನ್ನಡ ಕಾದಂಬರಿ ಬರೆದ ನಾಗವರ್ಮ, ಚಂದ್ರಪ್ರಭ ಪುರಾಣದ ಅಗ್ಗಳ, ಹರಿಶ್ಚಂದ್ರ ಕಾವ್ಯದ ರಾಘವಾಂಕ ಮೊದಲಾದವರು ನಮ್ಮ ನಾಡಿನ ಹಿರಿಯ ಕವಿಗಳೆನಿಸಿದ್ದಾರೆ. ವೀರರಸಭರಿತವಾದ ಗದಾಯುದ್ಧ, ಕರುಣ ರಸಭರಿತವಾದ ಹರಿಶ್ಚಂದ್ರ ಕಾವ್ಯಗಳಂತಹ ಕೃತಿಗಳು ಇತರ ದೇಶ ಭಾಷೆಗಳಲ್ಲಿ ಹಾಗೂ ಸಂಸ್ಕೃತದಲ್ಲಿ ಕೂಡ ಸಿಗಲಾರವೆಂದು ಸಹೃದಯರ ಅಭಿಪ್ರಾಯವಿದೆ.

ಕ್ರಿ. ಶ. ೧೦, ೧೧, ೧೨ನೆಯ ಶತಮಾನದಲ್ಲಿ ಹುಟ್ಟಿದ ಈ ಮಹಾ ಕಾವ್ಯಗಳು, ವಸ್ತು ರಚನೆ, ಶೈಲಿ, ರಸನಿರೂಪಣೆ, ವರ್ಣನೆ, ಸಂಭಾಷಣೆ ಮೊದಲಾದ ವಿಷಯಗಳಲ್ಲಿ ಅತ್ಯಂತ ಶ್ರೇಷ್ಠವೆನಿಸಿವೆ. ಇದು ಸಾಹಿತ್ಯದ ಎರಡನೆಯ ಘಟ್ಟವೆನಿಸಿದೆ. ಮುಂದೆ ೧೪ನೆಯ ಶತಕದ ಅನಂತರ ಪರಿ ಶೋಭಿಸಿದ ಬಸವಪುರಾಣದ ಭೀಮಕವಿ, ಕನ್ನಡ ಭಾರತದ ಕುಮಾರವ್ಯಾಸ, ಪ್ರಭುಲಿಂಗಲೀಲೆಯ ಚಾಮರಸ, ರಾಜಶೇಖರವಿಳಾಸ, ಶಬರಶಂಕರವಿಳಾಸ ಗಳ ಷಡಕ್ಷರದೇವ, ತೊರವೆರಾಮಾಯಣದ ನರಹರಿ, ಮೋಹನ ತರಂಗಿ ಣಿಯ ಕನಕದಾಸ, ಚೆನ್ನಬಸವ ಪುರಾಣದ ವಿರೂಪಾಕ್ಷ, ಜೈಮಿನಿ ಭಾರ ತದ ಲಕ್ಷ್ಮೀಶ, ಭರತೇಶವೈಭವದ ರತ್ನಾಕರ, ವೀರಶೈವ ಮಹಾಪುರಾಣದ ಗುಬ್ಬಿ ಮಲ್ಲಣಾರ್ಯ ಮೊದಲಾದವರು ಮಧ್ಯಕಾಲೀನ ಮಹಾ ಕವಿಗಳೆಂದು ನಾವು ತಿಳಿಯಬಹುದು. ಚಂಪೂ ಕಾವ್ಯಗಳು ಹಳಗನ್ನಡದಿಂದಲೂ, ಷಟ್ಪದಿ, ರಗಳೆ, ಸಾಂಗತ್ಯ ಗ್ರಂಥಗಳು ನಡುಗನ್ನಡದಿಂದಲೂ ಕೂಡಿರು ವುದು ಇಲ್ಲಿ ಗಮನಾರ್ಹವಾಗಿದೆ. ಇದು ಮೂರನೆಯ ಘಟ್ಟವೆನಿಸಿದೆ.

ಪ್ರೌಢಶೈಲಿಯ ಚಂಪೂ ಸಾಹಿತ್ಯವನ್ನು ಕೈಬಿಟ್ಟು, ಸುಲಭ ಶೈಲಿಯ ವಚನಗಳ ಕಡೆಗೆ ಜನಗಳನ್ನು ಆಕರ್ಷಿಸಿದ ಕೀರ್ತಿ ಶ್ರೀ ಬಸವೇಶ್ವರಾದಿ ಕಲ್ಯಾಣದ ಶರಣರಿಗೆ ಸೇರತಕ್ಕದ್ದು. ಕನ್ನಡದಲ್ಲಿ ಸುಮಾರು ೩೦೦ ಮಂದಿ ವಚನಕಾರರು ಆಗಿಹೋಗಿದ್ದಾರೆ. ಮಹಿಮಾಶಾಲಿಗಳಾದ ಬಸವಣ್ಣ, ಚೆನ್ನಬಸವಣ್ಣ, ಅಕ್ಕಮಹಾದೇವಿ, ಸಿದ್ಧರಾಮೇಶ್ವರ ಮೊದಲಾದವರ ವಚನಗಳು 'ಕನ್ನಡದ ಉಪನಿಷತ್ತುಗಳು' ಎನಿಸಿಕೊಂಡಿರುವುವು. ಇಂತಹ ತಾತ್ವಿಕ ವಾಙ್ಮಯವು ಭಾರತದ ಯಾವ ಪ್ರಾಚೀನ ಭಾಷೆಗಳಲ್ಲಿಯೂ ಕಂಡುಬಂದಿಲ್ಲವೆಂಬುದು ಸಾಹಿತ್ಯ ಪ್ರೇಮಿಗಳು ಗಮನಿಸಬೇಕಾದ ವಿಚಾರ ವಾಗಿದೆ.

ಕನ್ನಡ ಸಾಹಿತ್ಯದಲ್ಲಿ ಶಿವಶರಣರ ಹಾಡುಗಬ್ಬಗಳು, ಹರಿದಾಸರ ಕೀರ್ತನ ಸುಳಾದಿಗಳು ಅತ್ಯಂತ ಮಾನ್ಯತೆಯನ್ನು ಪಡೆದಿವೆ. ಓದುಗಬ್ಬ ಗಳಿಗಿಂತ ಹಾಡುಗಬ್ಬಗಳು ಜನರಿಗೆ ಹೆಚ್ಚು ಪ್ರಿಯವೆನಿಸಿರುವುದು ಗಮನಾ

ರ್ಹವಾಗಿದೆ. ಈ ದೃಷ್ಟಿಯಿಂದ ಭಾರತದ ಸಮಗ್ರ ಸಂತ ಸಾಹಿತ್ಯದಲ್ಲಿಯೇ ಕನ್ನಡ ಶಿವಶರಣರ ಮತ್ತು ಹರಿದಾಸರ ವಾಙ್ಮಯವು ತಲೆ ಎತ್ತಿ ನಿಲ್ಲತಕ್ಕು ದಾಗಿದೆ. ಈ ಸಾಹಿತ್ಯ ರಚನೆಯಲ್ಲಿ ಶ್ರೀ ನಿಜಗುಣ ಶಿವಯೋಗಿ, ಪುರಂ ದರದಾಸರು, ಕನಕದಾಸರು, ಶಾಲ್ಯದ ಅರಸರು, ಘನ ಮಠಾರ್ಯರು, ಮುಪ್ಪಿನ ಷಡಕ್ಷರಿಗಳು, ಮೈಲಾರ ಶರಣರು, ಮುಳಗುಂದದ ಮಹಾಂತರು, ಜಗನ್ನಾಥ ದಾಸರು, ವಿಜಯದಾಸರು, ಸರ್ಪಭೂಷಣರು ಅತ್ಯಂತ ಗಣ್ಯತೆ ಯನ್ನು ಪಡೆದಿದ್ದಾರೆ. ಈ ಕನ್ನಡ ಸಂತಸಾಹಿತ್ಯವು ಜನತೆಗೆ ಆನಂದ ವನ್ನೇ ಅಲ್ಲದೆ ಆತ್ಮೋದ್ಧಾರವನ್ನೂ ಕೂಡ ಉಂಟುಮಾಡಲು ಸಮರ್ಥವಾ ಗಿದೆ. ಈ ಹಾಡುಗಬ್ಬಗಳಿಂದ ಕರ್ಣಾಟಕ ಸಂಗೀತದ ಅಭಿವೃದ್ಧಿಗೆ ಕೂಡ ಹೆಚ್ಚಿನ ಸಹಾಯವಾಗಿದೆ. ೧೭ನೇ ಶತಮಾನದಲ್ಲಿ ಅತ್ತ ಮೈಸೂರಿನ ಒಡೆ ಯರ, ಇತ್ತ ಕೆಳದಿಯ ನಾಯಕರ ಆಶ್ರಯದಲ್ಲಿ ಕವಿ ಶ್ರೇಷ್ಠರಾದ ತಿರುಮ ಲಾರ್ಯ, ಚಿಕುಪಾಧ್ಯಾಯ, ಷಡಕ್ಷರದೇವ, ಸಂಚಿಹೊನ್ನಮ್ಮ, ಯಳಂ ದೂರು ಹರೀಶ್ವರ, ಕೆಳದಿಯ ತಿರುಮಲಭಟ್ಟ, ಕೆಳದಿಯ ಬಸವರಾಜ, ಮರಿತೋಂಟದಾರ್ಯ, ಷಡಕ್ಷರ ಮಂತ್ರಿ ಮೊದಲಾದವರು ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಕಾವ್ಯಗಳನ್ನೂ ಅಮೋಘವಾದ ಶಾಸ್ತ್ರಗ್ರಂಥಗಳನ್ನೂ ರಚಿಸಿ ಲೋಕೋಪಕಾರ ಮಾಡಿದ್ದಾರೆ.

ಈ ಕಾಲದ ಕವಿಗಳಲ್ಲಿ ಉಭಯ ಕವಿತಾವಿಶಾರದ ಷಡಕ್ಷರದೇವ, ಮಹಾಕವಿ ತಿರುಮಲಾರ್ಯ ಮತ್ತು ಕವಿಯಿತ್ರಿ ಸಂಚಿ ಹೊನ್ನಮ್ಮ ಇವರು ಹೆಚ್ಚಿನ ಜನಪ್ರಿಯತೆಯನ್ನು ಪಡೆದಿದ್ದಾರೆ. ಗಂಗರು, ರಾಷ್ಟ್ರಕೂಟರು, ಚಾಳುಕ್ಯರು, ಹೊಯ್ಸಳರು, ವಿಜಯನಗರದರಸರು, ಮೈಸೂರು ಒಡೆ ಯರು, ಕೆಳದಿಯ ನಾಯಕರು ಕನ್ನಡ ಸಾಹಿತ್ಯಕ್ಕೆ ಉದಾರಾಶ್ರಯವನ್ನಿತ್ತ ನಿದರ್ಶನಗಳನ್ನು ನಾವು ಮೇಲಿಂದ ಮೇಲೆ ಕಾಣುತ್ತೇವೆ. ಇದು ಸಾಹಿ ತ್ಯದ ನಾಲ್ಕನೇ ಘಟ್ಟವೆನಿಸಿದೆ.

ಮುಂದೆ ೧೯ನೇ ಶತಮಾನದಲ್ಲಿ ಮೈಸೂರಿನ ವಿದ್ವತ್‌ಪ್ರಭು ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ ಉದಾರಾಶ್ರಯದಲ್ಲಿ, ಅನಂತರ ಶ್ರೀ

ಚಾಮರಾಜ ಒಡೆಯರ ಕೃಪಾಶ್ರಯದಲ್ಲಿ ಅಳಿಯ ಲಿಂಗರಾಜ, ದೇವಲಾ ಪುರದ ನಂಜುಂಡ, ಕೆಂಪು ನಾರಾಯಣ, ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿ, ನಂಜನಗೂಡು ಶ್ರೀಕಂಠಶಾಸ್ತ್ರಿ, ಕವಿತಿಲಕ ಅಯ್ಯಾ ಶಾಸ್ತ್ರಿ ಮೊದಲಾದ ವಿದ್ವತ್‌ಗಳು ಜನಿಸಿ ಅಮೋಘವಾದ ಕೃತಿಗಳನ್ನು ರಚಿಸಿ ಕನ್ನಡಕ್ಕೆ ಮಹೋಪಕಾರ ಮಾಡಿದ್ದಾರೆ. ಮೈಸೂರಿನ ಇಂದಿನ ರಾಜ್ಯಪಾಲರು ಕನ್ನಡಕ್ಕೆ ಕೊಡುತ್ತಿರುವ ಪ್ರೋತ್ಸಾಹವು ಅಪ್ರತಿಮವಾಗಿದೆ.

ಕನ್ನಡ ಸಾಹಿತ್ಯವನ್ನು ಕುರಿತಾದ ಈ ಪ್ರಸ್ತಾಪದಲ್ಲಿ ಕನ್ನಡಕ್ಕೆ ಉತ್ತಮ ವ್ಯಾಕರಣ, ಛಂದಸ್ಸು, ನಿಘಂಟು ಹಾಗೂ ಅಲಂಕಾರ ಗ್ರಂಥಗಳನ್ನು ಬರೆದು ಉಪಕಾರ ಮಾಡಿದ ನೃಪತುಂಗ, ನಾಗವರ್ಮ, ಕೇಶಿರಾಜ, ಭಟ್ಟಾಕಳಂಕ, ತಿರುಮಲಾರ್ಯ, ಅಭಿನವ ಮಂಗರಾಜ, ಲಿಂಗಣಮಂತ್ರಿ, ಗುಣಚಂದ್ರ, ಕವಿಮಾಧವ, ಸಾಳ್ವ, ಕವಿತಿಮ್ಮ ಮೊದಲಾದ ಗ್ರಂಥಕರ್ತರು ಸಮಗ್ರ ಕನ್ನಡಿಗರ ಪ್ರೀತಿಗೌರವಗಳಿಗೆ ಪಾತ್ರರಾಗಿದ್ದಾರೆ, ಕನ್ನಡದ ವ್ಯಾಕರಣವನ್ನು ಸಂಸ್ಕೃತ ಭಾಷೆಯಲ್ಲಿ 'ಕರ್ಣಾಟಕ ಭಾಷಾ ಭೂಷಣಮ್' ಮತ್ತು 'ಶಬ್ದಾನುಶಾಸನಮ್' ಎಂಬ ಹೆಸರಿನಿಂದ ಬರೆದ ನಾಗವರ್ಮ ಮತ್ತು ಭಟ್ಟಾಕಳಂಕರು ಕನ್ನಡಿಗರೆಲ್ಲರ ಮನ್ನಣೆಗೆ ಪಾತ್ರರಾಗಿದ್ದಾರೆ. ಅಲ್ಲದೆ ಇಂತಹ ಮರ್ಯಾದೆ ಕನ್ನಡಕ್ಕಲ್ಲದೆ ಮತ್ತಾವ ಭಾರತದ ಭಾಷೆಗೂ ಪ್ರಾಪ್ತವಾಗಿಲ್ಲ ಎಂಬ ವಿಷಯ ಗಮನಾರ್ಹವಾಗಿದೆ. ಇದು ಸಾಹಿತ್ಯದ ಐದನೇ ಘಟ್ಟವೆನಿಸಿದೆ.

'ಕನ್ನಡ ನಾಡು ಸಂಸ್ಕೃತಿಯ ಬೀಡು' ಎಂಬುದಕ್ಕೆ ನಮ್ಮ ನಾಡಿನಲ್ಲಿ ಜನಸಾಮಾನ್ಯರಿಂದ ಹುಟ್ಟಿ ಬಂದಿರುವ ಜನಪದ ಸಾಹಿತ್ಯವು ನಿದರ್ಶನವೆನಿಸಿದೆ. ಆಧುನಿಕ ಕವಿಗಳಾದ ಮುದ್ದಣ, ಪಾರ್ತಿಸುಬ್ಬ, ಶಾಂತಕವಿ, ರೈನಾಪುರ್ ಎಸ್. ಜಿ. ನರಸಿಂಹಾಚಾರ್ ಮಾಡಿರುವ ಸೇವೆಯೂ ಶ್ಲಾಘ್ಯವಾದುದು. ಕನ್ನಡ ಸಾಹಿತ್ಯದ ಸಮಗ್ರ ಚರಿತ್ರೆಯಲ್ಲಿ, ಕಂತಿ, ಅಕ್ಕ ಮಹಾದೇವಿ, ಹೆಳವನಕಟ್ಟೆ ಗಿರಿಯಮ್ಮ, ಸಂಚಿ ಹೊನ್ನಮ್ಮ, ಶೃಂಗಾರಮ್ಮ, ಮಹಾದೇವಮ್ಮ, ನೀಲಾಂಬಿಕೆ ಮೊದಲಾದ ಕವಯಿತ್ರಿಯರು ಮಾಡಿರುವ ಸಾಹಿತ್ಯ ಸೇವೆಯೂ ನಾಡಿನ ಮಹಿಳೆಯರಿಗೆ ಗೌರವವನ್ನು ತರತಕ್ಕುದಾಗಿದೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸುಮಾರು ೫೦ ವರ್ಷಗಳಲ್ಲಿ ಹುಲುಸಾದ ಬೆಳೆ ಬಂದಿದೆ. ನವ್ಯ ಕವಿಗಳು ತಮ್ಮ ಹೊಸ ಹಾದಿಯಲ್ಲಿ ಕತೆ, ಕವಿತೆ, ಕಾದಂಬರಿ, ಲಘುಕಾವ್ಯ, ನಾಟಕ, ವಿಮರ್ಶೆ, ಜೀವನ ಚರಿತ್ರೆ ಮೊದಲಾದುವುಗಳನ್ನು ರಚಿಸಿ ಕನ್ನಡದ ಕೀರ್ತಿಯನ್ನು ಹೆಚ್ಚಿಸಿದ್ದಾರೆ. ಆಧುನಿಕ ಪ್ರಮುಖ ಸಾಹಿತಿಗಳಾದ, ಶ್ರೀಯುತರು ಡಾ|| ಕೆ. ವಿ. ಪುಟ್ಟಪ್ಪ, ಕವಿ ದ. ರಾ. ಬೇಂದ್ರೆ, ಡಾ|| ಆರ್. ಎಸ್. ಮುಗಳಿ, ಶ್ರೀ ಎಂ. ಗೋವಿಂದ ಪೈ, ಶ್ರೀ ಶಿವರಾಮಕಾರಂತ, ಪದ್ಮಶ್ರೀ ವಿ. ಕೆ. ಗೋಕಾಕ್ ಸಾಹಿತ್ಯಸೇವೆಯನ್ನುಮಾಡಿ ರಾಷ್ಟ್ರೀಯ ಪ್ರಶಸ್ತಿಯನ್ನು ಪಡೆದಿರುವುದು ಸಂತೋಷದಾಯಕವಾಗಿದೆ. ಕನ್ನಡದ ಮುನ್ನಡೆಯ ಹಾದಿಯಲ್ಲಿ ದಿವಂಗತರಾದ ಪೂಜ್ಯ ಆರ್. ನರಸಿಂಹಾಚಾರ್ಯ,ಪ್ರೊ|| ಬಿ.ಎಂ. ಶ್ರೀಕಂಠಯ್ಯ, ಪ್ರೊ|| ಎಸ್.ಎಸ್. ಬಸವನಾಳ್, ಪ್ರೊ|| ಟಿ. ಎಸ್. ವೆಂಕಣ್ಣಯ್ಯ, ಎಂ. ಆರ್. ಶ್ರೀನಿವಾಸ ಮೂರ್ತಿ, ಪ್ರೊ|| ಬಿ. ವೆಂಕಟನಾರಣಪ್ಪ, ಪಂಡಿತ ಮುಳಿಯ ತಿಮ್ಮಪ್ಪಯ್ಯ, ಪಂಜೆ ಮಂಗೇಶರಾಯರು, ಚ.ವಾಸುದೇವಯ್ಯನವರು, ಬೆನಗಲ್ ರಾಮರಾಯರು, ಡಾ|| ಹಳಕಟ್ಟಿ ಇವರು ಮಾಡಿರುವ ಸೇವೆ ಅಪಾರವಾದುದು. ಇದು ನಮ್ಮ ಸಾಹಿತ್ಯದ ಐದನೇ ಘಟ್ಟವೆನಿಸಿದೆ.

ಬಂಗಾಳೀ ಸಾಹಿತ್ಯವು ೧೦ನೇ ಶತಕದ ಚರಿಯಾಪದದಿಂದ ಆರಂಭವಾಗಿದೆ. ತೆಲುಗು ಸಾಹಿತ್ಯವು ೧೧ನೇ ಶತಮಾನದ ನನ್ನಯಭಟ್ಟನಿಂದ ಪ್ರಾರಂಭವಾಗಿದೆ. ಮರಾಠಿ ಸಾಹಿತ್ಯವು ೧೪ನೇ ಶತಕದ ಜ್ಞಾನೇಶ್ವರನಿಂದ ಪ್ರಾರಂಭವಾಗಿದೆ. ತಮಿಳಿನಲ್ಲಿ ಕ್ರಿ. ಶ. ೧ನೇ ಶತಕದಲ್ಲಿಯೇ ಗ್ರಂಥಾರಂಭವಾಗಿದೆ. ೧೩ನೇ ಶತಕದ ಕವಿ ಚೀರಾಮ್ನ (ರಾಮ ಚರಿತಂ) ಇವರಿಂದ ಮಲೆಯಾಳದ ಕಾವ್ಯ ಮೊದಲಾಗಿದೆ. (ಕೇರಳ ದೇಶದಲ್ಲಿ ೮ನೇ ಶತಮಾನದಲ್ಲಿ ಈ ಭಾಷೆಯ ಶಿಲಾಶಾಸನ ಸಿಕ್ಕಿದೆ) ಇತ್ಯಾದಿ ನಿದರ್ಶನಗಳಿಂದ ಕನ್ನಡ ಭಾಷೆಯು ಪ್ರಾಚೀನತೆಯಲ್ಲಿ ವಿಶಾಲ ಭಾರತದಲ್ಲಿಯೇ ಸಂಸ್ಕೃತ, ತಮಿಳು ಬಿಟ್ಟು ಮೂರನೇ ಸ್ಥಾನವನ್ನು ಪಡೆದಿದೆ. ಕೇವಲ ಪ್ರಾಚೀನತೆಯೇ ಅಲ್ಲದೆ ಪ್ರೌಢಿಮೆಯಿಂದಲೂ ಕನ್ನಡವು ಅಗ್ರಸ್ಥಾನವನ್ನು ಪಡೆದಿದೆ.

ಕನ್ನಡದ ಪ್ರಭುಲಿಂಗಲೀಲೆಯು, ತಮಿಳು, ತೆಲುಗು, ಮರಾಠಿ ಮತ್ತು ಸಂಸ್ಕೃತ ಭಾಷೆಗಳಲ್ಲಿ ಭಾಷಾಂತರವಾಗಿದೆ. ಕನ್ನಡದ ಬಸವ ಪುರಾಣವು, ತಮಿಳು. ಸಂಸ್ಕೃತ ಮತ್ತು ಮರಾಠಿ ಭಾಷೆಗಳ ಬಸವ ಪುರಾಣಗಳ ಮೇಲೆ ಪ್ರಭಾವವನ್ನು ಬೀರಿದೆ. ದಿವ್ಯಜ್ಞಾನಿಗಳಾದ ಶ್ರೀ ನಿಜಗುಣರ 'ವಿವೇಕ ಚಿಂತಾಮಣಿ' ಎಂಬ ವಸ್ತು ಕೋಶವು (Encyclopaedia) ಸಂಸ್ಕೃತ, ಮರಾಠಿ ಮತ್ತು ತಮಿಳು ಭಾಷೆಗಳಲ್ಲಿ ಭಾಷಾಂತರವಾಗಿದೆ. ೧೫ನೇ ಶತಕದ ಕೆರೆಯ ಪದ್ಮರಸನ ದೀಕ್ಷಾಬೋಧೆಯು ೪೦೦ ವರ್ಷಗಳ ಹಿಂದೆಯೇ ತೆಲುಗು ಭಾಷೆಯಲ್ಲಿ ಭಾಷಾಂತರವಾಗಿ ಪ್ರಖ್ಯಾತಿಗಳಿಸಿದೆ. ತಮಿಳಿನ ಪೆರಿಯ ಪುರಾಣವು ಕನ್ನಡ ಕವಿಶ್ರೇಷ್ಠರಾದ ನಿಜಗುಣ ಶಿವಯೋಗಿ, ಹಂಪೆಯ ಹರೀಶ್ವರ, ವೀರಭದ್ರಕವಿ, ಸುರಂಗಕವಿ, ಚತುರ್ಮುಖ ಬೊಮ್ಮರಸ ಮೊದಲಾದವರಿಂದ ವಿವಿಧಛಂದಸ್ಸಿನಲ್ಲಿ ಕನ್ನಡದಲ್ಲಿ ಭಾಷಾಂತರವಾಗಿದೆ. ತಮಿಳಿನ ಸತ್ಯೇಂದ್ರ ಚೋಳನ ಕಥೆ ಕನ್ನಡದಲ್ಲಿ ಗುಬ್ಬಿಮಲ್ಲಣಾರ್ಯ ಮತ್ತು ಷಡಕ್ಷರ ಕವಿಗಳಿಗೆ ಸ್ಫೂರ್ತಿಯನ್ನು ಕೊಟ್ಟಿದೆ. ಆಂಧ್ರ ಕವಿಶ್ರೇಷ್ಠನಾದ ಪಾಲ್ಕುರಿಕೆ ಸೋಮನಾಥನ ಪಂಡಿತಾರಾಧ್ಯ ಚರಿತೆ ಮತ್ತು ಬಸವಪುರಾಣಗಳು, ಕನ್ನಡ, ಸಂಸ್ಕೃತ, ತಮಿಳು ಭಾಷೆಗಳಲ್ಲಿ ಭಾಷಾಂತರವಾಗಿ ಜನರ ಮನ್ನಣೆಯನ್ನು ಪಡೆದಿವೆ. ತಮಿಳಿನ ತಿರುವಳ್ಳುವರ್ ದ್ವಿಪದಿಯಲ್ಲಿ ಹೇಳುವ ನೀತಿವಾಕ್ಯಗಳನ್ನೇ ಕನ್ನಡದ ತ್ರಿಪದಿಗಳಲ್ಲಿ ಸರ್ವಜ್ಞನೂ ತೆಲುಗಿನ ಚೌಪದಿಗಳಲ್ಲಿ ವೇಮಣ್ಣನೂ ಹೇಳಿರುವುದು ಗಮನಾರ್ಹವಾಗಿದೆ. ತಮಿಳಿನ ತಿರುವಾಚಕಂ ಮತ್ತು ತೇವಾರಂಗಳ ಪ್ರಭಾವವು ಕನ್ನಡದ ಶಿವಶರಣರಮೇಲೆ ಅಚ್ಚಳಿಯದೆ ಪ್ರತಿಬಿಂಬಿಸಿದೆ. ಮಹಾಲಿಂಗ ರಂಗನ ಅನುಭವಾಮೃತವು ಸಂಸ್ಕೃತದಲ್ಲಿ ಭಾಷಾಂತರವಾಗಿದೆ. ಜಗನ್ನಾಥದಾಸರ ಹರಿಕಥಾಮೃತಸಾರಕ್ಕೆ ಗಣ್ಯರಾದ ಇಬ್ಬರು ಪಂಡಿತರು ಸಂಸ್ಕೃತದಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಗೊಮ್ಮಟಸಾರದ ಕನ್ನಡ ವ್ಯಾಖ್ಯಾನವನ್ನು ಅಭಯನಂದಿಗಳು ಸಂಸ್ಕೃತದಲ್ಲಿ ಬರೆದಿದ್ದಾರೆ. ತೆಲುಗು ಕುಮಾರಸಂಭವದ ಮೇಲೆ (ನನ್ನಚೋಡ) ಕನ್ನಡದ ಜಗನ್ನಾಥವಿಜಯವು (ರುದ್ರಭಟ್ಟ) ಪ್ರಭಾವಬೀರಿದೆ. ನನ್ನಚೋಡನ ಗ್ರಂಥದಲ್ಲಿ ಕನ್ನಡ ಶಬ್ದಗಳು ಕಾಣಿಸಿಕೊಂಡಿವೆ. ಬಸವಪ್ಪ ಶಾಸ್ತ್ರಿಗಳ ಕನ್ನಡದ ಅಭಿಜ್ಞಾನ ಶಾಕುಂ

ತಲ ಭಾಷಾಂತರವು ಭಾರತೀಯ ಸಾಹಿತ್ಯದ ಇತರ ಅನುವಾದಗಳಲ್ಲಿಯೇ ಅನನ್ಯಾದೃಶವಾದ ಕೀರ್ತಿಯನ್ನು ಪಡೆದಿದೆ. ಕನ್ನಡದ ವಿಖ್ಯಾತ ನಾಟಕ ಕಾರರಾದ ದಿವಂಗತ ಕೈಲಾಸಂರವರ ನಾಟಕ ಕೃತಿಗಳು ದಕ್ಷಿಣ ಭಾರತದ ರಂಗಭೂಮಿಯ ಮೇಲೆ ಪ್ರಭಾವವನ್ನುಂಟುಮಾಡಿವೆ. ಈ ರೀತಿಯಲ್ಲಿ ಕನ್ನಡ ಸಾಹಿತ್ಯವು ಬಹುಮುಖವಾಗಿ ಅಭಿವೃದ್ಧಿ ಹೊಂದಿ ಭಾರತೀಯ ವಾಙ್ಮಯ ಪ್ರಪಂಚದಲ್ಲಿ ತಲೆಯೆತ್ತಿ ನಿಂತಿರುವುದನ್ನು ನಾವು ನೋಡ ಬಹುದು. ಈ ರೀತಿ ಪ್ರಾಚೀನ ಕಾಲದಿಂದಲೂ ಕನ್ನಡ, ತಮಿಳು, ತೆಲುಗು, ಮರಾಠಿ, ಮತ್ತು ಸಂಸ್ಕೃತ ಭಾಷೆಗಳು ಪರಸ್ಪರ ಹೊಂದಿಕೊಂಡು ಬರುತ್ತಿರುವುದು ನಮ್ಮ ಕವಿಗಳ ರಾಷ್ಟ್ರೀಯ ಭಾವನೆಗೆ ನಿದರ್ಶನವಾಗಿದೆ ಯಲ್ಲವೆ ?

ಕನ್ನಡ ಸಾಹಿತ್ಯವನ್ನು ಕುರಿತು ಮಾತಾಡುವ ಈ ಸಂದರ್ಭದಲ್ಲಿ ಪಾಶ್ಚಾತ್ಯ ವಿದ್ವಾಂಸರಾದ ಡಾ॥ ರೀವ್ಸ್, ರೆ॥ ಕಿಟೆಲ್, ಡಾ॥ ರೈಸ್, ಡಾ॥ ಫ್ಲೀಟ್ ಮೊದಲಾಗಿ ಕನ್ನಡಕ್ಕೆ ಸೇವೆ ಸಲ್ಲಿಸಿದ ಮಹನೀಯರ ಹೆಸರನ್ನು ಇಲ್ಲಿ ಸ್ಮರಿಸಿಕೊಳ್ಳುವುದು ನಮ್ಮ ಪವಿತ್ರ ಕರ್ತವ್ಯವಾಗಿದೆ.

ಆಧುನಿಕ ಕನ್ನಡ ಸಾಹಿತ್ಯದ ಪ್ರಗತಿಗೆ ಬಂಗಾಳಿ ಸಾಹಿತ್ಯದಿಂದಲೂ ಹೆಚ್ಚಿನ ನೆರವಾಗಿದೆ ಎಂಬುದನ್ನು ನಾನು ಇಲ್ಲಿ ಸ್ಮರಿಸುತ್ತೇನೆ. ಬಂಗಾ ಳಿಯು ಇಂದು ಭಾರತದಲ್ಲಿ ಒಂದು ಮುಖ್ಯವಾದ ಭಾಷೆ ಎನಿಸಿದೆ. ಯೂರೋಪಿನಲ್ಲಿ ಫ್ರೆಂಚ್ ಭಾಷೆಗಿರುವ ಗೌರವ ಭಾರತದಲ್ಲಿ ಬಂಗಾಳಿಗಿದೆ. ಬಂಗಾಳಿಯು ಸಂಸ್ಕೃತದ ಸಂಬಂಧ ಹೆಚ್ಚಾಗಿ ಪಡೆದುದು, ಇಂಗ್ಲಿಷಿನ ಸಂಪರ್ಕ ಭಾರತದಲ್ಲಿ ಮೊದಮೊದಲೇ ಬಂಗಾಳಿಗಾದುದು. ಅಲ್ಲಿನ ಜನರು ಬುದ್ಧಿಶಾಲಿಗಳೂ, ದೇಶಾಭಿಮಾನಿಗಳೂ ಆದುದು ಅದರ ಗಣ್ಯತೆಗೆ ಕಾರಣವೆನ್ನಬಹುದು. ಸುಮಾರು ೫೦ ವರ್ಷಗಳ ಹಿಂದೆ ದಿ॥ ಬಿ. ವೆಂಕ ಟಾಚಾರ್ಯರು, ಬಂಗಾಳದ ಪ್ರಖ್ಯಾತ ಕಾದಂಬರೀಕಾರರಾದ ಬಾಬು ಬಂಕಿಂ ಚಂದ್ರರು, ರಮೇಶಚಂದ್ರರು, ಶರತ್ ಚಂದ್ರರು, ಹರಪ್ರಸಾದ ಶಾಸ್ತ್ರಿಗಳು ಮೊದಲಾದ ಮಹನೀಯರ ಗ್ರಂಥಗಳನ್ನು ಕನ್ನಡಕ್ಕೆ ಭಾಷಾಂತರಿಸಿ ಮಹೋ ಪಕಾರ ಮಾಡಿರುತ್ತಾರೆ. ಅವರ ಅನಂತರ ದಿವಂಗತರಾದ ಭಾರತೀ

ಸಂಪಂಗಿರಾಮಯ್ಯ, ಪ್ರೊ॥ ಟಿ. ಎಸ್. ವೆಂಕಣ್ಣಯ್ಯನವರು, ಶ್ರೀಗಳಾದ ಡಾ॥ ಎ.ಆರ್. ಕೃಷ್ಣಶಾಸ್ತ್ರಿಗಳು, ಡಾ॥ ಎ.ಎನ್. ನರಸಿಂಹಯ್ಯನವರು, ಶ್ರೀ ನಾರಾಯಣ ಸ್ವಾಮಿಗಳು, ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್‌ಅವರು, ದಿ॥ ವೆಂಕಟಾದ್ರಿ ಶಾಸ್ತ್ರಿಗಳೇ ಮೊದಲಾದವರು ಬಂಗಾಳೀ ಗ್ರಂಥಗಳನ್ನು ಭಾಷಾಂತರಿಸಿ ಕನ್ನಡಕ್ಕೆ ಉಪಕಾರ ಮಾಡಿದ್ದಾರೆ. ಬಂಗಾಳದ ಮಹಾ ತತ್ವಜ್ಞಾನಿಗಳಾದ ರಾಮಕೃಷ್ಣ ಪರಮಹಂಸರು, ಮಹರ್ಷಿ ಅರವಿಂದ ಘೋಷರು, ಸ್ವಾಮಿ ವಿವೇಕಾನಂದರು, ಉಜ್ವಲ ಜ್ಞಾನಿಗಳಾದ ಡಾ॥ ಜಗ ದೀಶಚಂದ್ರಬೋಸರು, ಆಚಾರ್ಯ ಪ್ರಫುಲ್ಲಚಂದ್ರರಾಯರು, ಸಮಾಜ ಸುಧಾರಕರಾದ ರಾಜಾ ರಾಮಮೋಹನರಾಯರು, ಭಾರತೀಯ ವಿದ್ವನ್ಮಣಿಗಳಾದ ಈಶ್ವರಚಂದ್ರ ವಿದ್ಯಾಸಾಗರ, ತಾರಾನಾಥ ತರ್ಕವಾಚಸ್ಪತಿ, ರಮೇಶದತ್ತ, ಚೌಧರಿ, ಕೇಶವ ಚಂದ್ರಸೇನ್, ವಿಜಯೇಂದ್ರಲಾಲ್, ಪ್ರಮಥನಾಥ ಚೌಧುರಿ, ಕಾಮಿನೀರೇ, ಮುಖ್ಯವಾಗಿ ಕವಿ ಸಾಮ್ರಾಟ್ ರವೀಂದ್ರನಾಥ ಠಾಕೂರರು ಮೊದಲಾದವರ ಸಾಹಿತ್ಯವು ಕನ್ನಡದಲ್ಲಿ ಬಹು ಮಟ್ಟಿಗೆ ಭಾಷಾಂತರವಾಗಿ ನಮ್ಮ ಜನರ ಮನಸ್ಸನ್ನು ಸೆಳೆದಿದೆ. ಈ ರೀತಿಯಾಗಿ ಬಂಗಾಳಿ ಮತ್ತು ಕನ್ನಡದ ಸಂಬಂಧವು ಅರ್ಧಶತಮಾನದಷ್ಟು ಹಿಂದಿನಿಂದ ಪ್ರಾರಂಭವಾದರೂ ಅದು ಕನ್ನಡಿಗರಲ್ಲಿ ಹೆಚ್ಚಿನ ಮಮತೆಗೆ ಕಾರಣವಾಗಿದೆ. ರವೀಂದ್ರರ ಶತಮಾನೋತ್ಸವದ ಅಂಗವಾಗಿ ಕೆಲವಾರು ಗ್ರಂಥಗಳು ರವೀಂದ್ರರನ್ನು ಕುರಿತಾಗಿ ಕನ್ನಡದಲ್ಲಿ ಆಗಲಿವೆ.

ಸುಮಾರು ೨॥ಕೋಟಿ ಜನಗಳ ಮಾತೃಭಾಷೆಯಾದ ಬಂಗಾಳಿ ಸಾಹಿತ್ಯವು ಪಾಲ ಮತ್ತು ಸೇನ ರಾಜರ ಕಾಲಗಳಲ್ಲಿ (ಸುಮಾರು ೧೦ನೇ ಶತಮಾನದಲ್ಲಿ) ಒಂದು ನಿರ್ದಿಷ್ಟ ರೂಪಕ್ಕೆ ಬಂತೆಂದು ವಿದ್ವಾಂಸರು ತರ್ಕಿಸಿದ್ದಾರೆ. ಚರಿಯಾಪದ ಮತ್ತು ಮಂಗಳಕಾವ್ಯಗಳು ಬಂಗಾಳದ ಪ್ರಾಚೀನ ಸಾಹಿತ್ಯವೆನಿಸಿ ಮುಂದುವರಿದಿದೆ. ಜಯದೇವನ ಗೀತಗೋವಿಂದ ಮತ್ತು ಶ್ರೀ ಕೃಷ್ಣಚೈತನ್ಯನ ವೈಷ್ಣವ ಗ್ರಂಥಗಳು ಬಂಗಾಳಿ ಸಾಹಿತ್ಯದ ಮೇಲೆ ಹೆಚ್ಚು ಪ್ರಭಾವವನ್ನು ಬೀರಿವೆ. ಕೃತ್ತಿವಾಸ ಓಜನ ರಾಮಾಯಣ ಮತ್ತು ಚಂಡೀದಾಸನ ಶ್ರೀಕೃಷ್ಣ ಕೀರ್ತನೆಗಳು ಬಂಗಾಳದಲ್ಲಿ ಹೆಚ್ಚು ಜನಪ್ರಿಯವೆನಿಸಿವೆ,

ಅಲ್ಲಿ ಆಳಿದ ಮುಸಲ್ಮಾನ ಕವಿಗಳು ಬಂಗಾಳಿ ಸಾಹಿತ್ಯಕ್ಕೆ ಮಿಗಿಲಾದ ಸೇವೆಯನ್ನು ಸಲ್ಲಿಸಿರುವುದು ಗಮನಾರ್ಹವಾಗಿದೆ.

ಭಾರತೀಯ ಭಾಷಾಸಾಹಿತ್ಯದಲ್ಲಿ ಸಂತಸಾಹಿತ್ಯದ ಪ್ರಭಾವವು ದಕ್ಷಿಣದಿಂದ ಉತ್ತರಕ್ಕೆ ಹಬ್ಬಿರುವುದನ್ನು ನಾವು ಪರಿಶೀಲಿಸಬಹುದು. ದಕ್ಷಿಣದ ತಮಿಳುನಾಡಿನ ಶರಣರ ಭಕ್ತಿಯ ಗಂಗೆ, ಅನುಭವದ ಯಮುನೆ, ಸಿದ್ಧಾಂತದ ಸರಸ್ವತಿ ಈ ಮೂರರ ತ್ರಿವೇಣೀ ಸಂಗಮವನ್ನು ಔತ್ತರೇಯರಿಗೆ ಒದಗಿಸಿಕೊಟ್ಟು ಉಪಕಾರ ಮಾಡಿದ್ದಾರೆ. ಗಂಗೆ, ಯಮುನೆ, ಬ್ರಹ್ಮಪುತ್ರಾ ಮೊದಲಾದ ನದಿಗಳು ಉತ್ತರದಿಂದ ದಕ್ಷಿಣಕ್ಕೆ ಹರಿದು ಬರುವಂತೆ, ಭಾರತೀಯ ವಾಙ್ಮಯ ಪ್ರಪಂಚದಲ್ಲಿ ಭಕ್ತಿಯ ಗಂಗೆ, ಅನುಭವದ ಯಮುನೆ, ಸಿದ್ಧಾಂತದ ಸರಸ್ವತಿ ದಕ್ಷಿಣದಿಂದ ಉತ್ತರಕ್ಕೆ ಹರಿದಿರುವುದು ಆಶ್ಚರ್ಯಕರವಾದ ಸಂಗತಿಯಾಗಿದೆ. ಈ ಕ್ರಾಂತಿ ತಮಿಳಿನಿಂದ ಕನ್ನಡ, ಕನ್ನಡದಿಂದ ಮರಾಠಿ, ಮರಾಠಿಯಿಂದ ಹಿಂದಿ, ಬಂಗಾಳಿ ಮೊದಲಾದ ಭಾಷೆಗಳಿಗೆ ಹರಿದುದು ಪರಿಶೀಲನಾರ್ಹ. ಈ ವಿಷಯವು ಭಾರತದ ಸಂತ ಸಾಹಿತ್ಯದಲ್ಲಿ ಅತಿ ಮುಖ್ಯವಾದ ಸಂಗತಿಯೆಂಬುದನ್ನು ನಾವು ಅರಿಯಬೇಕು. ಬಂಗಾಳದ ಗೌರಾಂಗಪ್ರಭುವಿನ ವೈಷ್ಣವ ಧರ್ಮ ಪ್ರಚಾರಕ್ಕೆ ಕರ್ಣಾಟಕದ ಶ್ರೀ ಮಧ್ವಾಚಾರ್ಯರ ವೈಷ್ಣವ ಧರ್ಮವು ಸ್ಫೂರ್ತಿಯನ್ನು ಕೊಟ್ಟಿದೆ ಎಂದು ವಿದ್ವಾಂಸರು ತರ್ಕಿಸಿದ್ದಾರೆ. ತಮಿಳು ಮತ್ತು ಕನ್ನಡ ಶರಣರು ಹೇಳಿದ ಸಮಾಜ ಸುಧಾರಣೆಯ ಮಾತುಗಳನ್ನೇ ಮರಾಠಿಯಲ್ಲಿ ಜ್ಞಾನದೇವ, ತುಕಾರಾಮ, ಏಕನಾಥ, ರಾಮದಾಸರೂ, ಹಿಂದಿಯಲ್ಲಿ ಮೀರಾಬಾಯಿ, ಕಬೀರ್‌ದಾಸ್ ಮೊದಲಾದವರೂ ಹೇಳಿದ್ದಾರೆ.

ಕನ್ನಡ–ಬಂಗಾಳಿ ಸಾಹಿತಿಗಳ ಸುಂದರ ಮಿಲನದ ಈ ಸಂತೋಷ ಸಮಯದಲ್ಲಿ ಕರ್ಣಾಟಕದ ಕವಿಗಳು ಸಂಸ್ಕೃತ ವಾಙ್ಮಯಕ್ಕೆ ಸಲ್ಲಿಸಿರುವ ಸೇವೆಯು ಕೂಡ ಸ್ಮರಣಾರ್ಹವಾಗಿದೆ.

೬ನೇ ಶತಕದಲ್ಲಿದ್ದ ಗಂಗರಾಜ ದುರ್ವಿನೀತನು ಬೃಹತ್ ಕಥೆಯನ್ನು ಪ್ರಾಕೃತದಿಂದ ಸಂಸ್ಕೃತಕ್ಕೆ ಭಾಷಾಂತರಿಸಿದ್ದಾನೆ, ಕಲ್ಯಾಣ ವಿಕ್ರಮಾದಿ

ತ್ಯನ ಆಸ್ಥಾನ ಕವಿಗಳು (ಕ್ರಿ. ಶ. ೧೦೭೬-೧೧೨೬) ವಿಜ್ಞಾನೇಶ್ವರನು ಪರಾಶರ ಸ್ಮೃತಿಗೆ 'ಮಿತಾಕ್ಷರಿ' ಎಂಬ ವ್ಯಾಖ್ಯಾನ ಬರೆದಿದ್ದಾನೆ. ಬಿಲ್ಹಣ ಕವಿಯು ವಿಕ್ರಮಾಂಕ ಚರಿತೆ ಬರೆದಿದ್ದಾನೆ. ೧೨ನೇ ಶತಕದ ಚಾಲುಕ್ಯ ಮೂರನೇ ಸೋಮೇಶ್ವರನು ಸಂಸ್ಕೃತದಲ್ಲಿ 'ಮಾನಸೋಲ್ಲಾಸ' ಎಂಬ ವಸ್ತುಕೋಶ ಬರೆದಿದ್ದಾನೆ. ಕೆಳದಿಯ ಬಸವರಾಜನು (೧೬೯೭-೧೭೧೪) ಶಿವತತ್ವ ರತ್ನಾಕರ ಎಂಬ ವಿವಿಧ ವಿಜ್ಞಾನ ಕೋಶವನ್ನು ಸಂಸ್ಕೃತದಲ್ಲಿ ಬರೆದಿದ್ದಾನೆ. ಕೆಳದಿಯ ಆಸ್ಥಾನ ಕವಿಗಳು, ಮರಿತೋಂಟದಾರ್ಯರು, ಮೌನಪ್ಪ ಪಂಡಿತರು, ಷಡಕ್ಷರ ಮಂತ್ರಿ, ನಿರ್ವಾಣಮಂತ್ರಿ ಮೊದಲಾದವರು ಸಂಸ್ಕೃತದಲ್ಲಿ ಅಮೌಲ್ಯವಾದ ವೀರಶೈವ ಗ್ರಂಥಗಳನ್ನು ಬರೆದಿದ್ದಾರೆ.

ವಿಜಯನಗರದಲ್ಲಿ ಪ್ರಖ್ಯಾತರಾದ ಸಾಯಣಾಚಾರ್ಯರು ವೇದಭಾಷ್ಯಗಳನ್ನೂ ವಿದ್ಯಾರಣ್ಯರು ಸರ್ವದರ್ಶನ ಸಂಗ್ರಹ, ಪಂಚದಶಿ ಮೊದಲಾದ ಗ್ರಂಥಗಳನ್ನೂ ಬರೆದು ಸಂಸ್ಕೃತ ಪ್ರಪಂಚಕ್ಕೆ ಮಹೋಪಕಾರ ಮಾಡಿದರು. ಕನ್ನಡಿಗರಾದ ಆಚಾರ್ಯ ಆನಂದತೀರ್ಥರು 'ಪ್ರಸ್ಥಾನತ್ರಯಭಾಷ್ಯ' ಗಳನ್ನು ಬರೆದು ಭಾರತೀಯ ತತ್ವಜ್ಞಾನಕ್ಕೆ ಅಮೋಘ ಕಾಣಿಕೆ ಸಲ್ಲಿಸಿದ್ದಾರೆ. ಬುಕ್ಕರಾಯನ ಸೊಸೆ ಗಂಗಾದೇವಿ 'ವೀರಕಂಪಣರಾಯ ಚರಿತೆ' ಎಂಬಗ್ರಂಥವನ್ನು ಸಂಸ್ಕೃತದಲ್ಲಿ ಬರೆದಿದ್ದಾಳೆ. ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ ವೈಷ್ಣವಾಚಾರ್ಯರಾದ ವ್ಯಾಸರಾಯರು ತರ್ಕ ತಾಂಡವ ಮತ್ತು ನ್ಯಾಯಾಮೃತ ಗ್ರಂಥಗಳನ್ನೂ, ವಾದಿರಾಜರು ಪ್ರಮೇಯ ಸಂಗ್ರಹ ಮತ್ತು ಯುಕ್ತಿಮಲ್ಲಿಕಾ ಗ್ರಂಥಗಳನ್ನೂ ಬರೆದು ದರ್ಶನಪ್ರಪಂಚಕ್ಕೆ ಉಪಕಾರ ಮಾಡಿದ್ದಾರೆ. ನಂದಿಕೇಶ್ವರ, ನೀಲಕಂಠಾಚಾರ್ಯ, ಮಗ್ಗೆ ಮಾಯಿದೇವ, ಶಿವಯೋಗಿ, ನಂಜಣಾಚಾರ್ಯ, ಸಿದ್ಧವೀರ, ಗುರು ಪದ್ಮರಸ, ಷಡಕ್ಷರದೇವ, ಸೋಸಲೆ ರೇವಣಾರಾಧ್ಯ, ಕಳಲೆ ನಂಜರಾಜ ಮೊದಲಾದವರು ಸಂಸ್ಕೃತದಲ್ಲಿ ಅಮೌಲ್ಯವಾದ ವೀರಶೈವ ಗ್ರಂಥಗಳನ್ನು ಬರೆದಿದ್ದಾರೆ. ಕೊಡಗಿನ ಲಿಂಗರಾಜನು ಸಂಸ್ಕೃತದಲ್ಲಿ ವಿವೇಕಚಿಂತಾಮಣಿಯನ್ನು ಭಾಷಾಂತರ ಮಾಡಿದ್ದಾನೆ. ಆಧುನಿಕ ಬಸವಪ್ಪಶಾಸ್ತ್ರಿಗಳು ಕೂಡ ಸಂಸ್ಕೃತದಲ್ಲಿ ಆರ್ಯಾಶತಕ, ತ್ರಿಷಷ್ಟಿ ಪುರಾತನ ಸ್ತೋತ್ರ ಮೊದಲಾದುವನ್ನು ಬರೆದು ವಿಖ್ಯಾತರಾಗಿ

ದ್ದಾರೆ. ಮುಖ್ಯವಾಗಿ ಕಲ್ಯಾಣ ಚಾಲುಕ್ಯ, ವಿಜಯನಗರ, ಮೈಸೂರು ಮತ್ತು ಕೆಳದಿ ರಾಜಮನೆತನದವರು ಸಂಸ್ಕೃತಕ್ಕೆ ಉದಾರವಾಗಿ ಸಹಾಯ ಮಾಡಿದ್ದಾರೆ. ಶ್ರೀ ಶೃಂಗೇರಿ ಮೊದಲಾದ ಮಠಾಧೀಶರೂ ಸಂಸ್ಕೃತಕ್ಕೆ ಉದಾರಾಶ್ರಯವಿತ್ತಿದ್ದಾರೆಂಬುದು ಗಮನಾರ್ಹವಾಗಿದೆ.

ಜೈನ ಕವಿಗಳು ಪ್ರಾಕೃತಾದಿ ಭಾಷೆಗಳಲ್ಲಿದ್ದ ತೀರ್ಥಂಕರರ ಪುರಾಣ ಗಳನ್ನು ಕನ್ನಡಕ್ಕೆ ತಂದಿದ್ದಾರೆ. ವೀರಶೈವ ಕವಿಗಳು, ತಮಿಳು, ತೆಲುಗು, ಮರಾಠಿ ಮತ್ತು ಕನ್ನಡ ಭಾಷೆಗಳ ಬಾಂಧವ್ಯ ಹೆಚ್ಚಿಸಿ,ಸ್ವತಂತ್ರವಾಗಿ ಕಥಾ ವಸ್ತುವನ್ನು ನಿರ್ಮಿಸಿ ಪುರಾಣಗಳನ್ನು ಬರೆದಿದ್ದಾರೆ. ಬ್ರಾಹ್ಮಣ ಕವಿಗಳು ಸಂಸ್ಕೃತದಲ್ಲಿದ್ದ ಭಾರತ, ಭಾಗವತ, ರಾಮಾಯಣಾದಿ ಪ್ರಾಚೀನ ಗ್ರಂಥ ಗಳನ್ನು ಕನ್ನಡದಲ್ಲಿ ಬರೆದು ಉಪಕಾರ ಮಾಡಿದ್ದಾರೆ. ಈ ಜೈನ, ವೀರ ಶೈವ, ಬ್ರಾಹ್ಮಣ ಸಾಹಿತ್ಯದ ಅಪೂರ್ವ ಮಿಲನವು ಕನ್ನಡದ ತ್ರಿವೇಣೀ ಸಂಗಮವೆನಿಸಿ ಕನ್ನಡ ಸಾಹಿತ್ಯವನ್ನು ಹೆಚ್ಚಿಸಿದೆ.

ಒಟ್ಟಿನಲ್ಲಿ ಕನ್ನಡ ಸಾಹಿತ್ಯಕ್ಕಿಂತ ವಯಸ್ಸಿನಲ್ಲಿ ಕಿರಿದಾಗಿರುವ ಬಂ ಗಾಳಿ ಭಾಷಾಸೋದರಿಯನ್ನು ಕನ್ನಡದ ಹಿರಿಯ ಭಗಿನಿಯು ಮಮತೆ ಯಿಂದ ಕಾಣುವುದು ಸಹಜವಾಗಿದೆ. "ಭಾರತದಲ್ಲಿ ಭಾಷಾ ರಾಜ್ಯಗಳ ರಚನೆಯಾಗಿರುವ ಇಂದಿನ ಕಾಲದಲ್ಲಿ, ನಮ್ಮ ರಾಷ್ಟ್ರದ ಎಲ್ಲ ಭಾಷೆಗಳೂ ಭಾರತ ಮಾತೆಯ ದಿವ್ಯ ಕಂಠವನ್ನು ಅಲಂಕರಿಸಿರುವ ಸೌರಭಪೂರ್ಣ ಪುಷ್ಪ ಮಾಲಿಕೆಗಳೆಂದು" ಪೂಜ್ಯ ರಾಷ್ಟ್ರಾಧ್ಯಕ್ಷರು ಕನ್ನಡ ಸಾಹಿತ್ಯ ಪರಿಷತ್ತಿಗೆ ದಯೆಮಾಡಿಸಿದ್ದಾಗ (ತಾ॥ ೧೪-೮-೧೯೫೮) ಅಪ್ಪಣೆಕೊಡಿಸಿರುವ ಸಂಗತಿ ಯನ್ನು ಇಲ್ಲಿ ನಾವು ಸ್ಮರಿಸಿಕೊಳ್ಳಬೇಕಾಗಿದೆ.

ಭಾರತೀಯರ ಭಾಷೆ ಹಲವಾದರೂ ಅವರ ಭಾವ ಮಾತ್ರ ಏಕಮುಖ ವಾಗಿದೆ. ಹಿಮಾಲಯದಿಂದ ಕನ್ಯಾಕುಮಾರಿಯವರೆಗಿರುವ ವಿಶಾಲ ರಾಷ್ಟ್ರ ದಲ್ಲಿ ನಾವು ಈ ಏಕಮುಖವಾದ ಸಂಸ್ಕೃತಿಯನ್ನು ಕಾಣಬಹುದು. ವಾಲ್ಮೀ ಕಿಯ ಸಂಸ್ಕೃತ ರಾಮಾಯಣ, ತುಲಸೀದಾಸರ ಹಿಂದಿ ರಾಮಾಯಣ, ನಾಗಚಂದ್ರನ ಕನ್ನಡ ರಾಮಾಯಣ, ಕಂಬಕವಿಯ ತಮಿಳು ರಾಮಾಯಣ, ಭಾಸ್ಕರ ಕವಿಯ ತೆಲುಗು ರಾಮಾಯಣ, ಕೃತ್ತಿವಾಸನ ಬಂಗಾಳಿ ರಾಮಾ ಯಣ ಎಲ್ಲವೂ ಒಂದೇ ವಿಧವಾದ ಸತ್ಯ ಸಂದೇಶವನ್ನು ಬೀರುತ್ತಿರುವುದು ಗಮನಾರ್ಹವಾಗಿದೆ.

ಸಮಗ್ರ ಭಾರತದ ಹಿತದೃಷ್ಟಿಯಿಂದ ಇಂದು ಭಾರತೀಯ ಭಾಷೆಗಳಲ್ಲಿ ಪರಸ್ಪರ ಬಾಂಧವ್ಯವು ಹೆಚ್ಚುವುದು ಅಗತ್ಯವಾಗಿದೆ. ಕೇಂದ್ರ ಸಾಹಿತ್ಯ ಅಕಾಡಮಿ ಈ ಕಾರ್ಯ ಮಾಡುತ್ತಿದೆ. ಈ ದೆಸೆಯಲ್ಲಿ ಪ್ರಾಚೀನ ಭಾಷೆಯಾದ ಸಂಸ್ಕೃತ, ರಾಷ್ಟ್ರಭಾಷೆಯಾದ ಹಿಂದಿ, ವಿಶ್ವ ಭಾಷೆಯಾದ ಇಂಗ್ಲಿಷ್ ಇವುಗಳ ಸಹಾಯವನ್ನು ಪಡೆಯುವುದು ಎಲ್ಲ ದೇಶ ಭಾಷೆಗಳಿಗೆ ಅವಶ್ಯವಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತು ಸುಮಾರು ೪೬ ವರ್ಷಗಳಿಂದ ಕನ್ನಡ ಭಾಷೆ ಸಾಹಿತ್ಯ ಸಂಸ್ಕೃತಿಗಳ ಏಳಿಗೆಗಾಗಿಯೂ, ಭಾರತೀಯ ಭಾಷಾ ಬಾಂಧವ್ಯದ ಪ್ರಗತಿಗಾಗಿಯೂ ತನ್ನ ಕೈಲಾದಮಟ್ಟಿಗೆ ಶ್ರಮಿಸುತ್ತಿದೆ. ಪರಿಷತ್ತು ಭಾರತದ ಮಹಾನಗರಗಳಾದ, ಮದರಾಸು, ಮುಂಬಯಿ, ಹೈದರಾಬಾದುಗಳಲ್ಲಿ ಸಮ್ಮೇಳನಗಳನ್ನು ನಡೆಸುವ ಮೂಲಕ ಭಾರತದ ಇತರ ಭಾಷಾ ವಿದ್ವಾಂಸರನ್ನು ಕರೆಸಿ ಪರಸ್ಪರ ಭಾಷಾ ಬಾಂಧವ್ಯದ ಕಡೆಗೆ ಮುಂದಡಿಯಿಟ್ಟಿದೆ. ಇಂದು ಅದೇ ದೃಷ್ಟಿಯಿಂದ ಬೆಂಗಳೂರಿನಲ್ಲಿ ನೆರೆದಿರುವ ಅಖಿಲ ಭಾರತ ಬಂಗಾಳಿ ಸಾಹಿತ್ಯ ಸಮ್ಮೇಳನಕ್ಕೆ-ಕನ್ನಡ ಸಾಹಿತ್ಯ ಪರಿಷತ್ತು ಸುಸ್ವಾಗತವನ್ನು ನೀಡಿದೆ. ಸಹೃದಯರಾದ ಬೆಂಗಳೂರಿನ ಮಹಾಜನರೂ ಕರ್ನಾಟಕ ರಾಜ್ಯದ ಪ್ರಜೆಗಳೂ ಈ ಬಂಗಾಳಿ ಸಾಹಿತ್ಯ ಸಮ್ಮೇಳನದಲ್ಲಿ ಉತ್ಸಾಹದಿಂದ ಭಾಗವಹಿಸಿ ತಮ್ಮ ಭಾರತೀಯ ಭಾಷಾ ಬಾಂಧವ್ಯವನ್ನು ತೋರುವರೆಂದು ನಾನು ನಂಬಿರುತ್ತೇನೆ. ಬೆಂಗಳೂರಿನ ಮಹಾಜನರು ರಾಜ್ಯದ ಭಾಷೆಯಾದ ಕನ್ನಡವನ್ನು ಪ್ರೀತಿಸುವಂತೆಯೇ, ತಮಿಳು, ತೆಲುಗು, ಮಲೆಯಾಳಿ, ಮರಾಠಿ, ಹಿಂದಿ, ಉರ್ದು ಮೊದಲಾದ ಇತರ ಭಾರತೀಯ ಭಾಷೆಗಳನ್ನೂ ಪ್ರೀತಿಸಿ ಅವು ಇಲ್ಲಿ ಕಂಗೊಳಿಸುವಂತೆ ಮಾಡಿರುವುದು ನಮ್ಮ ಜನರ ಔದಾರ್ಯಕ್ಕೂ ದೇಶಾಭಿಮಾನಕ್ಕೂ ನಿದರ್ಶನವೆಂದು ನಂಬುತ್ತೇನೆ. ಮೈಸೂರಿನ ಪ್ರಭುವರ್ಯರಾದ ದಿವಂಗತ ಶ್ರೀ ಚಾಮರಾಜ ಒಡೆಯರು, ವಂಗರಾಜ್ಯದ ಸುಪುತ್ರರಾದ ಸ್ವಾಮಿ ವಿವೇಕಾನಂದರನ್ನು ಅಮೆರಿಕಕ್ಕೆ ಕಳಿಸುವಂದು ತೋರಿದ ಬಾಂಧವ್ಯ ಪ್ರೇಮವು ಕರ್ಣಾಟಕಕ್ಕೂ ಬಂಗಾಳಕ್ಕೂ ಸದಾ ಆದರ್ಶವಾಗಿರಲೆಂದು ಹಾರೈಸುತ್ತೇನೆ. ಸರ್ವಭಾಷಾ ಮಯಿಯಾದ ಸರಸ್ವತಿಯು ಎಲ್ಲರಿಗೂ ಮಂಗಳವನ್ನೀಯಲಿ.



ಪ್ರಾಚೀನ ತಮವಾದ

**ಶ್ರೀ ಬಸವೇಶ್ವರ ದೇವಾಲಯ**

ಬಾಗೇವಾಡಿ

ಬಸವೇಶ್ವರನ ತಂದೆ ತಾಯಿಗಳಾದ ಮಾದಿರಾಜ ಮಾದಲಾಂಬಿಕೆಯರು ಮಕ್ಕಳ ಬಯಕೆಯಿಂದ ನಂದೀಶ್ವರನನ್ನು ಕುರಿತು ವ್ರತವನ್ನು ಮಾಡಿದ ಸ್ಥಳ.

# ಕವಿ ಕಾವ್ಯ ಮಹೋನ್ನತಿ

ಭಾರತ ರಾಷ್ಟ್ರದಲ್ಲಿ ಮೈಸೂರು ರಾಜ್ಯವು ಹಲವಾರು ಕಾರಣಗಳಿಂದ ಅಗ್ರಗಣ್ಯವೆನಿಸಿದೆ. ಮೈಸೂರಿನ ಹಿರಿಮೆ ಹಾಗೂ ಗರಿಮೆಗಳಿಗೆ ಇಲ್ಲಿ ನಡೆಯುವ ದಸರಾ ಉತ್ಸವವು ಕೆಲಮಟ್ಟಿಗೆ ಕಾರಣವೆನಿಸಿದೆ. ಮರೆತು ಹೋದ ಮಹಾ ಸಾಮ್ರಾಜ್ಯದ ವೈಭವವನ್ನು ಇಂದು ಜಗತ್ತಿಗೆ ನೆನಪು ಮಾಡಿಕೊಡುವ ಮೈಸೂರಿನ ಈ ನವರಾತ್ರಿ ಮಹೋತ್ಸವವು ನಿಜಕ್ಕೂ ಶ್ಲಾಘ್ಯವಾದುದೇ ಸರಿ. ಅರಮನೆಯ ರಾಜಸಭೆ, ಮಹಾರಾಜರ ಜಂಬೂ ಸವಾರಿ, ದಸರಾ ವಸ್ತುಪ್ರದರ್ಶನ, ಬೃಂದಾವನ, ಚಾಮುಂಡಿಬೆಟ್ಟ, ಮೃಗಾಲಯ, ಶ್ರೀರಂಗಪಟ್ಟಣಗಳ ಸಂದರ್ಶನವು ಸಮಗ್ರ ಭಾರತೀಯರನ್ನೂ ಆಕರ್ಷಿಸುವುದು ಸಹಜವಾಗಿಯೇ ಇದೆ.

ವಿಶಾಲ ಮೈಸೂರು ರಾಜ್ಯರಚನೆಯಾದಮೇಲೆ ಈ ನಮ್ಮ ನಾಡ ಹಬ್ಬ—ದಸರೆಯು ಹತ್ತು ದಿನಗಳಕಾಲ ಮತ್ತಷ್ಟು ವೈಭವದಿಂದ ಮುಂದುವರಿಯುತ್ತಿರುವುದು ಗಮನಾರ್ಹವಾಗಿದೆ. ಇದು ಸರ್ಕಾರದವರ ದೂರ ದೃಷ್ಟಿಯ ನಿದರ್ಶನವೂ ಆಗಿದೆ.

ಮೈಸೂರು ಸರ್ಕಾರದವರು ಈ ದಸರಾ ಮಹೋತ್ಸವ ಕಾಲದಲ್ಲಿ ಸಂಗೀತ, ಸಾಹಿತ್ಯ, ನಾಟಕ, ನೃತ್ಯ, ಆಟಪಾಟ ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಮೈಸೂರಿನಲ್ಲಿಯೂ ನಾಡಿನ ಇತರ ಸ್ಥಳಗಳಲ್ಲಿಯೂ

---

ಸರ್ಕಾರದ ಆಶ್ರಯದಲ್ಲಿ ಮೈಸೂರು ದಸರಾ ಮಹೋತ್ಸವ ಕಾಲದಲ್ಲಿ ರಂಗಾಚಾರ್ಲು ನಗರ ಭವನದಲ್ಲಿ ನಡೆದ ವಿವಿಧ ಭಾಷಾ ಕವಿಸಮ್ಮೇಳನ ಕಾಲದಲ್ಲಿ ಸಮ್ಮೇಳನಾಧ್ಯಕ್ಷರಾದ ಆಸ್ಥಾನವಿದ್ವಾನ್, ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು, (ಅಧ್ಯಕ್ಷರು—ಕನ್ನಡ ಸಾಹಿತ್ಯ ಪರಿಷತ್ತು) ನಿರೂಪಿಸಿದ ಅಧ್ಯಕ್ಷ ಭಾಷಣ. (ತಾ|| ೩೦-೯-೧೯೬೦)

ಏರ್ಪಡಿಸಿ ನಮ್ಮ ನಾಡಹಬ್ಬಕ್ಕೆ ಹೊಸಹುರುಪನ್ನು ಕೊಟ್ಟಿರುತ್ತಾರೆ. ಇದಕ್ಕಾಗಿ ಒಂದು ಸಲಹಾಸಮಿತಿಯನ್ನು ರಚಿಸಿ ಅದರ ಸಲಹೆಗಳನ್ನು ಪಡೆಯುತ್ತಿದ್ದಾರೆ. ಇಂದು ಇಲ್ಲಿ ಸೇರಿರುವ ವಿವಿಧ ಭಾಷಾ ಕವಿಗಳ ಸಮ್ಮೇಳನವು ಈ ನಿಟ್ಟಿನಲ್ಲಿ ಒಂದು ಉತ್ತಮ ಹಾಗೂ ಅಗತ್ಯ ಕಾರ್ಯವೆಂದು ನಾವು ಹೇಳಬಹುದು.

## ಈ ಸಮ್ಮೇಳನದ ಉದ್ದೇಶ

ಸ್ವತಂತ್ರ ಭಾರತದ ಇಂದಿನ ಹಲವಾರು ಸಮಸ್ಯೆಗಳಲ್ಲಿ ಭಾಷಾ ಸಮಸ್ಯೆಯೂ ಒಂದಾಗಿದೆ. ಇದರ ಕರಾಳಸ್ವರೂಪವನ್ನು, ಅಸ್ಸಾಂ, ಪಂಜಾಬ್, ಮಹಾರಾಷ್ಟ್ರಗಳಲ್ಲಿ ನಾವು ನೋಡುತ್ತಿದ್ದೇವೆ. ನೆರೆನಾಡಾದ ಲಂಕಾದ್ವೀಪದಲ್ಲಿಯೂ ಈ ಭಾಷೆಯ ಗೊಂದಲ ಕೇಳಿಬಂದಿದೆ. "ಎಲ್ಲ ಭಾಷೆಗಳೂ ಸರಸ್ವತಿಯ ರೂಪ, ಭಾರತೀಯ ಭಾಷೆಗಳೆಲ್ಲವೂ ನಮ್ಮ ರಾಷ್ಟ್ರಭಾಷೆಗಳು, ಇವೆಲ್ಲ ಭಾಷೆಗಳಿಗೂ ಪರಸ್ಪರ ಸಂಬಂಧವಿದೆ, ಈ ಎಲ್ಲ ಭಾಷೆಗಳ ಸಮಗ್ರ ರೂಪವೇ ಭಾರತೀಯ ವಾಙ್ಮಯ ಸಂಪತ್ತು, ಈ ಎಲ್ಲ ಭಾಷೆಗಳೂ ಪರಸ್ಪರ ಪೂರಕವಾದುವು'' ಎಂಬ ಭಾವವನ್ನು ಕೇಂದ್ರ ಸರ್ಕಾರದವರೂ ಭಾರತ ಸಾಹಿತ್ಯ ಅಕ್ಯಾಡಮಿಯವರೂ ಎಲ್ಲ ರಾಜ್ಯಗಳ ಸಾಹಿತ್ಯಪರಿಷತ್ತಿನವರೂ ಮೇಲಿಂದಮೇಲೆ ಪ್ರಸಾರ ಮಾಡುತ್ತಿದ್ದಾರೆ. ಆದರೂ ಈ ವಿಷಯದಲ್ಲಿ ತಕ್ಕಷ್ಟು ಅರಿವು ರಾಷ್ಟ್ರದಲ್ಲಿ ಪ್ರಸಾರವಾಗುವುದು ಅಗತ್ಯವಾಗಿದೆ. ಇಂದು ಇಲ್ಲಿ ನೆರೆದಿರುವ ವಿವಿಧ ಭಾಷಾ ಕವಿಗಳ ಈ ಸಮ್ಮೇಳನವು ಈ ದೆಸೆಯಲ್ಲಿ ಒಂದು ದೊಡ್ಡ ಮೈಲಿಗಲ್ಲಾಗಿದೆ. "ಭಾರತಾಂಬೆಯ ಹೃದಯವನ್ನು ಅಲಂಕರಿಸಿರುವ ವಿವಿಧ ವರ್ಣದ ಪುಷ್ಪಮಾಲೆಯೇ ನಮ್ಮ ಭಾರತೀಯ ವಿವಿಧ ಭಾಷಾಮಾಲೆ'' ಎಂದು ನಾವು ತಿಳಿದರೆ ಈ ಸಮ್ಮೇಳನದ ಉದ್ದೇಶ ಸಫಲವಾದಂತೆಯೇ ಸರಿ.

## ಕವಿಯ ಮಹತ್ವ

ಕವಿಯು ಜನಾಂಗದ ಪ್ರತಿನಿಧಿ, ಸಾಹಿತ್ಯ ಸಾಮ್ರಾಜ್ಯದ ರಾಯಭಾರಿ, ಜನತಾ ಶಿಕ್ಷಣದ ನಾಡೋಜ, ಸಂಸ್ಕೃತಿ, ಪ್ರತಿಭೆ, ಅನುಭವ, ಪಾಂಡಿತ್ಯ

ಮತ್ತು ಸದ್ಭಾವನೆಗಳ ಸಜೀವ ಭಂಡಾರ. ಬಹು ಜನ್ಮಗಳ ಸಂಸ್ಕಾರ ಬಲ ದಿಂದ ಕವನಕಲೆ ಕಬ್ಬಿಗನಿಗೆ ಹಸ್ತಗತವಾಗುತ್ತದೆ. ಕವಿತೆ ಕಲಿಸಿದರೆ ಬರು ವುದಿಲ್ಲ. ಅದು ಅವರವರ ಸಂಸ್ಕಾರಜನ್ಯವಾಗಿ ತಾನಾಗಿ ಒಲಿದು ಬರತಕ್ಕ ಒಂದು ಅಪೂರ್ವ ಸಂಪತ್ತು. ಶಾಸ್ತ್ರವೆಂಬ ಶ್ರೀರೋಹಣಪರ್ವತವನ್ನು (ಮುತ್ತು ರತ್ನಗಳಿಂದ ಕೂಡಿದ ಬೆಟ್ಟ) ಸಾಹಿತಿಗಳೆಂಬ ಯಾತ್ರಿಕರು ಬಹು ಮಂದಿ ಹತ್ತುತ್ತಾರೆ. ಅವರಲ್ಲಿ ಪರಮೇಶ್ವರನ ಕೃಪೆಗೆ ಪಾತ್ರರಾದವರಿಗೆ ಮಾತ್ರ ಕವಿತಾನಾಮಕ ಚಿಂತಾರತ್ನವು ಲಭಿಸುತ್ತದೆ. ದೇಶಾಟನ, ಪಂಡಿತ ಸಂಭಾಷಣ, ಕಾವ್ಯ ಪರಿಚಯಗಳು ಕವಿತೆಗೆ ಮೂಲವೆನಿಸುತ್ತವೆ. ಋಷಿಯ ಅಂಶವಿಲ್ಲದವನು ಕವಿಯಾಗಲಾರನು 'ನಾನೃಷಿಃ ಕುರುತೇ ಕಾವ್ಯಂ' ಎಂದು ಹಿರಿಯರು ಹೇಳಿದ್ದಾರೆ. ಕ್ಷುದ್ರ ಗುಣವುಳ್ಳವನಿಗೂ ಶಬ್ದಾರ್ಥ ದರಿದ್ರನಿಗೂ ಚಿತ್ತಶುದ್ಧಿಯಿಲ್ಲದವನಿಗೂ ನವ ಕವಿತಾಂಗನೆ ಒಲಿಯಲಾರಳೆಂದು ಮಹಾ ಕವಿ ಹರೀಶ್ವರನು ಹೇಳಿದ್ದಾನೆ. ಮಧುವನ್ನೂ ಮಲೆಯಾನಿಳನನ್ನೂ ವಸಂತ ನನ್ನೂ ಬೆಳುದಿಂಗಳನ್ನೂ ಬೆಲೆಗೊಟ್ಟು ತರಲು ಸಾಧ್ಯವಿಲ್ಲವೆಂದೂ ಇದು ಭುವನದ ಭಾಗ್ಯದಿಂದ ಬರತಕ್ಕುದೆಂದೂ ಒಬ್ಬ ಕವಿ ಹೇಳಿದ್ದಾನೆ.

ಕವಿಗಳು ಅಭಿನವಬ್ರಹ್ಮರೆಂದೂ ಅಘಟನಾಘಟನ ಚತುರರೆಂದೂ, ನಿಗ್ರಹಾನುಗ್ರಹ ಸಮರ್ಥರೆಂದೂ, ರವಿ ಕಾಣದುದನ್ನು ಕವಿಗಳು ಕಾಣುವ ರೆಂದೂ, ಕವಿಗಳು ಶಾಶ್ವತವಾದ ಯಶಶ್ಶರೀರದಿಂದ ಚಿರಂಜೀವಿಗಳೆಂದೂ ಹಿಂದಿನ ಕಬ್ಬಿಗರು ಬಗೆಬಗೆಯಿಂದ ಬಣ್ಣಿಸಿದ್ದಾರೆ.

## ಕವನಕಲೆಯ ಹಿರಿಮೆ

ಸಮಕಾಲೀನ ಜನರ ರನ್ನಗನ್ನಡಿಯೆನಿಸಿದ ಸಾಹಿತ್ಯದಲ್ಲಿ ಕವಿತೆಯು ಸುಮಧುರವಾದುದು. ಸಾಹಿತ್ಯವನ್ನು ಮಾವಿನ ಹಣ್ಣಿಗೆ ಹೋಲಿಸಿದರೆ ಅದರ ರುಚಿಕಟ್ಟಾದ ರಸಕ್ಕೆ ಕವಿತೆಯು ಹೋಲಿಸಲರ್ಹವಾಗಿದೆ. ಅಥವಾ ಸಾಹಿತ್ಯವನ್ನು ವೀಣೆಗೆ ಹೋಲಿಸಿದರೆ ಅದರ ಮಧುರ ಧ್ವನಿಯೇ ಕವಿತೆ ಯೆನಿಸುತ್ತದೆ. ಉತ್ತಮ ಕವಿತೆಯು ಕಾಂತಾಸಮ್ಮಿತವೆನಿಸಿ ಜನತೆಯ ಆತ್ಮೋದ್ಧಾರಕ್ಕೆ ನೆರವಾಗುತ್ತದೆ. ಕವಿ ರಾಘವಾಂಕನು ಉತ್ತಮ ಕಾವ್ಯ

ಲಕ್ಷಣವನ್ನು ಕುರಿತು "ರಸ ಜೀವ, ಭಾವ ಒಡಲು, ಅರ್ಥ ಅವಯುವ, ಶಬ್ದ ವಿಸರವೇ ನುಡಿ, ಅಲಂಕಾರವೇ ತೊಡಿಗೆ, ಸುಲಕ್ಷಣವೆ ಲಕ್ಷಣ, ಪದನ್ಯಾಸವೇ ನಡೆ, ರೀತಿ ಸುಕುಮಾರತೆ, ರಸಿಕತನ ಸುಳಿ, ಸುಖಂ ನಿಳಯಂ" ಎಂದು ಹೇಳಿದ್ದಾನೆ. ಸುಂದರ ಕಾವ್ಯವು ರಸಿಕರ ಮನಸ್ತೃಪ್ತಿಗೆ ಕಾರಣವಾಗಿ ಶ್ರೋತೃಗಳಲ್ಲಿ ಅಥವಾ ವಾಚಕರಲ್ಲಿ ಆನಂದಬಾಷ್ಪಗಳನ್ನು ಸುರಿಸುತ್ತಾ ಕಾವ್ಯಾನಂದವನ್ನು ಉಂಟುಮಾಡುತ್ತದೆ. ಯಾವ ಕಾವ್ಯವು ಕೇಳಿದೊಡ ನೆಯೇ ಕಿವಿಯನ್ನು ಸವಿಯಲ್ಲಿಯೂ ಮನಸ್ಸನ್ನು ಆನಂದದಲ್ಲಿಯೂ ಬುದ್ಧಿ ಯನ್ನು ಉತ್ಸಾಹದಲ್ಲಿಯೂ ರಮಿಸುವಂತೆ ಮಾಡುತ್ತದೆಯೋ ಅದೇ ಸತ್ಕಾವ್ಯವೆಂದು ಮಹಾಕವಿ ಹರೀಶ್ವರನು ಹೇಳುತ್ತಾನೆ. ಭಾವುಕನಾದವನಿಗೆ ಗಂಗಾನದಿಯ ಸ್ನಾನದಿಂದ ಉಂಟಾಗುವ ದಿವ್ಯವಾದ ಭಾವನೆಯೇ ರಸಿಕ ನಾದವನಿಗೆ ಸತ್ಕಾವ್ಯಶ್ರವಣದಿಂದ ಆಗುತ್ತದೆ.

ಉತ್ತಮ ಕಾವ್ಯಕ್ಕೆ 'ಹಳತು ಹೊಸತು' ಎಂಬ ಭೇದವಿಲ್ಲ. ಅಲ್ಲಿ ಗುಣವೇ ಮುಖ್ಯ. "ಪುರಾಣಮಿತ್ಯೇವ ನಸಾಧು ಸರ್ವಂ, ನಚಾಪಿ ಕಾವ್ಯಂ ನವಮಿತ್ಯವದ್ಯಂ" ಎಂದು ಕಾಳಿದಾಸನು ಹೇಳಿದ್ದಾನೆ. ಹಳದಕ್ಕಿಂತ ಹೊಸದು ಆಕರ್ಷಕವಾಗಲು ಸಾಧ್ಯ ಎಂಬುದನ್ನು ಮಹಾಕವಿ ಸುರಂಗನು 'ಮೊದಲು ಹುಟ್ಟಿದ ಕನ್ಯೆಯ ತನುವಿಗಿಂತ, ಅನಂತರ ಮೊಳೆತ ಅವಳ ವಕ್ಷೋಜಗಳು ಸ್ಪೃಹಣೀಯವಾದುವು ಎಂಬ ನಿದರ್ಶನವಿತ್ತು ಹೇಳಿದ್ದಾನೆ. ಒಟ್ಟಿನಲ್ಲಿ ಕವಿತೆ ಗುಣಪ್ರಧಾನವಾಗಿದ್ದರೇನೇ ಅದು ಜನಪ್ರಿಯವೆನಿಸುತ್ತದೆ.

## ಕವಿಗಳು ದೇಶಾಭಿಮಾನಿಗಳು

"ಕವಿಯೇ ಸರ್ವರೊಳುತ್ತಮಂ" ಎಂದು ಹೇಳಿದ ಸೋಮಕವಿಯು ದೂರದೃಷ್ಟಿಯಿಂದಲೇ ಹೇಳಿದ್ದಾನೆ. ಭಾರತದಲ್ಲಿ ಆಸೇತುಹಿಮಾಚಲ ಪರ್ಯಂತವಾಗಿರುವ ಉಜ್ವಲ ಸಂಸ್ಕೃತಿಯ ಸಂವರ್ಧಕರು ನಮ್ಮ ರಾಷ್ಟ್ರದ ಮಹಾ ಕವಿಗಳು. ವಾಲ್ಮೀಕಿ, ವ್ಯಾಸ, ಭಾಸ, ಕಾಲಿದಾಸ, ಬಾಣ, ಭವ ಭೂತಿ, ತುಲಸೀದಾಸ, ಕಬೀರದಾಸ, ಮೀರಾಬಾಯಿ, ತುಕಾರಾಮ, ಪುರಂದರದಾಸ, ನಿಜಗುಣಶಿವಯೋಗಿ, ತ್ಯಾಗರಾಜ, ರವೀಂದ್ರನಾಥ,

ಸರ್ವಜ್ಞ ಇಂತಹ ಸಹೃದಯ ಮಹನೀಯರು. ವರಕವಿಗಳು ಉತ್ತಮ ದೇಶಾಭಿಮಾನಿಗಳೆಂಬುದನ್ನು, ಪಂಪ ಭಾರತ, ಗಿರಿಜಾಕಲ್ಯಾಣ, ಹರಿಶ್ಚಂದ್ರ ಕಾವ್ಯ, ಕಬ್ಬಿಗರಕಾವ ಗಳಂತಹ ಉದಾತ್ತ ಕಾವ್ಯಗಳ ಅಧ್ಯಯನದಿಂದ ನಾವು ಅರಿಯಬಹುದು. ದೇಶಾಭಿಮಾನವು ಉತ್ತಮ ಕವಿಗಳ ಪ್ರಮುಖ ಗುಣವೆನಿಸುತ್ತದೆ.

ಇಂಗ್ಲೆಂಡಿಗೆ ಷೇಕ್ಸ್‌ಪಿಯರ್, ಗ್ರೀಸಿಗೆ ಹೋಮರ್, ಭಾರತಕ್ಕೆ ಠಾಕೂರ್ ಮಾಡಿದ ಸೇವೆಯನ್ನು ಯಾವ ದೇಶಭಕ್ತನು ತಾನೇ ಮಾಡಲು ಸಾಧ್ಯವಾದೀತು ? ಕಾರಣ ಕವಿಗಳ ಸೇವೆ ತ್ರಿಕಾಲಾಬಾಧಿತ ವಾದುದು. ಇಂಗ್ಲೆಂಡ್, ಫ್ರಾನ್ಸ್, ಅಮೆರಿಕಾ, ರಷ್ಯಾ, ಚೀಣ ಮೊದ ಲಾದ ದೇಶಗಳ ಪ್ರಗತಿಗೆ ಆಯಾ ದೇಶದ ಕವಿಗಳ ಹಾಗೂ ಲೇಖಕರ ಸೇವೆಯು ಪ್ರಮುಖವೆನಿಸಿದೆ. ಸುಧಾರಿಸಿದ ಜನರು ಕವಿಗಳನ್ನು ತಮ್ಮ ಪ್ರಾಣಸದೃಶರಾಗಿ ಕಾಣುವುದು ಈ ಕಾರಣದಿಂದಲೇ ಎಂದು ತೋರುತ್ತದೆ. ದೇಶೋನ್ನತಿಯ ಕಾರ್ಯಗಳಲ್ಲಿ ಉತ್ತಮ ಕಾವ್ಯ ರಚನೆಯೂ ಒಂದಾಗಿದೆ. ಕನ್ನಡನಾಡು ೧,೫೦೦ ವರ್ಷಗಳಿಂದ ವಿಖ್ಯಾತ ಕವಿಗಳಿಗೆ ಜನ್ಮವಿತ್ತಿದೆ. ನೃಪತುಂಗ, ಪಂಪ, ರನ್ನ, ಪೊನ್ನ, ಜನ್ನ, ಹರಿಹರ, ರಾಘವಾಂಕ, ಚಾಮ ರಸ, ಕುಮಾರವ್ಯಾಸ, ಲಕ್ಷ್ಮೀಶ, ಷಡಕ್ಷರ, ಮುದ್ದಣ, ಬಸವಪ್ಪಶಾಸ್ತ್ರಿ ಮೊದಲಾದವರು ನಮ್ಮ ಕರ್ಣಾಟಕದ ಹೆಮ್ಮೆಯ ಕವಿಗಳೆನಿಸಿದ್ದಾರೆ. ಇವರ ಸಾಹಿತ್ಯವು ಭಾರತೀಯ ವಾಙ್ಮಯದಲ್ಲಿಯೇ ಉನ್ನತವೆನಿಸಿದೆ. ಹಲವಾರು ಐತಿಹಾಸಿಕ ಕಾರಣಗಳಿಂದ ಹರಿದು ಹಂಚಿಹೋಗಿದ್ದ ಕನ್ನಡ ನಾಡು ಕಟ್ಟಿ ದವರು ಸಾಹಿತಿಗಳು. ಕನ್ನಡನಾಡನ್ನು ಒಂದುಗೂಡಿಸಿದ ಕೀರ್ತಿ ನಮ್ಮ ಕವಿಗಳಿಗೆ ಹಾಗೂ ಸಾಹಿತಿಗಳಿಗೆ ಸೇರಿದುದು. ಕನ್ನಡ ಭಾಷೆ, ಸಾಹಿತ್ಯ ಸಂಸ್ಕೃತಿಗಳನ್ನು ಉಳಿಸಿ ಬೆಳೆಸಿದ ಕೀರ್ತಿ ನಮ್ಮ ಕವಿ ಸಾಹಿತಿಗಳಿಗೆ-ಸೇರಿ ದುದು. ವಿಶಾಲ ಮೈಸೂರು ರಾಜ್ಯ ರಚನೆ ಮಾಡಿದವರು—ಯಾವ ಪ್ರತಿ ಫಲಾಪೇಕ್ಷೆಯೂ ಇಲ್ಲದೆ ಅನಂತಕಾಲದಿಂದ ಶ್ರಮಿಸಿದ—ನಮ್ಮ ಕವಿಗಳು ಹಾಗೂ ಸಾಹಿತಿಗಳು ಎಂಬುದು ಇಲ್ಲಿ ಗಮನಾರ್ಹವಾಗಿದೆ,

## ರಾಜಾಶ್ರಯದಲ್ಲಿ ಸಾಹಿತಿಗಳು

ಕನ್ನಡ ಸಾಹಿತ್ಯವು ಬಹುಮಟ್ಟಿಗೆ ರಾಜಾಶ್ರಯದಲ್ಲಿ ಬಳೆದಿದೆ. ನೃಪ ತುಂಗ, ಕೃಷ್ಣದೇವರಾಯ, ಬಸವಪ್ಪನಾಯಕ, ಚಿಕ್ಕದೇವರಾಜ ಮೊದಲಾದವರು ಕವಿಜನಾಶ್ರಯಿಗಳಲ್ಲದೆ ಸ್ವಯಂ ಕವಿಗಳೆನಿಸಿದ್ದಾರೆ. ಗಂಗ, ಕದಂಬ ಚಾಲುಕ್ಯ, ರಾಷ್ಟ್ರಕೂಟ, ಯಾದವ, ಕಾಕತೀಯ, ಹೊಯ್ಸಳ, ವಿಜಯನಗರ, ಕೆಳದಿ, ಮೈಸೂರು ರಾಜ್ಯಗಳ ಅರಸರು ಸಾಹಿತ್ಯಕ್ಕೆ ಉದಾರಾಶ್ರಯವಿತ್ತಿದ್ದಾರೆ. ಹಾಗೂ ಕನ್ನಡ ಕಾವ್ಯಸಾಮ್ರಾಜ್ಯವನ್ನು ಅಭ್ಯುದಯಗೊಳಿಸಿದ್ದಾರೆ. ಕವಿ ಜನಾಶ್ರಿತರಾಗಿದ್ದಾರೆ.

ನಮ್ಮ ನಾಡಿನ ಹಿರಿಯ ಕವಿಗಳಾದ ಪಂಪ, ರನ್ನ, ಚಾವುಂಡರಾಯ, ಹರಿಹರ, ತಿರುಮಲಾರ್ಯ, ಲಕ್ಕಣಾಮಾತ್ಯ, ಜಕ್ಕಣಾಚಾರ್ಯ, ಮಲ್ಲಿಕಾರ್ಜುನ, ಷಡಕ್ಷರ ಮಂತ್ರಿ, ಕೊಂಡಗುಳಿ ಕೇಶಿರಾಜರು ಕೇವಲ ಕವಿಗಳೇ ಅಲ್ಲ, ರಾಜಾಸ್ಥಾನಗಳಲ್ಲಿ, ಮಂತ್ರಿಗಳು, ದಂಡನಾಯಕರು, ಕರಣಿಕರು, ಮಂಡಲಾಧಿಕಾರಿಗಳು, ಸಂಧಿವಿಗ್ರಹಿಗಳು ಆಗಿ ಮೆರೆದಿದ್ದವರು ಎಂಬುದು ಇಲ್ಲಿ ಸ್ಮರಣಾರ್ಹವಾಗಿದೆ. ಹಾಗೂ ಗಮನಾರ್ಹವಾಗಿದೆ.

ಮೈಸೂರು ರಾಜಮನೆತನವು ಕವಿಗಳಿಗೆ ಮಾತೃಸ್ಥಾನವೆನಿಸಿ ಕೀರ್ತಿಗಳಿಸಿದೆ. ಚಿಕ್ಕದೇವರಾಜರು, ಮುಮ್ಮಡಿ ಕೃಷ್ಣರಾಜರು ಇವರಲ್ಲಿ ವಿಖ್ಯಾತರು. ಇಂದಿನ ರಾಜ್ಯಪಾಲರಾದ ಶ್ರೀಮನ್ಮಹಾರಾಜ ಜಯಚಾಮರಾಜ ಒಡೆಯರು ತತ್ವಜ್ಞಾನಿಗಳೂ ಕವಿಪುಂಗವರೂ ಗ್ರಂಥಕಾರರೂ ಎಂದು ವಿಶ್ವದಲ್ಲಿಯೇ ಪ್ರಖ್ಯಾತಿ ಗಳಿಸಿರುವುದು ಇಲ್ಲಿ ಸ್ಮರಣಾರ್ಹವಾಗಿದೆ.

## ಕವಿ ಸಮ್ಮೇಳನಗಳ ಪ್ರಯೋಜನ

ನಮ್ಮ ರಾಷ್ಟ್ರದಲ್ಲಿ ಶತಮಾನಗಳ ಕಾಲದಿಂದ ಕವಿ ಸನ್ಮಾನ, ಕವಿ ಸಮ್ಮೇಳನಗಳು ನಡೆದುಕೊಂಡು ಬಂದಿವೆ. ಭೋಜರಾಜ, ಶ್ರೀಹರ್ಷ, ಚಾಲುಕ್ಯ ವಿಕ್ರಮ, ಇಮ್ಮಡಿ ದೇವರಾಯ, ಕೃಷ್ಣದೇವರಾಯ, ಪ್ರತಾಪ ರುದ್ರದೇವ, ಕೆಳದಿ ಬಸವರಾಜ, ಚಿಕ್ಕದೇವರಾಜ ಮೊದಲಾದವರು ಕವಿಗಳಿಗೆ

ಕನಕಾಭಿಷೇಕ ಮಾಡಿದ ನಿದರ್ಶನಗಳು ಚರಿತ್ರೆಯಲ್ಲಿವೆ. ವಿಜಯನಗರದ ಕೃಷ್ಣದೇವರಾಯನು ಕವಿ ಅಲ್ಲಸಾನಿ ಪೆದ್ದನ್ನನ ಕಾಲಿಗೆ ಪೆಂಡೆಯ ಹಾಕಿದುದು ಇತಿಹಾಸ ಪ್ರಸಿದ್ಧವಾಗಿದೆ. ಅಕ್ಬರ್ ಮೊದಲಾದ ಮೊಗಲಾಯಿ ಬಾದಷಹರು ಕೂಡ ತಮ್ಮ ದರ್ಬಾರುಗಳಲ್ಲಿ ಕವಿ ಪಂಡಿತರನ್ನು ಕರೆಸಿ "ಮುಷಾಯಿರ"ಗಳನ್ನು (ಕವಿಸಮ್ಮೇಳನಗಳು) ನಡೆಸಿರುತ್ತಾರೆ. ರಾಜಾಸ್ಥಾನಗಳಲ್ಲಿಯೇ ಅಲ್ಲದೆ ಗುರುಮಠಗಳಲ್ಲಿಯೂ ವಿದ್ವತ್ ಸಂಸ್ಥೆಗಳಲ್ಲಿಯೂ ಇಂತಹ ಕವಿಸಮ್ಮೇಳನಗಳು ನಡೆದಿವೆ. ಎರಡು ಕೋಟಿ ಕನ್ನಡ ಜನರ ಏಕೈಕ ಸಂಸ್ಥೆಯಾದ ಸಾಹಿತ್ಯ ಪರಿಷತ್ತು ಕೂಡ ಪ್ರತಿವರ್ಷವೂ ಕವಿಗೋಷ್ಠಿಗಳನ್ನು ನಡೆಸುತ್ತಾ ಬಂದಿದೆ. ಇಂತಹ ಕವಿಗೋಷ್ಠಿಗಳಿಂದ ಜನತೆಯ ಮನಸ್ಸಿನ ಮೇಲೆ ಉತ್ತಮ ಪರಿಣಾಮವಾಗುತ್ತದೆ. ಜನರಲ್ಲಿ ಸಹೃದಯಭಾವ ಅಧಿಕವಾಗುತ್ತದೆ. "ಪಾಪ ಮಿದು ಪುಣ್ಯಮಿದು" ಎಂದು ತಿಳಿವ ವಿವೇಕ ಉದಯವಾಗುತ್ತದೆ. ಸಾಹಿತ್ಯಾಭಿರುಚಿ ಉಂಟಾಗುತ್ತದೆ. ಜನತೆಯ ಮನಸ್ಸು ಪರಿಪಕ್ವವೆನಿಸಿ ಜನ ಸುಸಂಸ್ಕೃತವೆನಿಸುತ್ತದೆ. ಕಾವ್ಯಾನಂದದಿಂದ ಹರ್ಷಿಸುತ್ತದೆ.

## ಕವಿಗಳ ಭಾಷಾಬಾಂಧವ್ಯ

ಪ್ರಾಚೀನ ಸಾಹಿತ್ಯದಲ್ಲಿ ನಮ್ಮ ನಾಡಿನ ಕವಿಗಳು ಭಾರತೀಯ ದೇಶ ಭಾಷೆಗಳಲ್ಲಿ ಪರಸ್ಪರ ಬಾಂಧವ್ಯವನ್ನು ಮೊದಲಿನಿಂದಲೂ ಹೆಚ್ಚಿಸಿಕೊಂಡೇ ಬಂದಿದ್ದಾರೆ. ಮಹಾಕವಿಯೆನಿಸಿದ ಪಾಲ್ಕುರುಕಿ ಸೋಮನು ಕನ್ನಡ, ತೆಲುಗು, ಸಂಸ್ಕೃತ, ತಮಿಳು ಮತ್ತು ಮರಾಠಿಗಳಲ್ಲಿ ಕಾವ್ಯ ರಚನೆ ಮಾಡಿದ್ದಾನೆ. ಇವನ ತೆಲುಗು ಬಸವಪುರಾಣವು, ಕನ್ನಡ, ಸಂಸ್ಕೃತ, ತಮಿಳು ಭಾಷೆಗಳಲ್ಲಿ ಅನುವಾದವಾಗಿದೆ. ಚಾಮರಸನ ಪ್ರಭುಲಿಂಗಲೀಲೆ, ನಿಜಗುಣರ ವಿವೇಕಚಿಂತಾಮಣಿ, ತೆಲುಗು, ತಮಿಳು, ಸಂಸ್ಕೃತ, ಮರಾಠಿ ಭಾಷೆಗಳಲ್ಲಿ ಭಾಷಾಂತರವಾಗಿವೆ. ಚೆನ್ನಬಸವನ "ಕರಣಹಸಿಗೆ" ಮರಾಠಿಯಲ್ಲಿ ಆಗಿದೆ. ತಮಿಳು ಪೆರಿಯಪುರಾಣಂ ಹಾಗೂ ಸತ್ಯೇಂದ್ರಚೋಳನ ಕಥೆ ಕನ್ನಡ ಮತ್ತು ಸಂಸ್ಕೃತಗಳಲ್ಲಾಗಿವೆ. ಕನ್ನಡ ಚೆನ್ನಬಸವಪುರಾಣವು, ತೆಲುಗು ಮತ್ತು ಸಂಸ್ಕೃತ ಭಾಷೆಗಳಲ್ಲಾಗಿದೆ. ಕೆರೆಯ ಪದ್ಮರಸನ ದೀಕ್ಷಾ ಬೋಧೆ ತೆಲುಗಿನಲ್ಲೂ, ಸಾನಂದಚರಿತೆ ಕನ್ನಡದಲ್ಲೂ ಭಾಷಾಂತರವಾಗಿವೆ.

ತಮಿಳಿನ ತಿರುವಳ್ಳುವರನ ಭಾವಗಳು,ಕನ್ನಡಿಗ ಸರ್ವಜ್ಞ, ತೆಲುಗರ ವೇಮನ, ಮರಾಠಿಯ ತುಕಾರಾಂ, ಹಿಂದಿಯ ಕಬೀರ್ ಮತ್ತು ಮೀರಾ ಇವರ ಸಾಹಿತ್ಯದಲ್ಲಿ ಕಾಣಿಸಿಕೊಂಡಿವೆ. ತಮಿಳಿನ ತೇವಾರಂ ಮತ್ತು ತಿರುವಾಚಕಂ ವಿಚಾರಧಾರೆ ಕನ್ನಡ ಶರಣರ ವಚನಗಳಲ್ಲಿ ಕಂಗೊಳಿಸಿದೆ. ಕರ್ನಾಟಕದ ವ್ಯಾಕರಣ ಗ್ರಂಥಗಳು "ಶಬ್ದಾನುಶಾಸನ" ಮತ್ತು "ಭಾಷಾಭೂಷಣಗಳು" ಸಂಸ್ಕೃತದಲ್ಲಿ ವಿರಚಿತವಾಗಿವೆ. ಮಹಲಿಂಗರಂಗನ "ಅನುಭವಾಮೃತ" ಸಂಸ್ಕೃತಕ್ಕೆ ಭಾಷಾಂತರವಾಗಿದೆ. ಜಗನ್ನಾಥದಾಸರ ಹರಿಕಥಾಮೃತಸಾರಕ್ಕೆ ಸಂಸ್ಕೃತದಲ್ಲಿ ಎರಡು ವ್ಯಾಖ್ಯಾನಗಳಾಗಿವೆ. ಬಸವೇಶ್ವರ, ಅಲ್ಲಮಪ್ರಭು, ಪುರಂದರದಾಸರ ವಚನಗಳು ಇತ್ತೀಚೆಗೆ, ಹಿಂದಿ, ಇಂಗ್ಲಿಷ್ ಭಾಷೆಗಳಲ್ಲಿ ಭಾಷಾಂತರವಾಗಿವೆ. ರವೀಂದ್ರರ ಹಾಗೂ ಬಂಕಿಮ ಚಂದ್ರರ ಬಂಗಾಳಿ ಗ್ರಂಥಗಳು ಕನ್ನಡದಲ್ಲಿ ಬಂದಿವೆ. ದಿವಂಗತ ವೆಂಕಟಾಚಾರ್ಯರು ತಮ್ಮ ಕೃತಿಗಳಿಂದ ಬಂಗಾಳಿ ಮತ್ತು ಕನ್ನಡ ಬಾಂಧವ್ಯ ಕುದುರಿಸಿದ್ದಾರೆ. ದಿವಂಗತ ಗಳಗನಾಥರು ಮರಾಠಿಗೂ ಕನ್ನಡಕ್ಕೂ ತಮ್ಮ ಕಾದಂಬರಿಗಳ ಮೂಲಕ ನೆಂಟುತನವನ್ನು ಉಂಟುಮಾಡಿದ್ದಾರೆ. ಶಿವಶರಣ ವಚನಗಳು ಶ್ರೀಮತಿ ಜಯದೇವೀ ಲಿಗಾಡೆಯವರಿಂದ ಮರಾಠಿಗೆ ಅನುವಾದವಾಗಿವೆ. ಈ ಡಾ|| ದಿವಾಕರರ ವಚನ ಶಾಸ್ತ್ರರಹಸ್ಯ, ದಿ|| ಎಂ. ಆರ್. ಶ್ರೀ ಅವರ ನಾಗರಿಕ ಹಿಂದಿಗೆ ಅನುವಾದವಾಗಿವೆ. ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳ ಮಾದೇಶ ಚರಿತ್ರೆ ತಮಿಳಿಗೆ ಭಾಷಾಂತರವಾಗಿದೆ. ಪ್ರಯತ್ನಗಳೆಲ್ಲವೂ ನಮ್ಮ ಕವಿಗಳ ಹಾಗೂ ದೇಶಾಭಿಮಾನಿಗಳ ಭಾರತೀಯ ಭಾಷಾಬಾಂಧವ್ಯದ ಪ್ರಯತ್ನಗಳೆನ್ನಬಹುದು.

## ಸಾಹಿತ್ಯಕ್ಕೆ ಕೇಂದ್ರಸರ್ಕಾರದ ಸಹಾಯ

ಭಾರತ ಸರ್ಕಾರದವರೂ ಕೇಂದ್ರ ಅಕ್ಯಾಡಮಿಯವರೂ ಭಾರತೀಯ ಭಾಷೆಗಳ ಪರಸ್ಪರ ಬಾಂಧವ್ಯವನ್ನು ಹೆಚ್ಚಿಸುವ ಧೋರಣವನ್ನು ಕೈಕೊಂಡಿದ್ದಾರೆ. ಹಿಂದಣ ಕಾಕತೀಯ ಹಾಗೂ ವಿಜಯನಗರದ ಅರಸರು ಕೂಡ ಈ ದೇಶಭಾಷಾ ಬಾಂಧವ್ಯದ ಹಾದಿಯಲ್ಲಿ ಮುಂದುವರಿದು ಕಾರ್ಯವೆಸಗಿದ್ದಾರೆ. ಮೈಸೂರು ಸರ್ಕಾರದವರೂ ಕೂಡ ಅದೇ ನಿಟ್ಟಿನಲ್ಲಿ ಇಂದು

ವಿವಿಧ ಭಾಷೆಗಳ ಕವಿಗಳ ಸಮ್ಮೇಳನವನ್ನು ಏರ್ಪಡಿಸಿದ್ದಾರೆ. ಇದು ನಿಜಕ್ಕೂ ಶ್ಲಾಘ್ಯವಾದ ಕಾರ್ಯವೆನಿಸಿದೆ. ರಾಷ್ಟ್ರದ ಎಲ್ಲ ಭಾಷೆಗಳೂ ವಾಗ್ರೂಪಳಾದ ಸರಸ್ವತಿಯ ರೂಪಗಳೇ ಆಗಿವೆ. ಭಾರತದ ೧೪ ಭಾಷೆಗಳು ಘಟನಾತ್ಮಕ ವಾಗಿ ನಮ್ಮ ರಾಷ್ಟ್ರ ಭಾಷೆಗಳೆನಿಸಿವೆ. ಭಾರತದಲ್ಲಿ ಭಾಷೆಗಳು ಬೇರೆಯಾ ದರೂ ಭಾವ ಒಂದೇ ಆಗಿದೆ. ಕನ್ನಡದ ಪಂಪರಾಮಾಯಣ, ತಮಿಳಿನ ಕಂಬ ರಾಮಾಯಣ, ಕೃತ್ತಿವಾಸ ಓಝುನ ಬಂಗಾಳಿ ರಾಮಾಯಣ ಇವೆಲ್ಲವೂ ವಾಲ್ಮೀಕಿ ರಾಮಾಯಣದ ಸಂತಾನವೇ ಎನಿಸಿ ಒಂದೇ ಸತ್ಯ ಸಿದ್ಧಾಂತವನ್ನು ಬೋಧಿಸುತ್ತಿವೆಯಲ್ಲವೆ ? ಆದುದರಿಂದ ಭಾರತೀಯರು ಭಾಷೆಗಳಿಗಿಂತಲೂ ಭಾವಕ್ಕೆ ಮಹತ್ವ ಕೊಡುವರೆಂಬುದು ಇದರಿಂದ ಸಿದ್ಧಾಂತವಾಗುತ್ತ ದಲ್ಲವೆ ? ಇದನ್ನೇ ಈ ವಿವಿಧ ಭಾಷಾಗೋಷ್ಠಿಗಳಲ್ಲಿಯೂ ನಾವು ಮನಗಾಣ ಬಹುದಾಗಿದೆ.

## ಆಧುನಿಕ ಕವಿಗಳು

ಇಂದಿನ ಕರ್ಣಾಟಕದಲ್ಲಿಯೂ ದೇಶಾಭಿಮಾನಿಗಳಾದ ಕವಿಗಳು ಕಾದಂಬರಿಕಾರರು, ಕತೆಗಾರರು, ಕಲಾವಿದರು ಹಲವರು ಕಾಣಿಸಿಕೊಂಡಿ ದ್ದಾರೆ. ದೇಶದ ಸ್ವಾತಂತ್ರ್ಯಕ್ಕಾಗಿ, ಕರ್ಣಾಟಕ ಏಕೀಕರಣಕ್ಕಾಗಿ ಶ್ರಮಿ ಸಿದ ದೇಶಭಕ್ತ ಸಾಹಿತಿಗಳೂ ಇದ್ದಾರೆ. ತಮಿಳು, ತೆಲುಗು, ಬಂಗಾಳಿ, ಮರಾಠಿ, ಹಿಂದಿ, ಸಂಸ್ಕೃತ, ಇಂಗ್ಲಿಷ್ ಮೊದಲಾದ ಭಾಷೆಗಳನ್ನು ಅಭ್ಯಾಸ ಮಾಡಿ ಅಲ್ಲಿನ ಜ್ಞಾನಭಂಡಾರವನ್ನು ಕನ್ನಡಕ್ಕೆ ಕೊಟ್ಟವರೂ ಇದ್ದಾರೆ. ಇಂಥವರ ಶ್ರಮದ ಫಲವಾಗಿ ಠಾಕೂರರ ಗೀತಾಂಜಲಿ, ಜ್ಞಾನೇಶ್ವರನ ಗೀತಾಬೋಧೆ, ತಿರುವಳ್ಳುವರನ ತಿರುಕ್ಕುರುಳ್, ವೇಮನನ ಪದ್ಯಗಳು, ತುಲಸೀದಾಸನ ರಾಮಾಯಣ ಮೊದಲಾದ ಇತರ ಭಾಷಾ ಗ್ರಂಥಗಳು ಕನ್ನ ಡಕ್ಕೆ ಬಂದಿವೆ. ಇದರಿಂದ ಕನ್ನಡ ಜನರು ಇತರ ಭಾರತೀಯ ಭಾಷೆಗಳ ಪರಿಚಯ ಮಾಡಿಕೊಳ್ಳಲು ಕಾರಣವಾಗಿದೆ.

ಆಧುನಿಕ ಕವಿಗಳಲ್ಲಿ ಮಹಾಕಾವ್ಯ ಬರೆದವರು ಒಬ್ಬರಿಬ್ಬರಾದರೆ, ಭಾವಗೀತೆಗಳನ್ನು ಬರೆದವರು ಹಲವರಿದ್ದಾರೆ. ನೂತನ ಛಂದಸ್ಸು, ವಿಶಾಲ

ಭಾವನೆ, ವಿನೂತನ ದರ್ಶನ, ವಿಶ್ವಬಂಧುತ್ವ, ವಿಮರ್ಶಾದೃಷ್ಟಿ, ಸರ್ವ ಸಮತೆ, ಸ್ವಾಚ್ಛಂದತೆ ಇವು ಇಂದಿನ ಕವಿಗಳ ಹಾಗೂ ಕಲೆಗಾರರ ಮುಖ್ಯ ಲಕ್ಷಣವೆನಿಸಿವೆ. ಇಂದಿನ ಕವಿತೆ, ದೇಶದ ಪ್ರಗತಿಗೆ, ಬಡವರ ಉನ್ನತಿಗೆ, ಯೋಜನೆಗಳ ಸಫಲತೆಗೆ, ಪರಸ್ಪರ ಬಾಂಧವ್ಯಕ್ಕೆ ಸಾಧಕವಾಗಿದ್ದರೆ ಮಾತ್ರ ಕವಿ ಈ ಯುಗದಲ್ಲಿ ಬದುಕಿ ಬಾಳಿದುದು ಸಾರ್ಥಕವೆನಿಸುತ್ತದೆ. ಹಿಂದಿನ ವರಂತೆ ಮತ ಧರ್ಮಗಳ ಉನ್ನತಿಗೆ ಕಾವ್ಯ ರಚನೆ ಮಾಡುವುದಕ್ಕೆ ಇಂದಿನ ಪರಿಸ್ಥಿತಿ ಅನುಕೂಲವಾಗಿಲ್ಲ. ನೂತನ ಹಾಗೂ ವಿಶಾಲ ದೃಷ್ಟಿಯಿಲ್ಲದವರಿಗೆ ಇಂದು ಕಾವ್ಯರಚನೆ ಫಲಪ್ರದವೆನಿಸುವುದಿಲ್ಲ. ಕವಿಗಳ ಪಾಂಡಿತ್ಯಕ್ಕಿಂತ ಅವರ ಚಿತ್ತಶುದ್ಧಿಗೇ, ಅವರ ಉದ್ದೇಶಕ್ಕೆ ಇಂದು ಹೆಚ್ಚು ಮಹತ್ವವಿದೆ.

## ನಮ್ಮ ಸರ್ಕಾರದ ಸಾಹಿತ್ಯಪ್ರೇಮ

ಕೇಂದ್ರಸರ್ಕಾರದ ನೀತಿಗನುಸಾರವಾಗಿ ಮೈಸೂರು ಸರ್ಕಾರದವರು ಕನ್ನಡ, ಸಂಸ್ಕೃತ, ಹಿಂದಿ ಮೊದಲಾದ ಭಾಷೆಗಳಿಗೂ, ಸಂಗೀತ, ನಾಟಕ, ಚಿತ್ರ, ನೃತ್ಯ ಮೊದಲಾದ ಕಲೆಗಳಿಗೂ ಉದಾರಾಶ್ರಯವೀಯುತ್ತಿರುವುದು ಶ್ಲಾಘ್ಯವಾಗಿದೆ. ಸರ್ಕಾರದವರು ಕನ್ನಡದಲ್ಲಿ ವಿಶ್ವಕೋಶ ರಚಿಸುವುದು, ಪರಿಷತ್ತಿನ ಕನ್ನಡ ಕೋಶಕ್ಕೆ ನೆರವಾಗುವುದು, ಉತ್ತಮ ಗ್ರಂಥಗಳನ್ನು ಪ್ರಕಟಿಸುವುದು, ವಿದ್ವಾಂಸರನ್ನು ಪ್ರೋತ್ಸಾಹಿಸುವುದು, ಕಲಾವಿದರಿಗೆ ನೆರ ವೀಯುವುದು ಮೊದಲಾದ ವಿಧಾನಗಳಿಂದ ಸಾಹಿತ್ಯ ಸಂಸ್ಕೃತಿಗಳಿಗೆ ಮಿಗಿ ಲಾದ ಪ್ರೋತ್ಸಾಹವೀಯುತ್ತಿದ್ದಾರೆ; ಇದು ಶ್ಲಾಘನೀಯವಾಗಿದೆ ಈ ಸಲದ ದಸರಾ ಉತ್ಸವದಲ್ಲಿ ನಮ್ಮ ಸರ್ಕಾರದವರು ಕನ್ನಡ ಸಾಹಿತ್ಯ ಪರಿಷ ತ್ತಿಗೆ ಅವಾರ್ಡನ್ನು ಕೊಟ್ಟು ಗೌರವಿಸಿದುದು, ಅದರ ಅಧ್ಯಕ್ಷರನ್ನು ಈ ವಿವಿಧ ಭಾಷಾ ಕವಿ ಗೋಷ್ಠಿಗೆ ಅಧ್ಯಕ್ಷರನ್ನಾಗಿ ಮಾಡಿದುದು ಕನ್ನಡ ಸಾಹಿತ್ಯ ಪರಿಷತ್ತಿಗೆ ಕೊಟ್ಟ ಶ್ರೇಷ್ಠ ಗೌರವವೆಂದು ನಾನು ನಂಬಿರುತ್ತೇನೆ.

ನಾನು ಈ ಮೇಲೆ ಕಂಡ ಭಾಷಣದಲ್ಲಿ ಕನ್ನಡವನ್ನು ಕುರಿತು ಹೇಳಿದ ಮಾತುಗಳು, ತೆಲುಗು, ತಮಿಳು, ಮಲೆಯಾಳ, ಮರಾಠಿ, ಹಿಂದಿ,

ಉರ್ದು ಮೊದಲಾದ ಎಲ್ಲ ಸೋದರ ಭಾಷೆಗಳಿಗೂ ತಕ್ಕಮಟ್ಟಿಗೆ ಅನ್ವಯಿಸು ತ್ತವೆ ಎಂದು ಹೇಳಬಯಸುತ್ತೇನೆ.

ಇಂದು ಇಲ್ಲಿ ಕವಿತೆಗಳನ್ನು ಓದಿದ, ಕನ್ನಡ, ತೆಲುಗು, ತಮಿಳು, ಉರ್ದು, ಹಿಂದಿ ಸಂಸ್ಕೃತ, ಮರಾಠಿ ಭಾಷೆಗಳ ಕವಿಗಳೆಲ್ಲರೂ ಉತ್ತಮವಾಗಿ ಕೃತಿ ರಚನೆ ಮಾಡಿದ್ದಾರೆಂದು ಹೇಳಲು ನಾನು ಹರ್ಷಿಸುತ್ತೇನೆ. ಇಂತಹ ಕವಿ ಸಮ್ಮೇಳನಗಳು ಅಥವಾ "ಮುಷಾಯಿರ"ಗಳು ಜನಜೀವನದ ಸ್ಫೂರ್ತಿಗೂ ನಾಡಿನ ಉನ್ನತಿಗೂ ನೆರವಾಗುವುದೆಂದು ನನ್ನ ನಂಬಿಕೆಯಿದೆ. ಸಹೃದಯರು ಇದರ ಲಾಭ ಪಡೆಯಲಿ.

ಈ ವಿವಿಧ ಭಾಷಾ ಕವಿಸಮ್ಮೇಳನದಲ್ಲಿ ನನ್ನ ವಿನೂತನ ಕವಿತೆಯಾದ "ಓ ಸೃಷ್ಟಿ ಶಕ್ತಿ !'' ಎಂಬ ಕವನವನ್ನು ಓದಬಯಸುತ್ತೇನೆ.

## ಓ ! ಸೃಷ್ಟಿ ಶಕ್ತಿ !!

ಸಾಗರದ ನಡುವೆ ಧರೆ ಕರಗದಂತಿರಿಸಿರುವೆ ।
ಲೋಗರಿಗೆ ಅಚ್ಚರಿಯ ತೋರಿಸಿರುವೆ ॥
ಆಗಸಕೆ ಬೋದಿಗೆಗಳಿಲ್ಲದಂತಿರಿಸಿರುವೆ ।
ಮೂಗರೆನಿಸಿಹೆ ಜಗದ ಪಂಡಿತರನು ॥ ೧ ॥

ಸೂರಿಯನ ಕಿರಣದಿಂ ಜಲಧಿಯನು ಕಾಯಿಸುವೆ ।
ನೀರಿಗಾಧಾರವಹ ಮೋಡವಾಗಿಸುವೆ ॥
ಭೂರಿ ಮಾರುತನಿಂದ ಮೋಡಗಳ ಚದುರಿಸುವೆ ।
ಕಾರುಗಾಲವು ಎನಿಸಿ ಮಳೆಯ ಸುರಿಸಿರುವೆ ॥ ೨ ॥

ನದಿಯರೂಪದಿ ನೀರು ಸಾಗರವ ಸೇರುವುದು ।
ಕುದಿದು ರವಿಕಿರಣದಿಂ ಮತ್ತೆ ಮಳೆಯಹುದು ॥
ಪದುಮಗಂಧಿಯೆ ಸೃಷ್ಟಿದೇವಿಯೇ ನಿನ್ನರಿವ
ಎದೆಗಾರಿಕೆಯು ಜಗದ ನರರಿಗೆಲ್ಲಿಹುದು ? ॥ ೩ ॥

ಭೂಮಿಯನು ಸುತ್ತಿಸುವೆ ರವಿಗ್ರಹದ ಸುತ್ತಲೂ।
ಶೋಮನನು ತಿರುಗಿಸುವೆ ಧರೆಯ ಸುತ್ತ ॥
ರಾಮಣೀಯಕವೆನಿಪ ನಕ್ಷತ್ರ ನಗುತಿಹವು ।
ಭೂಮಿ ಜನರಿಗೆ ತಮ್ಮ ನೆಲೆಯ ತಿಳಿಸದಲೆ ॥ ೪ ॥

ಹಗಲು ರಾತ್ರಿಗಳನ್ನು ತಪ್ಪದೇ ಬರಿಸುತಿಹೆ ।
ಬಗೆಯೆ ಋತುಮಾನಂಗಳಂತೆ ಬಹವು ॥
ಜಗದ ಪ್ರಾಣಿಗಳನ್ನು ಭವಚಕ್ರದೊಳಗಿರಿಸಿ ।
ಬಗೆಬಗೆಯ ರೂಪದಿಂ ನಡೆಸುತಿರುವೆ ॥ ೫ ॥

ಸೂರ್ಯ ಚಂದ್ರರ ಬೆಳಕ ಜಗಕೆ ನೀಡುತ್ತಿರುವೆ ।
ಆರ್ಯ ಹೃದಯದಿ ಕುಳಿತು ವೇದ ಹೇಳಿಸುವೆ ।
ಕ್ರೌರ್ಯದಿಂ ಮಾನವರ ಮರಣಕೊಳಗಾಗಿಸುವೆ ।
ಧೈರ್ಯದಿಂ ಯುದ್ಧಭೂಮಿಯೊಳವರ ನಿಲ್ಲಸುವೆ ॥ ೬ ॥

ಮಳೆಯ ರೂಪದಿ ಜಗಕೆ ಜೀವಾಣು ಬರುತಿಹವು ।
ಬೆಳೆಯ ಮೂಲದಿ ಸೇರಿ ಧಾನ್ಯವೆನಿಸುವುವು ॥
ಇಳೆಯೊಳಗೆ ತಂದೆಯಾ ಧಾತುವೊಳು ಸೇರುವುವು ।
ಮೊಳೆಯುವುವು ತಾಯಿಗರ್ಭದಿ ಜೀವ ತಾವು ॥ ೭ ॥

ನವಿಲುಗಳ ಕುಣಿಸುತಿಹೆ ಕೋಗಿಲೆಯ ಹಾಡಿಸುವೆ ।
ಕವಿಜನರ ಮುಖದಿ ಕಾವ್ಯಗಳ ಹೇಳಿಸುವೆ ॥
ಬುವಿಯ ಸೌಂದರ್ಯದಿಂ ಪರಿಶೋಭಿಸುತ್ತಿರುವೆ ।
ಸುವಿವೇಕ ಸೃಷ್ಟಿ ಶಕ್ತಿಯೆ ನೀನದೆಲ್ಲಿರುವೆ ? ॥ ೮ ॥

ಬರಗಾಲವಾಗಿಸುವೆ ಭೂಕಂಪವಾಗಿಸುವೆ ।
ಬಿರುಗಾಳಿಯೆನಿಸಿ ಬರಸಿಡಿಲು ನೀನೆನಿಸಿ ॥
ನರರ ದಿಗ್‌ಭ್ರಾಂತಿಯುಂಗೊಳಿಸಿ ನೀ ನಗುತಿರುವೆ ।
ಸರಸತಿಯು ಮಾಲಕುಮಿ ಗಿರಿಜೆ ಎನಿಸಿರುವೆ ॥ ೯ ॥

ಹಾವು ಮುಂಗುಸಿಗಳನು ಗೋವು ವ್ಯಾಘ್ರಂಗಳನು ।
ಮಾವು ಬೇವುಗಳನ್ನು ನೀ ಸೃಷ್ಟಿಸಿರುವೆ ॥
ಕೋವಿದರನೆಲ್ಲರನು ಮೂಕರೆಂದೆಸಿರುವೆ ।
ಓ ವೊ ! ಏನಚ್ಚರಿಯೋ ಈ ನಿನ್ನ ಸೃಷ್ಟಿ ! ! ॥ ೧೦ ॥

ಗುರುವಾಗಿ ಕರುಣಿಸುವೆ ಹರನಾಗಿ ರಕ್ಷಿಸುವೆ ।
ಪರಿಪರಿಯ ರೂಪದಿಂ ಕಂಗೊಳಿಸುತಿರುವೆ ॥
ಹರಾಹರಾ ! ನಿನ್ನಳವ ನರಿಯಲಾರಿಂದಹುದು ।
ಧರೆಯ ಪೊರೆಯುತ್ತಿರುವ ಜಗದಾದಿಶಕ್ತಿ ! ॥ ೧೧ ॥

ಸೃಷ್ಟಿಮಾತೆಯೆ ನಿನ್ನ ಗುಟ್ಟನರಿಯಲು ನಾನು ।
ಎಷ್ಟೊಕಾಲದಿ ತಪವ ಗೆಯ್ದೆನಮ್ಮ ॥
ಇಷ್ಟಾದರೂ ನಿನ್ನ ಸಾಮರ್ಥ್ಯವರಿಯಲಿಕೆ ।
ಶಿಷ್ಟಮಾರ್ಗದಿ ಕಾಲ ಕಳೆವೆನಮ್ಮ ॥ ೧೨ ॥



# ಬಸವೇಶ್ವರ ಹಾಗೂ ವಚನ ಸಾಹಿತ್ಯ

ಪ್ರಾಚೀನ ಕನ್ನಡ ಸಾಹಿತ್ಯವನ್ನು ಸಿಂಹಾವಲೋಕನ ದೃಷ್ಟಿಯಿಂದ ಪರಿಶೀಲಿಸಿದರೆ ಮೂವರು ಮಹಾಕವಿಗಳ ಕಾಲ ನಮ್ಮ ಕಣ್ಣು ಮುಂದೆ ನಿಲ್ಲುತ್ತದೆ. ಹತ್ತನೇ ಶತಮಾನದ ಪಂಪ ಮಹಾಕವಿ ಜೈನ ಸಾಹಿತ್ಯದ ಆಚಾರ್ಯ ಪುರುಷನಾಗಿ, ಕನ್ನಡದ ಆದಿಮ ಮಹಾಕವಿಯಾಗಿ ನಮ್ಮ ಕಣ್ಣು ಮುಂದೆ ಕಂಗೊಳಿಸುತ್ತಿದ್ದಾನೆ. ಅವನ ಪಂಪಭಾರತ, ಆದಿ ಪುರಾಣ ಎಂಬ ಎರಡು ಮಹಾಕಾವ್ಯಗಳು ಕನ್ನಡ ಸಾಹಿತ್ಯದ ಉತ್ತುಂಗ ಶಿಖರಗಳಂತೆ ಪರಿಶೋಭಿಸುತ್ತಿವೆ. ಹನ್ನೆರಡನೇ ಶತಮಾನದ ಕ್ರಾಂತಿ ಯುಗ ಬರುವವರೆಗೆ ಆದಿಪಂಪನ ಸಾಹಿತ್ಯಯುಗ ಧಾರಾಳವಾಗಿ ಮುಂ ದುವರಿಯುತ್ತದೆ. ಅನಂತರ ಹನ್ನೆರಡನೇ ಶತಮಾನದ ಉತ್ತರಾರ್ಧದಲ್ಲಿ ಕಾಲಚುರ್ಯ ಸಾಮ್ರಾಜ್ಯದ ಮುಖ್ಯಮಂತ್ರಿಯಾಗಿ ಶ್ರೀ ಬಸವೇಶ್ವರರು ಅಧಿಕಾರವನ್ನು ವಹಿಸಿಕೊಂಡಮೇಲೆ ಧರ್ಮ ಮತ್ತು ಸಮಾಜ ಕ್ರಾಂತಿಯ ಜತೆಯಲ್ಲಿ ಸಾಹಿತ್ಯಕ್ರಾಂತಿಯೂ ಆದುದನ್ನು ನಾವು ಚರಿತ್ರೆಯಲ್ಲಿ ತಿಳಿದಿರು ತ್ತೇವೆ. ಈ ಕಾಲದಲ್ಲಿ ಪಂಪಯುಗದ ಪ್ರೌಢ ಚಂಪೂಶೈಲಿಯು ಹಿಮ್ಮೆಟ್ಟಿ ಜನಸಾಮಾನ್ಯರಿಗೆ ಅರ್ಥವಾಗುವ ಸುಲಭವಾದ ಭಾಷೆಯಲ್ಲಿ ವಚನ, ರಗಳೆ, ಸಾಂಗತ್ಯ, ತ್ರಿಪದಿ, ಹಾಡುಗಳು ಮುಂದೆ ಬಂದುದನ್ನು ನಾವು ಕಾಣ ಬಹುದು. ಇದನ್ನು ಬಸವಯುಗ ಎಂದು ವಿದ್ವಾಂಸರು ಕರೆದಿದ್ದಾರೆ. ಈ ಯುಗದ ಪ್ರಭಾವವು ೧೬ನೇ ಶತಮಾನದವರೆಗೆ ಅವ್ಯಾಹತವಾಗಿ ನಡೆದು ಬಂದುದನ್ನು ನಾವು ಸಾಹಿತ್ಯ ಚರಿತ್ರೆಯಲ್ಲಿ ಓದುತ್ತೇವೆ. ಅನಂತರ ವಿಜ ಯನಗರದ ಪ್ರೌಢದೇವನ ಆಸ್ಥಾನ ಕವಿಯಾಗಿದ್ದ ಕನ್ನಡ ಭಾರತದ ಕರ್ತೃ ಕುಮಾರವ್ಯಾಸನು ಕನ್ನಡ ಸಾಹಿತ್ಯ ಘಟ್ಟದಲ್ಲಿ ಎತ್ತರದ ಶಿಖರವಾಗಿ ಕಾಣಿಸಿ ಕೊಂಡಿದ್ದಾನೆ. ಇದನ್ನು ಕುಮಾರವ್ಯಾಸಯುಗ ಎಂದು ಪ್ರವೀಣರು ಕರೆದಿದ್ದಾರೆ. ಈ ಕಾಲದಲ್ಲಿ ರಾಮಾಯಣ, ಭಾರತ, ಭಾಗವತ, ಮೊದ ಲಾದ ಪ್ರಾಚೀನ ಮಹಾಕಾವ್ಯಗಳೂ, ವೈಷ್ಣವ ಧರ್ಮಗ್ರಂಥಗಳೂ, ದಾಸ



ಕರ್ನಾಟಕ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಅಭಿವರ್ಧಕರಾದ
ಭಕ್ತಿಭಂಡಾರಿ ಬಸವೇಶ್ವರರು, ಕಲ್ಯಾಣಪಟ್ಟಣ

ಸಾಹಿತ್ಯವೂ ಮುಂದೆ ಬಂದು ೧೯ನೆಯ ಶತಮಾನದವರೆಗೆ ತನ್ನ ಪ್ರಭಾವ ವನ್ನು ಮುಂದುವರಿಸಿತೆಂದು ಹೇಳಬಹುದು. ಒಟ್ಟಿನಲ್ಲಿ ಜೈನ ಧರ್ಮದ ಹಿನ್ನೆಲೆಯಲ್ಲಿ ಪಂಪ ಮಹಾಕವಿಯೂ, ವೀರಶೈವ ಧರ್ಮದ ಹೆಚ್ಚಳದಲ್ಲಿ ಬಸವೇಶ್ವರರೂ, ವೈಷ್ಣವ ಧರ್ಮದ ಅಭ್ಯುದಯದಲ್ಲಿ ಕುಮಾರವ್ಯಾಸನೂ ಅಗ್ರಗಣ್ಯರಾಗಿ, ಯುಗಪುರುಷರಾಗಿ ಪರಿಶೋಭಿಸಿದ್ದಾರೆ. ಪ್ರಾಚೀನ ಕನ್ನಡ ಸಾಹಿತ್ಯದ ಈ ಮೂರು ಧರ್ಮಗಳ ಒಕ್ಕೂಟವನ್ನೂ ಕನ್ನಡದ ತ್ರಿವೇಣೀ ಸಂಗಮ ಎಂದು ಕರೆದಿರುವುದರಲ್ಲಿ ತುಂಬಾ ಔಚಿತ್ಯವಿದೆ. ೨೦ನೆಯ ಶತಮಾನದಲ್ಲಿ ಒಂದು ನೂತನ ಸಾಹಿತ್ಯ ಕ್ರಾಂತಿಯಾಗಿದೆ. ಇದು ಪಾಶ್ಚಾತ್ಯರ ಸಂಪರ್ಕದಿಂದಾದು. ಇದನ್ನು ನೂತನ ಸಾಹಿತ್ಯಯುಗ ಎನ್ನಬಹುದು. ಪ್ರಕೃತ ಬಸವೇಶ್ವರರು ಮತ್ತು ಅವರ ಸಂಪ್ರದಾಯದ ಶಿವಶರಣರು ನಿರ್ಮಿಸಿದ ವಚನ ಸಾಹಿತ್ಯದ ವಿಷಯವಾಗಿ ಇಲ್ಲಿ ಕೆಲವು ಮಾತುಗಳನ್ನು ಹೇಳಬೇಕಾಗಿದೆ.

ಕರ್ನಾಟಕದ ಚರಿತ್ರೆಯಲ್ಲಿ ಹಲವಾರು ದೃಷ್ಟಿಯಿಂದ ಪ್ರಾಮುಖ್ಯತೆ ಯನ್ನು ಪಡೆದಿರುವ ಯುಗಪುರುಷ ಬಸವಣ್ಣನವರು ಬಾಗೆವಾಡಿಯಲ್ಲಿ ಹುಟ್ಟಿ, ಕೂಡಲ ಸಂಗಮದಲ್ಲಿ ಬಳೆದು, ಕಲ್ಯಾಣಪಟ್ಟಣದಲ್ಲಿ ವಿಖ್ಯಾತರಾದ ಸಂಗತಿ ಈಗ ಎಲ್ಲರಿಗೂ ತಿಳಿದಿದೆ. [1132-1168] ಬಸವೇಶ್ವರರ ಚಳ ವಳಿಯು ವಿಶ್ವಧರ್ಮದ ಹೆಗ್ಗುರಿಯಲ್ಲಿ, ವೀರಶೈವ ದರ್ಶನದ ಹಿನ್ನೆಲೆಯಲ್ಲಿ ಕರ್ನಾಟಕದ ಅಭ್ಯುದಯದ ಹಾದಿಯಲ್ಲಿ ನಡೆದುದರಿಂದ ಅತ್ತ ವೀರಶೈವ ಧರ್ಮಕ್ಕೂ ಇತ್ತ ಕನ್ನಡ ಸಾಹಿತ್ಯಕ್ಕೂ ಜತೆಜತೆಯಲ್ಲಿಯೇ ಉಪಕಾರವಾ ಯಿತೆಂದು ಹೇಳಬಹುದು. ಬಸವಣ್ಣನವರೂ ಅವರ ನೇತೃತ್ವದಲ್ಲಿ ಅನು ಭವ ಮಂಟಪದಲ್ಲಿ ಕಂಗೊಳಿಸಿದ ಅಸಂಖ್ಯಾತ ಶರಣ ಶರಣೆಯರೂ ಕನ್ನಡ ದಲ್ಲಿ ವಚನಗಳನ್ನು ರಚಿಸಿದುದರಿಂದ ಕನ್ನಡ ಸಾಹಿತ್ಯಕ್ಕೆ ಮಹೋಪಕಾರ ವಾಯಿತು. ಸುಮಾರು ಮುನ್ನೂರು ಮಂದಿ ವಚನಕಾರರು ಕನ್ನಡದಲ್ಲಿ ಆಗಿಹೋಗಿರುವರೆಂಬುದನ್ನು ನೆನಸಿಕೊಂಡಾಗ ಆ ವಚನಶಾಸ್ತ್ರದ ಸಂಪತ್ತು ಮತ್ತು ಪ್ರಭಾವ ಎಷ್ಟೊಂದು ಅಧಿಕವಾದುದೆಂಬುದನ್ನು ನಾವು ಅರಿಯ ಬಹುದು. ಶಿವಶರಣರ ವಚನಗಳು, ಕನ್ನಡ ಉಪನಿಷತ್ತುಗಳು ಎಂದು

ಕವಿಚರಿತ್ರೆಕಾರರೂ, ಕನ್ನಡ ಶಿವಾಗಮಗಳು ಎಂದು ವಚನಶಾಸ್ತ್ರ ರಹಸ್ಯ ಕರ್ತೃಗಳೂ ಹೇಳಿರುವುದನ್ನು ನಾವಿಲ್ಲಿ ಸ್ಮರಿಸಿಕೊಳ್ಳಬಹುದು.

ಕನ್ನಡದಲ್ಲಿ ವಚನಗಳನ್ನು ರಚಿಸುವ ಕಾರ್ಯ ಬಸವೇಶ್ವರನಿಗಿಂತ ಕೊಂಚ ಹಿಂದೆ ದೇವರ ದಾಸಿಮಯ್ಯ ಮತ್ತು ಶಂಕರದಾಸಿಮಯ್ಯಗಳ ಕಾಲದಿಂದಲೇ (ಕ್ರಿ. ಶ. 1040) ಪ್ರಾರಂಭವಾಯಿತೆಂದು ಹೇಳಬಹುದು. ಅಲ್ಲಿಂದ ಮುಂದೆ ನಿಜಗುಣದೇವ, ಏಕಾಂತದ ರಾಮಯ್ಯ, ಕೊಂಡಗುಳಿ ಕೇಶಿರಾಜ, ಸಕಲೇಶ, ಮಾದರಸ ಮೊದಲಾದ ವಚನಕಾರರು ನಮಗೆ ಕಾಣಿಸಿಕೊಂಡಿದ್ದಾರೆ. ಇದನ್ನು ವಚನ ಶಾಸ್ತ್ರದ ಉಗಮದ ಕಾಲವೆಂದು ನಾವು ಕರೆಯಬಹುದು. ಇಲ್ಲಿಂದ ಮುಂದೆ ಸುಮಾರು ಒಂದು ಶತಮಾನದ ಅನಂತರ ಬಸವಣ್ಣನವರು ಕಲ್ಯಾಣದಲ್ಲಿ ಮುಖ್ಯಮಂತ್ರಿಗಳಾಗಿ, ಅನುಭವ ಮಂಟಪದ ಸ್ಥಾಪನೆಯಾದ ಮೇಲೆ ಹತ್ತುವರ್ಷಗಳ ಅವಧಿಯಲ್ಲಿ [ಕ್ರಿ. ಶ. 1158–1168] ಈ ವಚನ ಶಾಸ್ತ್ರವು ಸರ್ವಾಂಗ ಸುಂದರವಾಗಿ ಅಭಿವೃದ್ಧಿಯನ್ನು ಹೊಂದಿತು. ಈ ಕಾಲದಲ್ಲಿ ಶಿವಶರಣರಲ್ಲಿ ಅಗ್ರಗಣ್ಯರಾದ ಬಸವೇಶ್ವರ, ಚೆನ್ನಬಸವೇಶ್ವರ, ಪ್ರಭುದೇವರು, ಅಕ್ಕಮಹಾದೇವಿ, ಮಡಿವಾಳ ಮಾಚಯ್ಯ, ಘಟ್ಟಿವಾಳಯ್ಯ, ಹಡಪದ ಅಪ್ಪಣ್ಣ–ಲಿಂಗಮ್ಮ, ನೀಲಾಂಬಿಕೆ, ರೇಮವ್ವೆ, ಸತ್ಯಕ್ಕ, ಮೋಳಿಗೆ ಮಾರಯ್ಯ–ರಾಣಿ ಮಹಾದೇವಮ್ಮ ಮೊದಲಾದವರ ವಚನಗಳನ್ನು ಇಲ್ಲಿ ನಾವು ಸ್ಮರಿಸಬಹುದು. ಈ ಮೇಲೆ ಕಂಡ ವಚನಕಾರರು ವೀರಶೈವ ಪುರಾಣಗಳಲ್ಲಿ ಅವತಾರಪುರುಷರೆಂದೂ, ಪವಾಡ ಪುರುಷರೆಂದೂ, ಮಹಿಮಾಶಾಲಿಗಳೆಂದೂ ಬಣ್ಣಿಸಲ್ಪಟ್ಟಿರುವರು. ಈ ಕಾಲವು ವಚನ ಸಾಹಿತ್ಯದ ಸುವರ್ಣ ಯುಗವೆನಿಸಿದೆ.

ವಚನ ಶಾಸ್ತ್ರದ ಮತ್ತೊಂದು ಉನ್ನತಿಯಕಾಲ ವಿಜಯನಗರದಲ್ಲಿ ಇಮ್ಮಡಿ ಪ್ರೌಢ ದೇವರಾಯನು ರಾಜ್ಯಭಾರ ಮಾಡಿದಕಾಲ. ಆ ಕಾಲದಲ್ಲಿ [ಕ್ರಿ. ಶ 1419–46] ರಾಯನ ಮಹಾಮಂತ್ರಿ ಜಕ್ಕಣಾಚಾರ್ಯ, ದಂಡನಾಯಕ ಲಕ್ಕಣ್ಣ ಅವನ ಆಸ್ಥಾನದಲ್ಲಿ ವಿದ್ವಾಂಸರಾಗಿ ಪರಿಶೋಭಿಸಿದ ಮಹಾಕವಿ ಚಾಮರಸ, ಕಲ್ಲುಮಠದ ಪ್ರಭುದೇವ, ಕುಮಾರ ಬಂಕನಾಥ, ಕರಸ್ಥಲದ ನಾಗಿದೇವ, ಸಂಪಾದನೆಯ ವೀರಣ್ಣೊಡೆಯ ಮೊದಲಾ

ದವರು ಶಿವಶರಣರ ವಚನಶಾಸ್ತ್ರವನ್ನು ಎತ್ತಿಹಿಡಿದು, ಲಿಂಗಲೀಲಾ ವಿಲಾಸ, ಶೂನ್ಯಸಂಪಾದನೆ, ಗಣಭಾಷ್ಯ ರತ್ನಮಾಲೆ, ಪ್ರಭುದೇವರ ವಚನಗಳ ವ್ಯಾಖ್ಯಾನ ಮೊದಲಾದ ಮಹತ್ಕೃತಿಗಳ ರಚನೆಗೆ ಕಾರಣಕರ್ತರಾದರು. ಇವರ ಈ ಚಳುವಳಿಯು ಹತ್ತಾರು ದಶಕಗಳ ಕಾಲ ಮುಂದುವರಿಯಿತು, ತೋಂಟದ ಸಿದ್ಧಲಿಂಗೇಶ್ವರ, ಅಖಂಡೇಶ್ವರ, ಸ್ವತಂತ್ರ ಸಿದ್ಧಲಿಂಗೇಶ್ವರ, ಘನಲಿಂಗಿದೇವ, ಕಾಡಸಿದ್ಧೇಶ್ವರ ಮೊದಲಾದ ಮುಂದಣ ವಚನಕಾರರಿಗೆ ಕೂಡ ಈ ಚಳುವಳಿ ಸ್ಫೂರ್ತಿಯನ್ನು ಕೊಟ್ಟಿತು.

ಹದಿನೈದು ಮತ್ತು ಹದಿನಾರನೆಯ ಶತಮಾನದ ಅನಂತರ ವಚನ ಸಾಹಿತ್ಯದ ನಿರ್ಮಾಣ ಕಾರ್ಯ ಹಿಮ್ಮೆಟ್ಟಿ, ಷಟ್ಪದಿ, ಸಾಂಗತ್ಯ, ಹಾಡುಗಳು, ಸುಳಾದಿಗಳು, ತ್ರಿಪದಿಗಳು, ದ್ವಿಪದಿಗಳು ಮೊದಲಾದ ಛಂದೋ ಭೇದದ ಕಡೆಗೆ ಜನರ ಗಮನ ಹರಿಯಿತೆಂದು ತಿಳಿಯಬಹುದು. ಈ ಇಪ್ಪತ್ತನೆಯ ಶತಮಾನದಲ್ಲಿ ಸಮಗ್ರ ಕನ್ನಡ ಸಾಹಿತ್ಯದ ಅಭ್ಯುದಯದ ಹಾದಿಯಲ್ಲಿ ವಚನ ಸಾಹಿತ್ಯದ ಕಡೆಗೆ ವಿದ್ವಾಂಸರ ಗಮನವು ಆಕರ್ಷಿಸಲ್ಪಟ್ಟು ಅಂತರಾತ್ಮನಿಗೆ, ರಂಗಯ್ಯನ ವಚನಗಳು, ಕಟ್ಟಿಯ ಬಸವೇಶ್ವರ ವಚನಗಳು ಮೊದಲಾದ-ವಚನ ಶಾಸ್ತ್ರದಿಂದ ಸ್ಫೂರ್ತಿಯನ್ನು ಪಡೆದ ಗ್ರಂಥಗಳು ಹುಟ್ಟಿರುವುದನ್ನು ನಾವು ನೋಡಬಹುದು. ಇದರಿಂದ ವಚನಶಾಸ್ತ್ರವು ಹನ್ನೊಂದನೆಯ ಶತಮಾನದಿಂದ ಇಂದಿನವರೆಗೂ ಒಂದಲ್ಲ ಒಂದು ರೀತಿಯಿಂದ ಕನ್ನಡ ಸಾಹಿತ್ಯದಲ್ಲಿ ತಲೆ ಎತ್ತಿ, ಸಾಹಿತಿಗಳನ್ನೂ ಸಹೃದಯರನ್ನೂ ದಾರ್ಶನಿಕರನ್ನೂ ತನ್ನ ಕಡೆಗೆ ಆಕರ್ಷಿಸಿ ನಿಂತಿದೆಯೆಂದು ನಾವು ತಿಳಿಯಬಹುದು.

ವಚನ ಸಾಹಿತ್ಯಕ್ಕೆ 'ವಚನ ಶಾಸ್ತ್ರ' ಎಂಬ ಹೆಸರೂ ಉಂಟು. ಇದು ಧರ್ಮ, ನೀತಿ, ತತ್ವ ಪ್ರತಿಪಾದಕವಾದುದರಿಂದ ಶಾಸ್ತ್ರ ವಾಙ್ಮಯದಲ್ಲಿ ಪರಿಗಣಿಸಲ್ಪಟ್ಟಿದೆ. ಅಲ್ಲದೆ ಸಾಹಿತ್ಯದ ಪ್ರಧಾನಾಂಶಗಳಾದ ದೃಷ್ಟಾಂತ, ಉಪಮೆ, ಸ್ವಭಾವೋಕ್ತಿ, ಶ್ಲೇಷ, ರೂಪಕ ಮೊದಲಾದ ಅಲಂಕಾರಗಳಿಂದಲೂ ಆನಂದ ಪ್ರಧಾನವಾದ ಕಾವ್ಯಾಂಶಗಳಿಂದಲೂ ಕೂಡಿರುವುದರಿಂದ ಇದು ಸಾಹಿತ್ಯವೆಂದೂ ಪರಿಗಣಿಸಲ್ಪಟ್ಟಿದೆ. ಈ ವಾಙ್ಮಯವು ಗದ್ಯ ಸಾಹಿತ್ಯದಲ್ಲಿ ಪರಿಗಣಿಸಲ್ಪಟ್ಟರೂ, ಪದ್ಯದ ಗುಣಗಳು ಅಂದರೆ, ಪ್ರಾಸ,

ಯತಿ ಮೊದಲಾದ ಛಂದಸ್ಸಿನ ಅಂಶಗಳು ಇರುವುದರಿಂದ ಇದು ಒಂದು 'ವಿಲಕ್ಷಣವಾದ ಗದ್ಯ ಶೈಲಿ' ಎನಿಸಿಕೊಂಡಿದೆ. ಶಿವಶರಣರ ವಚನಗಳನ್ನು ಬಿಡಿಬಿಡಿಯಾಗಿ ಮಾತುಗಳ ರೂಪದಿಂದ ಹೇಳಲೂ ಸಾಧ್ಯವಿದೆ; ರಾಗ ತಾಳಗಳಿಂದ ಕೂಡಿದ ಹಾಡುಗಳ ರೂಪದಲ್ಲಿ ಹಾಡುವ ಪರಿಪಾಠವೂ ಇದೆ. ಶರಣರ ವಚನಗಳನ್ನು ಗೀತೆಗಳು ಎಂದು ಕರೆದಿರುವುದೂ ಉಂಟುA ಈ ಈ ಕಾರಣಗಳಿಂದ ಈ ವಾಙ್ಮಯವು ವಿಲಕ್ಷಣ ಮತ್ತು ವಿಶಿಷ್ಟವಾದ ಸಾ ಹಿತ ವೆಂದು ನಾಡಿನ ವಿದ್ವಾಂಸರು ಹೇಳುತ್ತಾರೆ.

ವಚನಕಾರರ ಮುಖ್ಯ ಉದ್ದೇಶವು ಸಮಾಜ ಸುಧಾರಣೆ. ಆದುದ ರಿಂದಲೇ ಅವರ ಉಪದೇಶದಲ್ಲಿ ವಿಶ್ವಧರ್ಮದ ತತ್ವಗಳನ್ನೂ ವೀರಶೈವ ದರ್ಶ ನದ ಅಂಶಗಳನ್ನೂ ನಾವು ಜತೆಜತೆಯಲ್ಲಿಯೇ ಓದಬಹುದು. ಕನ್ನಡದ ವಚನ ಸಾಹಿತ್ಯಕ್ಕೆ ತಮಿಳುನಾಡಿನ ಶರಣರ ತೇವಾರಂ ಮತ್ತು ತಿರುವಾ ಚಕಂ ಗ್ರಂಥಗಳ ಹಿನ್ನೆಲೆಯುಂಟೆಂದು ಕೆಲವು ವಿದ್ವಾಂಸರು ತರ್ಕಿಸಿದ್ದಾರೆ. ಶ್ರೀ ಬಸವೇಶ್ವರಾದಿ ಶರಣರ ವಚನಗಳಲ್ಲಿರುವ "ಆದ್ಯರ ವಚನ ಪರುಷಕಂ ಡಯ್ಯ, ಆದ್ಯರ ಅರುವತ್ತು ವಚನಕ್ಕೆ ಡಣಾಯಕರ ಇಪ್ಪತ್ತು ವಚನ ಸಮ, ಇಂತಪ್ಪ ಆದ್ಯರ ವಚನಭಂಡಾರ, ಪುರಾತನ ಶರಣರ ಸೂಳ್ನುಡಿಗಳು" ಇತ್ಯಾದಿ ಪ್ರಯೋಗಗಳು ತಮಿಳುನಾಡಿನ ೬೩ ಮಂದಿ ಶರಣರನ್ನೂ ಶಿವಭಕ್ತ ರನ್ನೂ ಕುರಿತವುಗಳಾಗಿವೆ ಎಂದು ತರ್ಕಿಸಿದ್ದಾರೆ. ತಮಿಳಿನ ತಿರುವಳ್ಳುವರ ಭಾವನೆಗಳು ಕನ್ನಡಿಗ ಸರ್ವಜ್ಞ, ತೆಲುಗಿನ ವೇಮಣ್ಣ ಇವರ ವಚನಗಳಲ್ಲಿ ಪ್ರತಿಬಿಂಬಿಸಿರುವಂತೆ, ಅಪ್ಪರ್, ಸುಂದರ್, ಮಾಣಿಕ್ಯವಾಚಕರ್, ತಿರು ಜ್ಞಾನ ಸಂಬಂಧರ್ ಮೊದಲಾದ ತಮಿಳು ಶಿವಶರಣರ ಭಾವನೆಗಳು ಬಸವೇ ಶ್ವರಾದಿ ಕನ್ನಡ ಶರಣರ ವಚನಗಳಲ್ಲಿ ಕೂಡ ಹೊರಸೂಸಿವೆಯೆಂದು ಅರಿ ಯುವುದು ಅಗತ್ಯವಾಗಿದೆ. ಕನ್ನಡ ವಚನಕಾರರ ಪ್ರಭಾವವು, ಕರ್ನಾಟ ಕದ ಕವಿಗಳ ಮೇಲೆಯೇ ಅಲ್ಲದೆ, ಕನ್ನಡ ಶಿಲಾಶಾಸನಗಳ ಮೇಲೆ ಕೂಡ

---

A "ಎಮ್ಮ ಬಸವೇಶ್ವರಾದಿಗಳ ಗೀತಂಗಳಂ" (ಪದ್ಯ ೩೫, ಸಂಧಿ, ೯, ಪದ್ಮ ರಾಜಪುರಾಣಂ) "ಬಸವನಗೀತಿ ಗೀತಿ ಬಸವಣ್ಣನರೂಪು ರೂಪು" (ಪದ್ಯ, ೨, ಸ್ಥಳ, ೮. ಬಸವರಾಜದೇವರ ರಗಳೆ)

ಬಿದ್ದಿರುವುದನ್ನು ನಾವು ತಿಳಿಯಬಹುದು. ಶ್ರೀ ಸಿದ್ಧರಾಮೇಶ್ವರನ ವಚನಗಳನ್ನು ಕೆಲವು ಶಾಸನಕಾರರು ಅಗ್ರಗಣ್ಯವಾಗಿ ಸ್ವೀಕರಿಸಿದ್ದಾರೆ. ಶಿವಾಗಮ ಶಾಸ್ತ್ರಗಳಿಂದ ಸ್ಫೂರ್ತಿಯನ್ನು ಪಡೆದಿರುವ ಕನ್ನಡ ವಚನ ಸಾಹಿತ್ಯದಲ್ಲಿ ಹೆಸರಾಂತಿರುವ ಕಲ್ಲುಮಠದ ಪ್ರಭುದೇವನ ಲಿಂಗಲೀಲಾ ವಿಲಾಸ, ಗುಬ್ಬಿ ಮಲ್ಲಣಾಚಾರ್ಯನ ಗಣಭಾಷ್ಯರತ್ನಮಾಲೆ, ಗೂಳೂರು ಸಿದ್ಧವೀರಣಾಚಾರ್ಯನ ಶೂನ್ಯಸಂಪಾದನೆ ಎಂಬ ಈ ಮೂರು ಗ್ರಂಥಗಳನ್ನು ವಚನಕಾರರ ಪ್ರಸ್ಥಾನತ್ರಯ ಎಂದು ಹೇಳುವ ವಾಡಿಕೆಯಿದೆ.

ಕನ್ನಡ ಸಾಹಿತ್ಯದಲ್ಲಿ ಉನ್ನತಸ್ಥಾನ ಮಾನಗಳನ್ನು ಗಳಿಸಿಕೊಂಡಿರುವ ಈ ವಚನ ಶಾಸ್ತ್ರದ ಅಧ್ಯಯನವನ್ನು ಮಾಡಬಯಸುವವರು ದೇವರ ದಾಸಿಮಯ್ಯ, ಬಸವೇಶ್ವರ, ಅಕ್ಕಮಹಾದೇವಿ ಮತ್ತು ಪ್ರಭುದೇವರು, ಚೆನ್ನಬಸವೇಶ್ವರ ಎಂಬ ಈ ಐವರ ವಚನಗಳನ್ನಾದರೂ ಓದುವುದು ಅಗತ್ಯ. ಈ ವಾಙ್ಮಯದ ಪರಿಚಯ:ವನ್ನು ಪಡೆಯಲಾಶಿಸುವವರು, ಡಾ॥ ಫ. ಗು. ಹಳಕಟ್ಟಿಯವರ ವಚನ ಶಾಸ್ತ್ರಸಾರ (ಮೂರು ಭಾಗಗಳು) ಡಾ॥ ಆರ್.ಆರ್. ದಿವಾಕರರ ವಚನಶಾಸ್ತ್ರ ರಹಸ್ಯ, ದಿ॥ ಎಂ. ಆರ್. ಶ್ರೀನಿವಾಸಮೂರ್ತಿಯವರ ವಚನ ಧರ್ಮಸಾರ, ಶ್ರೀ ಮನೋಹರ ದೇಶಪಾಂಡೆಯವರ ಪ್ರಭುವಿನ ಪ್ರಭೆ, ಶರಣ ಸಾಹಿತ್ಯ ಗ್ರಂಥಮಾಲೆಯ ಘನಲಿಂಗಿಯ ವಚನಗಳು ಇತ್ಯಾದಿ ಗ್ರಂಥಗಳನ್ನು ಅವಲೋಕಿಸುವುದು ಅಗತ್ಯವಾಗಿದೆ.

ಇನ್ನು ಪ್ರಮುಖರಾದ ಶಿವಶರಣರ ಕೆಲವು ವಚನಗಳನ್ನು ಮಾನ್ಯವಾಚಕರ ಅವಗಾಹನೆಗಾಗಿ ಮುಂದೆ ನಿರೂಪಿಸಲಾಗಿದೆ.

## ಸಾಹಿತ್ಯದ ವಚನಗಳು

ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವುದಯ್ಯಾ,
ಚಂದ್ರ ಕುಂದೆ ಕುಂದುವುದಯ್ಯಾ,
ಚಂದ್ರಂಗೆ ರಾಹುವು ಅಡ್ಡಬಂದಲ್ಲಿ ಅಂಬುಧಿ ಬೊಬ್ಬಿಟ್ಟಿತ್ತೆ ?
ಅಂಬುಧಿಯು ಮುನಿಯೂ ಆ ಪೋಷಣವ ಕೊಂಬಲ್ಲಿ
ಚಂದ್ರಮನಡ್ಡ ಬಂದನೆ ?
ಆರಿಗಾರೂ ಇಲ್ಲ, ಕೆಟ್ಟವಂಗೆ ಕೆಳೆಯಿಲ್ಲ, ಜಗದನೆಂಟ ನೀನೇ
ಕೂಡಲ ಸಂಗಮದೇವಾ. ॥೩॥

ಒಲೆ ಹತ್ತಿ ಉರಿದರೆ ನಿಲಬಹುದಲ್ಲದೆ
ಧರೆಹತ್ತಿ ಉರಿದೊಡೆ ನಿಲಬಾರದು.
ಏರಿ ನೀರುಣ್ಬೊಡೆ, ಬೇಲಿ ಕೆಯ್ಯಮೇವೊಡೆ,
ನಾರಿ ತನ್ನ ಮನೆಯಲ್ಲಿ ಕಳಿವೊಡೆ
ತಾಯಿಮೊಲೆವಾಲು ನಂಜಾಗಿ ಕೊಲುವೊಡೆ
ಇನ್ನಾರಿಗೆ ದೂರುವೆ ಕೂಡಲ ಸಂಗಮದೇವಾ ? ||೨||

ವಚನದಲ್ಲಿ ನಾಮಾಮೃತ ತುಂಬಿ,
ನಯನದಲ್ಲಿ ನಿಮ್ಮ ಮೂರುತಿ ತುಂಬಿ,
ಮನದಲ್ಲಿ ನಿಮ್ಮ ನೆನಹು ತುಂಬಿ,
ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ,
ಕೂಡಲ ಸಂಗಮದೇವಾ ನಿಮ್ಮ ಚರಣಕಮಲದೊಳಗಾನು ತುಂಬಿ ||೩||

ಕರಿಯನಿತ್ತಡೆ ಒಲ್ಲೆ, ಸಿರಿಯನಿತ್ತಡೆ ಒಲ್ಲೆ,
ಹಿರಿದಪ್ಪರಾಜ್ಯವನಿತ್ತಡೆ ಒಲ್ಲೆ,
ನಿಮ್ಮ ಶರಣರ ಸೂಳ್ನುಡಿಯ ಒಂದರಘಳಿಗೆ ಇತ್ತಡೆ
ನಿಮ್ಮನಿತ್ತೆ ಕಾಣಾ ರಾಮನಾಥಾ ||೪||

ಕಡೆಗೀಲಿಲ್ಲದ ಬಂಡಿ ನಡೆಗೆಡೆಯದೆ ಮಾಬುದೆ ?
ಕಡೆಗೀಲು ಬಂಡಿಗಾಧಾರ, ಕಡುದರ್ಪವೇರಿದ
ಒಡಲೆಂಬ ಬಂಡಿಗೆ ಮೃಡಶರಣರ ನುಡಿಗಡಣವೇ
ಕಡೆಗೀಲು ಕಾಣಾ ರಾಮನಾಥಾ ||೫||

ಚಂದನವ ಕಡಿದು ತೊರೆದು ತೇದೊಡೆ ನೊಂದೆನೆಂದು ಕಂಪಬಿಟ್ಟಿತ್ತೆ?
ತಂದು ಸುವರ್ಣವ ಕಡಿದೊರೆದೊಡೆ ಬೆಂದು ಕಳಂಕ ಹಿಡಿದಿತ್ತೆ?
ಸಂದು ಸಂದು ಕಡಿದ ಕಬ್ಬನು ಗಾಣದಲಿಕ್ಕಿದರೆ
ಬೆಂದು ಪಾಕಾಗುಳ್ಳ ಸಕ್ಕರೆಯಾಗಿ ನೊಂದೆನೆಂದು ಸವಿಯು ಬಿಟ್ಟಿತ್ತೆ ?

ನಾ ಹಿಂದೆ ಮಾಡಿದ ಹೀನಂಗಳೆಲ್ಲವ ತಂದು ಮುಂದಿಳುಹಲು
ನಿಮಗೆ ಹಾನಿಯೇ ಎನ್ನ ತಂದೆ ಚೆನ್ನಮಲ್ಲಿಕಾರ್ಜುನಯ್ಯಾ
ಕೊಂದಡೆ ಶರಣೆಂಬುದ ಮಾಣೆನು ||೬||

ಬೆಟ್ಟಕ್ಕೆ ಚಳಿಯಾದಡೆ ಏನು ಹೊದ್ದಿಸುವಿರಯ್ಯಾ ?
ಬಯಲು ಬತ್ತಲೆ ನಿಂದಡೆ ಏನನುಡಿಸುವಿರಯ್ಯಾ, ?
ಭಕ್ತನು ಭವಿಯಾದರೆ ಅದೇನನುಪಮಿಸುವಿರಯ್ಯಾ ಗುಹೇಶ್ವರಾ ||೭||

## ದೇವರು

ಆದಿ ಅನಾದಿ ಇಲ್ಲದಂದು, ಹಮ್ಮುಬಿಮ್ಮುಗಳಿಲ್ಲದಂದು, ಸುರಾಳ ನಿರಾಳವಿಲ್ಲದಂದು, ಶೂನ್ಯನಿಶ್ಶೂನ್ಯವಿಲ್ಲದಂದು, ಸಚರಾಚರವೆಲ್ಲ ರಚನೆಗೆ ಬಾರದಂದು ಗುಹೇಶ್ವರಾ ನೀನೊಬ್ಬನೇ ಇದ್ದೆಯಲ್ಲ ಇಲ್ಲದಂತೆ. ||೮||

ಶೂನ್ಯ ನಿಶ್ಶೂನ್ಯವಿಲ್ಲದಂದು, ಬ್ರಹ್ಮ, ವಿಷ್ಣು, ಮಹೇಶ್ವರರಿಲ್ಲದಂದು, ಹದಿನಾಲ್ಕು ಭುವನ ದಿಕ್ಕುಗಳಿಲ್ಲದಂದು, ಕೂಡಲ ಚೆನ್ನಸಂಗನೆಂಬ ಹೆಸರು ನೀನಿಲ್ಲದಂದು. ||೯||

ಇಬ್ಬರು ಮೂವರು ದೇವರೆಂದು ಉಬ್ಬುಬ್ಬಿಮಾತಾಡಬೇಡ, ದೇವನೊಬ್ಬನೇ ಕಾಣಿರೋ, ಇಬ್ಬರೆಂಬುದು ಹುಸಿ, ಕೂಡಲ ಸಂಗಮ ದೇವನೊಬ್ಬನಲ್ಲದಿಲ್ಲವೆಂದಿತ್ತು ವೇದ, ದೇವನೊಬ್ಬನಾಮ ಹಲವು. ||೧೦||

ಎತ್ತೆತ್ತ ನೋಡಿದೊಡೆ ಅತ್ತತ್ತ ನೀನೇ ದೇವಾ, ಸಕಲ ವಿಸ್ತಾರದ ರೂಹು ನೀನೇ ದೇವಾ, ವಿಶ್ವತೋ ಚಕ್ಷು ನೀನೇ ದೇವಾ, ವಿಶ್ವತೋಮುಖ ನೀನೇ ದೇವಾ, ವಿಶ್ವತೋಭರಿತ ನೀನೇ ದೇವಾ, ವಿಶ್ವತೋಬಾಹು ನೀನೇ ದೇವಾ ಕೂಡಲ ಸಂಗಮದೇವಾ. ||೧೧||

ಇಳೆ ನಿಮ್ಮ ದಾನ, ಬೆಳೆ ನಿಮ್ಮದಾನ, ಸುಳಿದು ಬೀಸುವ ವಾಯು ನಿಮ್ಮದಾನ, ನಿಮ್ಮ ದಾನನ ಹಡೆದು ಅನ್ಯರನು ಹೊಗಳುವ ಕುನ್ನಿಗಳನೇನೆಂಬೆನಯ್ಯಾ ರಾಮನಾಥಾ. ||೧೨||

## ಅಹಿಂಸೆ

ದಯೆಯಿಲ್ಲದ ಧರ್ಮವಾವುದಯ್ಯಾ,
ದಯೆಯೇ ಬೇಕು, ಸಕಲ ಪ್ರಾಣಿಗಳೆಲ್ಲರಲ್ಲಿ,
ದಯೆಯೇ ಧರ್ಮದ ಮೂಲವಯ್ಯಾ,
ಕೊಲ್ಲುವವನು ಮಾದಿಗ, ಹೊಲಸು ತಿಂಬುವವನು
ಹೊಲೆಯ ಕೂಡಲ ಸಂಗಮ ದೇವಾ ||೧೩||

## ಸತ್ಯ

ದೇವಲೋಕ ಮರ್ತ್ಯಲೋಕವೆಂಬಿವು
ಬೇರಿಲ್ಲ ಕಾಣಿರೋ, ಸತ್ಯವ ನುಡಿವುದೇ ದೇವಲೋಕ,
ಅಸತ್ಯವ ನುಡಿವುದೇ ಮರ್ತ್ಯಲೋಕ,
ಆಚಾರವೇ ಸ್ವರ್ಗ, ಅನಾಚಾರವೇ ನರಕ,
ಇದಕ್ಕೆ ನೀವೇ ಪ್ರಮಾಣ ಕೂಡಲ ಸಂಗಮ ದೇವಾ ||೧೪||

ದಿಟವ ನುಡಿವುದು, ನುಡಿದಂತೆ ನಡೆವುದು,
ಹುಸಿಯ ನಡೆದು ತಪ್ಪುವ ಪ್ರಪಂಚರನೊಲ್ಲ
ನಮ್ಮ ಕೂಡಲ ಸಂಗಮದೇವ. ||೧೫||

## ಭಕ್ತಿ

ವೇದಪ್ರಿಯ ಶಿವನೆಂಬರು, ವೇದಪ್ರಿಯ ಶಿವನಲ್ಲವಯ್ಯ,
ನಾದಪ್ರಿಯ ಶಿವನೆಂಬರು ನಾದಪ್ರಿಯ ಶಿವನಲ್ಲವಯ್ಯ,
ವೇದವನೋದಿದ ಬ್ರಹ್ಮಂಗೆ ತಲೆ ಹೋಯಿತ್ತು,
ನಾದವನೋದಿದ ರಾವಣಂಗೆ ಅರೆಯಾಯುಷ್ಯವಾಯಿತ್ತು,
ವೇದಪ್ರಿಯನೂ ಅಲ್ಲ, ನಾದ ಪ್ರಿಯನೂ ಅಲ್ಲ,
ಭಕ್ತಿಪ್ರಿಯ ನಮ್ಮ ಕೂಡ್ಲಲ ಸಂಗಮದೇವ, ||೧೬||

## ಶಾಂತಿ

ಬೆಟ್ಟದ ಮೇಲೊಂದು ಮನೆಯಮಾಡಿ, ಮೃಗಂಗಳಿಗಂಜಿದೊಡೆಂತಯ್ಯಾ,
ಸಮುದ್ರದ ತಡಿಯಲ್ಲಿ ಮನೆಯಮಾಡಿ ನೊರೆತೊರೆಗಳಿಗಂಜಿದೊಡೆಂತಯ್ಯಾ,
ಸಂತೆಯೊಳಗೊಂದು ಮನೆಯಮಾಡಿ, ಶಬ್ದಜಾಲಕೆ ನಾಚಿದೊಡೆಂತಯ್ಯಾ,
ಚೆನ್ನಮಲ್ಲಿಕಾರ್ಜುನ ದೇವ ಕೇಳಯ್ಯಾ,
ಲೋಕದೊಳಗೆ ಹುಟ್ಟಿರ್ದ ಬಳಿಕ
ಸ್ತುತಿನಿಂದೆಗಳು ಬಂದಡೆ ಮನದಲ್ಲಿ
ಕೋಪವ ತಾಳದೆ ಸಮಾಧಾನಿಯಾಗಿರಬೇಕು.
ಲೋಕದ ನಿಂದೆಗೆ ಅಂಜಬಾರದು, ಅಳುಕಬಾರದು. ||೧೭||

ಹೊಯ್ದವರು ಎನ್ನ ಹೊರೆದವರೆಂಬೆನು,
ಬೈಯ್ದವರು ಎನ್ನ ಬಂಧುಗಳೆಂಬೆನು, ನಿಂದಿಸುವರು ಎನ್ನ
ತಾಯಿ ತಂದೆಗಳೆಂಬೆನು, ಜರಿವವರು ಎನ್ನ
ಜನ್ಮ ಬಂಧುಗಳೆಂಬೆನು, ಅಳಿಗೊಂಡವರು
ಎನ್ನ ಆಳ್ದರೆಂಬೆನು, ಕೊಂಡಾಡಿದವರು ಎನ್ನ
ಹೊನ್ನಶೂಲದೊಳಿಗಿಕ್ಕಿದವರು ಎಂಬೆನು
ಕೂಡಲ ಸಂಗಮದೇವಾ. ||೧೮||

## ದಾನ

ಕಾಗೆ ಒಂದಗುಳು ಕಂಡರೆ ಕರೆಯದೇ ತನ್ನ ಬಳಗವನು !
ಕೋಳಿ ಒಂದು ಗುಟುಕ, ಕಂಡರೆ ಕರೆಯದೇ ತನ್ನಗೆಳೆಯರನು
ಶಿವಭಕ್ತನಾಗಿ ಭಕ್ತಿಪಥ ವಿಲ್ಲದಿದ್ದರೆ
ಕಾಗೆ ಕೋಳಿಗಳಿಗಿಂತ ಕರಕಷ್ಟಕಾಣಾ
ಕೂಡಲ ಸಂಗಮದೇವಾ ||೧೯||

ತನುವ ಬೇಡಿದೊಡೀವೆ, ಮನವ ಬೇಡಿದೊಡೀವೆ,
ಧನವ ಬೇಡಿದೊಡೀವೆ, ಬೇಡುಬೇಡೆಲೆ ಹಂದೆ,

ಕಣ್ಣ ಬೇಡಿದಡೀವೆ, ತಲೆಯ
ಬೇಡಿದಡೀವೆ, ಕೂಡಲ ಸಂಗಮದೇವಾ
ನಿಮಗಿತ್ತು ಶುದ್ಧನಾಗಿಪ್ಪೆನು ನಿಮ್ಮ ಪುರಾತನರ ಮನೆಯಲ್ಲಿ. ||೨೦||

## ಮಾಯೆ

ಹೆಣ್ಣು ಮಾಯೆಯೆಂಬರು, ಹೆಣ್ಣು ಮಾಯೆಯಲ್ಲ,
ಹೊನ್ನು ಮಾಯೆಯೆಂಬರು, ಹೊನ್ನು ಮಾಯೆಯಲ್ಲ,
ಮಣ್ಣು ಮಾಯೆಯೆಂಬರು, ಮಣ್ಣು ಮಾಯೆಯಲ್ಲ,
ಮನದಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರಾ.

## ಸ್ತ್ರೀ

ತಾ ಮಾಡಿದ ಹೆಣ್ಣು ತನ್ನ ತಲೆಯನೇರಿತ್ತು,
ತಾ ಮಾಡಿದ ಹೆಣ್ಣು ತನ್ನ ತೊಡೆಯನೇರಿತ್ತು,
ತಾ ಮಾಡಿದ ಹೆಣ್ಣು ಬ್ರಹ್ಮನ ನಾಲಗೆಯ ನೇರಿತ್ತು,
ತಾ ಮಾಡಿದ ಹೆಣ್ಣು ನಾರಾಯಣನ ಎದೆಯನೇರಿತ್ತು,
ಅದು ಕಾರಣ, ಹೆಣ್ಣು ಹೆಣ್ಣಲ್ಲ, ಹೆಣ್ಣು ರಾಕ್ಷಸಿಯಲ್ಲ,
ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧಮಲ್ಲಿಕಾರ್ಜುನ ನೋಡಾ. ||೨೧||

ಎಲ್ಲಿ ನೋಡಿದರಲ್ಲಿ ಮನವೆಳಸಿದೊಡೆ
ಆಣೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ;
ಪರವಧುವನು ಮಹಾದೇವಿಯೆಂದು ಕಾಂಬೆನು
ಕೂಡಲ ಸಂಗಮದೇವಾ ||೨೨||

## ನೀತಿ

ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ,
ಮುನಿಯ ಬೇಡ, ಅನ್ಯರಿಗೆ ಅಸಹ್ಯ ಪಡಬೇಡ,
ತನ್ನ ಬಣ್ಣಿಸಬೇಡ, ಇದಿರು ಹಳಿಯಲು ಬೇಡ,
ಇದೇ ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ,
ಇದೇ ನಮ್ಮ ಕೂಡಲ ಸಂಗಮದೇವರನೊಲಿಸುವ ಪರಿ. ||೨೩||

ಈ ರೀತಿಯಲ್ಲಿ ವಚನಸಾಹಿತ್ಯವು ತನ್ನದೇ ಆದ ರೀತಿಯಲ್ಲಿ ಶಾಸ್ತ್ರದ ಜ್ಞಾನವನ್ನೂ, ಸಾಹಿತ್ಯದ ಆನಂದವನ್ನೂ ಒಟ್ಟಿಗೆ ಉಂಟುಮಾಡುತ್ತದೆ. ಪ್ರತಿಯೊಬ್ಬ ವಚನಕಾರನೂ ಒಂದೊಂದು ಅಂಕಿತವನ್ನು ಉಳ್ಳವನಾಗಿದ್ದ ಆದರಿಂದ ಇದು ಇಂಥವರ ವಚನವೇ ಎಂದು ಥಟ್ಟನೆ ಹೇಳಲು ಸೌಕರ್ಯ ವಿದೆ. ಈ ಅಂಕಿತ ನಿರೂಪಣೆಯು ವಚನಕಾರರ ಸ್ಥಳ, ಕಾಲ ಮೊದಲಾ ದುವುಗಳನ್ನು ಕೂಡ ತಿಳಿಯಲು ಸಹಾಯವೆನಿಸಿದೆ. ವಚನಗಳು ತಮ್ಮ ಹಿತಮಿತ ತನದಿಂದ ಕೂಡ ಜನಪ್ರಿಯವೆನಿಸಿವೆ. ಭಾರತದ ಪ್ರಾಚೀನ ಭಾಷಾ ಸಾಹಿತ್ಯದಲ್ಲಿಯೂ ಕನ್ನಡದ ವಚನ ಸಾಹಿತ್ಯಕ್ಕೆ ಸಾಟಿಯಾದ ವಾ ಙ್ಮಯ ಇಲ್ಲವೆಂದು ನಾಡಿನ ವಿದ್ವಾಂಸರು ಹೇಳಿರುತ್ತಾರೆ. ವಿಶ್ವಧರ್ಮ ವನ್ನು ಕುರಿತಾದ ಕೆಲವು ವಚನಗಳು ನಿಜಕ್ಕೂ ವಿಶ್ವಸಾಹಿತ್ಯದಲ್ಲಿ ಪರಿಗಣಿ ಸಲು ಅರ್ಹವಾಗಿವೆ. ಮಾನವನ ಇಹಪರಗಳ ಉನ್ನತಿಗೆ ಬೇಕಾದ ಎಲ್ಲ ಸಂದೇಶವೂ ವಚನ ಸಾಹಿತ್ಯದಲ್ಲಿದೆ ಎನ್ನಬಹುದು.

(ತಾ|| ೧೬-೧೧-೫೯ರಂದು ಬೆಂಗಳೂರು ಆಕಾಶವಾಣಿಯಲ್ಲಿ ಶ್ರೀ ಬಿ. ಶಿವ ಮೂರ್ತಿ ಶಾಸ್ತ್ರಿಗಳು ಹೇಳಿದ ಭಾಷಣವಿದು.)



# ಸರ್ವಜ್ಞ ವಚನಗಳು *

ಜನಜೀವನದ ಪ್ರಗತಿಗೆ ಸಾಹಿತ್ಯವು ಸಾಧಕ. ಸಾಹಿತ್ಯದ ನಿರ್ಮಾಣಕ್ಕೆ ಪ್ರತಿಭಾನ್ವಿತ ಕವಿಗಳು ಕಾರಣ. ಅಂತಹ ಕವಿಗಳಲ್ಲಿ ಪಂಡಿತ ಕವಿಗಳಿಗಿಂತ ಜನಪ್ರಿಯರಾದ ರಾಷ್ಟ್ರಕವಿಗಳು ಬಹುಮುಖ್ಯರು. ಈ ಜಾತಿಯ ಕವಿಗಳ ಸಂಖ್ಯೆ ಎಲ್ಲ ದೇಶ-ಕಾಲಗಳಲ್ಲಿಯೂ ವಿರಳ. ಸಮಗ್ರ ಭಾರತದ ಸಾಹಿತ್ಯವನ್ನು ಪರೀಕ್ಷಿಸಿದರೂ ಇಂತಹ ಜಾನಪದಕವಿಗಳು ಬೆರಳಿನಲ್ಲಿ ಎಣಿಸುವಷ್ಟು ಮಾತ್ರ. ಹಿಂದಿಯ ಕಬೀರ್, ಮರಾಠಿಯ ತುಕಾರಾಂ, ತೆಲುಗಿನ ವೇಮನ, ತಮಿಳಿನ ತಿರುವಳ್ಳುವರ್, ಕನ್ನಡದ ಸರ್ವಜ್ಞಮೂರ್ತಿ ಇತ್ಯಾದಿಗಳೇ ಜನಪ್ರಿಯ ಜೀವಂತ ಕವಿಗಳು. ಇಂಥವರೇ ಸಾಹಿತ್ಯದ ಉನ್ನತಿಗೆ ಪ್ರಾಣನಾಡಿಯಂತೆ ಇರತಕ್ಕವರು. ಜನತೆಗೂ ಸಾಹಿತ್ಯಕ್ಕೂ ನಿಕಟ ಸಂಬಂಧವನ್ನು ಕಲ್ಪಿಸತಕ್ಕವರು. 'ಜನಬದುಕಲಿ' ಎಂದು ಬರೆದವರು.

ಸಾಹಿತ್ಯದ ಉದ್ದೇಶ ಜನತೆಗೆ ಸಂತೋಷವನ್ನೂ ಜ್ಞಾನವನ್ನೂ ಉಂಟು ಮಾಡುವುದೆಂದು ಒಪ್ಪಿಕೊಳ್ಳುವುದಾದರೆ, ಸರ್ವಜ್ಞನಂತಹ ಜಾನಪದ ಕವಿಗಳಿಗೆ ಸಂತೆಯ ಮಂದಿಯಲ್ಲಿಯೇ ಅಲ್ಲ ಸಾಹಿತ್ಯ ಮಂದಿರದಲ್ಲಿಯೂ ಕೂಡ ಅಗ್ರತಾಂಬೂಲ ಸಲ್ಲುವುದು ಅಗತ್ಯವಾಗಿದೆ. ಕರ್ನಾಟಕದಲ್ಲಿ ಪಂಡಿತ ಪಾಮರರಿಗೆಲ್ಲಾ ತಿಳಿಯುವಂತಹ ಸರಳ ಸುಂದರ ಸುಮನೋಹರ ಭಾಷೆಯಲ್ಲಿ, ತ್ರಿಪದಿಯ ಛಂದಸ್ಸಿನಲ್ಲಿ, ಘನತಮ ತತ್ವಗಳನ್ನು ವಿಶ್ವಪ್ರೇಮದಿಂದ ಸ್ಫೂರ್ತಿಗೊಂಡು ಲೋಕಾನುಭವ, ಶಾಸ್ತ್ರಾನುಭವಗಳ ಪರಿಪಕ್ವ ಹೃದಯದಿಂದ ವಚನಗಳ ರೂಪದಲ್ಲಿ, ಹಾಡಿ, ಜನತೆಯಿಂದ ಹಾಡಿಸಿ, ಕನ್ನಡ-ನಾಡಿಗೂ ನುಡಿಗೂ ಸರ್ವಜ್ಞನು ಸಲ್ಲಿಸಿದ ಸೇವೆಯು ಅಮೋಘ ಹಾಗೂ ಅನುಪಮವಾದುದು.

---

* ತಾ॥ ೨೭-೫-೪೯ರ ದಿನ ಮದರಾಸು ಆಕಾಶವಾಣಿಯಿಂದ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಮಾಡಿದ ಭಾಷಣ.

'ರಸಿಕನಾಡಿದಮಾತು ಶಶಿಯುದಿಸಿ ಬಂದಂತೆ' 'ಸಾಹಿತ್ಯವೆಲ್ಲರಿಗೆ ಇಲ್ಲ' 'ಎಲ್ಲಬಲ್ಲವರಿಲ್ಲ' ಇತ್ಯಾದಿ ಸವಿಕಟ್ಟಾದ ಈ ಕವಿಯ ಮಾತುಗಳಿಂದ ಸರ್ವಜ್ಞನು ಸಾಹಿತ್ಯದ ಗುಟ್ಟು-ಗುರಿಗಳನ್ನು ಎಷ್ಟು ಚೆನ್ನಾಗಿ ಅರಿತಿರುವ ನೆಂಬುದನ್ನು ನಾವು ಮನಗಾಣಬಹುದು.

ಕನ್ನಡಜಾಣ ಸರ್ವಜ್ಞನು ಸುಮಾರು ೧೬ ನೆಯ ಶತಕದವನು. ಧಾರವಾಡ ಜಿಲ್ಲಾ 'ಅಂಬಲೂರು' ಮತ್ತು 'ಮಾಸೂರು'ಗಳಲ್ಲಿ ಹುಟ್ಟಿ ಬಳೆ ದವನು. ಆರ್ಯದ್ರಾವಿಡ ಸಂಸ್ಕೃತಿಯ ಸಂಮಿಶ್ರಣವೆಂಬಂತೆ ಮೂರ್ತಿ ವೆತ್ತವನು. ಕೈಲಾಸದ ಪುಷ್ಪದತ್ತನ ಅವತಾರವೆನಿಸಿ ಮೊದಲು ವರ ರುಚಿಕವಿಯಾಗಿ, ಕಡೆಗೆ ಆಶುಕವಿ ಸರ್ವಜ್ಞನಾಗಿ ಭೂಮಿಯಲ್ಲಿ ಜನಿಸಿ ದವನು. ಚಂದ್ರಶೇಖರನ ವರದಿಂದ ಹುಟ್ಟಿದ ಕಂದನೆನಿಸಿದವನು. ಸರ್ವ ರೊಳಗೆ ಒಂದೊಂದು ನುಡಿ ಕಲಿತು ವಿದ್ಯೆಯ ಪರ್ವತವೇ ಆದವನು, ಬಾಳ ಲೋಚನನ ಶರಣರ ಆಳಾಗಿ ವಚನಗಳನ್ನು ಹಾಡಿದವನು, 'ಮಂಡೆ ಬೋ ಳಿಸಿಕೊಂಡು, ತುಂಡುಗಂಬಳಿ ಹೊದೆದು, ಹಿಂಡನಗಲಿದ ಗಜದಂತೆ ಕನ್ನಡ ನಾಡಿನಲ್ಲಿ ಓಡಾಡಿದವನು' ಎಂಬಿಷ್ಟು ವಿಚಾರಗಳನ್ನು ಅವನ ಜೀವನ ಕುರಿತು ಸಂಗ್ರಹವಾಗಿ ನೆನಸಿಟ್ಟುಕೊಳ್ಳಬೇಕು.

ಸರ್ವಜ್ಞನ ವಚನಗಳು-ವಿವಿಧ ವಸ್ತುಕೋಶದಂತೆ (Encyclopaedia) ಜನಜೀವನಕ್ಕೆ ಬೇಕಾದ ಎಲ್ಲ ವಿಷಯಗಳನ್ನೂ ಒಳಗೊಂಡಿವೆ. "ಅನುಭವಿಯ ವೇದವೇ ವೇದ"ವಾದ ಆ ತಿರುಳ್ಗನ್ನಡಿಗನ ವಚನಗಳು ಹೇಳುವವನ ಹೃದಯದಿಂದ ಹೊರಟು, ಕೇಳುವವರ ಹೃದಯಕ್ಕೆ ನೇರವಾಗಿ ಹೋಗತಕ್ಕವುಗಳು. "ಮನೋಭವನಲರಂಬಿನಂತೆ ಕೃತಿವೇಳ್ವುವುದು ಕಬ್ಬಿಗನುಬ್ಬಿ ಧಾತ್ರಿಯೊಳ್" ಎಂಬ ಷಡಕ್ಷರ ಕವಿಯ ಮಾತು ಸರ್ವಜ್ಞನ ವಚನಗಳನ್ನು ಅನ್ವರ್ಥಗೊಳಿಸಿದೆ.

ಅನುಭಾವಿಯಾದ ಸರ್ವಜ್ಞನ ವಚನಗಳು ಅಡವಿಯ ಹೂವುಗಳಂತೆ ಸಹಜ ಸುಂದರ. ಅರಣ್ಯದ ಓಷಧಿಗಳಂತೆ ಜೀವನಕ್ಕೆ ಉಪಯುಕ್ತ. ವಸಂತಕಾಲದ ಗಿಳಿಮರಿಗಳಂತೆ ರಸಿಕರಿಗೆ ಆನಂದದಾಯಕ. ಮಳೆಗಾ

ಲದ ಮಿಂಚಿನಂತೆ ಜನಸಾಮಾನ್ಯರಿಗೆ ಕೌತುಕ ಜನಕ, ವೀರರ ಸಿಂಹನಾದ ಗಳಂತೆ ತರುಣರಿಗೆ ಉತ್ಸಾಹ ವಿವರ್ಧಕ. ಮತ್ತು ದೇಶಾಭಿಮಾನ ಜನಕ ಎಂದೆನ್ನಬಹುದು. ಒಳ್ಳೆಯ ಭಾವನೆಗಳಿಂದ ಜನತೆಯನ್ನು ಕಟ್ಟುವುದು, ಅವರ ಮನಸ್ಸಿನಲ್ಲಿ ಉತ್ತಮ ಗುಣಗಳನ್ನು ಹುಟ್ಟಿಸುವುದು, ಓದುಗರ ಜೀವ ನಕ್ಕೆ ಕೈದೀವಿಗೆಯಂತೆ ಸದಾ ಸೇವಾಗುವುದು ಸತ್ಕಾವ್ಯದ ಲಕ್ಷಣವೆನ್ನುವು ದಾದರೆ, ಸರ್ವಜ್ಞ ವಚನಗಳು ಇಂತಹ ಶ್ರೇಷ್ಠತಮ ಕಾವ್ಯವೆಂದು ಧೈರ್ಯ ವಾಗಿ ಹೇಳಬಹುದು. ಸರ್ವಜ್ಞ ಕವಿಯು ಕರ್ನಾಟಕದ ಮೂಲಕ ಸಮಗ್ರ ಭಾರತಕ್ಕೂ ವಿಶ್ವಕ್ಕೂ ಕೊಟ್ಟ ಸಂದೇಶವು ಅತ್ಯಂತ ಸಾರತಮವಾ ದುದು; ಹಾಗೂ ತ್ರಿಕಾಲಾಬಾಧಿತವಾದುದು.

## ಗುರುವನ್ನು ಕುರಿತು

ಸರ್ವಜ್ಞನು ತನ್ನ ವಚನದಲ್ಲಿ ಗುರುವಿಗೆ ಅಗ್ರತಾಂಬೂಲವಿತ್ತಿದ್ದಾನೆ. "ಊರಿಂಗೆ ದಾರಿಯನು ಯಾರು ತೋರಿದೊಡೇನು ? ಸಾರಾಯದ ನಿಜವ ತೋರುವ ಗುರು ತಾನಾರಾದೊಡೇನು ?" ಎಂದು ಹೇಳುವ ಅವನ ಮಾತುಗಳು, ಕುಲ, ಜಾತಿ, ಪಂಥಗಳ ಎಲ್ಲೆಯನ್ನು ಮೀರಿದ ವಿಶ್ವಪ್ರೇಮಿ ಗಳಾದ, ಕೃಷ್ಣ, ಬುದ್ಧ, ಬಸವ, ಗಾಂಧಿಯವರಂತಹ ಲೋಕಗುರುಗಳನ್ನು ಸ್ಮರಣೆಗೆ ತರುತ್ತವೆ. ನಿಷ್ಕಾಮಪ್ರೇಮಿಗಳಾದ ಗುರುಗಳನ್ನು ಕುರಿತು ಸರ್ವಜ್ಞ ಮೂರ್ತಿಯು "ಜ್ಯೋತಿಯಿಂದಲಿನೇತ್ರ ರಾತ್ರಿಯಲಿ ಕಾಂಬಂತೆ" ಶಿವನ ಗುರುನಾಥನಿಂದರಿಗು, ತಂದೆಗೂ ಗುರುವಿಗೂ ಒಂದು ಅಂತರ ವುಂಟು. 'ತಂದೆ ಸದ್ಗುರುವ ತೋರುವನು, ಗುರುರಾಯ ಬಂಧನವ ಕಳೆವ, 'ಗುರು ತೋರುವನು ದೈವದೆಡೆಯನು,ಆ ದೈವ ಗುರುವ ತೋರುವುದೆ? ಸುರ ತರವು ಮರನಲ್ಲ, ಸುರಭಿಯೊಂದು ಆವಲ್ಲ, ಗುರುರಾಯ ನರರೊಳಗಲ್ಲ, "ಎತ್ತಾಗಿ ತೊತ್ತಾಗಿ ಹಿತ್ತಿಲದ ಗಿಡವಾಗಿ ಗುರುವಿನ ಪಾದದ ಕೆರವಾಗಿ ಸದಾ ಅವನ ಹತ್ತಲಿರು" ಇತ್ಯಾದಿ ಮಾತುಗಳಿಂದ ಗುರುವಿನ ಅಗತ್ಯವು ಸಮಾ ಜಕ್ಕೂ ವ್ಯಕ್ತಿಗೂ ಎಷ್ಟೊಂದು ಅಗತ್ಯವೆಂದು ಸರ್ವಜ್ಞನು ಒತ್ತಿ ಹೇಳು

ತ್ತಾನೆ. ರಾಮಾಯಣದಲ್ಲಿ ಶ್ರೀರಾಮನಿಗೆ ವಸಿಷ್ಠ, ವಿಶ್ವಾಮಿತ್ರರೂ, ಭಾಗವತದಲ್ಲಿ ಶ್ರೀಕೃಷ್ಣನಿಗೆ ಜ್ಞಾನಿಯಾದ ಸಾಂದೀಪನೂ, ಸತ್ಯಶೋಧನೆಯಲ್ಲಿ ಗಾಂಧಿಯವರಿಗೆ ಪೂಜ್ಯ ಗೋಖಲೆಯೂ, ಬಸವಪುರಾಣದಲ್ಲಿ ಬಸವಣ್ಣನವರಿಗೆ ಸಂಗಮದ ಜಾತವೇದಮುನಿಯೂ ಗುರುಗಳೆಂದು ಹೇಳಿದೆ. ಎಂತಹ ಮಹಾಪುರುಷರಿಗಾದರೂ ಗುರುಗಳ ಅಗತ್ಯ ಉಂಟೆಂಬುದನ್ನು ಈ ಪುರಾಣಗಳ ಆಧಾರದಿಂದ ನಾವು ಗ್ರಹಿಸಬಹುದಲ್ಲವೆ ? ಸರ್ವಜ್ಞನು ಗುರುವಿಗೆ ಕೊಟ್ಟಿರುವ ಮಹತ್ವವು ಸನಾತನಧರ್ಮದ ಸಂಪ್ರದಾಯಕ್ಕೆ ಸಮ್ಮತವಾಗಿಲ್ಲವೆ ?

## ದೇವರನ್ನು ಕುರಿತು

ಸಹಜಕವಿಯಾದ ಸರ್ವಜ್ಞನು ಸೃಷ್ಟಿಕರ್ತನನ್ನು ಕುರಿತು ಆಡಿರುವ ಮಾತುಗಳು ಮಾನವ ಜಾತಿಗೆ ಕೊಟ್ಟ ಉಪದೇಶದಂತಿವೆ. "ಕಲ್ಲಿನೊಳು, ಕಂಬದೊಳು, ಬಳ್ಳದೊಳು, ಹಿಕ್ಕೆಯೊಳು ಇರ್ಪ ಜಗದ್ಭರಿತನನು ನಿಗಮಗಳು ಬಲ್ಲುವೆ ?" ಎಂದು ಹಾಕಿರುವ ಸವಾಲು ಉಪನಿಷತ್ತಿನ "ನೇತಿನೇತಿ" ಎಂಬ ಮಾತುಗಳನ್ನೂ, ವೇದದ ಪುರುಷಸೂಕ್ತ ಮಂತ್ರಗಳನ್ನೂ ನಮ್ಮ ನೆನಪಿಗೆ ತರುತ್ತವೆ. "ಆಗಿಲ್ಲ, ಹೋಗಿಲ್ಲ, ಮೇಗಿಲ್ಲ, ಕೆಳಗಿಲ್ಲ, ತಾಗಿಲ್ಲ, ತಪ್ಪು ತಡೆಯಿಲ್ಲ, ಲಿಂಗಕ್ಕೆ ದೇಗುಲವೆ ಇಲ್ಲ" ಎಂದು ಹೇಳುವ ಸರ್ವಜ್ಞನು ಎಂತಹ ದಾರ್ಶನಿಕ ಪಂಡಿತನೆಂಬುದು ನಿದರ್ಶನವಾಗಿದೆ. ಕವಿಯ ಈ ಮಾತುಗಳು ದಿಕ್ಕಾಲಾದ್ಯಾನವಚ್ಛಿನ್ನಾನಂತ ರೂಪನಾದ ಭರ್ತೃಹರಿಯ ಭಗವಂತನನ್ನು ನಮ್ಮ ನೆನಪಿಗೆ ತರುವುದಿಲ್ಲವೆ ? 'ಒಬ್ಬನಲ್ಲದೆ ಜಗಕೆ ಇಬ್ಬರುಂಟೇ-ಒಬ್ಬನೇ ದೈವ, ಎಂಬ ಕವಿಯ ಮಾತು ಏಕೇಶ್ವರವಾದಕ್ಕೆ ನಿದರ್ಶನವಾಗಿದೆ.

## ಆತ್ಮಶುದ್ಧಿ ಬೇಕು

ಗುರು ಮತ್ತು ದೈವದ ಸಾಧನೆಯಲ್ಲಿ ಜನರ ನಡೆನುಡಿಗಳು ಶುದ್ಧವಾಗಿರಬೇಕೆಂದು ಸರ್ವಜ್ಞನು ಹೇಳಿರುತ್ತಾನೆ. 'ಕೊಲುವ ಕೈಯೊಳ್ಳಿ

ಪೂಜೆ, ಮೆಲುವ ಬಾಯೊಳು ಮಂತ್ರ' ಸಲ್ಲದು ಎಂದು ಸರ್ವಜ್ಞನ ಅಭಿ ಪ್ರಾಯ. 'ಲಿಂಗಕ್ಕೆ ತೋರಿಸುತ ನುಂಗುವುದಕಿಂತ ಲಿಂಗಮುಖವಾದ ಜಂಗಮಕೆ ನೀಡುವುದು' ಉತ್ತಮವೆಂದು ಅವನ ತೀರ್ಮಾನ. 'ತನ್ನಲಿಹ ಲಿಂಗವರಿಯದಲೆ, ಗಂಗೆ, ಗೋದಾವರಿ, ತುಂಗಭದ್ರೆ, ಕೃಷ್ಣೆಯಲಿ ಮಿಂದು ಫಲವೇನು ?' ಎಂದು ಅವನ ಅಂಬೋಣ. ಈ ಮೇಲಿನ ಸರ್ವಜ್ಞನ ಉಪದೇಶಗಳು ಸಮಾಜದಲ್ಲಿ ವೇದಾಂತಿಗಳೆಂದು ವಿಜೃಂಭಿಸಿಕೊಳ್ಳುವವರಿಗೆ ಎದೆಮುಟ್ಟಿ ನೋಡಿಕೊಳ್ಳುವಂತೆ ಮಾಡುತ್ತವಲ್ಲವೆ ? ಈ ಮೇಲೆ ಕಂ ಡಂತೆ ಗುರು, ದೈವ, ಮತ್ತು ಸತ್ಯಮಾರ್ಗವನ್ನು ಬೋಧಿಸಿದ ಸರ್ವಜ್ಞನು ಜನತೆಗೆ ಜ್ಞಾನದ ಅಗತ್ಯವನ್ನು ಕುರಿತು ಬೋಧಿಸುವುದು ನ್ಯಾಯವಾಗಿಯೇ ಇದೆ. "ಲೋಕಕ್ಕೆ ಜ್ಞಾನದಿಂ ಮೇಲಿಲ್ಲ. ಜಗದೊಳಗೆ ಜ್ಞಾನವೇ ಅಧಿಕ, ಜ್ಞಾನದಿಂದಲೇ ಇಹವು, ಜ್ಞಾನದಿಂದಲೇ ಪರವು" ಎಂಬ ಈ ಉಪದೇಶಗಳು ಸರ್ವಜ್ಞನ ಜ್ಞಾನ ಶ್ರದ್ಧೆಗೆ ನಿದರ್ಶನವಾಗಿವೆ.

ಜನರ ದುಃಖಕ್ಕೆ ಕಾರಣವೇನೆಂಬುದನ್ನು ಕವಿ ಸರ್ವಜ್ಞನು ಚೆನ್ನಾಗಿ ಅರಿತಿದ್ದಾನೆ. ಉತ್ತಮ, ಮಧ್ಯಮ, ಅಧಮ ಜನರ ಮನಸ್ಸಿನ ಭಾವನೆ ಗಳನ್ನು ಅವನು ಚೆನ್ನಾಗಿ ಅರ್ಥಮಾಡಿಕೊಂಡಿದ್ದಾನೆ. ಜನತೆಯ ಮಾನ ಸಿಕ ರೋಗಗಳ ಪರಿಹಾರಕ್ಕೆ ಅವನು ತನ್ನ ವಚನಗಳ ಮೂಲಕ ಔಷಧ ಗಳನ್ನು ಕೊಟ್ಟಿದ್ದಾನೆ. ಕಾವಿಯ ಹೊತ್ತ ವಿಷಯಾಸಕ್ತ ಸಾಧು ಸಿದ್ಧ ರನ್ನು 'ತಿಪ್ಪೆಯ ಬೂದಿಯಲ್ಲಿ ಹೊರಳುವ ಕತ್ತೆ'ಗಳೆಂದು ಹಳಿಯುತ್ತಾನೆ. 'ಅನ್ನವನು ಇಕ್ಕುವುದು, ನನ್ನಿಯನು ನುಡಿಯುವುದು ಕೈಲಾಸದ ಬಿನ್ನಾ ಣದ ದಾರಿ' ಎನ್ನುತ್ತಾನೆ.

## ದಾನ-ಧರ್ಮಗಳು

ಸರ್ವಜ್ಞನು ದಾನಧರ್ಮವನ್ನು ಕುರಿತು ಆಡುವ ಮಾತುಗಳು ಗಮ ನಾರ್ಹವಾಗಿವೆ. 'ಸಿರಿಬಂದ ಕಾಲಕ್ಕೆ ಕರೆದು ದಾನವಮಾಡು, ಕೊಡುವಾತ ಹರನು, ಕೊಟ್ಟದ್ದು ಹೋಯಿತೆನಬೇಡ, ಅದು ಮುಂದೆ ಕಟ್ಟಿದಾಬುತ್ತಿ.' ಈ

ಮಾತುಗಳಿಂದ ಅವನು ಹಣಗಾರರನ್ನು ಎಚ್ಚರಿಸುತ್ತಾನೆ. ಲೋಭಿಯ ಜೀವನ 'ಕೆಚ್ಚಲ ಉಣ್ಣೆಯಂತೆ' ಮತ್ತು 'ಇದ್ದು ಉಣದಿಪ್ಪವರ ಬಾಯೊಳಗೆ ಕತ್ತಿಯಾಲದ್ದಿ' ಎಂದು ಲೋಭಿಗಳಾದ ಧನಿಕರನ್ನು ಬಲವಾಗಿ ಮೂದಲಿಸುತ್ತಾನೆ.

## ಸ್ವಾತಂತ್ರ್ಯದ ಹಿರಿಮೆ

'ಜಗದಿ ಸ್ವತಂತ್ರವೇ ಲೇಸು, ಕಾಯಕವು ಇರುವನಕ ನಾಯಕನು ಎನಿಸುವನು' ಎಂದು ಜನತೆಗೆ ಸ್ವಾತಂತ್ರ್ಯದ ಮಹಿಮೆಯನ್ನೂ ಕರ್ತವ್ಯದ ಅಗತ್ಯವನ್ನೂ ನಿರೂಪಿಸುತ್ತಾನೆ. "ನಾಡೆಂಬ ದೇಹಕ್ಕೆ ರೂಢಿಪತಿಯೇ ಪ್ರಾಣ, ಅರಸು ಅಳಿಯೆನಾಡೆಲ್ಲಕೆಡುಗು" ಎಂದು ಹೇಳಿ ಅರಾಜಕ ಜನರಿಗೆ ರಾಜಭಕ್ತಿಯನ್ನೂ ಬೋಧಿಸುತ್ತಾನೆ. ಜಾತಿವೀರರು ಸಾವಭೀತಿಗೆ ಅಂಜುವರೆ? 'ಜಾತಸ್ಯಮರಣಂ ಧೃವಂ' ಎಂದೂ, 'ಅಡಿಯ ಮುಂದಿಡೆ ಸ್ವರ್ಗ, ಅಡಿಯ ಹಿಂದಿಡೆ ನರಕ' ಎಂದೂ ದೇಶಭಕ್ತರನ್ನು ಹುರಿದುಂಬಿಸುತ್ತಾನೆ. ದೇಶವು ಸುಭಿಕ್ಷದಿಂದ ಇರಬೇಕಾದರೆ 'ಒಕ್ಕಲನು ಕೊಂಡಾಡಬೇಕು' ಎಂದು ಅರಸರಿಗೆ ಬುದ್ಧಿ ಹೇಳುತ್ತಾನೆ. 'ಬಲ್ಲಿದರ ಒಡನೆ ಸೆಣಸುವುದು ಹಾವಸೆಯ ಕಲ್ಲು ಮೆಟ್ಟಿದಂತೆ' ಎಂದು ಆತುರ ಬುದ್ಧಿಯವರಿಗೆ ವಿವೇಕ ಹೇಳುತ್ತಾನೆ. 'ಮಜ್ಜಿಗೆ ಇಲ್ಲದ ಊಟ ಅಜ್ಜಿಯಿಲ್ಲದ ಮನೆಯಂತೆ, ಮಧುರವಿಲ್ಲದ ಹಾಡು ಚದುರೆಯಿಲ್ಲದ ಸಂಸಾರದಂತೆ, ರೊಟ್ಟಿಯಿಲ್ಲದ ಊಟ ಹೊಟ್ಟೆಗಿಲ್ಲದ ಕೂಟದಂತೆ' ಎಂದು ಅವನು ಹೇಳುವ ಮಾತುಗಳು ಲೋಕಾನುಭವದಿಂದ ಮಾತ್ರ ಅರ್ಥವಾಗತಕ್ಕವುಗಳಾಗಿವೆ.

## ಸಜ್ಜನ-ದುರ್ಜನ

ಸರ್ವಜ್ಞ ಕವಿಯು ಸಜ್ಜನರ ಸಂಗದ ಮಹತ್ವ, ದುರ್ಜನರ ಸ್ನೇಹದ ಲಘುತ್ವಗಳನ್ನು ಕುರಿತು ಬಹಳ ಚೆನ್ನಾಗಿ ಹೇಳಿದ್ದಾನೆ. 'ಸಜ್ಜನರ ಸಂಗ ಹೆಜ್ಜೇನು ಸವಿದಂತೆ, ದುರ್ಜನರ ಸಂಗ ಬಚ್ಚಲ ರೊಚ್ಚಿನಂತೆ' ಒಳ್ಳಿದರೊಡನಾಡಿ ಕಳ್ಳನೊಳ್ಳಿದನಕ್ಕು, ಒಳ್ಳಿದನು ಕಳ್ಳರೊಡನಾಡೆ ಅವ ಶುದ್ಧ

ಕಳ್ಳನೇ ಅಕ್ಕ, ಕ್ಷಣಮಾತ್ರವಾದರೂ ಗುಣಿಗಳೊಡನಾಡುವುದು? ಈ ಮೇಲಿನ ಮಾತುಗಳು ಲೋಕಸಂಸಾರದಲ್ಲಿ ದಿನವೂ ನಮ್ಮ ಅನುಭವಕ್ಕೆ ಬರುತ್ತಿವೆ.

"ಹೆರರೊಡವೆ ಹೊತ್ತವನು ಹೊಲೆಯು, ಮುಟ್ಟಬೇಡೆಂಬ ಹಾರವನು ಹುಟ್ಟಹನೆಲ್ಲಿ ? ದೇಹಕ್ಕೆ ಕುಲವಾವುದಯ್ಯ, ಕುಲಗೋತ್ರ ನಡುವೆ ಎತ್ತಣದು, ಜಾತಿ ಹೀನನ ಮನೆಯ ಜ್ಯೋತಿತಾ ಹೀನವೇ" ಎಂದು ಶುದ್ಧ ಮಡಿಯುವರನ್ನು ಕುರಿತು ಸರ್ವಜ್ಞನು ಆಡುವ ಚುಚ್ಚುಮಾತು ಗಮನಾರ್ಹವಾಗಿವೆ. 'ಕೊಲಲಾಗದೆಂಬ ಜೈನರಾಧರ್ಮ ಎನ್ನ ತಲೆಯಮೇಲಿರಲಿ' ಎಂದು ಜೈನರ ಅಹಿಂಸಾ ಧರ್ಮವನ್ನು ಶ್ಲಾಘಿಸುವುದು ಭಗವದ್ಗೀತೆಯ "ಪಂಡಿತಾಃ ಸಮದರ್ಶಿನಃ" ಎಂಬ ಮಾತನ್ನು ನೆನಪಿಗೆ ತರುತ್ತದೆ.

## ಉದಾರಭಾವ

"ಮೂರ್ಖಂಗೆ ಬುದ್ಧಿಯನು ನೂರ್ಕಾಲಪೇಳಿದರೆ, ಗೋರ್ಕಲ್ಲಮೇಲೆ ಮಳೆಸುರಿದಂತೆ, ಹುಸಿವನಿಂದ ಐನೂರ ಪಶುವ ಕೊಂದವಲೇಸು" ಇತ್ಯಾದಿ ಮಾತುಗಳು ಸರ್ವಜ್ಞನ ನೀತಿನಿಷ್ಠೆಗೆ ನಿದರ್ಶನವಾಗಿವೆ.

## ಆಹಾರ ವಿಜ್ಞಾನ

ಸರ್ವಜ್ಞನ ವಚನಗಳಲ್ಲಿ ಆಹಾರ ವಿಜ್ಞಾನವನ್ನು ಕುರಿತು ಆಡಿರುವ ಮಾತು ಅತ್ಯಂತ ಶ್ಲಾಘ್ಯವಾಗಿವೆ. ಅಲ್ಲದೆ ಈಗಿನ ಕಾಲದ ದೊಡ್ಡ ದೊಡ್ಡ ವೈದ್ಯರನ್ನೂ ಕೂಡ ಅಚ್ಚರಿಗೊಳಿಸುವಂತಿದೆ. "ಅಟ್ಟಬೋನವು ಲೇಸು, ಉದ್ದಿನ ವಡೆ ಲೇಸು, ಊಟಕ್ಕೆ ಮಜ್ಜಿಗೆ ಲೇಸು, ತುಪ್ಪದ ತುತ್ತು ಲೇಸು, ಹರಕು ಹೋಳಿಗೆ ಲೇಸು, ಮುರುಕು ಹಪ್ಪಳ ಲೇಸು, ಪಾಯಸದ ಸುರುಕು ಲೇಸು, ರಾಗಿಯನು ಉಂಬುವನು ನಿರೋಗಿತಾನೆನಿಸುವನು, ಜೋಳವನು ಉಣ್ಣುವನು ತೋಳನಂತಾಗುವನು, ಅಕ್ಕಿಯನು ಉಂಬುವನು ಹಕ್ಕಿಯಂತಾಗುವನು, ಹಸಿಯದಿರೆ ಉಣಬೇಡ, ಹಸಿದು ನೀನಿರಬೇಡ, ಬಿಸಿಗೂಡಿ



ಕರ್ನಾಟಕದ ರಾಷ್ಟ್ರೀಯಕವಿ

ಸರ್ವಜ್ಞ ಮೂರ್ತಿ

ತೆಂಗಳುಣಬೇಡ, 'ಉಂಡು ನೂರಡಿ ನಡೆದು ಕೆಂಡಕ್ಕೆ ಕೈಚಾಚಿ ಗಂಡು ಮೇಲಾಗಿ ಮಲಗಿದವ ವೈದ್ಯನ ಮಿಂಡಕಾಣಯ್ಯ'ಇತ್ಯಾದಿ ಉಪದೇಶಗಳು ಜನತೆಗೆ ಆರೋಗ್ಯದ ಅಗತ್ಯವು ಎಷ್ಟೆಂಬುದನ್ನು ಬೋಧಿಸುತ್ತಿಲ್ಲವೆ? ಅನೇಕ ಪಾಶ್ಚಾತ್ಯ ಡಾಕ್ಟರುಗಳು ಹೇಳುವ "Health is the working man's capital" ಎಂಬ ಜಾಣ್ಣುಡಿಯನ್ನು 'ಸರ್ವಜ್ಞನ ವಚನಗಳು' ನಮ್ಮ ನೆನಪಿಗೆ ತರುತ್ತಿಲ್ಲವೆ?

## ಇಂದ್ರಿಯ ನಿಗ್ರಹ

ಸರ್ವಜ್ಞನು ಇಂದ್ರಿಯ ನಿಗ್ರಹ ಕುರಿತು ಹೇಳುವ ಮಾತು ಗಮನಾರ್ಹವಾಗಿವೆ. "ಹೆಣ್ಣು, ಹೊನ್ನು, ಹಣ್ಣು, ಕಣ್ಣಿನಲಿ ಕಂಡು ಭ್ರಮಿಸದವರಾರು? ಕಣ್ಣು, ನಾಲಗೆ, ಮನವು ತನ್ನವೆಂದನಬೇಡ, ವಚನದೊಳಗೆ ಎಲ್ಲರೂ ಶುಚಿ ವೀರ ಸಾಧುಗಳು, ಕುಚ, ಹೇಮ, ಶಸ್ತ್ರ ಸೋಂಕಿದೊಡೆ ಮನಸಿನೊಳಗೆ ಅಚಲದವರಾರು?" ಎಂಬ ಈ ಮಾತುಗಳು ವಿವೇಕವುಳ್ಳ ಜನರ ಅನುಭವಕ್ಕೆ ದಿನವೂ ಬರುತ್ತಿಲ್ಲವೆ?

ಸರ್ವಜ್ಞನು ಕನ್ನಡ ನಾಡು ನುಡಿಗಳನ್ನು ಕುರಿತು ಹೆಮ್ಮೆಯಿಂದ ಹೇಳುತ್ತಾನೆ. "ಕನ್ನಡಿಗರ ಕೆಳೆಲೇಸು, ಬೆಳವಲದ ಅಣಕನೋಡೆಂದ, ಮಲೆನಾಡ ಮೆಚ್ಚದವರಾರು?" ಈ ಮಾತುಗಳು ಯಾವ ಕನ್ನಡಿಗನಿಗೆ ತಾನೇ ಸಂತೋಷವನ್ನುಂಟುಮಾಡುವುದಿಲ್ಲ?

## ಸ್ತ್ರೀ ಜಾತಿ

ಸೂಕ್ಷ್ಮ ಬುದ್ಧಿಯುಳ್ಳ ಸರ್ವಜ್ಞನು ಸ್ತ್ರೀ ಜಾತಿಯನ್ನು ಕುರಿತು ಆಡಿರುವ ಮಾತು ಗಮನಾರ್ಹವಾಗಿವೆ. 'ನಾರಿಗಂ ಸಿಕ್ಕದವರಿಲ್ಲ, ಪಲ್ಲಕ್ಕಿ ಏರಿದವರೆಲ್ಲಿಂದ ಬಂದಿಹರು? "ನಾರಿಯಿಂ ಬಲ್ಲಿದರು ಯಾರು? ನಾರಿಯಿಲ್ಲದ ಮನೆ ವ್ಯರ್ಥ, ಮನಬಂದ ಹೆಣ್ಣನ್ನು ಬಾಳ್ವೆ ಮಾಡಿದರೆ ಅಮೃತದ ಕೆನೆಯ ಸವಿದಂತೆ, ಬಲ್ಲವಳ ಕೂಟವೇ ಲೇಸು, ಬಾರದಾ ಹೆಣ್ಣಿಂಗೆ ಹೋರುವನು

ಕಡುಹೆಡ್ಡ, ಇಚ್ಛೆಯನು ಅರಿವ ಸತಿಯಾಗೆ ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ, ಕಾಮನಾ ಪುರದಿಪ್ಪ ಆ ಮಹಾ ಕೆರೆಯೊಳಗೆ ಹೇಮಹೇಮಿಗಳು ಮುಳುಗಿ ದರು." ಈ ಮೇಲಿನ ವಚನಗಳು ಸಂಸಾರ ಸಮುದ್ರದಲ್ಲಿ ತೇಲಿ ಮುಳುಗು ತ್ತಿರುವವರಿಗೆ ಎಷ್ಟೊಂದು ಉಪಯುಕ್ತವೆಂದು ಹೇಳಬೇಕಾಗಿಲ್ಲವಷ್ಟೆ ?

ಸರ್ವಜ್ಞನ ವಿವಿಧ ಶಾಸ್ತ್ರ ಪಾಂಡಿತ್ಯ, ಮಿಗಿಲಾದ ಲೋಕಾನುಭವ, ಲೋಕವನ್ನು ನೋಡುವ ವಿಶಾಲ ದೃಷ್ಟಿ, ಬೋಧಿಸುವ ಚಾಣಾಕ್ಷತನ ಈ ಮೊದಲಾದುವು ಎಂತಹ ಪಂಡಿತರನ್ನಾದರೂ ತಲೆದೂಗುವಂತೆ ಮಾಡುತ್ತವೆ. ಈ ರೀತಿ ಸರ್ವಜ್ಞನು ವಿಲಕ್ಷಣ ವಿರಾಡ್ರೂಪಪುರುಷನಾದುದರಿಂದಲೇ ಅವನು ಎಲ್ಲರ ಮನಸ್ಸನ್ನೂ ಆಕರ್ಷಿಸುತ್ತಾನೆ- ಸ್ವಲ್ಪ ಮಾತುಗಳಲ್ಲಿ ಹೆಚ್ಚು ಅರ್ಥವನ್ನು ಹೇಳುವ ಅವನ ಜಾಣ್ಮೆಯು ಆಧುನಿಕ ಸುಶಿಕ್ಷಿತರನ್ನು ಕೂಡ ಅಚ್ಚರಿಗೊಳಿಸುತ್ತದೆ. ವೇದಾಗಮಗಳ ತಾತ್ಪರ್ಯವನ್ನು ಸುಲಭ ವಾದ ಕನ್ನಡದ ಮಾತುಗಳಲ್ಲಿ ಹೇಳುವ ಅವನ ನೈಪುಣ್ಯವು ಪಂಡಿತ ಪ್ರಕಾಂ ಡರನ್ನೂ ತಲೆದೂಗುವಂತೆ ಮಾಡುತ್ತವೆ. ಹೀಗೆ ಕ್ರಾಂತಿಕಾರಕ ಕವಿ ಯಾದ ಸರ್ವಜ್ಞನು ಕನ್ನಡ ಜಾಣನೇ ಅಲ್ಲದೆ ಕನ್ನಡಕ್ಕೆ ಪ್ರಾಣವೂ ಆಗಿ ದ್ದಾನೆ. ಪಂಡಿತರಿಗೆ ಹಿಮಾಲಯದಂತೆ ಒಂದು ನಿಗೂಢವಾದ ಸಮ ಸ್ಯೆಯೂ ಆಗಿದ್ದಾನೆ.

ಸರ್ವಜ್ಞನು ಶಿವಶರಣರ ವಚನಗಳಿಂದ ಸ್ಫೂರ್ತಿಯನ್ನು ಪಡೆದಿದ್ದಾನೆ. ಶರಣರ ವಚನಗಳು ಮತಧರ್ಮ ಪ್ರಧಾನವಾಗಿದ್ದರೆ, ಸರ್ವಜ್ಞ ವಚನಗಳು ನೀತಿಪ್ರಧಾನವಾಗಿವೆ. ಇವನ್ನು ಸರ್ವಜ್ಞ ಪದಗಳು, ಸರ್ವಜ್ಞ ಹಾಡುಗಳು ಎಂದು ಹೇಳುವುದುಂಟು. ಸುಮಾರು ೨೦೦೦ದಷ್ಟು ಸರ್ವಜ್ಞ ವಚನ ಗಳಿವೆ. ಅವುಗಳಲ್ಲಿ ೨೦೦–೩೦೦ ವಚನಗಳು ವಿಶ್ವಸಾಹಿತ್ಯದಲ್ಲಿ ಮನ್ನಣೆ ಯನ್ನು ಪಡೆಯಲು ಅರ್ಹವಾಗಿವೆ. ಈಗ ಅಚ್ಚಾದ ವಚನಗ್ರಂಥದಲ್ಲಿ ಕೆಲವು ಪ್ರಕ್ಷಿಪ್ತ ವಚನಗಳೂ ಉಂಟು.

ಸಂನ್ಯಾಸಿಯೂ ಸಂಚಾರಿಯೂ ಆದ ಸರ್ವಜ್ಞನು ಒಂದೆಡೆ ಕೂತು ಗ್ರಂಥವನ್ನು ಬರೆದಂತೆ ತೋರುವುದಿಲ್ಲ. ಆಶುಕವಿಯಾದ ಅವನು ಸಮ

ಯೋಚಿತವಾಗಿ ಹಾಡಿದ ವಚನಗಳನ್ನು ಕೇಳಿದ ಜನ ಬರೆದಿಟ್ಟಿರಬೇಕೆಂದು ತೋರುತ್ತದೆ. ಸರ್ವಜ್ಞ ವಚನಗಳ ಶೈಲಿ ಮೃದುಮಧುರವಾಗಿದೆ. ಹಾಸ್ಯ ರಸದಿಂದ ತುಂಬಿ ತುಳುಕುತ್ತಿದೆ. ಇವನ ಶೈಲಿ ಪಂಪಭಾರತದಂತೆ ನಾರಿ ಕೇಳ ಪಾಕವಲ್ಲ. ರಾಘವಾಂಕನ ಹರಿಶ್ಚಂದ್ರ ಕಾವ್ಯದಂತೆ ಕದಳೀಪಾಕವೂ ಅಲ್ಲ. ಕನಕದಾಸನ ನಳಚರಿತ್ರೆಯಂತೆ ದ್ರಾಕ್ಷಾಪಾಕಕ್ಕೆ ಸೇರಿದೆ. ಸರ್ವ ಜ್ಞನ ವಚನಗಳಲ್ಲಿ ಸುಂದರವಾದ ಗಾದೆಗಳಿವೆ. ಈ ಕವಿಯನ್ನು 'ಕನ್ನಡ ಗಾದೆಗಳ ಭಂಡಾರ' ಎಂದು ಹೇಳಬಹುದು. ವಚನಗಳ ಜನಪ್ರಿಯತೆಗೆ ಈ ಗಾದೆಗಳೂ ಮುಖ್ಯ ಕಾರಣ. ಇವನು ಬಳಸುವ ಕೆಲವು ನೀಚೋಪಮೆ ಗಳೂ, ಅಶ್ಲೀಲ ಶಬ್ದಗಳೂ, ಸಮಾಜದಲ್ಲಿರುವ ಕೆಲವು ಕತ್ತೆಮಾನವರಿಗಾಗಿ ಎಂಬುದನ್ನು ನಾವು ಮರೆಯಬಾರದು.

ಸರ್ವಜ್ಞವಚನಗಳು ಗಂಗಾನದಿಯಂತೆ ನಿರ್ಮಲ, ಸಾಗರದಂತೆ ಸ್ವತಂತ್ರ, ಗಗನದಂತೆ ವಿಶಾಲ, ಗಿರಿಗಳಂತೆ ಗಂಭೀರ, ಸಿಡಿಲಿನಂತೆ ಭಯಂ ಕರ ಎಂದು ಹೇಳಬಹುದು. ಸರ್ವಜ್ಞನು ತನ್ನ ವಚನಗಳಲ್ಲಿ ನೀತಿಯನ್ನು ಪ್ರಧಾನವಾಗಿ ಹೇಳಿದ್ದಾನೆ. ಅವನು ಧರ್ಮ, ಜ್ಞಾನ, ಗುರು, ದೈವ, ಸುಖ, ದುಃಖ, ವೈದ್ಯ, ಜ್ಯೋತಿಷ, ಗಣಿತ, ಒಗಟು, ವಿಡಂಬನ, ಹೆಣ್ಣು, ಗಂಡು ಇತ್ಯಾದಿ ಎಲ್ಲ ವಿಷಯಗಳನ್ನೂ ಕುರಿತು ನಿರೂಪಿಸಿದ್ದಾನೆ.

ಸರ್ವಜ್ಞನು ಕೇವಲ ಕವಿಯಲ್ಲ. ಅವನು ಕ್ರಾಂತಿಕಾರಕ, ಧರ್ಮ ಬೋಧಕ, ಸಮಾಜ ಸುಧಾರಕ, ಭಾಷಾ ಪ್ರಚಾರಕ ಎಂದು ಹೇಳಬಹುದು. ಅನುಭವ ಪ್ರಧಾನವಾದ ಅವನ ವಚನಗಳನ್ನು ಕೇಳುವುದೂ, ಅವನ ಉಪ ದೇಶದಂತೆ ನಡೆಯುವುದೂ ನಮ್ಮ ಜನತೆಗೆ ಲಾಭಪ್ರದ. ಕನ್ನಡ ಸಾಹಿ ತ್ಯದ ನಂದನವನದಲ್ಲಿ ಸರ್ವಜ್ಞ ವಚನಗಳು ಮಲ್ಲಿಗೆಯ ಹೂವಿನಂತೆ ಘಮ ಘಮಿಸುತ್ತಿವೆ. ರಸಿಕದುಂಬಿಗಳನ್ನು ಆಕರ್ಷಿಸುತ್ತಿವೆ. ಆದ್ದರಿಂದಲೇ ೧೭ನೇ ಶತಮಾನದ ತೆಲುಗು ಜನಪದ ಕವಿ ವೇಮನನಿಗೆ ಕೂಡ ಸರ್ವಜ್ಞನ ವಚನಗಳು ಮಾರ್ಗದರ್ಶಕವಾಗಿವೆ. ಪ್ರಾಚೀನ ಕವಿಯಾದ ತಮಿಳು ತಿರು ವಳ್ಳುವನ ತಿರುಕುರುಳಿಗೆ ಇವನ ವಚನಗಳು ಸಮುಜೋಡಿಯಾಗಿ ನಿಂತು ಸಾಹಿತ್ಯದಲ್ಲಿ ಗೌರವವನ್ನು ಪಡೆದಿವೆ.

# ಸರ್ವಜ್ಞನ ಸಾಹಿತ್ಯದೃಷ್ಟಿ

ಸರ್ವಜ್ಞಮೂರ್ತಿಯ ವಚನಗಳನ್ನು ಕೇವಲ ಸಾಹಿತ್ಯ ದೃಷ್ಟಿಯಿಂದ ಓದುವವರಿಗೂ ಆನಂದಪ್ರಾಪ್ತಿಯಾಗುವುದರಲ್ಲಿ ಸಂಶಯವಿಲ್ಲ. ಈತನ ಪ್ರತಿಯೊಂದು ತ್ರಿಪದಿಯಲ್ಲಿಯೂ ಪ್ರಾಸ-ಅನುಪ್ರಾಸ, ಯತಿ, ರಸ, ಭಾವ, ವಕ್ರೋಕ್ತಿ, ಅಲಂಕಾರ ಮೊದಲಾದ ಕಾವ್ಯಾಂಶಗಳನ್ನು ನಾವು ಕಾಣಬಹುದು. "ಯತಿ ವಿಲಂಘನದಿಂದರಿದಲ್ತೆ ಕನ್ನಡಂ" ಎಂದು ಶಬ್ದಮಣಿ ದರ್ಪಣದಲ್ಲಿ ಕೇಶಿರಾಜನು ಕನ್ನಡಕ್ಕೆ 'ಯತಿ' ಮುಖ್ಯವಲ್ಲವೆಂದು ಹೇಳಿದ್ದರೂ, ಕನ್ನಡ ಜಾಣ ಸರ್ವಜ್ಞನು ಯತಿಗೆ ಅತ್ಯಂತ ಪ್ರಾಮುಖ್ಯತೆಯನ್ನು ಕೊಟ್ಟು ಕಾವ್ಯಸೌಂದರ್ಯವನ್ನು ಹೆಚ್ಚಿಸಿದ್ದಾನೆ. ಸಂಸ್ಕೃತ ಕಾವ್ಯಗಳಲ್ಲಿ ಯತಿಗೆ ಪ್ರಾಮುಖ್ಯತೆಯುಂಟೆಂಬುದು ಸಹೃದಯರಿಗೆ ತಿಳಿದಿರುವ ವಿಚಾರ. ಸರ್ವಜ್ಞ ಕವಿಯು ಉತ್ತಮ ಸಾಹಿತಿ ಹಾಗೂ ಶಬ್ದಶಿಲ್ಪಿ ಎಂಬುದಕ್ಕೆ ಅವನು ಸ್ವತಂತ್ರವಾಗಿ ನಿರ್ಮಿಸಿರುವ ಕೆಲವು ಸುಂದರವಾದ ಕನ್ನಡ ಶಬ್ದಗಳು ನಿದರ್ಶನವಾಗಿವೆ.

'ತುತ್ತಿನ ಚೀಲ' (ಹೊಟ್ಟೆ) ಇಂಗುತಿಂಬಾತ (ಬ್ರಾಹ್ಮಣ) ಸಂದರಿವು (ಉತ್ತಮಜ್ಞಾನ) ಅಟ್ಟಕ್ಕುವಾಕೆ, ಇಂಬರಿಯುವಾಕೆ, ಮನೆಯಾಕೆ (ಹೆಂಡತಿ) ಹೊಂಬೇರು (ಚಿನ್ನ), ತಗ್ಗಿನಕುಣಿ, ಉಚ್ಚೆಯ ಬಚ್ಚಲು, ಸಂದಿಯಃಗಾಯ, ಕಾಮನಕೆರೆ (ಯೋನಿ) ಗುದ್ದುಗಣ್ಣವ (ಮುದುಕ) ಒದಗುವವ (ವಿಟ) ಕಿರಿಮಾತು, ಕಾಡುನುಡಿ (ಬೈಗುಳು) ಹುತ್ತಿನಹುಳು (ಹಾವು) ತುತ್ತೆಂಬ ಶಿವ, ಅನ್ನದೇವರು (ಊಟ) ಕಿರಿಗೂಸು (ಕನ್ಯೆ) ಹಿಡಿ ಹಿಟ್ಟು (ಮುದ್ದೆ) ಕೊಲುವಧರ್ಮ (ಹಿಂಸಾತ್ಮಕ ಕರ್ಮಮಾರ್ಗ) ಎಲುವಿನ ಮನೆ (ದೇಹ) ಎರಡು ನುಡಿ (ಸುಳ್ಳು) ಮೇಟವಿದ್ಯೆ (ಒಕ್ಕಲುತನ) ಅಂಬರದ ಕಲಹ (ಗುಡುಗು-ಸಿಡಿಲು) ಕುಂದುಗುಲದವಳು (ಹೊಲತಿ) ನಾಡು ನುಡಿ (ರಾಜಕೀಯ ಮಾತು) ಕತ್ತೆಮಾನವ (ದಡ್ಡ).

ಈ ಮೇಲೆಕಂಡ ಶಬ್ದಗಳು ಸರ್ವಜ್ಞನ ಭಾಷಾ ನೈಪುಣ್ಯಕ್ಕೆ ನಿದರ್ಶನವಾಗಿವೆಯಲ್ಲದೆ ಅವನ ರಸಿಕತೆಗೆ ಕೂಡ ಸಾಕ್ಷಿಯಾಗಿವೆ.

ಸರ್ವಜ್ಞಮೂರ್ತಿಯು ಕನ್ನಡದ ಕಟ್ಟಾಭಿಮಾನಿಯೆಂದು ತೋರು ತ್ತದೆ. ಇವನ ಇಡೀ ಗ್ರಂಥದಲ್ಲಿ 'ತತ್ವಮಸಿ, ಜಾತಸ್ಯ ಮರಣಂ ಧೃವಂ' ಎಂಬ ಒಂದೆರಡು ಸಂಸ್ಕೃತ ಪ್ರಯೋಗಗಳನ್ನು ಬಿಟ್ಟರೆ ಮತ್ತೆಲ್ಲಿಯೂ ಸಂಸ್ಕೃ ತದ ಸುಳಿವು ಕಂಡುಬರುತ್ತಿಲ್ಲ. ಶಾಸ್ತ್ರ ಮತ್ತು ಸಾಹಿತ್ಯ ಈ ಎರಡರ ಸಮ ನ್ವಯದಂತಿರುವ ಈತನ ವಚನಗಳು ಈ ರೀತಿ ಅಚ್ಚಗನ್ನಡಮಯವಾಗಿರು ವುದು ರಸಿಕರ ಮೆಚ್ಚುಗೆಗೆ ಪಾತ್ರವಾಗಿದೆಯಲ್ಲವೆ ? ಈತನ ವಚನಗಳಲ್ಲಿ ಕೊಡುವಾತನೇ ಹರನು, ಪಡೆವಾತನೇ ನರನು, ಬೆಂದುದನು ಬಿತ್ತಿ ಬೆಳೆ ದುಂಬ ದಾಸೋಹ, ಒಕ್ಕಲನು ಕೊಂಡಾಡಬೇಕು, ಹಗೆಗಳ ಕೊಂಡಾಟ ಸಲ್ಲ, ಅರಿವಿಂಗೆ ಹಿರಿದು ಕಿರಿದಿಲ್ಲ,ನಾಯಿಗಳಾರು ಇರುವ ತನಕ,ಚಂದ್ರವದನೆ ಯರ ಕಡೆಗಣ್ಣ ನೋಟದಿ ನಿಂದಿಹನು ಸ್ಮರನು, ಮೇದಕಬ್ಬಿನ ಸಿಪ್ಪೆ, ಬಡ ತನವೆಂಬ ಹುಲಿ ಕೂಡಿ ಬರುವಾಗ ಗರಗಸದೊಡನೆ ಮರ ಹೋರಿದಂತೆ, ಸುಣ್ಣಕಲ್ಲಿನಲ್ಲಿ ಅಡಗಿ ಸುಡುಗಿಚ್ಚು ತಣ್ಣಗಿದ್ದಂತೆ, ಪರಿಣಾಮವಕ್ಕು ಪದ ವಕ್ಕು, ಕೈಲಾಸ ನೆರೆಮನೆಯಕ್ಕು, ಸಾವಿಂಗೆ ಸಮುತಿಂಗೆ ಆವುದಂತರ ವಯ್ಯ ? ಈವಂಗೆ ದೇವಂಗೆ ಆವುದಂತರವಯ್ಯ ? ಹಂದಿಯೂ ಗಜವೂ ಸರಿಯೆಂಬ, ಕೊಂಡೆಯನು ಕಲಿಯು ಒಂದೆಂಬ, ಮೂರ್ಖರೊಳು ಹೋ ರಾಟಬೇಡ ಇತ್ಯಾದಿ ಪ್ರಯೋಗ ವೈಚಿತ್ರಗಳೂ ಮಾತಿನ ಕಟ್ಟಾಣಿಗಳೂ ಸರ್ವಜ್ಞನ ಕಾವ್ಯ ಕಲಾಭಿಜ್ಞತೆಗೆ ನಿದರ್ಶನಗಳಾಗಿವೆ.

೧. ಬೆಟ್ಟಕರ್ಪೂರವುರಿದು ಬೊಟ್ಟಿಡಲು ಬೂದಿಲ್ಲ
೨. ಉಣ್ಣೆ ಕೆಚ್ಚಲೊಳಿರ್ದು ಉಣ್ಣದದು ನೊರೆವಾಲ
೩. ತೆಪ್ಪವನು ನಂಬಿದಡೆ ತಪ್ಪದೇ ತಡಿಗಹುದು
೪. ಸೋರುವಾಮನೆಗಿಂತ ದಾರಿಯಾಮರಲೇಸು
೫. ತೋಟದಾ ಬೇಲಿಯನು ದಾಟದವರಾರಣ್ಣ ?
೬. ಸತ್ತುಹೋದರೆ ನಿನಗೆ ಅದೆತ್ತಣದು ಮೋಕ್ಷವೈ ?
೮. ಅದ್ವೈತಿ ತಾನಾಗಿ ಯುದ್ಧವಿನ್ನಾರೊಡನೆ ?
೯. ಅಲ್ಲ ಸಿಹಿಯಾದಂದು ನೆಲ್ಲಿ ಹಣ್ಣಾದಂದು !
೧೦. ಹರ ತನ್ನೊಳಿರ್ದ್ದು ಗುರು ತೋರದೇ ತಿಳಿವುದೇ ?

೧೧. ಬಳ್ಳಿಗುರುಡರು ಕೂಡಿ ಹಳ್ಳವನು ಬಿದ್ದಂತೆ !
೧೨. ಹೇಳಬಲ್ಲಡೆ ಗುರುವು ಕೇಳಬಲ್ಲಡೆ ಶಿಷ್ಯ
೧೩. ಪರುಷ ಲೋಹವ ಸೋಂಕಿ ವರುಷ ಇರಬಲ್ಲುದೆ ?
೧೪. ಉರಿಯುಂಡ ಕರ್ಪುರದ ಸರಕು ಮಾರುವುದುಂಟೆ ?
೧೫. ಲಿಂಗವಿರಹಿತನಾಗಿ ನುಂಗದಿರು ಏನುವನು
೧೬. ಹುಟ್ಟಿಸುವನಜನೆಂಬ ಕಷ್ಟದಾ ನುಡಿ ಬೇಡ
೧೭. ನಿದ್ರೆಯಿಂ ಸುಖವಿಲ್ಲ, ಉಪದ್ರದಿಂ ಅರಿಯಿಲ್ಲ
೧೮. ಮಾತೆಯಿಂ ಹಿತರಿಲ್ಲ, ಕೋತಿಯಿಂ ಮರುಳಿಲ್ಲ
೧೯. ಜ್ವರಬಂದ ಮನುಜಂಗೆ ನೊರೆವಾಲು ವಿಷವಕ್ಕು !
೨೦. ಜ್ಞಾನದಿಂ ಮೇಲಿಲ್ಲ, ಶ್ವಾನದಿಂ ಕೀಳಿಲ್ಲ
೨೧. ತರಣಿಗಂ ತಿಮಿರದಾವರಣ ತಾನಂಟುವುದೆ ?
೨೨. ವೃಕ್ಷ ತಾ ಸತ್ತು ಹುಟ್ಟುವುದೆ ಮತ್ತೆ ?
೨೩. ಗಗನಕ್ಕೆ ಹೊಗೆ ಹೋಗಿ ಮಿಗೆ ಕೆಳಗೆ ಬಪ್ಪುದೆ ?
೨೪. ಯೋಗಿಗಂ ಹೊಲೆಯಿಲ್ಲ ಸಾಗರಕೆ ನೆಲೆಯಿಲ್ಲ
೨೫. ವಾರಣಾಸಿಗೆ ಹೋದ ಕಾರಣವದೇನಯ್ಯ ?
೨೬. ಸತ್ಯವೆಂಬುದು ತಾನು ಹಿತ್ತಲದ ಗಿಡನೋಡ
೨೭. ಕೋಪವೆಂಬುದು ತಾನು ಪಾಪದಾ ನೆಲಗಟ್ಟು
೨೮. ಹೊಲೆಯಿಲ್ಲ ಅರಿದಂಗೆ ಬಲವಿಲ್ಲ ಬಡವಂಗೆ
೨೯. ರಾಗವಿದ್ದರೆ ಭೋಗ, ಭೋಗವಿದ್ದರೆ ರಾಗ
೩೦. ಹಮ್ಮು ಎಂಬುವ ಕಿಚ್ಚು ಒಮ್ಮೆಲೇ ನಂದುವದೆ ?
೩೧. ಇಂದ್ರಿಯವ ತಾಳಿದನೆ ಯೋಗೀಂದ್ರನೆನಿಸುವನು
೩೨. ಯೋಗಿಯಾ ಮನದಳವ ಯೋಗಿಯೇ ತಾಬಲ್ಲ
೩೩. ಕತ್ತೆ ಬೂದಿಲಿ ಹೊರಳಿ ಮತ್ತೆ ಯತಿಯಪ್ಪುದೆ ?
೩೪. ಅತ್ತಿಮರ ತಾ ಕಾಯ ಹೊತ್ತಿದ್ದ ತೆರನಂತೆ !
೩೫. ಗಾನವಿದ್ಯೆಯು ಲೇಸು ಮಾನವತಿ ಸತಿಲೇಸು
೩೬. ತಂತಿವಾದ್ಯವು ಲೇಸು ಮಂತ್ರಿಯಾ ಕೆಳೆಲೇಸು
೩೭. ನಾಡೆಂಬ ದೇಹಕ್ಕೆ ರೂಢಿಪತಿಯೇ ಪ್ರಾಣ

೩೮. ಜಾತಿ ವೀರರು ಸಾವ ಭೀತಿಗಂಜುಳಿವರೆ ?
೩೯. ರೊಟ್ಟಿಯಿಲ್ಲದ ಊಟ, ಹೊಟ್ಟೆಗಿಲ್ಲದ ಕೂಟ
೪೦. ರಾಗವಿಲ್ಲದ ವಿದ್ಯೆ ಭೋಗವಿಲ್ಲದ ನಿದ್ರೆ
೪೧. ಮೇರುವಿಂಗೆಣೆಯಿಲ್ಲ ಧಾರುಣಿಗೆ ಪಡಿಯಿಲ್ಲ
೪೨. ಕಪ್ಪೆಗಳು ಮೀನುಗಳು ಇಪ್ಪುದದು ತೀರ್ಥವೆ ?
೪೩. ಸತ್ಯರಾನುಡಿತೀರ್ಥ ನಿತ್ಯರಾ ನಡೆತೀರ್ಥ
೪೪. ಬಲ್ಲವರ ಒಡನಾಟ ಬೆಲ್ಲವನು ಮೆದ್ದಂತೆ
೪೫. ಸಜ್ಜನರು ಸಾಯಲೊಡೆ ನಿರ್ಜನರು ಮರುಗುವರು
೪೬. ದ್ವಿಜರೆಲ್ಲ ಬೂದಿಗೂಡಿಹರು
೪೭. ಸತ್ತುದನು ತಿಂಬಾತ ಎತ್ತಣದ ಹೊಲೆಯನವ ?
೪೮. ಜ್ಯೋತಿ ಇಲ್ಲದ ಮನೆಯು ರೀತಿ ಇಲ್ಲದ ಸತಿಯು
೪೯. ಮುತ್ತೇಕೆ ಮುದುಕಿಗೆ ? ತೊತ್ತೇಕೆ ಗುರುಗಳಿಗೆ ?
೫೦. ಮೂರ್ಖನಾ ಹೋರಾಟಸಲ್ಲ
೫೧. ಮೊಸರು ಇಲ್ಲದ ಊಟ, ಕೆಸರು ಇಲ್ಲದ ಗದ್ದೆ
೫೨. ಅಂದವಿಲ್ಲದ ಹೆಣ್ಣು ಚಂದವಿಲ್ಲದ ಮುದುವ
೫೩. ಹೆಣ್ಣೆಂಬ ನಾಯ ನಂಬುವರೆ ?
೫೪. ಹೆಣ್ಣು ತಾ ನೆಚ್ಚಿರಲು ಹೊಲ್ಲ
೫೫. ದೃಢಮನವು ಬಾಲೆಯರಿಗಿಲ್ಲ
೫೬. ಸೂಳೆಗಂ ಸತ್ಯವಿಲ್ಲೆಂದ
೫೭. ಸೂಳೆಗಂ ಕೀಳುಮೇಲಿಲ್ಲ
೫೮. ಸೂಳೆಯನು ನೆರೆನಂಬಿ ಸಾಲಕ್ಕೆ ಸಿಲುಕದಿರು
೫೯. ಸಾಲವನು ಕೊಂಬಾಗ ಹಾಲೋಗರುಂಡಂತೆ
೬೦. ಹಸಿಯದಿರೆ ಉಣಬೇಡ ಹಸಿದು ನೀನಿರಬೇಡ
೬೧. ಎಲ್ಲ ಆಶೆಯ ಬಿಟ್ಟರಲ್ಲಿಯೇ ಕೈಲಾಸ
೬೨. ಚಿತ್ತಿಯಾ ಮಳೆ ಹನಿದು ಮುತ್ತಾಗ ಬಲ್ಲುದೆ ?
೬೩. ಕುಂಡಲಿಯ ಕಂಡಾತ ಹೆಂಡತಿಗೆ ಒಲಿಯುವನೆ ?
೬೪. ಒಡಲೆಂಬ ಹುತ್ತಿಂಗೆ ನುಡಿವ ನಾಲಗೆ ಸರ್ಪ

ಇತ್ಯಾದಿ ಕನ್ನಡ ನುಡಿಗಟ್ಟುಗಳನ್ನೂ, ಲೋಕನೀತಿಗಳನ್ನೂ ಹಿತ ಮಿತವಾದ, ರೀತಿಯಿಂದ ಹೇಳಿದ ಸರ್ವಜ್ಞನು ಉತ್ತಮ ಕವಿಯೆಂದೂ ಪ್ರಾಸಾದಿಕ ಕವಿಯೆಂದೂ ತಿಳಿಯಬಹುದಲ್ಲವೆ ?

ಉತ್ತಮ ಕವಿಗಳಿಗೆ ಒಳ್ಳೆಯ ಶೈಲಿ ಅಳವಟ್ಟಿರಬೇಕೆಂಬುದೊಂದು ಸಿದ್ಧಾಂತವಿದೆ. ಅದನ್ನೇ ಶೈಲಿಯೇ ಕವಿ (Style is Poet) ಎಂಬ ಆಂಗ್ಲವಾಣಿ ಹೇಳುತ್ತಿದೆ. ಸರ್ವಜ್ಞನು, ಹಿತಮಿತ, ಹಾಸ್ಯಪ್ರಿಯತೆ, ಅಚ್ಚಗನ್ನಡ ಶಬ್ದಗಳು, ಉಚಿತ ಪದಪ್ರಯೋಗ, ವಕ್ರೋಕ್ತಿ, ವಿನೂತನತೆ ಮೊದಲಾದ ಲಕ್ಷಣಗಳಿಂದ ಕೂಡಿದ ತನ್ನದೇ ಆದ ಒಂದು ಸುಂದರ ಶೈಲಿ ಯನ್ನು ಅಳವಡಿಸಿಕೊಂಡು ಕನ್ನಡ ಸಾಹಿತ್ಯದಲ್ಲಿ ಒಬ್ಬ ಶ್ರೇಷ್ಠ ಕವಿಯೆಂಬ ಕೀರ್ತಿ ಗಳಿಸಿರುತ್ತಾನೆ.

"ಹಲಸಿನಾ ತೊಳೆಯನ್ನು ತಿಳಿವಿನಾ ತುಪ್ಪದಲಿ ಗಳಗಳನೆ ಅದ್ದಿತಿಂ ದಂತೆ ರುಚಿಕರವು ಇಳಿಗೆ ಸರ್ವಜ್ಞ ವಚನಗಳು."





ಘನಲಿಂಗಿ ರುದ್ರಮುನಿ ಗವಿ, ಕಲ್ಯಾಣ ಪಟ್ಟಣ
ಆಚಾರ್ಯ ರೇವಣಸಿದ್ಧನ ಮಗನಾದ ರುದ್ರಮುನಿ ಸ್ವಾಮಿಯು ಕಲ್ಯಾಣದ
ಕ್ರಾಂತಿಯ ಓರ್ವ ಮುಂದಾಳು. ಅವನ ಪೂಜಾ ಗೃಹವಿದು.
ಇದು ತ್ರಿಪುರಾಂತಕನ ಕೆರೆಯ ಪಕ್ಕದಲ್ಲಿ ಬಿಲ್ವವನದಲ್ಲಿದೆ.

# ಧರ್ಮ—ಸಾಹಿತ್ಯ—ಸಂಸ್ಕೃತಿ[A]

## ಶ್ರೀ ಕ್ಷೇತ್ರ ಮಹಿಮೆ

ಶ್ರೀ ಕ್ಷೇತ್ರ ಧರ್ಮಸ್ಥಳವು ಕರ್ನಾಟಕ ರಾಜ್ಯದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿದೆ. ಪಶ್ಚಿಮ ಘಟ್ಟಗಳ ತಪ್ಪಲಿನಲ್ಲಿ, ನೇತ್ರಾವತೀನದಿಯ ತೀರದಲ್ಲಿ, ರಮಣೀಯವಾದ ಪ್ರಕೃತಿ ಸೌಂದರ್ಯದ ಮಧ್ಯದಲ್ಲಿ ಪರಿಶೋಭಿಸುತ್ತಿರುವ ಈ ಕ್ಷೇತ್ರವು ಹಲವಾರು ಕಾರಣಗಳಿಂದ ಗಣ್ಯತೆಯನ್ನು ಪಡೆದಿದೆ. ಈ ಕ್ಷೇತ್ರದ ಅಧಿಪತಿ ಪರಮಶಿವನಾದ ಮಂಜುನಾಥ, ಇಲ್ಲಿನ ಅರ್ಚಕರು ವೈಷ್ಣವ ಬ್ರಾಹ್ಮಣರು, ಈ ಕ್ಷೇತ್ರದ ಯಾಜಮಾನ್ಯವನ್ನು ವಹಿಸಿಕೊಂಡಿರುವವರು ಜೈನಧರ್ಮದ ಹೆಗ್ಗಡೆಯವರು ಎಂಬುದನ್ನು ಸ್ಮರಿಸಿಕೊಂಡಾಗ 'ಧರ್ಮಸ್ಥಳ' ಎಂಬ ಹೆಸರು ಈ ಪವಿತ್ರ ಕ್ಷೇತ್ರಕ್ಕೆ ಅನ್ವರ್ಥವೆಂದೂ, ಸಕಲ ಧರ್ಮಗಳ ಸಮನ್ವಯಕ್ಕೆ ಇದು ಅನುಕೂಲವಾದ ಸ್ಥಳವೆಂದೂ ನಾವು ಸುಲಭವಾಗಿ ಅರಿಯಬಹುದು. ಪುಣ್ಯಶ್ಲೋಕರಾದ ಜಿನಲೋಕವಾಸಿಗಳು ಪೂಜ್ಯ ಮಂಜಯ್ಯ ಹೆಗ್ಗಡೆ ಅವರು ಈ ಕ್ಷೇತ್ರದ ಆಡಳಿತದ ಯಜಮಾನರಾಗಿ ಇರುವ ಪರ್ಯಂತರ ಇದನ್ನು ಸರ್ವತೋಮುಖವಾಗಿ ಅಭಿವೃದ್ಧಿಗೆ ತಂದರು. ಇಲ್ಲಿ ನಡೆಯುತ್ತಿರುವ ಧರ್ಮ ಸಮ್ಮೇಳನ, ಸಾಹಿತ್ಯ ಸಮ್ಮೇಳನ, ಕೈಗಾರಿಕಾ ಪ್ರದರ್ಶನ ಮೊದಲಾದುವುಗಳನ್ನು ದೂರದೃಷ್ಟಿಯುಳ್ಳ ಅವರೇ ಪ್ರಾರಂಭಿಸಿದರು. ಆ ಕಾರ್ಯವನ್ನೇ ಇಂದಿನ ಮಾನ್ಯ ಹೆಗ್ಗಡೆಯವರು ಮುಂದುರಿಸಿಕೊಂಡು ಬರುತ್ತಿರುವುದು ಸಂತೋಷಪ್ರದವಾಗಿದೆ. ಅಲ್ಲದೆ ನಮ್ಮ ನಾಡಿನ ಇತರ ಧರ್ಮಕ್ಷೇತ್ರಗಳ ಆಡಳಿತಾಧಿಕಾರಿಗಳಿಗೂ ಇದು ಮಾರ್ಗದರ್ಶಕವಾಗಿದೆ.

---

A ಶ್ರೀ ಕ್ಷೇತ್ರ ಧರ್ಮಸ್ಥಳದಲ್ಲಿ ದಿನಾಂಕ ೩೦-೧೧-೧೯೫೭ರಂದು ನಡೆದ ೩೫ನೇ ಸಾಹಿತ್ಯ ಸಮ್ಮೇಲನದ ಅಧ್ಯಕ್ಷರಾಗಿ ಶ್ರೀಮಾನ್ ಬಿ. ಶಿವಮೂರ್ತಿಶಾಸ್ತ್ರಿಗಳು ನಿರೂಪಿಸಿದ ಭಾಷಣ.

## ಕರ್ಣಾಟಕ ರಾಜ್ಯ

ಭರತ ಖಂಡದಲ್ಲಿ ಕರ್ಣಾಟಕವು ಹಲವಾರು ದೃಷ್ಟಿಯಿಂದ ಅತ್ಯಂತ ಗಣ್ಯತೆಯನ್ನು ಪಡೆದ ಪ್ರಾಂತವೆನಿಸಿದೆ. ಕರ್ಣಾಟಕದ ನೆಲ ಫಲವತ್ತಾದುದು. ಸಮುದ್ರ, ಬಂದರುಗಳು, ಬೆಟ್ಟಗಳು, ನದಿಗಳು, ಜಲಪಾತಗಳು, ಖನಿಜ ಸಂಪತ್ತು, ಅರಣ್ಯ ಸಂಪತ್ತು, ಒಳ್ಳೆಯ ವಾತಾವರಣ ಇವೆಲ್ಲ 'ಕನ್ನಡನಾಡು ಸುಕೃತದ ಬೀಡು' ಎಂಬುದಕ್ಕೆ ನಿದರ್ಶನಗಳಾಗಿವೆ. ಲೋಹಗಳಲ್ಲಿ ಶ್ರೇಷ್ಠ ವಾದ ಚಿನ್ನ, ಪ್ರಾಣಿಗಳಲ್ಲಿ ಶ್ರೇಷ್ಠವಾದ ಆನೆ, ವೃಕ್ಷಗಳಲ್ಲಿ ಉತ್ತಮವಾದ ಶ್ರೀಗಂಧ, ನದಿಗಳಲ್ಲಿ ಉಪಯುಕ್ತವಾದ ಕಾವೇರಿ ಮತ್ತು ಕೃಷ್ಣಾ ಇವು ಕರ್ನಾಟಕದಲ್ಲಿ ಇರುವುದರಿಂದ ಈ ದೇಶವು ಭಾರತದಲ್ಲಿಯೇ ಉತ್ತಮ ವಾದುದೆಂದು ಒಬ್ಬ ಲೇಖಕನು ಹೇಳಿದ್ದಾನೆ. ಹೀಗೆ ಹೇಳಿರುವುದನ್ನು ಕನ್ನಡ ಜನ ಸ್ವಾಭಿಮಾನದೃಷ್ಟಿಯಿಂದಲೇ ಅಲ್ಲ, ಸತ್ಯದ ದೃಷ್ಟಿಯಿಂದ ಕೂಡ ವಿಚಾರಿಸುವುದು ಅಗತ್ಯವಾಗಿದೆ.

ಸುಮಾರು ಆರು ಶತಮಾನಗಳ ಹಿಂದಿನಿಂದ ಬೇರೆ ಬೇರೆ ರಾಜಕೀಯ ಆಡಳಿತಗಳಿಗೆ ಸಿಕ್ಕಿಹೋಗಿದ್ದ ಕನ್ನಡನಾಡು ಭಗವಂತನ ಕೃಪೆಯಿಂದ ಈಗ್ಗೆ ಕೆಲವು ದಿನಗಳ ಹಿಂದೆ (ತಾ॥ ೧–೧೧–೧೯೫೬) 'ಮೈಸೂರು ರಾಜ್ಯ' ಎಂಬ ಹೆಸರಿನಿಂದ ಒಂದು ಪ್ರಾಂತವೆನಿಸಿದುದು ನಮ್ಮ ಜೀವಮಾನದ ಅತ್ಯಂತ ಮಹತ್ವದ ಘಟನೆಯೆನ್ನಬಹುದು. ಎರಡುಕೋಟಿ ಕನ್ನಡ ಜನರ ಸರ್ವಾಂಗೀಣ ಪ್ರಗತಿಗೆ ಸಾಧಕವಾದ ಈ ಕರ್ನಾಟಕ ರಾಜ್ಯಸ್ಥಾಪನೆಯು ನಮ್ಮ ಜನರ ಅಭ್ಯುದಯಕ್ಕೆ ಒಳ್ಳೆಯ ಸಾಧನವೆನಿಸಿದೆ. ಈ ಸಂದರ್ಭದಲ್ಲಿ ಕಾಸರಗೋಡು, ತಾಳವಾಡಿ, ಹೊಸೂರು, ಮಡಕಶಿರಾ, ಸೊಲ್ಲಾಪುರ, ಜತ್ತ, ಅಕ್ಕಲಕೋಟೆ, ಆದವಾನಿ ಮೊದಲಾದ ಕನ್ನಡ ಪ್ರದೇಶಗಳು ನಮ್ಮ ರಾಜ್ಯಕ್ಕೆ ಇನ್ನೂ ಸೇರಲಿಲ್ಲವಲ್ಲಾ ಎಂಬ ಕೊರಗು ನಮಗೆ ಇದ್ದೇ ಇದೆ. ಈ ಕಾರ್ಯವನ್ನು ನಾವು ಸಾಮೋಪಾಯದಿಂದ, ಉನ್ನತ ಮಟ್ಟದ ಮಾತು ಕತೆಗಳಿಂದ ದೊರಕಿಸಿಕೊಳ್ಳುವುದು ಇಂದು ನಮಗೆ ಅಗತ್ಯವೂ ಅನಿವಾರ್ಯವೂ ಆಗಿದೆ. ಸತ್ಯಾಗ್ರಹ ಮೊದಲಾದ ಚಳುವಳಿ ಅಗತ್ಯವಿಲ್ಲವೆಂದು ಕಾಣುತ್ತದೆ.

ನಮ್ಮ ನಾಡಿಗೆ 'ಮೈ ಸೂ ರು ರಾ ಜ್ಯ' ಎಂದು ಹೆಸರಿರಬೇಕೋ ಕರ್ಣಾಟಕ ರಾಜ್ಯ ಎಂದು ಹೆಸರಿರಬೇಕೋ ಎಂಬ ಬಗ್ಗೆ ನಮ್ಮ ನಮ್ಮವ

ರಲ್ಲಿಯೇ ಚರ್ಚೆ ನಡೆದಿದೆ. ಕರಿಯ ನಾಡು, ಕುರು ನಾಡು, ಕಮ್ಮಿತ ನಾಡು ಎಂಬ ಮೂಲ ರೂಪಗಳಿಂದ ಕರ್ಣಾಟಕ ಎಂಬ ಶಬ್ದವಾಗಿದೆಯೆಂದು ವಿದ್ವಾಂಸರು ತರ್ಕಿಸಿದ್ದಾರೆ. 'ಕರ್ಣಯೋಃ ಅಟತೀತಿ ಕರ್ಣಾಟಃ' ಎಂದು ಸಂಸ್ಕೃತ ಕವಿಯಾದ ವೆಂಕಟಾಧ್ವರಿಯು ಹೇಳಿದ್ದಾನೆ. ಇವೆಲ್ಲವುಗಳ ತಾತ್ಪರ್ಯ, ಕರಿಯ ಮಣ್ಣಿನಿಂದ ಕೂಡಿದ,' ಎತ್ತರ ಪ್ರದೇಶವೆನಿಸಿದ, ಸುಗಂಧ ಮಯವಾದ ಗಾಳಿಯಿಂದ ಕೂಡಿದ, ಕೀರ್ತಿವಂತವಾದ ದೇಶ ನಮ್ಮ ಕರ್ನಾಟಕ ಎಂಬ ಮಾತು ಸಿದ್ಧವಾಗುತ್ತದೆ. ಕರ್ಣಾಟಕ ಭಾಷಾ ಭೂಷಣ, ಕರ್ಣಾಟಕ ಶಬ್ದಾನುಶಾಸನ, ಕರ್ಣಾಟಕ ರತ್ನಸಿಂಹಾಸನ, ಕರ್ಣಾಟಕ ರಾಜ್ಯಸ್ಥಾಪಕ, ಕರ್ಣಾಟಕ ಕವಿಚೂತವನ ಚೈತ್ರ ಮೊದಲಾದ ಪ್ರಾಚೀನ ಉಲ್ಲೇಖಗಳು ನಮ್ಮ ನಾಡಿಗೆ 'ಕರ್ಣಾಟಕ' ಎಂಬ ಹೆಸರು ಉಚಿತವೆಂಬು ದನ್ನು ಸಿದ್ಧಗೊಳಿಸುತ್ತವೆ. ಆರನೆಯ ಶತಮಾನದ ಚಾಲುಕ್ಯರ ಒಂದು ಶಾಸನದಲ್ಲಿ 'ಕರ್ಣಾಟಕ ಬಲ' ಎಂಬ ಪ್ರಯೋಗವಿದೆ. ಗಂಗರಾಜನಾದ ಭೂವಿಕ್ರಮನ ಒಂದು ತಾಮ್ರಶಾಸನದಲ್ಲಿ (ಕ್ರಿ.ಶ. ೬೦೪) 'ಕರ್ನಾಟಕ' ಶಬ್ದ ಪ್ರಯೋಗವಿದೆ. ಇದನ್ನೆಲ್ಲಾ ತಿಳಿದೇ ರಾಜ್ಯ ಪುನರ್ವಿಂಗಡಣಾ ಸಮಿತಿ ವರದಿಯಲ್ಲಿ ನಮ್ಮ ಪ್ರಾಂತಕ್ಕೆ ಕರ್ಣಾಟಕ ರಾಜ್ಯ ಎಂಬ ಹೆಸರು ಕೊಡ ಲ್ಪಟ್ಟಿದೆ. ಹೀಗೆ ಭೌಗೋಳಿಕ, ಐತಿಹಾಸಿಕ, ಸಾಂಸ್ಕೃತಿಕ ಕಾರಣಗಳ ಫಲವಾಗಿ ಇಂದಿನ ಮೈಸೂರು ರಾಜ್ಯವು, ಸುಂದರ 'ಕರ್ಣಾಟಕ ರಾಜ್ಯ' ಎಂಬ ಹೆಸರಿನಿಂದ ಮುಂದುವರಿಯುವುದೇ ಎಲ್ಲ ರೀತಿಯಿಂದಲೂ ಸಾಧು ವಾದುದೆಂದು ನಾನು ಭಾವಿಸುತ್ತೇನೆ. ಕನ್ನಡ ಸಾಹಿತ್ಯ ಪರಿಷತ್ತು ಅಂದಿ ನಿಂದ ಇಂದಿನವರೆಗೆ 'ಕರ್ಣಾಟಕ' ಎಂಬ ಹೆಸರಿಗೆ ಪೂರ್ಣವಾಗಿ ಬೆಂಬಲ ವನ್ನು ಕೊಟ್ಟುಕೊಂಡು ಬಂದಿರುವ ಸಂಗತಿಯನ್ನು ನಾನಿಲ್ಲಿ ಮಹಾಜನರ ಗಮನಕ್ಕೆ ತರಲು ಬಯಸುತ್ತೇನೆ.

## ಕನ್ನಡ ಕುಲದ ಅರಿವು ಬೇಕು

ಕನ್ನಡಿಗರ ಬಹುದಿನದ ಕನಸು ನೆನಸಾದ ಕನ್ನಡ ರಾಜ್ಯೋದಯದ ಈ ಸಂದರ್ಭದಲ್ಲಿ ಕರ್ಣಾಟಕದಲ್ಲಿ ಅಥವಾ ಮೈಸೂರು ರಾಜ್ಯದಲ್ಲಿ ಜನತೆಯಲ್ಲಿ ಇರಬೇಕಾದ ಹುರುಪು ಉತ್ಸಾಹ ತೋರಿಬರುತ್ತಿಲ್ಲವೇಕೆ? ಎಂಬ ಪ್ರಶ್ನೆ

ಎಲ್ಲೆಡೆ ಕೇಳಿಬರುತ್ತಿದೆ. ದಿನಾಂಕ ೧-೧೧-೫೭ ರಂದು ರಾಜ್ಯದಲ್ಲೆಲ್ಲಾ ನಡೆಯಬೇಕಾಗಿದ್ದ ಕನ್ನಡ ರಾಜ್ಯೋದಯದ ಉತ್ಸವವನ್ನು ಸರ್ಕಾರದವರೂ ಬಹುಮಟ್ಟಿಗೆ ಸಾರ್ವಜನಿಕರೂ ಉದಾಸೀನವಾಗಿ ಕಾಣಲು ನಿಮಿತ್ತವೇನು? ಇದೇ ಸಂದರ್ಭದಲ್ಲಿ ಪಕ್ಕದ ಕೇರಳ, ಆಂಧ್ರ ರಾಜ್ಯಗಳಲ್ಲಿ ಕಂಡುಬಂದ ಉತ್ಸಾಹ ನಮ್ಮಲ್ಲೇಕೆ ಕಂಗೊಳಿಸಲಿಲ್ಲ? ಎಂಬ ಪ್ರಶ್ನೆಗೆ ಉತ್ತರ ಕೊಡುವುದು ನಮ್ಮೆಲ್ಲರ ಮೇಲಿರುವ ಹೊಣೆ. ಇದಕ್ಕೆ ಮುಖ್ಯ ಕಾರಣ ನಮ್ಮ ಜನರಲ್ಲಿ ಇರಬೇಕಾದ ಕನ್ನಡಿಗ ಕುಲದ ಅರಿವು, ಕಾವು ಇಲ್ಲದಿರುವುದೇ ಎಂದು ನನಗೆ ತೋರುತ್ತದೆ. ಸ್ವರೂಪಜ್ಞಾನವೂ, ತನ್ನತನದ ಅಭಿಮಾನವೂ, ತನ್ನ ನಾಡಿನ ಇತಿಹಾಸದ ಸ್ಫೂರ್ತಿಯೂ, ತಜ್ಜನ್ಯವಾದ ಉತ್ಸಾಹ ಶಕ್ತಿಯೂ ಇಲ್ಲದ ಜನ ಮುಂದುವರಿಯಲಾರರೆಂಬುದಕ್ಕೆ ವಿಶ್ವದ ಚರಿತ್ರೆಯಲ್ಲಿ ಬೇಕಾದಷ್ಟು ನಿದರ್ಶನಗಳಿವೆ.A

ರಾಮಾಯಣ-ಮಹಾಭಾರತ ಕಾಲದಲ್ಲಿ, ಶಾತವಾಹನ, ಗಂಗ, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ಯಾದವ, ವಿಜಯನಗರದ ರಸರ ಕಾಲದಲ್ಲಿ ಕನ್ನಡಜನ ಎಂತೆಂತಹ ಮಹತ್ಕಾರ್ಯಗಳನ್ನು ಸಾಧಿಸಿದ ರೆಂಬ ಅರಿವು ಇಂದು ಕನ್ನಡಿಗರಿಗೆ ಅಗತ್ಯ ಬೇಕಾಗಿದೆ. ಪುರಾಣ ಕಾಲದ ಸುಗ್ರೀವ, ಮಾರುತಿ, ವಿರಾಟಾದಿಗಳೂ ಇತಿಹಾಸ ಯುಗದ ಅರಸ ಇಮ್ಮಡಿ ಪುಲಿಕೇಶಿ, ಕಲ್ಯಾಣ ವಿಕ್ರಮಾದಿತ್ಯ, ವಿಷ್ಣುವರ್ಧನ, ನೃಪತುಂಗ, ಕೃಷ್ಣ ದೇವರಾಯ, ಕೆಳದಿ ಚೆನ್ನಮ್ಮ ಮೊದಲಾದವರೂ ಪರಮದಾರ್ಶನಿಕರಾದ ಪೂಜ್ಯಪಾದ, ಕವಿಪರಮೇಷ್ಠಿ, ಸಮಂತಭದ್ರ, ಬಸವೇಶ್ವರ, ಅಲ್ಲಮಪ್ರಭು, ಆನಂದತೀರ್ಥ, ವಿದ್ಯಾರಣ್ಯ, ಪುರಂದರದಾಸ, ಕನಕದಾಸ ಪ್ರಭೃತಿಗಳೂ ನಮ್ಮವರೆಂಬ ಅರಿವು ಇಂದು ನಮಗೆ ಅಗತ್ಯವೆನಿಸಿದೆ.

ಅಜಂತದ ಚಿತ್ರಗಳು, ಎಲ್ಲೋರ, ಹಳೆಯಬೀಡು, ಬೇಲೂರು, ಹಂಪೆ, ಲೇಪಾಕ್ಷಿ, ಶ್ರವಣಬೆಳಗೊಳ, ಕಾರ್ಕಳ, ಮೂಡಬಿದ್ರೆ, ಬಿಜಾಪುರ, ಸೋಮನಾಥಪುರದ ಶಿಲ್ಪಗಳು ಇವೆಲ್ಲದರಲ್ಲಿ ಕನ್ನಡಿಗರ ಪ್ರತಿಭೆ ಕಂಗೊಳಿಸುತ್ತಿದೆಯೆಂಬುದನ್ನು ನಮ್ಮ ಜನ ಅರಿಯಬೇಕು. ದಕ್ಷಿಣ ಭಾರತದ ಸಂಗೀತಕ್ಕೆ 'ಕರ್ನಾಟಕ ಸಂಗೀತ' ಎಂದು ಹೆಸರು ಬರಲು ಕಾರಣ

A ೧೯೬೧ ರಿಂದ ಸರ್ಕಾರವು ರಾಜ್ಯೋತ್ಸವ ನಡೆಸ ಹತ್ತಿದೆ. (ಸಂ)

ವೇನೆಂಬುದನ್ನು ನಮ್ಮವರು ಅರಿಯಬೇಕು. ಹೀಗೆ ತನ್ನತನದ ಅರಿವಿನ ಫಲವೇ ಕರ್ಣಾಟಕ ಏಕೀಕರಣ ಚಳುವಳಿ. ಅದರ ಫಲವೇ ಇಂದಿನ ವಿಶಾಲ ಮೈಸೂರು ಅಥವಾ ಕರ್ಣಾಟಕ ರಾಜ್ಯ ಎಂಬುದನ್ನು ನಾವು ಮರೆಯಲಾಗದು. ಉತ್ಸಾಹ ಶಕ್ತಿಯಿಲ್ಲದ ಜನ ವಾಸನೆಯಿಲ್ಲದ ಹೂವಿನಂತೆ, ಕಾಂತಿಯಿಲ್ಲದ ರತ್ನದಂತೆ, ಪೆಟ್ರೋಲ್ ಇಲ್ಲದ ಮೋಟಾರಿನಂತೆ ಎಂದು ವಿದ್ವಾಂಸರು ಹೇಳಿದ್ದಾರೆ.

## ಕನ್ನಡ ಭಾಷೆ-ಸಾಹಿತ್ಯ

ಎರಡು ಕೋಟಿ ಕನ್ನಡ ಜನರ ಮಾತೃಭಾಷೆಯೆನಿಸಿದ ಕನ್ನಡವು ದ್ರಾವಿಡ ಭಾಷಾ ವರ್ಗಕ್ಕೆ ಸೇರಿದುದು. ತೆಲುಗು, ತಮಿಳು, ಮಲೆಯಾಳ, ತುಳು ಮತ್ತು ಕನ್ನಡ ಎಂಬುದನ್ನು ಪಂಚದ್ರಾವಿಡ ಎಂದು ವಿದ್ವಾಂಸರು ಕರೆದಿದ್ದಾರೆ. ಬಡಗ, ಕೊಡಗ, ತುದ ಮೊದಲಾದುವು ಕನ್ನಡದ ಉಪ ಭಾಷೆಗಳೆನಿಸಿವೆ. ಕನ್ನಡವು ದ್ರಾವಿಡ ಭಾಷಾ ಜನ್ಯವಾದರೂ ಸಂಸ್ಕೃತದ ಸಹಾಯದಿಂದ ಬಳೆದಿದೆಯೆಂಬುದನ್ನು ನಾವು ಒಪ್ಪಿಕೊಳ್ಳಬೇಕು. ಸಂಸ್ಕೃತವು ಕನ್ನಡಕ್ಕೆ ಹೆತ್ತ ತಾಯಿ ಅಲ್ಲದಿದ್ದರೂ ಸಾಕಿದ ತಾಯಿ ಎಂಬುದು ನಿಶ್ಚಯ.

ಕನ್ನಡ ಭಾಷೆಗೆ ಸುಮಾರು ೨೦೦೦ ವರ್ಷದಷ್ಟು ಪ್ರಾಚೀನತೆಯಿದೆ. ಕ್ರಿಸ್ತಶಕ ೨ನೆಯ ಶತಮಾನದ ಗ್ರೀಕ್ ನಾಟಕಗಳಲ್ಲಿ ಕನ್ನಡ ಮಾತುಗಳು ಬಂದಿವೆ. ನಮಗೆ ಸಿಕ್ಕಿರುವ ಮೊದಲನೇ ಗ್ರಂಥ 'ಕವಿರಾಜ ಮಾರ್ಗ' (ಕ್ರಿ. ಶ. ೮೧೪-೮೭೭). ನಮಗೆ ಸಿಕ್ಕಿರುವ ಮೊದಲನೇ ಶಾಸನ 'ಹಲ್ಮಿಡಿ' ಯದು (ಕ್ರಿ. ಶ. ೫ನೇ ಶತಕ). ಕವಿರಾಜಮಾರ್ಗದಲ್ಲಿ ನೃಪತುಂಗನು ತನ್ನ ಹಿಂದಿನ ಹಲವಾರು ಗದ್ಯಪದ್ಯ ಕವಿಗಳನ್ನು ಹೇಳಿರುವುದರಿಂದ ನಮ್ಮ ಭಾಷೆಯಲ್ಲಿ ಬಹು ಹಿಂದೆಯೇ ಗ್ರಂಥರಚನೆಯಾಗಿದೆಯೆಂದು ಹೇಳ ಬಹುದಾಗಿದೆ. ಗಂಗರಾಜನಾದ ದುರ್ವಿನೀತನು (ಕ್ರಿ. ಶ. ೬೫೦) ಕನ್ನಡದಲ್ಲಿ ಗ್ರಂಥ ರಚನೆಮಾಡಿದ ನಿದರ್ಶನವಿದೆ. ಶಾತವಾಹನ ರಾಜನಾದ ಹಾಲ ರಾಜನು ಪ್ರಾಕೃತದಲ್ಲಿ ಬರೆದ (ಕ್ರಿ. ಪೂ. ೨೮) ಸಪ್ತಶತಿ ಗ್ರಂಥದಲ್ಲಿ ಕನ್ನಡ ಶಬ್ದಗಳಿವೆ.

ಕನ್ನಡ ಸಾಹಿತ್ಯದ ಚರಿತ್ರೆ ಸುಮಾರು ಒಂದು ಸಾವಿರ ವರ್ಷಗಳಿಂದ ಉಜ್ವಲವಾಗಿ ಕಂಗೊಳಿಸುತ್ತಿದೆ. ಪಂಪ, ರನ್ನ, ಪೊನ್ನ, ಜನ್ನ, ನಾಗವರ್ಮ, ನೇಮಿಚಂದ್ರ, ಬಸವೇಶ್ವರ, ಹರೀಶ್ವರ, ರಾಘವಾಂಕ, ಅಕ್ಕಮಹಾದೇವಿ, ಷಡಕ್ಷರ, ವಿರೂಪಾಕ್ಷ, ಚಾಮರಸ, ಲಕ್ಷ್ಮೀಶ, ಕುಮಾರವ್ಯಾಸ, ಪುರಂದರ ದಾಸ, ಕನಕದಾಸ, ಸರ್ವಜ್ಞ, ಬಸಪ್ಪಶಾಸ್ತ್ರಿ, ಮುದ್ದಣ ಮೊದಲಾದವರು ನಮ್ಮ ನಾಡಿನ ಹೆಮ್ಮೆಯ ಕವಿಗಳೆನಿಸಿದ್ದಾರೆ. ಇಂದಿಗೂ ನೂತನ ಸಾಹಿತ್ಯ ದಲ್ಲಿ ಕುವೆಂಪು, ಬೇಂದ್ರೆ, ಡಿ. ವಿ. ಜಿ., ಕಡೆಂಗೋಡ್ಲು, ಪು. ತಿ. ನ., ವೀ. ಸಿ, ಮಾಸ್ತಿ, ಗೋಕಾಕ್ ಮೊದಲಾದ ಕವಿಗಳನ್ನು ನಾವು ಕಾಣ ಬಹುದಾಗಿದೆ. ಇದು ಕನ್ನಡ ಸಾಹಿತ್ಯದ ಚೈತನ್ಯಕ್ಕೆ ನಿದರ್ಶನವೆನಿಸಿದೆ. ಜೈನ ಸಾಹಿತ್ಯದ ಪ್ರೌಢಿಮೆ, ವೀರಶೈವ ಸಾಹಿತ್ಯದ ಲಾಲಿತ್ಯ, ವೈಷ್ಣವ ಸಾಹಿತ್ಯದ ಜನಪ್ರಿಯತೆ, ಆಧುನಿಕ ಸಾಹಿತ್ಯದ ವಿನೂತನತೆ ಇವುಗಳನ್ನೆಲ್ಲಾ ಸ್ಮರಿಸಿಕೊಂಡಾಗ ಕನ್ನಡ ಸಾಹಿತ್ಯದ ಬಗೆಗೆ ನಾವು ಹೆಮ್ಮೆಪಡುವ ಕಾರಣವಿದೆ. ಈ ದೃಷ್ಟಿಯಿಂದ ಇತರ ಸಾಹಿತ್ಯಗಳ ಜತೆಗೆ ಹೋಲಿಸಿದರೆ ನಾವು ತಲೆ ತಗ್ಗಿಸಬೇಕಾಗಿಲ್ಲ.

## ಸಂಸ್ಕೃತದ ಸೇವೆ

ಕನ್ನಡಿಗರು ಸಂಸ್ಕೃತ ವಾಙ್ಮಯಕ್ಕೂ ಮಿಗಿಲಾದ ಸೇವೆ ಸಲ್ಲಿಸಿದ್ದಾರೆ. ಆವಹಮಲ್ಲ ಸೋಮೇಶ್ವರನು ಮಾನಸೋಲ್ಲಾಸ, ಕೆಳದಿಯ ಬಸವರಾಜನು ಶಿವತತ್ವರತ್ನಾಕರ, ಕೊಡಗಿನ ಲಿಂಗರಾಜನು ವಿವೇಕ ಚಿಂತಾಮಣಿ ಎಂಬ ವಿಶ್ವಕೋಶಗಳನ್ನು ಬರೆದಿದ್ದಾರೆ. ಸಂಸ್ಕೃತದಲ್ಲಿ ಸಂಗೀತರತ್ನಾಕರವನ್ನು ಬರೆದ ಶಾರ್ಙ್ಗದೇವ, ಅದರ ವ್ಯಾಖ್ಯಾನದ ಕರ್ತೃ ಕಲ್ಲಿನಾಥ ಇವರು ಕನ್ನಡಿಗ ರೆನಿಸಿದ್ದಾರೆ. ಪ್ರಸ್ಥಾನತ್ರಯ ಭಾಷ್ಯ ಕರ್ತೃಗಳಾದ ಶ್ರೀ ಆನಂದತೀರ್ಥರು, ವೇದಗಳಿಗೆ ಭಾಷ್ಯ ಬರೆದ, ಸಾಯಣರು, ಸರ್ವದರ್ಶನ ಸಂಗ್ರಹ ಬರೆದ ಮಾಧವಾಚಾರ್ಯರು, ವ್ಯಾಸರಾಯ, ವಾದಿರಾಜ ಮೊದಲಾದ ವೈಷ್ಣವಾಚಾ ರ್ಯರು ಸಂಸ್ಕೃತದಲ್ಲಿ ವಿಪುಲವಾಗಿ ಗ್ರಂಥರಚನೆಮಾಡಿದ್ದಾರೆ. ಜೈನರು, ವೀರಶೈವರು, ವೈಷ್ಣವರು ಹೀಗೆ ಎಲ್ಲರೂ ಕನ್ನಡದಲ್ಲಿಯೂ ಸಂಸ್ಕೃತದಲ್ಲಿಯೂ ಗ್ರಂಥರಚನೆಮಾಡಿದುದು ಕನ್ನಡ ಹಾಗೂ ಸಂಸ್ಕೃತ ಸಾಹಿತ್ಯಕ್ಕೆ ಮಹೋಪ ಕಾರವಾಯಿತು ಎಂದು ಹೇಳಬಹುದು.

## ಸಾಹಿತ್ಯ ಸಮಾಲೋಚನೆ

ಈ ದಿನ ನಾವು ಸಾಹಿತ್ಯ ಸಮ್ಮೇಳನದಲ್ಲಿ ಸೇರಿದ್ದೇವೆ. ಆದುದರಿಂದ ನಮ್ಮ ಸಾಹಿತ್ಯ, ಸಂಸ್ಕೃತಿ, ಭಾಷೆ ಇತ್ಯಾದಿಗಳನ್ನು ಕುರಿತು ಸಮಾಲೋಚಿಸುವುದು ಇಂದು ನಮ್ಮ ಕರ್ತವ್ಯವಾಗಿದೆ. ಸಾಹಿತ್ಯ ಎಂಬ ಮಾತಿಗೆ ಕನ್ನಡದಲ್ಲಿ 'ಸವಿಕಟ್ಟಾದ ಮಾತು' ಎಂದು ಅರ್ಥವಾಗುತ್ತದೆ. 'ಸಹಿತಾನಾಂ ಭಾವಃ ಸಾಹಿತ್ಯಂ' ಎಂಬುದು ಸಂಸ್ಕೃತದಲ್ಲಿ ಅದಕ್ಕಿರುವ ಅರ್ಥ. ಮಾನವನ ಹೃದಯವನ್ನು ಅರಳಿಸುವ, ಮನಸ್ಸನ್ನು ಸಂಸ್ಕರಿಸುವ, ಕಿವಿಗಳಿಗೆ ಇಂಪಾದ, ಆತ್ಮನಿಗೆ ಆನಂದವನ್ನು ಒದಗಿಸುವ ಮಾತುಗಳನ್ನು ನಾವು ಸಾಹಿತ್ಯ ಎಂದು ಕರೆಯುತ್ತೇವೆ. ಛಂದೋಬದ್ಧವಾದ ಶಬ್ದಗಳನ್ನು ಸಾಹಿತ್ಯ, ಕಾವ್ಯ ಎಂದು ಒಬ್ಬ ವಿದ್ವಾಂಸನು ಹೇಳಿದ್ದಾನೆ. "ಕಾವ್ಯಂ ರಸಾತ್ಮಕಂ ವಾಕ್ಯಂ" ಅಂದರೆ ಹೃದಯದಲ್ಲಿ ನವರಸವನ್ನು ಕೆರಳಿಸುವ ವಾಕ್ಯಗಳು, ಕಾವ್ಯ ಅಥವಾ ಸಾಹಿತ್ಯ ಎಂದು ಲಾಕ್ಷಣಿಕರು ಹೇಳಿದ್ದಾರೆ. ನಾವು ಆಡುವ ಮಾತುಗಳಲ್ಲಿ ಕಲೆಗಾರಿಕೆ ಮತ್ತು ಆನಂದದಾಯಕ ಗುಣ ಇದ್ದಲ್ಲಿ ಅಂಥದು ಸಾಹಿತ್ಯ ಎಂದು ಹೇಳಬಹುದು. ವಾಙ್ಮಯವನ್ನು ಪ್ರಾಜ್ಞರು ಶಾಸ್ತ್ರಭಾಗ, ಸಾಹಿತ್ಯಭಾಗ ಎಂದು ಎರಡು ಭಾಗ ಮಾಡಿದ್ದಾರೆ. ಉಪನಿಷತ್ತು, ದರ್ಶನಗಳು, ಗೀತೆ, ಅರ್ಥಶಾಸ್ತ್ರ, ಕಾಮಶಾಸ್ತ್ರ, ಧರ್ಮಶಾಸ್ತ್ರ ಮೊದಲಾದುವುಗಳು ಶಾಸ್ತ್ರಭಾಗಕ್ಕೆ ಸೇರತಕ್ಕವುಗಳು. ಮುಖ್ಯವಾಗಿ ಶಾಸ್ತ್ರವು ಜನತೆಯ ಜ್ಞಾನಾಭಿವೃದ್ಧಿಯನ್ನು ಗಮನಿಸುತ್ತದೆ. ಸಾಹಿತ್ಯವು ಜನತೆಯ ಆನಂದವನ್ನು ಪ್ರಮುಖ ಗುರಿಯಾಗಿ ಉಳ್ಳುದಾಗಿದೆ. ಹೀಗೆ ವಾಙ್ಮಯ ಪ್ರಪಂಚದ ಈ ಸ್ಥೂಲವಾದ ವ್ಯತ್ಯಾಸವನ್ನು ನಾವು ಅರಿತಿರುವುದು ಅಗತ್ಯ.

ಸಾಹಿತ್ಯವು ಜನಜೀವನದ ಪ್ರತಿಬಿಂಬ. ವಾಙ್ಮಯವು ಜನತೆಯ ಜ್ಞಾನ ಭಂಡಾರ. ಕಾವ್ಯಗಳು ಪ್ರಾಜ್ಞರ ಆನಂದಾನುಭವದ ರಸಬುಗ್ಗೆಗಳು. ಶಾಸ್ತ್ರಗಳು ವಿವೇಕಿಗಳಾದ ಜನರ ಕೈದೀವಿಗೆಗಳು. ಸಾಹಿತ್ಯ ಸಂಪತ್ತು ನಾಗರಿಕ ಜನರ ಜೀವನ ಸರ್ವಸ್ವ ಎಂದು ಪ್ರಾಜ್ಞರು ಹೇಳಿದ್ದಾರೆ.

ಯಾವ ದೇಶದ ಜನರು ತಮ್ಮ ಸಾಹಿತ್ಯ, ಸಂಸ್ಕೃತಿ, ಲಲಿತಕಲೆ ಮತ್ತು ಭಾಷೆ ಮೊದಲಾದುವುಗಳನ್ನು ಉಳಿಸಿಕೊಳ್ಳಲು, ಬೆಳೆಸಿಕೊಳ್ಳಲು

ಪ್ರಯತ್ನಿಸುವರೋ ಅವರೇ ಪ್ರಬುದ್ಧರಾದ ಜನರು. ಸಾಹಿತ್ಯವು ಸಮಕಾಲೀನ ಜನರ ರನ್ನಗನ್ನಡಿ (Literature is the golden mirror of the contemporary society) ಎಂದು ಸ್ವಾಮಿ ವಿವೇಕಾನಂದರು ಹೇಳಿರುವ ಮಾತು ಸಹೃದಯರ ಗಮನಕ್ಕೆ ಅರ್ಹವಾಗಿದೆ. ಕಾರ್ಲಾಯಲ್ ಎಂಬ ವಿದ್ವಾಂಸನು 'ಸಾಹಿತ್ಯವು ಬುದ್ಧಿಶಾಲಿಗಳ ವಿಚಾರ' (Literature is the thought of thinking souls) ಎಂದೂ, ಎಮರ್ಸನ್ ಎಂಬ ಪಂಡಿತನು 'ಸಾಹಿತ್ಯ ಅಂದರೆ ಜನತೆಯ ಅನುಭವದ ಸಾರ' (our high respect for a well-read man is praise enough of Literature) ಎಂದೂ, ಸರ್ ಆರ್ಥರ್ ಕ್ವಿಲರ್ ಕೌಚ್ ಎಂಬ ವಿದ್ವಾಂಸನು 'ಮನುಷ್ಯನ ವಿವೇಕದ ಸಚ್ಚಿದಾನಂದವೇ ಸಾಹಿತ್ಯ' ಎಂದೂ, ರಾಬರ್ಟ್‌ಲಿಂಡ್ ಮಹಾಶಯನು "ಸಾಹಿತ್ಯ ಅಂದರೆ ಅಸಾಮಾನ್ಯ ಜನರ ಅಸಾಧಾರಣ ಅನುಭವ" ಎಂದೂ ಅರ್ಥ ಮಾಡಿದ್ದಾರೆ.

ಮನುಷ್ಯನ ಸ್ಥೂಲದೇಹದ ಬಳಿವಣಿಗೆಗೆ ಅನ್ನ, ನೀರು, ಗಾಳಿ ಬಟ್ಟೆ, ಹೇಗೆ ಬೇಕೋ ಹಾಗೆಯೇ ಅವನ ಸೂಕ್ಷ್ಮ, ಕಾರಣ, ದೇಹಗಳ, ಅಂತಃಕರಣಗಳ ಹಾಗೂ ಆತ್ಮದ ಬಳಿವಣಿಗೆಗೆ ಜ್ಞಾನ, ಅನುಭವ, ಆನಂದಗಳು ಬೇಕಾಗುತ್ತವೆ. ಶಾಸ್ತ್ರಪರಿಚಯದಿಂದ ಬ್ರಹ್ಮಾನಂದವೂ, ಕಾವ್ಯಪರಿಚಯದಿಂದ ಕಾವ್ಯಾನಂದವೂ ಉಂಟಾಗಿ ಮಾನವನು ಉನ್ನತನಾಗುತ್ತಾನೆ. ಸಮಾಜವನ್ನು ಕಾಡುಜನರ ಸ್ಥಿತಿಯಿಂದ ಉನ್ನತಸ್ಥಿತಿಗೆ ತಂದು ಸುಸಂಸ್ಕೃತ ನಾಗರಿಕರನ್ನು ಮಾಡುವ ಯೋಗ್ಯತೆಯುಳ್ಳದು ಸಾಹಿತ್ಯ. ಅದು ಕಾರಣವೇ ಸಾಹಿತ್ಯವು ಜನಜೀವನಕ್ಕೆ ಆಗತ್ಯವಾದ ವಿಷಯವೆನಿಸಿದೆ.

ಭರತಖಂಡವು ಪ್ರಾಚೀನಕಾಲದಿಂದ ಸಾಹಿತ್ಯ ಸಂಸ್ಕೃತಿಗಳಿಗೆ ಹೆಸರಾಗಿದೆ. ನಮ್ಮ ವೇದ ಆಗಮಗಳು ಪ್ರಪಂಚದ ವಾಙ್ಮಯದಲ್ಲಿ ಅತ್ಯಂತ ಪ್ರಾಚೀನವಾದವುಗಳು. ಕನ್ನಡದಲ್ಲಿ ವೇದಗಳನ್ನು "ಪಳವಾತು" ಎಂದು ಕರೆದಿರುವುದರಲ್ಲಿ ತುಂಬಾ ಅರ್ಥವಿದೆ. ಭಾರತೀಯ ಜ್ಞಾನ ಭಂಡಾರವೆನಿಸಿದ ಉಪನಿಷತ್ತು, ಮಾನವ ಜಾತಿಯ ಬುದ್ಧಿ ಶಕ್ತಿಗೆ ಒರೆಗಲ್ಲಿನಂತಿರುವ

ಷಟ್‌ದರ್ಶನಗಳು, ಸಮಗ್ರ ವಿಶ್ವಕ್ಕೆ ಶಾಂತಿಸಂದೇಶವನ್ನು ಕೊಡುವ ಗೀತಾದಿ ಶಾಸ್ತ್ರಗಳು, ಬುದ್ಧಿಶಕ್ತಿ ಮತ್ತು ಹೃದಯ ಶಕ್ತಿಗಳ ಪರಮಾವಧಿ ಎನಿಸಿದ ಜೈನ, ಬೌದ್ಧ ಶಾಸ್ತ್ರಗಳು, ವಿಶ್ವಸಾಹಿತ್ಯಕ್ಕೆ ಅಲಂಕಾರ ಭೂತವಾದ ಭಾಸ, ಕಾಳಿದಾಸ, ಬಾಣಾದಿ ಕವಿಗಳ ಕಾವ್ಯ ನಾಟಕಗಳು, ರಾಜನೀತಿಗೆ ಪರಮಾವಧಿ ಎನಿಸಿದ ಕೌಟಿಲ್ಯನ ಅರ್ಥಶಾಸ್ತ್ರ, ಸಂಗೀತ ನೃತ್ಯ ನಾಟಕಾದಿ ಕಲೆಗಳ ಮಾತೃಸ್ಥಾನವಾದ ಭರತ ನಾಟ್ಯ ಶಾಸ್ತ್ರ, ಮಾನವ ಹೃದಯದ ಪ್ರೇಮಾನುರಾಗಗಳನ್ನು ಸೂಚಿಸುವ ವಾತ್ಸ್ಯಾಯನನ ಕಾಮಶಾಸ್ತ್ರ, ಬುದ್ಧಿ ಶಕ್ತಿಯ ಪರಮಾವಧಿಯೆನಿಸಿದ ಶಂಕರ, ರಾಮಾನುಜ, ಶ್ರೀಕರ, ಆನಂದ ತೀರ್ಥಾದಿ ಆಚಾರ್ಯರ ಭಾಷ್ಯಗ್ರಂಥಗಳು, ಮಾನವ ಜಾತಿಗೆ ಸದಾ ಮಾರ್ಗದರ್ಶಕವೆನಿಸಿದ ರಾಮಾಯಣ-ಮಹಾಭಾರತಾದಿ ಶ್ರೇಷ್ಠಗ್ರಂಥಗಳು ಇವನ್ನೆಲ್ಲಾ ನಾವು ನಮ್ಮ ಸಂಸ್ಕೃತ ಸಾಹಿತ್ಯ ಸಂಪತ್ತೆಂದು ಸ್ಮರಿಸಿಕೊಂಡಾಗ ನಮ್ಮ ಹೃದಯವು ಹೆಮ್ಮೆಯಿಂದ ಉಬ್ಬಿಹೋಗುತ್ತದೆ. ನೇತ್ರಗಳು ಆನಂದ ಬಾಷ್ಪದಿಂದ ತುಳುಕಾಡುತ್ತವೆ. ಭಗವಂತನು ಭಾರತಕ್ಕೆ ಉತ್ತುಂಗವಾದ ಹಿಮಾಲಯ, ನಿರ್ಮಲವಾದ ಗಂಗಾ, ಮಹೋನ್ನತವಾದ ಸಂಸ್ಕೃತ ಸಾಹಿತ್ಯ ಸಂಪತ್ತು ಇವುಗಳನ್ನು ಅನುಗ್ರಹಿಸಿದ್ದಾನೆಂಬುದನ್ನು ಭಾರತೀಯರಾದ ನಾವು ಸದಾ ನೆನಪಿನಲ್ಲಿಡಬೇಕು.

## ಭಾರತೀಯ ಭಾಷೆಗಳು

ಇಂದು ಸಮಗ್ರ ಭಾರತವೇ ರಾಜ್ಯಾಂಗಕ್ಕೆ ಬದ್ಧವಾಗಿ ಒಂದು ಸಂಸಾರ ವೆಂಬಂತಿದೆ. ಇಂದಿನ ರಾಜ್ಯಾಂಗದಲ್ಲಿ ಪರಿಗಣಿಸಲ್ಪಟ್ಟಿರುವ ಸಂಸ್ಕೃತ, ಹಿಂದಿ, ಬಂಗಾಳಿ, ಅಸಾಮಿಯಾ, ಉರಿಯಾ, ಪಂಜಾಬಿ, ಕಾಶ್ಮೀರಿ, ತೆಲುಗು, ತಮಿಳು, ಮಲೆಯಾಳ, ಗುಜರಾತಿ, ಉರ್ದು ಮೊದಲಾದ ಭಾಷೆಗಳನ್ನೆಲ್ಲಾ ಇಂದು ನಾವು ನಮ್ಮ ನಾಡಿನ ಭಾಷೆಗಳೆಂದು ನೋಡಬೇಕಾಗಿದೆ. ಕನ್ನಡದ ಹಿತಚಿಂತನೆಯಿಂದಲೇ ಈ ಎಲ್ಲ ಭಾಷೆಗಳ ಜತೆಗೆ ನೇಪಾಳೀ ಭಾಷೆಯ ಕ್ಷೇಮ ಚಿಂತನೆ ಕೂಡ ನಮಗೆ ಸೇರಿದುದಾಗಿದೆ. ಭಾರತ ಸರ್ಕಾರದವರು ಸ್ಥಾಪಿಸಿರುವ ಸಾಹಿತ್ಯ ಅಕ್ಯಾಡಮಿಯವರು ಈ ಎಲ್ಲ ಭಾಷೆಗಳ ಅಭಿವೃದ್ಧಿ ಯನ್ನೂ ಪ್ರೀತಿಯಿಂದ ನೋಡುತ್ತಿರುವರೆಂಬುದನ್ನು ನಾವು ಅರಿತಿರಬೇಕು.

ಕನ್ನಡ ಭಾಷೆಯ ಪುಷ್ಟಿ ಮತ್ತು ತುಷ್ಟಿಯನ್ನು ಹೆಚ್ಚಿಸಲು ನಾವು ಈ ಎಲ್ಲ ಭಾರತೀಯ ಭಾಷಾಸಾಹಿತ್ಯದಿಂದ ಪ್ರಯೋಜನ ಪಡೆಯಲು ಅವಕಾಶವಿದೆ. ಉದಾಹರಣೆಗಾಗಿ ಒಬ್ಬ ಮನುಷ್ಯನು ಕನ್ನಡದಲ್ಲಿ ಒಳ್ಳೆಯ ವಿದ್ವಾಂಸನಾಗ ಬೇಕಾದರೆ, ಕನ್ನಡ ಕಾವ್ಯಗಳನ್ನು ವಿಮರ್ಶಾದೃಷ್ಟಿಯಿಂದ ಓದಬೇಕಾದರೆ ಅವನಿಗೆ ಸಂಸ್ಕೃತದ ಪರಿಚಯವಂತೂ ಬೇಕೇಬೇಕು. ನಮ್ಮ ಸಾಹಿತ್ಯದಲ್ಲಿ ಅಚ್ಚ ಕನ್ನಡಿಗ ಆಂಡಯ್ಯನ 'ಕಬ್ಬಿಗರ ಕಾವ' ಎಂಬ ಗ್ರಂಥವನ್ನು ಬಿಟ್ಟರೆ ಮತ್ತೆಲ್ಲ ಗ್ರಂಥಗಳೂ ಸಂಸ್ಕೃತದ ಸಂಬಂಧವನ್ನು ಹೊಂದಿಯೇ ಇವೆ: ಅಂತೆಯೇ ತಮಿಳು, ತೆಲುಗು, ಮಲೆಯಾಳ, ಭಾಷೆಗಳ ಪರಿಚಯವಿಲ್ಲದೆ ಕನ್ನಡ ಸಾಹಿತ್ಯ ಗ್ರಂಥಗಳ ಭಾಷಾಸಮಸ್ಯೆಗಳ ಆಳವಾದ ಅಭ್ಯಾಸಮಾಡಲು ಸಾಧ್ಯವಾಗುವುದಿಲ್ಲ. ಆದುದರಿಂದ ಇತರರ ಹಿತದೃಷ್ಟಿಯೇ ಅಲ್ಲ, ನಮ್ಮ ಹಿತದೃಷ್ಟಿಯಿಂದ ಕೂಡ ನಾವು ಅಕ್ಕಪಕ್ಕದ ಭಾಷಾಸಾಹಿತ್ಯವನ್ನು ಪರಿಚಯ ಮಾಡಿಕೊಳ್ಳುವುದು ಅಗತ್ಯವೂ ಅನಿವಾರ್ಯವೂ ಆಗಿದೆ.

## ಹಿಂದಿನ ಕವಿಗಳ ಮಾರ್ಗದರ್ಶನ

ಪ್ರಾಚೀನ ಕನ್ನಡ ಕವಿಗಳು ಈ ದೆಸೆಯಲ್ಲಿ ನಮಗೆ ಮಾರ್ಗ ತೋರಿರುವ ರೆಂಬುದನ್ನು ನಾಸಿಲ್ಲಿ ಮಹಾಜನರ ಗಮನಕ್ಕೆ ತರುವುದು ಸಮಯೋಚಿತ ವೆನಿಸಿದೆ. ಪ್ರಾಚೀನ ಜೈನಕವಿಗಳು ಸಂಸ್ಕೃತ, ಪ್ರಾಕೃತ ಭಾಷೆಗಳ ವಿದ್ವಾಂಸ ರೆನಿಸಿ ಕನ್ನಡದಲ್ಲಿ ಪಂಪ ಭಾರತ, ಗದಾಯುದ್ಧ, ನಾಗವರ್ಮನ ಕಾದಂಬರಿ, ಪಂಪ ರಾಮಾಯಣ ಮೊದಲಾದ ಮಹತ್ಕಾವ್ಯಗಳನ್ನು ನಿರ್ಮಿಸಿ ಕನ್ನಡಕ್ಕೆ ಮಹೋಪಕಾರ ಮಾಡಿದ್ದಾರೆ. ಕ್ರಾಂತಿಕಾರಕರಾದ ವೀರಶೈವ ಕವಿಗಳು ಅಕ್ಕಪಕ್ಕದ ತಮಿಳು ಮತ್ತು ತೆಲುಗು ಸಾಹಿತ್ಯಗಳ ಸಂಪರ್ಕವನ್ನು ಕಟ್ಟಿ ಕೊಂಡು ಕನ್ನಡಕ್ಕೆ ಸೇವೆಯನ್ನು ಸಲ್ಲಿಸಿದ್ದಾರೆ. ಹರೀಶ್ವರ ಕವಿಯು (ಕ್ರಿ. ಶ. ೧೨೦೦) ತಮಿಳಿನ ಪೆರಿಯಪುರಾಣವನ್ನು ರಘಟಾಕಾವ್ಯವಾಗಿ ಸಿದ್ದಾನೆ. ಪಿಳ್ಳೆನೈನಾದರ ಸತ್ಯೇಂದ್ರ ಚರಿತೆ ಎಂಬ ತಮಿಳುಗ್ರಂಥ ವನ್ನು ಗುಬ್ಬಿಯ ಮಲ್ಲಣಾರ್ಯನು (೧೫೧೩) ಭಾವಚಿಂತಾರತ್ನ ಎಂಬ ಹೆಸರಿನಿಂದ ಕನ್ನಡಕ್ಕೆ ಅನುವಾದಿಸಿದ್ದಾನೆ. ಭೀಮ ಕವಿಯು (೧೩೬೯) ತೆಲುಗು ಬಸವ ಪುರಾಣವನ್ನೂ, ನೀಲಕಂಠ ಕವಿಯು (೧೪೩೦) ತೆಲುಗು

ಪಂಡಿತಾರಾಧ್ಯ ಚರಿತ್ರೆಯನ್ನೂ ಭಾಷಾಂತರಿಸಿದ್ದಾರೆ. ಚಾಮರಸ ಕವಿಯ (೧೪೮೫) ಪ್ರಭುಲಿಂಗಲೀಲೆಯು, ತಮಿಳು, ತೆಲುಗು, ಮರಾಠಿ ಮತ್ತು ಸಂಸ್ಕೃತ ಭಾಷೆಗಳಲ್ಲಿ ಭಾಷಾಂತರವಾಗಿದೆ. ನಿಜಗುಣ ಶಿವಯೋಗಿಯ (೧೫೦೦) ವಿವೇಕ ಚಿಂತಾಮಣಿಯು ಕೊಡಗಿನ ಲಿಂಗರಾಜನಿಂದ ಸಂಸ್ಕೃತಕ್ಕೂ, ಶಿವಪ್ರಕಾಶ ಸ್ವಾಮಿಗಳಿಂದ ತಮಿಳಿಗೂ, ಶಾಂತಲಿಂಗ ದೇಶಿಕರಿಂದ ಮರಾಠಿಗೂ ಭಾಷಾಂತರವಾಗಿದೆ. ಮಹಲಿಂಗರಂಗನ (೧೬೭೫) ಅನುಭವಾಮೃತವು ಸಂಸ್ಕೃತಕ್ಕೆ ಅನುವಾದಿಸಲ್ಪಟ್ಟಿದೆ. ತಮಿಳಿನ ತೇವಾರಂ ಮತ್ತು ತಿರುವಾಚಕಂಗಳು ಶಿವಶರಣರ ಕನ್ನಡ ವಚನ ಶಾಸ್ತ್ರದಮೇಲೆ ಪ್ರಭಾವವನ್ನು ಬೀರಿವೆ. ತಮಿಳಿನ ತಿರುಕುರುಳ್, ಕನ್ನಡದ ಸರ್ವಜ್ಞ ವಚನಗಳ ಮೇಲೆ ಪರಿಣಾಮವನ್ನುಂಟುಮಾಡಿವೆ. ಕೆರೆಯ ಪದ್ಮರಸನ (೧೨೦೦) ದೀಕ್ಷಾಬೋಧೆಯು ಪಿಡುಪರ್ತಿ ಬಸವಕವಿಯಿಂದ ತೆಲುಗಿಗೆ ಭಾಷಾಂತರಿಸಲ್ಪಟ್ಟಿದೆ. ಪಂಡಿತಾರಾಧ್ಯನ ಚೆನ್ನಬಸವ ಪುರಾಣವು ಪಾಪಯಾಮಾತ್ಯನಿಂದ ತೆಲುಗಿಗೆ, ಕುಮಾರಸ್ವಾಮಿ ಕವಿಯಿಂದ ಸಂಸ್ಕೃತಕ್ಕೆ ಸಂಗ್ರಹಿಸಲ್ಪಟ್ಟಿದೆ. ನಿಜಗುಣ ಶಿವಯೋಗಿಗಳು ಸಂಸ್ಕೃತದಿಂದ ದಶೋಪನಿಷತ್ತು, ಯೋಗವಾಶಿಷ್ಠ ಮೊದಲಾದ ಮಹತ್ಕೃತಿಗಳನ್ನು,ಅನುಭವಸಾರ, ಪರಮಾರ್ಥಗೀತೆ,ಪರಮಾನುಭವಬೋಧೆ ಎಂಬ ಹೆಸರುಗಳಿಂದ ಭಾಷಾಂತರಿಸಿದ್ದಾರೆ. ಮಹಾತ್ಮರಾದ ಪುರಂದರದಾಸರ ಕನ್ನಡ ಕೃತಿಗಳು ಸುಪ್ರಸಿದ್ಧ .ವಾಗ್ಗೇಯಕಾರರಾದ ತೆಲುಗಿನ ತ್ಯಾಗರಾಜರ ಮೇಲೆ ಪ್ರಭಾವವನ್ನು ಬೀರಿವೆ. ವೈಷ್ಣವ ಕವಿಶ್ರೇಷ್ಠರಾದ ಕುಮಾರವ್ಯಾಸ, ಲಕ್ಷ್ಮೀಶ, ಚಾರುವಿಠಲ, ತೊರವೆ ನರಹರಿ, ಕನಕದಾಸರು, ಜಗನ್ನಾಥ ದಾಸರು ಮೊದಲಾದ ಮಹನೀಯರು ಸಂಸ್ಕೃತ ಸಾಹಿತ್ಯದಿಂದ ಕನ್ನಡಕ್ಕೆ ಮಹತ್ವದ ಕಾವ್ಯಗಳನ್ನು ಅನುವಾದಮಾಡಿ ಮಹೋಪಕಾರವೆಸಗಿದ್ದಾರೆ. ಹೀಗೆ ಪ್ರಾಚೀನ ಕನ್ನಡ ಕವಿಗಳು ಮತ್ತುಳಿದ ಭಾರತೀಯ ಭಾಷೆಗಳಿಂದ ಉಪಯುಕ್ತವಾದ ಅಂಶಗಳನ್ನು ಸಂಗ್ರಹಿಸಿ ಕನ್ನಡದಲ್ಲಿ ಕೃತಿಗಳನ್ನು ವಿರಚಿಸಿರುವುದೂ, ಕನ್ನಡ ಕೃತಿಗಳನ್ನು ಇತರ ಭಾಷೆಗಳಿಗೆ ಅನುವಾದಿಸಿರುವುದೂ ಇಂದಿನವರಾದ ನಮಗೂ ಮಾರ್ಗದರ್ಶಕವಾಗಿದೆ. ಇತ್ತೀಚೆಗೆ ಬಸವೇಶ್ವರಾದಿಗಳ. ವಚನಗಳು ಹಿಂದಿ ಮತ್ತು ಮರಾಠಿ ಭಾಷೆಗಳಿಗೆ ಪರಿವರ್ತಿಸಲ್ಪಟ್ಟಿವೆ. ಮಾನ್ಯ ದಿವಾಕರರ ವಚನಶಾಸ್ತ್ರ ರಹಸ್ಯ ಹಿಂದಿಯಲ್ಲಿ

ಭಾಷಾಂತರವಾಗಿ ಪ್ರಕಟವಾಗಿದೆ. ದಿವಂಗತ ಎಂ. ಆರ್. ಶ್ರೀ ಅವರ ನಾಗರಿಕ ಹಿಂದಿಯಲ್ಲಿ ಜನಪ್ರಿಯವೆನಿಸಿದೆ. ಸ್ವವಿರಚಿತ ಮಾದೇಶ್ವರ ಚರಿತ್ರೆ ಈಗತಾನೇ ತಮಿಳಿಗೆ ಭಾಷಾಂತರವಾಗಿದೆ. ಕನ್ನಡದ ಅಭಿವೃದ್ಧಿಯ ದೃಷ್ಟಿಯಿಂದ ಇಂತಹ ಭಾಷಾಂತರ ಕಾರ್ಯ ಅಪೇಕ್ಷಣೀಯವೇ ಸರಿ.

## ಕನ್ನಡದ ಮೂಲವೆಲ್ಲಿ ?

ಕನ್ನಡ ಭಾಷೆಯು ದ್ರಾವಿಡ ಭಾಷಾವರ್ಗಕ್ಕೆ ಸೇರಿದುದು. ತೆಲುಗು, ತಮಿಳು, ಮಲೆಯಾಳ, ತುಳು ಎಂಬ ಈ ದ್ರಾವಿಡ ಭಾಷೆಗಳಿಗೆ ಮೂಲದಲ್ಲಿ ಇಂದು ನಮಗೆ ಅಗೋಚರವಾಗಿರುವ ದ್ರಾವಿಡ ಭಾಷೆಯೊಂದು ಮಾತೃಸ್ಥಾನ ವಾಗಿರಬೇಕೆಂದು ನಾವು ತರ್ಕಿಸಬಹುದು. ಕನ್ನಡ, ತಮಿಳು, ತೆಲುಗು, ಮಲೆಯಾಳಗಳಲ್ಲಿ ಇಂದಿಗೂ ಕೆಲವು ಶಬ್ದಗಳು ಸಮಾನಾರ್ಥದಲ್ಲಿ ವ್ಯವಹಾರ ದಲ್ಲಿರುವುದು ಗಮನಾರ್ಹವಾಗಿದೆ. ಸಂಸ್ಕೃತವು ಕನ್ನಡಕ್ಕೆ ಹೆತ್ತತಾಯಿ ಅಲ್ಲವಾದರೂ ಸಾಕಿದ ತಾಯಿ ಎಂದು ಒಪ್ಪಿಕೊಳ್ಳಬೇಕಾಗುತ್ತವೆ. ಇಲ್ಲ ವಾದರೆ ಅಚ್ಚ ಕನ್ನಡ ಭಕ್ತನಾದ ಆಂಡಯ್ಯನ ಹಾಗೆ "ಮೆರೆಯುವ ಸಕ್ಕದಂ ಬೆರಸಿದಲ್ಲದೆ ಕನ್ನಡದಲ್ಲಿ ಕಬ್ಬಮಂ ದೊರೆಕೊಳೆ ಮಾಡಲಾಗದು" ಎಂಬ ಪ್ರತಿಜ್ಞೆಯನ್ನುಮಾಡಿ ನಾವು ಕಷ್ಟಕ್ಕೆ ಸಿಕ್ಕಿಕೊಳ್ಳಬೇಕಾಗುತ್ತದೆ. ಆ ಕವಿಯ ಭಾಷಾಭಿಮಾನವನ್ನು ನಾವು ಶ್ಲಾಘಿಸಿದರೂ ಇಂದಿನ ನಮ್ಮ ಪರಿಸ್ಥಿತಿಯು "ಎಲ್ಲ ಭಾಷೆಗಳೂ ನಮ್ಮವು,ಸರಸ್ವತಿಯು ವಾಗ್ರೂಪಿಣಿ, ಸರ್ವಭಾಷಾಮಯಿ" ಎಂಬ ವಿಶಾಲ ಭಾವನೆಗೆ ನಮ್ಮನ್ನು ತಂದು ನಿಲ್ಲಿಸಿದೆ.

## ನಮ್ಮ ಸಾಹಿತ್ಯ ಸಂಪತ್ತು

ಕನ್ನಡ ಸಾಹಿತ್ಯವು ಜೈನ ಮಹಾಕವಿಗಳ ಪ್ರೌಢ ಕಾವ್ಯಗಳಿಂದಲೂ, ಶಿವಶರಣರ ಸುಮಧುರವಾದ ವಚನಗಳಿಂದಲೂ, ವೈಷ್ಣವ ದಾಸಶ್ರೇಷ್ಠರ ಅನುಭವದ ಹಾಡುಗಳಿಂದಲೂ ಕಂಗೊಳಿಸುತ್ತಿದೆ. ಇದನ್ನೇ ಕೆಲವರು ಸಾಹಿತ್ಯದ 'ತ್ರಿವೇಣೀ ಸಂಗಮ' ಎಂದು ಕೂಡ ಹೇಳಿದ್ದಾರೆ. ನಮ್ಮ ಮಹಾಕವಿಗಳಾದ ಪಂಪ, ರನ್ನ, ಜನ್ನ, ಪೊನ್ನ, ನಾಗವರ್ಮ, ನೇಮಿಚಂದ್ರ, ಅಭಿನವ ಪಂಪ, ಹರಿಹರ, ರಾಘವಾಂಕ, ಭೀಮಕವಿ, ಚಾಮರಸ, ಷಡಕ್ಷರ

ದೇವ, ಸುರಂಗ, ಸೋಮರಾಜ, ಗುಬ್ಬಿ ಮಲ್ಲಣಾರ್ಯ, ಕುಮಾರವ್ಯಾಸ, ಲಕ್ಷ್ಮೀಶ, ನಿಜಗುಣ ಶಿವಯೋಗಿ, ಪುರಂದರದಾಸ, ಕನಕದಾಸ, ಸರ್ವಜ್ಞ ಮೊದಲಾದವರು ಕೇವಲ ನಮ್ಮ ನಾಡಿಗೇ ಅಲ್ಲ ಸಮಗ್ರ ಭಾರತಕ್ಕೇ ಗೌರವವನ್ನು ತರತಕ್ಕ ಮಹಾ ಪ್ರತಿಭಶಾಲಿಗಳು. ಹೀಗೆ ವಿಪುಲವಾದ ಕನ್ನಡ ಸಾಹಿತ್ಯವನ್ನು ನಮ್ಮ ಹಿರಿಯರು ನಮಗಾಗಿ ನಮ್ಮ ನಾಡಿಗಾಗಿ ನಿರ್ಮಿಸಿ ಕೊಟ್ಟಿರುವರೆಂಬುದನ್ನು ನಾವು ಸ್ಮರಿಸಿ ಅವರಿಗೆ ಕೃತಜ್ಞತೆಯನ್ನು ಸಲ್ಲಿಸ ಬೇಕು. ಇಂತಹ ಅಮೂಲ್ಯವಾದ ಪ್ರಾಚೀನ ಸಾಹಿತ್ಯದ ಪ್ರಕಟನೆಗೆ ನೆರವಾಗಬೇಕು. ಮನೆ ಮನೆ, ಕೇರಿ ಕೇರಿ, ಊರು ಊರುಗಳಲ್ಲಿ ಕನ್ನಡ ಕಾವ್ಯವಾಚನ ನಡೆಯುವಂತೆ ಮಾಡಬೇಕು. ಅಂದೇ ನಾವು ನಮ್ಮ ಹಿರಿಯರ ಅನುಗ್ರಹಕ್ಕೆ ಪಾತ್ರರಾಗುತ್ತೇವೆ.

## ಇದು ಕ್ರಾಂತಿಯ ಯುಗ

ಇಪ್ಪತ್ತನೇ ಶತಮಾನವು ಒಂದು ಕ್ರಾಂತಿಕಾರಕ ಯುಗ. ಇಂದು ಭಾರತದ ಎಲ್ಲ ಪ್ರಾಂತದ ಸಾಹಿತ್ಯದಲ್ಲಿಯೂ ಕ್ರಾಂತಿಯಾಗಿದೆ. ಇದಕ್ಕೆ ಪಾಶ್ಚಾತ್ಯ ಭಾಷಾಸಾಹಿತ್ಯಗಳ ಸಂಪರ್ಕವೂ, ಪ್ರಗತಿಪರವಾದ ವಿಜ್ಞಾನವೂ, ಬದಲಾವಣೆ ಹೊಂದಿದ ರಾಜಕೀಯ ಹಾಗೂ ಸಾಮಾಜಿಕ ಸನ್ನಿವೇಶಗಳೂ ಮುಖ್ಯ ಕಾರಣವೆನ್ನಬಹುದು. ಆಧುನಿಕ ಕನ್ನಡ ಸಾಹಿತ್ಯದಲ್ಲಿ, ಕಥೆ, ಕಾದಂಬರಿ, ನಾಟಕ, ವಿಮರ್ಶೆ, ಭಾವಗೀತೆ, ಜೀವನಚರಿತ್ರೆ, ಸಂಶೋಧನೆ, ಪ್ರಬಂಧ, ಹರಟೆ, ಮೊದಲಾದುವುಗಳಿಗೆ ಹೆಚ್ಚಿನ ಪ್ರಾಮುಖ್ಯತೆ ದೊರೆತಿದೆ. ದಿವಂಗತರಾದ ಪಂಜೆ ಮಂಗೇಶರಾಯರು, ಬಿ. ಎಂ. ಶ್ರೀಕಂಠಯ್ಯನವರು ರಾ. ನರಸಿಂಹಾಚಾರ್ಯರು, ಪ್ರೊ॥ ಬಸವನಾಳರು, ಮುಳಿಯ ತಿಮ್ಮಪ್ಪ ಯ್ಯನವರು ಮೊದಲಾದ ಮಹನೀಯರು ಈ ಬಗ್ಗೆ ಜನತೆಗೆ ಮಾರ್ಗದರ್ಶನ ಮಾಡಿದ್ದಾರೆ. ಪ್ರಾಚೀನ ಸಾಹಿತ್ಯವು, ಆಳವಾದ ಅನುಭವ, ಅಪಾರವಾದ ಪಾಂಡಿತ್ಯ, ಅಸದೃಶವಾದ ಪ್ರತಿಭೆ ಇವುಗಳಿಗೆ ಹೆಸರಾಗಿದ್ದರೆ ಆಧುನಿಕ ಸಾಹಿತ್ಯವು, ವಿನೂತನತೆ, ವಿಮರ್ಶೆ, ವಿಶ್ವಪ್ರೇಮ ಮತ್ತು ಸಮತಾಭಾವ ವೊದಲಾದ ಮಹದ್ಗುಣಗಳಿಗೆ ಹೆಸರಾಗಿದೆ.

## ಕೆಲವು ರಚನಾತ್ಮಕ ಸಲಹೆಗಳು

ಕನ್ನಡದ ಉನ್ನತಿಯ ದೃಷ್ಟಿಯಿಂದ ಇಲ್ಲಿ ಕೆಲವು ಸಲಹೆಗಳನ್ನು ನಾನು ಸಮಗ್ರ ಕನ್ನಡಿಗರ ಸನ್ನಿಧಾನದಲ್ಲಿ ಅರಿಕೆಮಾಡಲು ಬಯಸುತ್ತೇನೆ.

೧. ಕರ್ನಾಟಕದಲ್ಲಿ ಇನ್ನೂ ಆಗಬೇಕಾದ ಪರಿಶೋಧನೆಯ ಕಾರ್ಯ ಬಹಳವಾಗಿದೆ. ಕನ್ನಡದ ಎಲ್ಲ ಗ್ರಂಥಗಳನ್ನೂ ಎಲ್ಲ ಶಿಲಾ ಮತ್ತು ತಾಮ್ರ ಶಾಸನ ಪಟಗಳನ್ನೂ ಒಂದೆಡೆ ಕೂಡಿಸಿ ಸಮಗ್ರ ಕರ್ನಾಟಕದ ಇತಿಹಾಸ ಮತ್ತು ಸಾಹಿತ್ಯದ ಬಗ್ಗೆ ಹೆಚ್ಚಿನ ಸಂಶೋಧನೆಯನ್ನು ನಡೆಸಬೇಕಾಗಿದೆ. ಈ ಮಹತ್ಕಾರ್ಯವನ್ನು ಕನ್ನಡ ಸಾಹಿತ್ಯ ಪರಿಷತ್ತು ನಿರ್ವಹಿಸಲು ಸಮರ್ಥವಾಗಿದೆ. ಅದಕ್ಕೆ ಮಹಾಜನಗಳ ಹಾಗೂ ಸರ್ಕಾರದ ಬೆಂಬಲ, ಸಹಾಯ ಅಗತ್ಯವಾಗಿದೆ.

೨. ಕನ್ನಡಕ್ಕೆ ಒಂದು ಅತ್ಯಾಧುನಿಕವಾದ ಮತ್ತು ಪರಿಪೂರ್ಣವಾದ ಶಬ್ದಕೋಶ ಅಗತ್ಯ. ಈ ಮಹತ್ಕಾರ್ಯವನ್ನು ಕನ್ನಡ ಸಾಹಿತ್ಯ ಪರಿಷತ್ತು ಕೈಗೊಂಡು ನಾಡಿನ ವಿದ್ವಾಂಸರ ಬೆಂಬಲದಿಂದ ನಡೆಸುತ್ತಿದೆ. ಇದಕ್ಕೂ ಸರ್ಕಾರ ಮತ್ತು ಸಾರ್ವಜನಿಕರ ಹೆಚ್ಚಿನ ಪ್ರೋತ್ಸಾಹ ಅಗತ್ಯ. ಇದಕ್ಕೆ ಹದಿನೈದು ಲಕ್ಷ ರೂ. ವೆಚ್ಚವಾಗಲಿದೆ.

೩. ಕನ್ನಡಕ್ಕೆ ಒಂದು ವಿಶ್ವಕೋಶ ಅಗತ್ಯ. ನೆರೆಹೊರೆಯ ಪ್ರಾಂತದವರು ಈಗಾಗಲೇ ಈ ಕಾರ್ಯವನ್ನು ನಿರ್ವಹಿಸಿದ್ದಾರೆ. ನಿಜಗುಣರ 'ವಿವೇಕ ಚಿಂತಾಮಣಿ' ಕಾರಂತ 'ಬಾಲಪ್ರಪಂಚ' ಇವು ಈ ದೆಸೆಯಲ್ಲಿ ನಮಗೆ ಮಾರ್ಗದರ್ಶನಮಾಡಿವೆ. ಕರ್ನಾಟಕದ ರಾಜರುಗಳಾದ ಕಲ್ಯಾಣದ ಸೋಮೇಶ್ವರ, ಕೆಳದಿಯ ಬಸವರಾಜ, ಇವರುಗಳಿಂದ ವಿರಚಿತವಾದ 'ಮಾನಸೋಲ್ಲಾಸ' ಮತ್ತು 'ಶಿವತತ್ವ ರತ್ನಾಕರ' ಎಂಬ ಗ್ರಂಥಗಳು ಈ ಬಗ್ಗೆ ಸಹಾಯವಾಗಿವೆ. ಮೈಸೂರು ಸರ್ಕಾರದವರು ವಿಶ್ವಕೋಶದ ರಚನೆ ಬಗ್ಗೆ ಒಂದು ಸಂಪಾದಕ ಮಂಡಳಿಯನ್ನು ನೇಮಿಸಿ ಕಾರ್ಯತತ್ಪರರಾಗಿರುವುದು ಶ್ಲಾಘ್ಯವಾಗಿದೆ. ಈ ಕಾರ್ಯವನ್ನು ಆದಷ್ಟು ತ್ವರಿತವಾಗಿ ಪೂರ್ಣಗೊಳಿಸಬೇಕೆಂದು ಸರ್ಕಾರದಲ್ಲಿ ಬಿನ್ನವಿಸುತ್ತೇನೆ.

೪. ಅನುಮೂಲ್ಯವಾದ ತಾಳೆಯೋಲೆಯ ಕನ್ನಡ ಗ್ರಂಥಗಳು, ಹೈದರಾಬಾದು, ಮದ್ರಾಸು, ಕಾಶಿ, ತಂಜಾವೂರು ಮೊದಲಾದ ದೂರದ ಸ್ಥಳಗಳಲ್ಲಿ ಉಳಿದುಹೋಗಿವೆ. ಅವನ್ನೆಲ್ಲಾ ಸಂಗ್ರಹಿಸಲು ಕನ್ನಡ ಸಾಹಿತ್ಯ ಪರಿಷತ್ತು ಸಂಕಲ್ಪಿಸಿದೆ. ಸರ್ಕಾರದ ಸಹಕಾರ ಲಭಿಸಲಿ.

೫. ಕನ್ನಡದಲ್ಲಿ ವಿಜ್ಞಾನ ಗ್ರಂಥಗಳು, ಜೀವನ ಚರಿತ್ರೆಗಳು, ಸಂಶೋಧನಾ ಗ್ರಂಥಗಳು, ಹೆಚ್ಚು ಹೆಚ್ಚಾಗಿ ಆಗಬೇಕಾಗಿವೆ. ಕನ್ನಡ ಕವಿಚರಿತ್ರೆ ಮೂರು ಭಾಗಗಳು ಪರಿಷತ್ತಿನ ವಿದ್ವಾಂಸರ ನೇತೃತ್ವದಲ್ಲಿ ಪುನಃ ವಿಮರ್ಶೆಯೊಡನೆ ಅಚ್ಚಾಗುತ್ತಿವೆ ಎಂಬುದನ್ನುಇಲ್ಲಿ ತಿಳಿಸಲು ಹರ್ಷಿಸುತ್ತೇನೆ.

೬. ಕನ್ನಡದಲ್ಲಿ ಇತ್ತೀಚೆಗೆ ಮಕ್ಕಳ ಸಾಹಿತ್ಯ ಹೆಚ್ಚುತ್ತಿರುವುದು ಸಂತೋಷಪ್ರದವಾದ ವಿಷಯ. ಶ್ರೀಗಳಾದ ದೇವುಡು, ಜಿ. ಪಿ. ರಾಜರತ್ನಂ, ಶ್ರೀ ಬಿ. ಪಾಂಡುರಂಗರಾವ್, ಹೊಯ್ಸಳ ಇತ್ಯಾದಿ ಮಹನೀಯರು ಈ ದೆಸೆಯಲ್ಲಿ ಕಾರ್ಯ ಮಾಡುತ್ತಿರುವುದು ಅಭಿನಂದನಾರ್ಹ. ಈ ಕಾರ್ಯ ಇನ್ನೂ ಮುಂದುವರೆಯುವುದು ಕನ್ನಡ ಮಕ್ಕಳ ಹಿತದೃಷ್ಟಿಯಿಂದ ಅಗತ್ಯ ವಾಗಿದೆ. ಮಕ್ಕಳ ಪುಸ್ತಕಾಲಯಗಳ ಸ್ಥಾಪನೆ ನಾಡಿಗೆ ಬೇಕಾಗಿದೆ.

೭. ಕನ್ನಡದಲ್ಲಿ ಸ್ತ್ರೀ ಸಾಹಿತಿಗಳ ಸಂಖ್ಯೆ ಕಡಿಮೆಯಾಗಿದೆ. ಅಕ್ಕ ಮಹಾದೇವಿ, ಸಂಚಿ ಹೊನ್ನಮ್ಮ, ಹೆಳವನಕಟ್ಟೆ ಗಿರಿಯಮ್ಮ, ವಿಜಯನಗರದ ಗಂಗಾದೇವಿ, ಕಂತಿ ಮೊದಲಾದ ಕೆಲವು ವ್ಯಕ್ತಿಗಳು ಮಾತ್ರ ನಾಡಿನಲ್ಲಿ ಹೆಸರಾಂತಿವೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕೂಡ ಬರೆಹಗಾರರ ಸಂಖ್ಯೆ ಕಡಿಮೆಯಾಗಿದೆ. ಸ್ತ್ರೀ–ಪುರುಷರಿಗೆ ಸಮಾನ ರಾಜಕೀಯಾಧಿಕಾರವುಳ್ಳ ಇಂದಿನ ಕಾಲದಲ್ಲಿ ಸಾಹಿತ್ಯದಲ್ಲಿಯೂ ಅವರಿಗೆ ಹೆಚ್ಚಿನ ಪ್ರಾಮುಖ್ಯತೆ ದೊರೆವುದು ಅಗತ್ಯವಾಗಿದೆ. ಅಂತಹ ಸಂದರ್ಭ ಸನ್ನಿವೇಶ ದೊರೆಕಿಸುವುದು ಸರ್ಕಾರ ಮತ್ತು ಸಾರ್ವಜನಿಕರ ಕರ್ತವ್ಯವಾಗಿದೆ.

೮. ಕನ್ನಡ ನಾಡಿನಲ್ಲಿ ತುಂಬಿ ತುಳುಕುತ್ತಿರುವ ಜನಪದ ಸಾಹಿತ್ಯ ವನ್ನು ಸಂಗ್ರಹಿಸಿ ಪ್ರಕಟಿಸುವುದು ಬಹಳ ಪವಿತ್ರವಾದ ಕಾರ್ಯ.

ಈ ದೆಸೆಯಲ್ಲಿ ಶ್ರೀ ಎಲ್. ಗುಂಡಪ್ಪ, ಜನಾಬ್ ಎಸ್. ಕರೀಂಖಾನ್, ಡಾ॥ ಗದ್ದಗಿಮಠ, ಮತಿಘಟ್ಟ ಕೃಷ್ಣಮೂರ್ತಿ ಮೊದಲಾದ ಮಹನೀಯರು ಮಾಡಿರುವ ಕಾರ್ಯವನ್ನು ನಾವು ಸ್ವಾಗತಿಸಿ ಇನ್ನೂ ಹೆಚ್ಚು ಜನರು ಈ ಕಾರ್ಯವನ್ನು ನಡೆಸುವಂತೆ ಪ್ರೋತ್ಸಾಹಿಸುವುದು ಅಗತ್ಯವಾಗಿದೆ.

೯. ಕನ್ನಡ ಸಾಹಿತ್ಯದಲ್ಲಿ ಇತ್ತೀಚೆಗೆ ದ್ವೇಷಾಸೂಯೆಗಳನ್ನು ಹುರಿದುಂಬಿಸುವ, ತಮಗೆ ಬೇಡವಾದ ವ್ಯಕ್ತಿಗಳನ್ನು ವ್ಯಾಜಾಂತರದಿಂದ ನಿಂದಿಸುವ, ವಿಡಂಬನವಲ್ಲದ ವಿಪರೀತ ಸಾಹಿತ್ಯವು ಗ್ರಂಥ ಮತ್ತು ಲೇಖನ ರೂಪದಲ್ಲಿ ಪ್ರಕಟವಾಗುತ್ತಿದೆ. ಇದು ಸಾಹಿತ್ಯದ ಮೂಲಭೂತವಾದ ತತ್ವಗಳಿಗೆ ವಿರುದ್ಧವಾಗಿದೆ. ಕನ್ನಡ ನಾಡು ನುಡಿಗಳ ಹಿತದೃಷ್ಟಿಯಿಂದ ಇಂಥ ಕೆಟ್ಟಪ್ರಯತ್ನ ನಿಲ್ಲಿಸುವುದು ಸರ್ಕಾರದ ಮತ್ತು ಸಾರ್ವಜನಿಕರ ಕೆಲಸವಾಗಿದೆ. "ಅಸತ್ಕಾವ್ಯಾಲಾಪಾಂಶ್ಚ ವರ್ಜಯೇತ್" ಎಂಬ ಪ್ರಾಚೀನೋಕ್ತಿಯು ನಮಗೆ ಈ ವಿಷಯವನ್ನು ಬೋಧಿಸುತ್ತದೆ. ಕೆಟ್ಟ ಆಹಾರ, ನೀರು, ಗಾಳಿ ಹೇಗೆ ಜನತೆಗೆ ಅಪಾಯವೋ ಹಾಗೆಯೇ ಕೆಟ್ಟ ವಿಚಾರಗಳನ್ನು ಹುಟ್ಟಿಸುವ ಸಾಹಿತ್ಯವೂ ಅಪಾಯಕಾರಿ ಎಂಬುದನ್ನು ಜನ ತಿಳಿಯಬೇಕು.

೧೦. ಮೈಸೂರು ರಾಜ್ಯಸರ್ಕಾರವು ಕನ್ನಡವನ್ನು ಸರ್ಕಾರದ ಅಧಿಕೃತ ಭಾಷೆಯೆಂದು ಪ್ರಕಟಿಸಬೇಕು. ರಾಜ್ಯಾಡಳಿತ ದೃಷ್ಟಿಯಿಂದ ಸರ್ಕಾರಕ್ಕೆ ಒಂದು ಅಧಿಕೃತ ಭಾಷೆಯಿರುವುದು ಅಗತ್ಯ. ಈ ವಿಷಯವಾಗಿ ಮೈಸೂರು ಶಾಸನ ಸಭಾಸದಸ್ಯರೂ ರಾಜಕಾರಣಿಗಳೂ ಹೆಚ್ಚು ಗಮನ ಕೊಡುವರೆಂದು ನಾನು ನಂಬುತ್ತೇನೆ.

೧೧. ಮೈಸೂರು ಮತ್ತು ಕರ್ಣಾಟಕ ವಿಶ್ವವಿದ್ಯಾನಿಲಯದ ಆಡಳಿತ ವರ್ಗದವರು ಕನ್ನಡ ಮಾಧ್ಯಮದ ವಿಚಾರದಲ್ಲಿ ಹಾಗೂ ಕರ್ನಾಟಕ ಇತಿಹಾಸ ಸಂಶೋಧನೆ ಮೊದಲಾದ ಗಂಭೀರ ವಿರಗಳಲ್ಲಿ ಇನ್ನೂ ಹೆಚ್ಚಿನ ತೀವ್ರಾಸಕ್ತಿ ವಹಿಸಬೇಕು.

೧೨. ಕನ್ನಡದ ಉತ್ತಮ ಕೃತಿಗಳನ್ನು ಭಾರತದ ಇತರ ಭಾಷೆಗಳಿಗೂ ಇತರ ಭಾಷೆಗಳ ಶ್ರೇಷ್ಠ ಸಾಹಿತ್ಯವನ್ನು ಕನ್ನಡಕ್ಕೂ ಭಾಷಾಂತರಿಸಿ

ಪ್ರಕಟಿಸುವ ವ್ಯವಸ್ಥೆ ಇಂದು ಅತ್ಯಗತ್ಯ. ಇದರಿಂದ ಭಾರತೀಯರಲ್ಲಿ ಐಕಮತ್ಯವೂ ವಿಶಾಲಜ್ಞಾನವೂ ಉಂಟಾಗಲು ಸಹಾಯವಾಗುತ್ತದೆ.

## ಕನ್ನಡ ಸಾಹಿತ್ಯ ಪರಿಷತ್ತು

ಕನ್ನಡ ಸಾಹಿತ್ಯ ಪರಿಷತ್ತು ಸುಮಾರು ೪೬ ವರ್ಷಗಳಿಂದ ಕನ್ನಡ ನಾಡು ನುಡಿಗಳಿಗೆ ನಾನಾ ರೂಪದಿಂದ ಸೇವೆಯನ್ನು ಸಲ್ಲಿಸಿದೆ. ಕರ್ನಾಟಕದ ತುಂಬಾ ಏಕೀಕರಣದ ಚಳುವಳಿಯನ್ನು ಪಸರಿಸಿದೆ. ಕರ್ನಾಟಕ ರಾಜ್ಯ ಸ್ಥಾಪನೆಗೆ ಸುಭದ್ರವಾದ ನೆಲಗಟ್ಟನ್ನು ಹಾಕಿದೆ. ಉತ್ತಮವಾದ ಕನ್ನಡ ಗ್ರಂಥಗಳನ್ನು ಪ್ರಕಟಿಸಿದೆ. ಪರಿಷತ್ಪತ್ರಿಕೆ ಮತ್ತು ಕನ್ನಡನುಡಿಗಳನ್ನು ನಡೆಸುತ್ತಿದೆ. ಕನ್ನಡ ಶಬ್ದಕೋಶವನ್ನು ಸಿದ್ಧಗೊಳಿಸಿದೆ. ಗಡಿ ನಾಡಿನಲ್ಲಿ ಕನ್ನಡದ ರಕ್ಷಣೆಗಾಗಿ ಹೆಣಗಾಡಿದೆ. ಒಟ್ಟಿನಲ್ಲಿ ಪರಿಷತ್ತು ತನ್ನ ಕರ್ಯ ಕಲಾಪಗಳ ಮಹತ್ವದಿಂದ ಇಂದು ಕರ್ಣಾಟಕದ ಜನತಾ ವಿಶ್ವವಿದ್ಯಾ ನಿಲಯ ಎಂದೆನಿಸಿದೆ. ಇತ್ತ ಮೈಸೂರು ವಿಶ್ವವಿದ್ಯಾನಿಲಯ, ಅತ್ತ ಕರ್ಣಾಟಕ ವಿಶ್ವವಿದ್ಯಾನಿಲಯದವರು ನಡೆಸುತ್ತಿರುವ ಜ್ಞಾನ ಪ್ರಸಾರ ಕಾರ್ಯದಲ್ಲಿ ಪರಿಷತ್ತು ಸಂಪೂರ್ಣವಾಗಿ ತನ್ನ ನೈತಿಕಬೆಂಬಲವನ್ನು ಕೊಟ್ಟಿದೆ. ಪರಿಷತ್ತಿನ ಕಾರ್ಯಸಮಿತಿಯಲ್ಲಿ ಈ ವಿಶ್ವವಿದ್ಯಾನಿಲಯಗಳ ಪ್ರತಿನಿಧಿ ಗಳಿರುವುದು ಗಮನಾರ್ಹವಾಗಿದೆ. ಹೀಗೆ ಕನ್ನಡ ಸರಸ್ವತಿಯ ದಿವ್ಯ ಮಂದಿರ ವೆಂಬಂತೆ ಪರಿಶೋಭಿಸುತ್ತಿರುವ ಸಾಹಿತ್ಯ ಪರಿಷತ್ತಿಗೆ ಇನ್ನೂ ಹೆಚ್ಚು ಹೆಚ್ಚು ಪ್ರೋತ್ಸಾಹ ಸರ್ಕಾರದಿಂದಲೂ, ಸಾರ್ವಜನಿಕರಿಂದಲೂ ದೊರೆಯುವುದು ಅಗತ್ಯವಾಗಿದೆ. ಪರಿಷತ್ತು ಮಾಡಿರುವ ಕಾರ್ಯಗಳಿಗಿಂತಲೂ ಮಾಡ ಬೇಕಾಗಿರುವ ಕಾರ್ಯಗಳು ಬಹಳವಾಗಿವೆ. ಅದಕ್ಕಾಗಿ ಆ ಮಹಾ ಸಂಸ್ಥೆ ಯನ್ನು ಬಲಗೊಳಿಸುವುದು ಎಲ್ಲ ಕನ್ನಡಿಗರ ಕರ್ತವ್ಯವಾಗಿದೆ. ಎರಡು ಕೋಟಿ ಕನ್ನಡ ಜನರು ತಲೆಗೊಂದು ರೂಪಾಯಿಯಂತೆ ಕಾಣಿಕೆ ಕೊಟ್ಟರೂ ಎರಡು ಕೋಟಿ ರೂ. ನಿಧಿ ಪರಿಷತ್ತಿಗೆ ಸೇರುತ್ತದೆ. ಈ ಮಾತಿನ ಉದ್ದೇಶ ವನ್ನು ಕನ್ನಡ ಮಹಾಜನರು ಗ್ರಹಿಸುತ್ತಾರೆಂದು ನಂಬಿರುತ್ತೇನೆ.

## ಕನ್ನಡಕ್ಕೆ ದೊರೆತ ರಾಜಾಶ್ರಯ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ನಮ್ಮ ವಾಙ್ಮಯವು ರಾಜಾಶ್ರಯದಲ್ಲಿ ಬಳೆದಿದೆಯೆಂಬುದನ್ನು ನಾವು ಅರಿಯಬಹುದಾಗಿದೆ. ಗಂಗರು, ಕದಂಬರು, ಹೊಯ್ಸಳರು, ರಾಷ್ಟ್ರಕೂಟರು, ಚಾಲುಕ್ಯರು, ಯಾದವರು, ವಿಜಯನಗರದವರು, ಕೆಳದಿ ನಾಯಕರು, ಮೈಸೂರು ಪ್ರಭುಗಳು, ಹಲವಾರು ಪಾಳೆಯಗಾರರು ಕನ್ನಡ ಸಾಹಿತ್ಯಕ್ಕೆ ಹೆಚ್ಚಿನ ಪ್ರೋತ್ಸಾಹವನ್ನು ಕೊಟ್ಟಿದ್ದಾರೆ. ಗಂಗರ ದುರ್ವಿನೀತ, ರಾಷ್ಟ್ರಕೂಟರ ನೃಪತುಂಗ, ಕೆಳದಿಯ ಬಸವರಾಜ, ವಿಜಯನಗರದ ಕೃಷ್ಣದೇವರಾಯ, ಮೈಸೂರಿನ ಚಿಕ್ಕದೇವರಾಜ, ಕೊಡಗಿನ ಲಿಂಗರಾಜ, ಸ್ವಾದಿಯ ಸದಾಶಿವರಾಜ ಮೊದಲಾದವರು ಉತ್ತಮ ಗ್ರಂಥ ರಚನೆಯನ್ನುಮಾಡಿ ನಾಡಿನ ಚಿರಕೃತಜ್ಞತೆಗೆ ಪಾತ್ರರಾಗಿರುತ್ತಾರೆ. ಮೈಸೂರಿನ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರು, ಶ್ರೀ ಚಾಮರಾಜ ಒಡೆಯರು, ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು, ಇಂದಿನ ರಾಜ್ಯಪಾಲರಾದ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರು ಇವರುಗಳು ಕನ್ನಡ ಸಾಹಿತ್ಯಕ್ಕೆ ಮಾಡಿರುವ ಸೇವೆಯು ಸಾಹಿತ್ಯ ಚರಿತ್ರೆಯಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡಲು ಅರ್ಹವಾಗಿದೆ.

## ಸಾಹಿತ್ಯ ಸಂಸ್ಕೃತಿ ಪ್ರಸಾರ ಶಾಖೆ

ಮೈಸೂರು ಸರ್ಕಾರವು ಸಾಹಿತ್ಯ ಸಂಸ್ಕೃತಿ ಪ್ರಸಾರಶಾಖೆಯನ್ನು ಸ್ಥಾಪಿಸಿದೆ. ಭಾರತದಲ್ಲಿ ಅಸ್ಸಾಂರಾಜ್ಯ ಹೊರತು ಇನ್ನೆಲ್ಲಿಯೂ ಇಂತಹ ವ್ಯವಸ್ಥೆಯಿಲ್ಲವೆಂದು ಕೇಳಿದ್ದೇನೆ. ಅಮೆರಿಕಾ, ಫ್ರಾನ್ಸ್, ರಷ್ಯಾ ಮೊದಲಾದ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಆಯಾ ಸರ್ಕಾರಗಳು ಈ ಬಗ್ಗೆ ಇಲಾಖೆಗಳನ್ನೂ ಮಂತ್ರಿಪದವಿಗಳನ್ನೂ ಸ್ಥಾಪಿಸಿರುವುವೆಂದು ತಿಳಿದುಬಂದಿದೆ. ಭಾರತ ಸರ್ಕಾರವು, ಸಂಗೀತ, ಸಾಹಿತ್ಯ ಅಕ್ಯಾಡಮಿಗಳನ್ನು ಸ್ಥಾಪಿಸಿರುವುದು ಕೂಡ ಶ್ಲಾಘ್ಯವಾಗಿದೆ. ಇದರ ಶಾಖೆಗಳು ಈಗ ಪ್ರತಿ ರಾಜ್ಯಗಳಲ್ಲಿಯೂ ಇವೆ.

ಮೈಸೂರು ಸರ್ಕಾರವು ಕನ್ನಡ ಜೈಮಿನಿ ಭಾರತ, ಕನ್ನಡ ಭಾರತ, ಹರಿಶ್ಚಂದ್ರಕಾವ್ಯ, ಸಂಸ್ಕೃತಿ, ಮೈಸೂರು ರಾಜ್ಯ, ಭಗವಾನ್ ಬುದ್ಧ ಮೊದಲಾದ ಗ್ರಂಥಗಳನ್ನು ಆ ಇಲಾಖೆಯಿಂದ ಪ್ರಕಟಿಸಿ ಉಪಕಾರಮಾಡಿದೆ.

ಉತ್ತರ ಪ್ರದೇಶ ಸರ್ಕಾರವು ಮಾನ್ಯ ಆರ್. ಆರ್. ದಿವಾಕರರ 'ವಚನ ಶಾಸ್ತ್ರರಹಸ್ಯ'ವನ್ನು ಹಿಂದಿಗೆ ಭಾಷಾಂತರಿಸಿ ಪ್ರಕಟಿಸಿ ಕನ್ನಡಕ್ಕೆ ಗೌರವ ವಿತ್ತಿದೆ. ನಿಜವಾಗಿಯೂ ಭಾರತ ಸರ್ಕಾರ ಹಾಗೂ ರಾಜ್ಯ ಸರ್ಕಾರಗಳು ಹೀಗೆ ಸಾಹಿತ್ಯ ಸಂಸ್ಕೃತಿಗೆ ಬೆಂಬಲವೀಯುವುದು ಶ್ಲಾಘ್ಯವಾಗಿದೆ.

## ಸಂಗೀತ ನೃತ್ಯ ನಾಟಕ ಅಕ್ಯಾಡಮಿ

ಕೇಂದ್ರ ಸರ್ಕಾರದ ಅಕ್ಯಾಡಮಿಯುವರೂ ಮೈಸೂರಿನ ಸಂಗೀತ ನೃತ್ಯ ನಾಟಕ ಅಕ್ಯಾಡಮಿಯುವರೂ ನಮ್ಮ ನಾಡಿನ ಲಲಿತ ಕಲೆಗಳಿಗೆ ಪ್ರೋತ್ಸಾಹ ನೀಡುವುದು ಸ್ತೋತ್ರಾರ್ಹವಾಗಿದೆ. ಕನ್ನಡ ನಾಡು ಸಂಗೀತ-ನೃತ್ಯ-ನಾಟಕ ಕಲೆಗಳಲ್ಲಿ ಭಾರತದಲ್ಲಿಯೇ ಪ್ರಖ್ಯಾತಿಗಳಿಸಿತ್ತು. ನಮ್ಮ ನಾಡಿನ ಹೆಸರಾಂತ ಚಿತ್ರ, ಶಿಲ್ಪಿಗಳಲ್ಲಿ, ಪ್ರಾಚೀನ ಗ್ರಂಥಗಳಲ್ಲಿ ಇದಕ್ಕೆ ಬೇಕಾದಷ್ಟು ನಿದರ್ಶನಗಳಿವೆ.

ಮೈಸೂರಿನ ಈ ಸಂಗೀತ ನಾಟಕ ನೃತ್ಯ ಅಕ್ಯಾಡಮಿಗೆ ಕೈತುಂಬ ಕೆಲಸವಿರುವ ಸರ್ಕಾರದ ವಿದ್ಯಾ ಮಂತ್ರಿಗಳು ಈ ಸಂಸ್ಥೆಯ ಅಧ್ಯಕ್ಷರಾಗಿರುವುದರಿಂದ ಅಕ್ಯಾಡಮಿ ಚುರುಕಾಗಿ ಕೆಲಸ ಮಾಡದಂತಾಗಿದೆ. ಖಾಸಗಿ ಮಹನೀಯರೊಬ್ಬರು ಅಧ್ಯಕ್ಷರಾಗಿರುವುದು ಈ ಸಂಸ್ಥೆಯ ಅಭಿವೃದ್ಧಿ ದೃಷ್ಟಿಯಿಂದ ಅಗತ್ಯ.

## ಮಂಗಳೂರು ಜಿಲ್ಲೆಯ ಮಹತ್ವ

ಧರ್ಮಸ್ಥಳ ಕ್ಷೇತ್ರವು ಮಂಗಳೂರು ಜಿಲ್ಲೆಯಲ್ಲಿದೆ. ಈ ಜಿಲ್ಲೆ ಮೊದಲಿನಿಂದಲೂ ಸಾಹಿತ್ಯ ಸೇವೆಗೆ ಗಣ್ಯತೆಯನ್ನು ಪಡೆದಿದೆ. ಉದ್ಭಟಕಾವ್ಯವನ್ನು ಬರೆದ ಸೋಮರಾಜ (ಕ್ರಿ. ಶ. ೧೨೨೨) ಭರತೇಶ ವೈಭವವನ್ನು ಬರೆದ ರತ್ನಾಕರ ವರ್ಣಿ (ಕ್ರಿ. ಶ. ೧೫೫೭) ರಾಮಾಶ್ವಮೇಧ, ಶ್ರೀರಾಮ ಪಟ್ಟಾಭಿಷೇಕ ಮತ್ತು ಅದ್ಭುತ ರಾಮಾಯಣಗಳನ್ನು ರಚಿಸಿದ ಮುದ್ದಣ (೧೯೦೧) ಯಕ್ಷಗಾನ ಕವಿಶ್ರೇಷ್ಠನಾದ ಪಾರ್ತಿಸುಬ್ಬ ಮೊದಲಾದವರೆಲ್ಲರೂ ಈ ಜಿಲ್ಲೆಯ ಮಹಾಕವಿಗಳೆಂಬುದನ್ನು ನಾನಿಲ್ಲಿ ಸ್ಮರಿಸದಿರಲಾರೆನು. ಸುಪ್ರಸಿದ್ಧ ವಿದ್ವಾಂಸರೂ, ನಾಡೋಜಪಂಪ ನೊದಲಾದ ಗ್ರಂಥಗಳ ಕರ್ತೃಗಳೂ ಆಧ

. ದಿ॥ ಮುಳಿಯ ತಿಮ್ಮಪ್ಪಯ್ಯನವರು, ನೂತನ ಸಾಹಿತ್ಯಕ್ಕೆ ಆಚಾರ್ಯ ಪುರುಷರೆನಿಸಿ ಸಣ್ಣ ಕತೆಗಳ ಮೂಲಪುರುಷರೆನಿಸಿದ ಪಂಜೆ ಮಂಗೇಶ ರಾಯರು, ಕರ್ನಾಟಕ ಏಕೀಕರಣಕ್ಕೆ ಆಚಾರ್ಯ ಪುರುಷರೆನಿಸಿ, ಶಿವತತ್ವ ರತ್ನಾಕರ ಮೊದಲಾದ ಹಲವಾರು ಗ್ರಂಥಗಳನ್ನು ಪ್ರಕಟಿಸಿ ಮಹೋಪಕಾರ ವೆಸಗಿದ ದಿ॥ ಬೆನಗಲ್ ರಾಮರಾಯರು, ರಾ ಷ್ಟ್ರ ಕ ವಿ ಗ ಳೂ ಇತಿಹಾಸ ಸಂಶೋಧಕರೂ ಎನಿಸಿರುವ ಎಂ. ಗೋವಿಂದ ಪೈ ಅವರು, ಆಧುನಿಕ ಕವಿವರ್ಯರಾದ ಕಡೆಂಗೋಡ್ಲು ಶಂಕರಭಟ್ಟರು, 'ಸಿರಿಗನ್ನಡ ಕೋಶ' 'ಬಾಲ ಪ್ರಪಂಚ' ಹಲವಾರು ಕಾದಂಬರಿಗಳ ಮೂಲಕ ಪ್ರಖ್ಯಾತರಾಗಿರುವ ಶಿವರಾಮ ಕಾರಂತರು, ಆ ಧು ನಿ ಕ ಚಿತ್ರಕಲಾವಿಶಾರದರಾದ ಪೂಜ್ಯ ದಿವಂಗತ ಮಂಜಯ್ಯ ಹೆಗ್ಗಡೆಯವರು, ಸುಪ್ರಸಿದ್ಧ ವಿದ್ವಾಂಸರೂ ಗ್ರಂಥಕಾರರೂ ಆದ ಶ್ರೀ ಎಂ. ಮರಿಯಪ್ಪ ಭಟ್ಟರು ಇತ್ಯಾದಿ ಮ ಹ ನಿ ೀ ಯ ರೆ ಲ್ಲ ರೂ ಈ ಮಂಗಳೂರು ಜಿಲ್ಲೆಯವರು ಎಂಬುದನ್ನು ನಾನಿಲ್ಲಿ ಹೇಳಲು ಹರ್ಷ ಪಡುತ್ತೇನೆ.

ಈ ಜಿಲ್ಲೆಯು ಯಕ್ಷಗಾನ ಕಲೆಗೆ ಪ್ರಸಿದ್ಧವಾಗಿದೆ. ಈ ಭಾಗದಲ್ಲಿ ಜನಪ್ರಿಯವೆನಿಸುವ ತಾಳಮದ್ದಳೆಯು ನಮ್ಮ ನಾಡಿನ ಹೆಮ್ಮೆಗೆ ನಿದರ್ಶನ ವೆನಿಸಿದೆ. ಈ ಮಾತು ಕೆಲಮಟ್ಟಿಗೆ ಕಾರವಾರ ಜಿಲ್ಲೆಗೂ ಅನ್ವಯಿಸುತ್ತದೆ. ಪ್ರಕೃತಿ ಸೌಂದರ್ಯ, ಪ್ರತಿಭಾಶಾಲಿಗಳಾದ ಜನರು, ಕಾರ್ಕಳ, ಮೂಡಬಿದ್ರೆ, ವೇಣೂರು ಮೊದಲಾದ ಕಲಾ ಕ್ಷೇತ್ರಗಳು, ಸು ಪ್ರ ಸಿ ದ್ಧ ಕ್ಷೇತ್ರಗಳಾದ ಉಡುಪಿ, ಧರ್ಮಸ್ಥಳ, ಕುಕ್ಕೆಸುಬ್ರಹ್ಮಣ್ಯ ಮೊದಲಾದ ಪವಿತ್ರಸ್ಥಾನಗಳು ಇವುಗಳಿಂದ ಕೂಡಿದ ಈ ಜಿಲ್ಲೆಯು ನಿಜವಾಗಿಯೂ ಕನ್ನಡಿಗರ ಪ್ರೀತಿ ಗೌರವಗಳಿಗೆ ಪಾತ್ರವೆನಿಸಿದೆ. ಕನ್ನಡ ಕವಿ ಕನಕದಾಸನಿಗೆ ಭಗವಂತನು ಪ್ರತ್ಯಕ್ಷನಾದುದು ಮಂಗಳೂರು ಜಿಲ್ಲೆಯ ಉಡುಪಿಯಲ್ಲಿ. ಧರ್ಮದೇವತೆಗಳ ಆವಾಸ ಇದೇ ಧರ್ಮಸ್ಥಳದಲ್ಲಿ ಅಂದ ಮೇಲೆ ಮಂಗಳೂರು ಜಿಲ್ಲೆಯ ಮಹಿಮೆಯನ್ನು ಹೇಳಲೇನು ?

## ಕನ್ನಡಿಗರ ಹಿರಿಯ ಗುಣಗಳು

ಉತ್ತರದಿಂದ ಬಂದ ಶ್ರೀರಾಮಚಂದ್ರನಿಗೆ ಕನ್ನಡಿಗರಾದ ಸುಗ್ರೀವ ಹನುಮಂತರು ಸೇವೆ ಸಲ್ಲಿಸಿದರು. ಅಜ್ಞಾತವಾಸಕ್ಕೆ ಬಂದ ಪಾಂಡವರಿಗೆ



ಮಹಾಶಿವಶರಣೆಯೆನಿಸಿರುವ ಪ್ರಸಿದ್ಧ ವಚನಕಾರ್ತಿ,

ಬಸವೇಶ್ವರನ ಧರ್ಮಪತ್ನಿ

ನೀಲಾಂಬಿಕಾದೇವಿ

ಕನ್ನಡಿಗನಾದ ಹಾನಗಲ್ಲಿನ ವಿರಾಟನು ಆಶ್ರಯವಿತ್ತನು. ಅಶೋಕನು ಕಳಿಸಿದ ಬೌದ್ಧ ಭಿಕ್ಷುವನ್ನು ಬನವಾಸಿಯ ಜನ ಸ್ವಾಗತಿಸಿದರು. ಉತ್ತರ ದೇಶದಿಂದ ಕರ್ಣಾಟಕಕ್ಕೆ ಶ್ರವಣಬೆಳಗೊಳಕ್ಕೆ ಬಂದ ಭದ್ರಬಾಹು-ಚಂದ್ರಗುಪ್ತರನ್ನು ಕನ್ನಡಜನ ಪುರಸ್ಕರಿಸಿದರು. ಪೂಜ್ಯರಾದ ಕೇರಳದ ಶಂಕರಾಚಾರ್ಯರು, ತಮಿಳುನಾಡಿನ ರಾಮಾನುಜಾಚಾರ್ಯರಿಗೆ ಕರ್ಣಾಟಕದಲ್ಲಿ ಧರ್ಮಪ್ರಚಾರಕ್ಕೆ ಉದಾರಾಶ್ರಯ ದೊರೆಯಿತು. ಬಸವೇಶ್ವರನು ತತ್ವನಿಷ್ಠೆಗಾಗಿ ಮಂತ್ರಿಪದವಿ ತೊರೆದನು. ಅಕ್ಕಮಹಾದೇವಿಯು ರಾಜ್ಯೈಶ್ವರ್ಯಗಳನ್ನು ತೊರೆದು ಕಾಡಿಗೆ ಹೋದಳು. ಶಿವಪ್ಪನಾಯಕನು ಧರ್ಮದಿಂದ ರಾಜ್ಯಭಾರ ಮಾಡಿದನು. ಬನವಾಸಿಯ ಭೂತಪಾಲ ಶೆಟ್ಟಿಯು ಕಾರ್ಲೆಯ ಚೈತ್ಯಾಲಯ ಕೊರೆಯಿಸಿದನು. ತಲಕಾಡಿನ ಚಾಮುಂಡರಾಯನು ಶ್ರವಣಬೆಳಗೊಳದಲ್ಲಿ ಲೋಕೋನ್ನತ ಗೊಮ್ಮಟೇಶ್ವರನನ್ನು ಸ್ಥಾಪಿಸಿದನು. ಇಮ್ಮಡಿ ಪುಲಿಕೇಶಿಯ ಆಸ್ಥಾನದಲ್ಲಿ ಹ್ಯೂವನತ್ಸಾಂಗನು ಇದ್ದು ಕನ್ನಡಿಗರ ಸದ್ಗುಣಗಳನ್ನು ಮನಸಾರ ಹೊಗಳಿದನು. ವಿಜಯನಗರದ ಕೃಷ್ಣದೇವರಾಯನು ಮಹಾಕವಿಯೊಬ್ಬನ ಪಾಲಕಿಯನ್ನು ಹೊತ್ತನು. ಹುಕ್ಕ ಬುಕ್ಕರು ಸಾಯಣ ಮಾಧವರಿಂದ ವೇದ ಭಾಷ್ಯಬರೆಸಿದರು. ಕೆಳದಿಯ ಚೆನ್ನಮ್ಮ ಅವರಂಗಜೇಬನ ಹೆದರಿಕೆಯಿಂದ ಬಂದ ಶಿವಾಜಿ ಮಗ ರಾಜಾರಾಮನಿಗೆ ಆಶ್ರಯವಿತ್ತಳು. ಕಿತ್ತೂರು ಚನ್ನಮ್ಮ ೧೮೨೪ರಷ್ಟು ಹಿಂದೆಯೇ ಇಂಗ್ಲಿಷರನ್ನು ಪ್ರತಿಭಟಿಸಿ ಮಡಿದಳು. ಕುಮಾರ ಲಕ್ಷ್ಮೀದಂಡನಾಯಕನು ರಾಜನಿಗಾಗಿ ಅಗ್ನಿಪ್ರವೇಶ ಮಾಡಿದನು. ಕನ್ನಡ ಸ್ತ್ರೀಯರು ಪತಿಗಾಗಿ ಸತಿಯಾಗಿ ಹೋದರು. ಮಹಾತ್ಮ ಗಾಂಧಿಯವರು ಕನ್ನಡಿಗರ ಸೌಜನ್ಯಕ್ಕೆ ಮೆಚ್ಚಿ ಕರ್ಣಾಟಕವನ್ನು ಹರಸಿದರು. ಮೈಸೂರು ರಾಜ್ಯಪಾಲಕರು ರಾಜರ್ಷಿಗಳೆನಿಸಿ ಪ್ರತಿಫಲ ಕೇಳದೆ ಅಧಿಕಾರ ನಡೆಸುತ್ತಿರುವರು. ಕನ್ನಡಿಗರು ರಕ್ತಪಾತವಿಲ್ಲದೆ ಏಕೀಕರಣವನ್ನು ಸಂಪಾದಿಸಿದರು. ದ್ವೈತ, ಅದ್ವೈತ, ಶೈವ, ವೈಷ್ಣವ, ಜೈನ, ಬೌದ್ಧ, ಮುಸ್ಲಿಂ, ಕ್ರಿಶ್ಚಿಯನ್ ಮತಗಳು ಕರ್ಣಾಟಕದಲ್ಲಿ ಸಮನ್ವಯಗೊಂಡಿವೆ. ಇತ್ಯಾದಿ ನಿದರ್ಶನಗಳು ಕನ್ನಡಿಗರ ಹಿರಿಯತನಕ್ಕೆ ಗುರುತುಗಳಾಗಿವೆ.

## ನಮ್ಮ ರಾಜ್ಯದ ಭವಿಷ್ಯ

ಕನ್ನಡಿಗರಾದ ನಾವು ಇಂದು ನಮ್ಮದೇ ಆದ ಭಾಷಾ ರಾಜ್ಯವನು. ಪಡೆದಿದ್ದೇವೆ. ಅದನ್ನು ಮೈಸೂರು ರಾಜ್ಯವೆನ್ನಿ, ಕರ್ನಾಟಕ ರಾಜ್ಯವೆನ್ನಿ, ಅದನ್ನು ಯಾವ ಹೆಸರಿನಿಂದ ಕರೆದರೂ ಅದು ಕನ್ನಡಿಗರ ರಾಜ್ಯವೇ ತಾನೆ. ಸಮಗ್ರ ಭಾರತದ ಅಭ್ಯುದಯ ಮತ್ತು ಐಕಮತ್ಯಗಳನ್ನು ಗಮನದಲ್ಲಿಟ್ಟು ಕೊಂಡು ನಾವು ಇಂದು ಕರ್ನಾಟಕದ ಹಿತವನ್ನು ಸಾಧಿಸಬೇಕು. ನಾವು ಮಂಗಳೂರು,ಕಾರವಾರ,ಮೊದಲಾದ ಬಂದರುಗಳನ್ನು ಕಟ್ಟಬೇಕು. ಕೃಷ್ಣಾ, ಘಟಪ್ರಭಾ, ಮಲಪ್ರಭಾ, ಭೀಮಾ ಮೊದಲಾದ ಮಹಾನದಿಗಳಿಗೆ ಅಣೆ ಕಟ್ಟುಗಳನ್ನು ಹಾಕಬೇಕು. ನಮ್ಮ ದೇಶದ ಕೈಗಾರಿಕೆ ವ್ಯಾಪಾರಗಳನ್ನು ಅಭಿವೃದ್ಧಿ ಪಡಿಸಬೇಕು. ಇದರಿಂದ ಜನ ಸಂತುಷ್ಟರಾಗಿ ಉತ್ತಮ ಸಾಹಿತ್ಯ ಸೃಷ್ಟಿಗೆ ಅವಕಾಶ ಪ್ರಾಪ್ತವಾಗುತ್ತದೆ. ಅಜಂತದ ಚಿತ್ರಗಳು, ಎಲ್ಲೋರದ ದೇವಾಲಯಗಳು, ಬೇಲೂರು, ಹಳೇಬೀಡು, ಸೋಮನಾಥಪುರ, ಹಂಪೆ, ಬಾದಾಮಿ, ಐಹೊಳೆ, ಪಟ್ಟದಕಲ್ಲು, ಲೇಪಾಕ್ಷಿ ಮೊದಲಾದ ಶಿಲ್ಪಕಲಾ ಕೃತಿಗಳ ನಿರ್ಮಾಪಕರು, ಸಂಗೀತ ಸಾಹಿತ್ಯಾದಿ ಮಹದ್ಗ್ರಂಥ ನಿರ್ಮಾಪಕರು ಇವರೆಲ್ಲರೂ ಕನ್ನಡ ತಾಯಿಯ ಗರ್ಭದಲ್ಲಿ ಸಂಜಾತರು ಎಂಬುದನ್ನು ನಾವು ಮರೆಯಬಾರದು. ಚಾಲುಕ್ಯ ಪುಲಿಕೇಶಿ ಮತ್ತು ವಿಕ್ರಮಾದಿತ್ಯ, ರಾಷ್ಟ್ರಕೂಟ ನೃಪತುಂಗ ಮತ್ತು ಒಂದನೇ ಕೃಷ್ಣ, ಹೊಯ್ಸಳ, ವಿಷ್ಣುವರ್ಧನ ಮತ್ತು ವಿಜಯನಗರದ ಪ್ರೌಢದೇವರಾಯ, ಕೆಳದಿಯ ಚೆನ್ನಮ್ಮ ಮತ್ತು ಕಿತ್ತೂರು ಚೆನ್ನಮ್ಮ ಇವರುಗಳ ಉನ್ನತವಾದ ಆದರ್ಶವನ್ನು ನಾವು ಮರೆಯಲಾಗದು. ಪೂಜ್ಯಪಾದ, ಸಮಂತಭದ್ರ, ಅಲ್ಲಮಪ್ರಭು, ಬಸವೇಶ್ವರ, ಅಕ್ಕಮಹಾದೇವಿ, ಆನಂದತೀರ್ಥ, ವಿದ್ಯಾರಣ್ಯ, ವ್ಯಾಸರಾಯ ಮೊದಲಾದ ಮಹಾಪುರುಷರು ನಮ್ಮವರೆಂಬುದನ್ನು ನಾವು ಮರೆಯಬಾರದು. ಇವರೆಲ್ಲರ ನೆನಪು ನಮಗೆ ಕನ್ನಡಿಗತನವನ್ನು ಉಂಟುಮಾಡುತ್ತದೆ. ಭಾರತದಲ್ಲಿ ತಲೆ ಎತ್ತಿ ನಿಲ್ಲುವಂತೆ ಮಾಡುತ್ತದೆ.

ಕಂದ॥ ಧರ್ಮಸ್ವರೂಪನೆನಿಸುತೆ । ಧರ್ಮಸ್ಥಲ ಕ್ಷೇತ್ರದಲ್ಲಿ ಪರಿಶೋಭಿಸುವಾ ॥
ಪೆರ್ಮೆಯ ಪರಶಿವನನಿಶಂ। ಕರ್ಮಹರಂ ಮಂಜುನಾಥ ಪೊರೆಯುಲಿ ಜಗಮಂ॥

# ಕೆಳದಿಯ ವೀರಶೈವ ರಾಜರು

ಯಾವುದೊಂದು ಸಮಾಜವಾಗಲಿ ಅಥವಾ ಜನಾಂಗವಾಗಲಿ ಲೋಕದಲ್ಲಿ ಏಳಿಗೆಗೆ ಬರಬೇಕಾದರೆ ಅದಕ್ಕೆ ರಾಜಾಶ್ರಯ ಅಗತ್ಯವಾಗುತ್ತದೆ. ರಾಜಾಶ್ರಯ ವಿದ್ದುದರಿಂದಲೇ ಕ್ರೈಸ್ತ ಮತವು ನಮ್ಮ ದೇಶದಲ್ಲಿ ದಿನೇದಿನೇ ಪ್ರಬಲವಾಯಿತು. ರಾಜಾಶ್ರಯ ರಹಿತವಾದುದರಿಂದಲೇ ಹಿಂದೂ ಮತವು ಕ್ಷೀಣಿಸುತ್ತಿದೆ. ಈ ಸೂತ್ರವು ಪ್ರಾಯಶಃ ಎಲ್ಲ ಕಾಲದಲ್ಲಿಯೂ ಎಲ್ಲ ಮತಗಳಿಗೂ ಸಮನ್ವಯವಾಗುವುದು.

ಅಶೋಕ ಚಕ್ರವರ್ತಿಯ ಕಾಲದಲ್ಲಿ ಬೌದ್ಧಮತವು ಹಿಂದೂಸ್ಥಾನದಲ್ಲಿ ನಲಿದಾಡುತ್ತಿತ್ತು. ಅಂತಹ ರಾಜಬಲವು ಇಲ್ಲದಾದಾಗ ಅದು ಹೇಳ ಹೆಸರಿಲ್ಲದಂತಾಯಿತು.

ಕರ್ಣಾಟಕದಲ್ಲಿ ವೀರಶೈವ ಮತವು ಪ್ರಬಲಿಸಲು ರಾಜಬಲವೂ ಒಂದು ಮುಖ್ಯ ಕಾರಣವೇ ಆಗಿದ್ದಿತು. ಕೆಳದಿ–ಸ್ವಾದಿ–ಬಿಳಿಗಿ–ಪುಂಗನೂರು–ಕೊಡಗು–ಹಾಗಲ್ವಾಡಿ–ಸೂಳಗೆರೆ-ಚೇರಿಕೆ, ಬಿಜ್ಜಾವರ, ಸಿರಸಂಗಿ,ವಂಟಮುರಿ, ಇವೆಲ್ಲವೂ ಮೊದಲಿಗೆ ವೀರಶೈವ ರಾಜರುಗಳ ಅಧೀನದಲ್ಲಿದ್ದ ಪ್ರದೇಶಗಳಾಗಿದ್ದುವು.

ಕರ್ಣಾಟಕ ಸಮ್ರಾಟದಲ್ಲಿ (ಕ್ರಿ. ಶ. ೧೪೧೯-೧೪೪೬) ರಾಜ್ಯಭಾರ ಮಾಡಿ ಹೆಸರಾದ ವಿಜಯನಗರಾದ ಪ್ರೌಢದೇವರಾಯನು ವೀರಶೈವ ಮತಾವಲಂಬಿಯಾಗಿದ್ದನು. ಇವನ ಕಾಲದಲ್ಲಿ ಹಂಪೆಯ ಪ್ರಾಂತದಲ್ಲಿ ವೀರಶೈವ ಮತಕ್ಕೆ ಬಹು ಸಹಾಯವಾಯಿತು. ಇವನ ಆಸ್ಥಾನದಲ್ಲಿ ಲಕ್ಕಣಾಮಾತ್ಯ-ಜಕ್ಕಣಾರ್ಯರು ದಂಡನಾಯಕರೂ ಮಂತ್ರಿಗಳೂ ಇದ್ದರು. ಚಾಮರಸ-ಕಲ್ಲುಮಠದ ಪ್ರಭುದೇವ ಮೊದಲಾದ ಮಹಾಕವಿಗಳೂ ಇದ್ದರು. ಆ

ಕಾಲದಲ್ಲಿ ವೀರಶೈವ ಮತಕ್ಕೆ ನಾನಾಮುಖವಾಗಿ ಬೆಂಬಲ ದೊರಕಿತು. ಹೊಯ್ಸಳ ರಾಜ್ಯದಲ್ಲಿಯೂ ಗೌರಪಡಣಾಯಕ, ಕೆರೆಯ ಪದ್ಮರಸರು ಮಂತ್ರಿಗಳಾಗಿದ್ದರು. ಅಲ್ಲಿ ಮಹಾಕವಿ ಹರಿಹರನು ಉನ್ನತ ರಾಜಕೀಯ ಅಧಿಕಾರಿಯಾಗಿದ್ದನು.

ಕೊಡಗಿನಲ್ಲಿ ಮೊದಲಿನಿಂದಲೂ ವೀರಶೈವ ರಾಜರೇ ಆಳುತ್ತಿದ್ದರು. ಇವರುಗಳಲ್ಲಿ ವೀರರಾಜೇಂದ್ರನು ಬಹು ಸಾಹಸಿಯು. ಕೊಡಗಿನ ಅರಸರು ಸಮಾಜ ಹಿತಕ್ಕಾಗಿ ಎಷ್ಟೋ ಮಠಮಾನ್ಯಗಳನ್ನು ಕಟ್ಟಿಸಿದ್ದಾರೆ.

ಬಿಳಗಿಯು ಕ್ರಿ. ಶ. ೧೫೪೫ರಿಂದ ವೀರಶೈವ ರಾಜರುಗಳ ವಶವಾಯಿತೆಂದು ತೋರುತ್ತದೆ.

ಪುಂಗನೂರು ಮೊದಲಿನಿಂದಲೂ ವೀರಶೈವರಾಜರ ಅಧೀನದಲ್ಲಿಯೇ ಇತ್ತು. ಈಗಲೂ ಅಲ್ಲಿ ಆ ಮನೆತನದ ವೀರಶೈವರಾಜರೇ ಇದ್ದಾರೆ.

ಸ್ವಾದಿಯಲ್ಲಿ ಸದಾಶಿವರಾಯ ಮೊದದಾದ ನಾಯಕರಾಳಿದರು. ಇದು ಬನವಾಸಿ ಪ್ರಾಂತವು ಈ ಪ್ರಾಂತವು. ಬಹು ಕಾಲ ವೀರಶೈವರ ಅಧೀನದಲ್ಲಿದ್ದಿತು. ಅಲ್ಲಿ ಗದ್ದಿಗೆಮಠ ಮೊದಲಾದ ಸ್ಮಾರಕಗಳಿವೆ.

ಸ್ವಾದಿ ಐರೋಪ್ಯರ ಹಾವಳಿಯ ಕಾಲದವರೆಗೆ ವೀರಶೈವ ರಾಜರ ಕೈಕೆಳಗಿದ್ದು ಆಮೇಲೆ ಟೀಪುವಿನ ವಶವಾದಹಾಗೆ ಕಂಡುಬರುತ್ತದೆ. ಆಗ ತಲೆ ತಪ್ಪಿಸಿಕೊಂಡು ಓಡಿ ಹೋಗಿ ಗೋವೆಯಲ್ಲಿ ಪೋರ್ತುಗೀಸರ ಮರೆ ಹೊಕ್ಕ ಸ್ವಾದಿರಾಜ ಸಂತತಿಯವರು ಈಗಲೂ ಗೋವೆಯಲ್ಲಿದ್ದಾರೆ.

ಹಾಗಲ್ವಾಡಿಯ ಪಾಳೆಯಗಾರರು ಇಂದಿಗೂ ಮೈಸೂರು ಸರ್ಕಾರದಿಂದ ವಿಶ್ರಾಂತಿ ಧನವನ್ನು ಪಡೆಯುತ್ತಿದ್ದಾರೆ. ಆಂಧ್ರನಾಡಿನ ಓರುಂಗಲ್ಲು ಕಾಕತೀಯ ಸಾಮ್ರಾಜ್ಯವು ವೀರಶೈವರಿಂದಲೇ ಕಟ್ಟಿ ಆಳಲ್ಪಟ್ಟಿತು.

ಇದುವರೆಗೆ ಉದಹರಿಸಿದ ರಾಜಮನೆತನಗಳ ವಿಚಾರವಾಗಿ ವಿಶೇಷವಾಗಿ ಬರೆಯಲು ಈಗ ನಮಗೆ ಅವಕಾಶವೂ, ಸಾಧನ ಸಂಪತ್ತಿಯೂ ಇಲ್ಲ.

ವೀರಶೈವ ರಾಜಮನೆತನದಲ್ಲಿ ಅತ್ಯಂತ ಹೆಸರಾದ ಕೆಳದಿ ರಾಜ್ಯದ ವಿಷಯ ವನ್ನು ಹೇಳಬಯಸಿ ಈ ಲೇಖನವನ್ನು ಬರೆದಿರುವೆವು.

ಕೆಳದಿಯ ರಾಜ್ಯ ವಿಷಯವನ್ನು ವಿಚಾರಿಸುವುದಕ್ಕಿಂತ ಮೊದಲು ಆಗ ಕರ್ಣಾಟಕದ ಸಮಯ-ಸನ್ನಿವೇಶಗಳ ಸ್ಥಿತಿ-ಗತಿಗಳನ್ನು ಕುರಿತು ಚರ್ಚಿಸು ವುದು ಅತ್ಯಾವಶ್ಯಕವಾದುದು.

ಕೆಳದಿಯು ಸುಮಾರು ಕ್ರಿ. ಶ. ೧೫೦೦ರಲ್ಲಿ ಚೌಡಪ್ಪನಿಂದ ಸ್ಥಾಪಿತವಾಯಿತು. ಆ ಕಾಲದಲ್ಲಿ ಕರ್ಣಾಟಕದ ತೌರೂರೆನಿಸಿದ್ದ ವಿಜ ಯನಗರವು ಕಂಗೊಳಿಸುತ್ತಿತ್ತು. ಆದರೆ ವಿಜಯನಗರವು ತುರುಕರ ಹಾವ ಳಿಗೆ ಅಧೀನವಾಗುವ ಕಾಲವು ದಿನೇ ದಿನೇ ಸಮೀಪವಾಗುತ್ತಿತ್ತು.

ಕೆಳದಿಯ ರಾಜ್ಯಸ್ಥಾಪನೆಯ ಕಾಲದ ರೀತಿಯನ್ನೂ, ಆಗ ಕರ್ಣಾಟಕ ಮಾತೆಗಿದ್ದ ಸುಖ-ದುಃಖಗಳನ್ನೂ ಈ ಮುಂದಿನ ಪಟ್ಟಿ ಯಿಂದ ಊಹಿಸಬಹುದು.

೧. ಕರ್ಣಾಟಕದ ಸುಪ್ರಸಿದ್ಧ ವಿಜಯನಗರದ ಸಿಂಹಾಸನವು ಹೀನ ಸ್ಥಿತಿಗೆ ಬರುವ ಕಾಲವು ಸನ್ನಿಹಿತವಾಗಿತ್ತು.

೨. ಉತ್ತರದಲ್ಲಿ ಧೂರ್ತರೂ, ಕೆಚ್ಚೆದೆಯ ಕಟ್ಟಾಳುಗಳೂ ಆದ ಮಾರಾಟಿಗರು ಕನ್ನಡಿಗರ ಐಶ್ವರ್ಯವನ್ನು ಸೂರೆಗೊಳ್ಳಲು ಅಹರ್ನಿಶಿ ಸಾಹಸ ಮಾಡುತ್ತಿದ್ದರು.

೩ ರಾಜನೀತಿಯನ್ನರಿಯದ ಧರ್ಮಾಂಧರಾದ ಮುಸಲ್ಮಾನ ರಾ ಜರು, ಬಿಜಾಪುರ, ಗೋಲ್ಕೊಂಡ ಮೊದಲಾದೆಡೆಗಳಲ್ಲಿ ಕೊಬ್ಬಿ ನಾನಾಬಗೆ ಯಾಗಿ ಪ್ರಜೆಗಳನ್ನು ಹಿಂಸಿಸುತ್ತಿದ್ದರು.

೪. ತರೀಕೆರೆ-ಚಿತ್ರದುರ್ಗ ಮೊದಲಾದೆಡೆಗಳಲ್ಲಿ ಆಳುತ್ತಿದ್ದ ಪಾ ಳೆಯಗಾರರು ದೂರದೃಷ್ಟಿಯೂ, ಪರಿಸ್ಥಿತಿಯಜ್ಞಾನವೂ ಇಲ್ಲದೆ ತಮ್ಮ ತಮ್ಮಲ್ಲಿಯೇ ಕಿತ್ತಾಡುತ್ತಿದ್ದರು.

೫. ಪಶ್ಚಿಮಭಾಗದಲ್ಲಿದ್ದ ಮಲೆಯಾಳ, ತುಳವ ರಾಜರು ಮಲೆನಾಡಿನ ಕನ್ನಡಿಗರನ್ನು ಅಡಿಗಡಿಗೆ ಕೊಳ್ಳೆಹೊಡೆಯುವುದರ ಮೂಲಕ ಹಿಂಸಿಸುತ್ತಿದ್ದರು.

೬. ದಕ್ಷಿಣದಲ್ಲಿ ಸಾಹಸಿಗರಾದ ಮೈಸೂರೊಡೆಯರು ರಾಜ್ಯಪ್ರಸರಣ ಮಾಡಲು ಹಿಂದುಮುಂದು ನೋಡದೆ ಪ್ರಯತ್ನಿಸುತ್ತಿದ್ದರು.

೭. ಪಾಶ್ಚಾತ್ಯರಲ್ಲಿ ಹೆಸರಾದ ಪೋರ್ತುಗೀಸರು, ಇಂಗ್ಲೀಷರು ಪಶ್ಚಿಮ ತೀರದ, ಕಾರವಾರ-ಗೋವೆ-ಮಂಗಳೂರು ಮೊದಲಾದ ಬಂದರುಗಳಿಗೆ ವ್ಯಾಪಾರದ ವ್ಯಾಜದಿಂದ ಬಂದಿಳಿಯುತ್ತಿದ್ದರು.

೮. ಈ ಪಾಶ್ಚಾತ್ಯರೊಡನೆ ಬಂದ ಯುಕ್ತಿಗಾರರಾದ ಕ್ರೈಸ್ತಪಾದ್ರಿಗಳು ಹಿಂದೂ ಮತವನ್ನು ಹಾಳುಮಾಡಿ ಕ್ರೈಸ್ತ ಮತವನ್ನು ಪ್ರಚಾರಮಾಡಲು ಮೆಲ್ಲಮೆಲ್ಲನೆ ಪಾಟು ಪಡುತ್ತಿದ್ದರು.

೯. ಕರ್ಣಾಟಕದ ಹಾಗೂ ಹಿಂದೂಸ್ಥಾನದ ಐಶ್ವರ್ಯ ಲಕ್ಷ್ಮಿಯನ್ನು ಕದ್ದೊಯ್ಯಲು ಪೋರ್ತುಗೀಸರ ಹಾಗೂ ಆಂಗ್ಲರ ವ್ಯಾಪಾರ ಕೋಠಿಗಳೂ, ಹಡಗುಗಳೂ ಹೊಂಚುಹಾಕುತ್ತಿದ್ದವು.

ಇಂತಹ ವಿಷಮ ಸ್ಥಿತಿಯಲ್ಲಿ ಕರ್ಣಾಟಕವನ್ನು ಎಲ್ಲ ವಿಧದಿಂದಲೂ ಕಾಪಾಡಲು ಉತ್ತಮೋತ್ತಮವಾದ ರಾಜ್ಯಭಾರವೊಂದು ಆವಶ್ಯಕವಾಗಿದ್ದಿತು. ಅಂತಹ ರಾಜ್ಯವು ಜಗನ್ನಾಟಕ ಸೂತ್ರಧಾರನಾದ ಸರ್ವೇಶ್ವರನ ಅನುಗ್ರಹವಿಲ್ಲದೆ ಸ್ಥಾಪನೆಯಾಗುವುದಾದರೂ ಹೇಗೆ ?

ರಾಜ್ಯಸ್ಥಾಪನೆ:

ಮೈಸೂರು ಸೀಮೆಗೆ ಸೇರಿದ ಶಿವಮೊಗ್ಗಾ ಜಿಲ್ಲೆಯ ಸಾಗರ ತಾಲ್ಲೂಕಿನಲ್ಲಿ 'ಪಳ್ಳಿಬಯಲು' ಎಂಬ ಹಳ್ಳಿಯೊಂದಿದ್ದಿತು. ಇಲ್ಲಿ ಕ್ರಿ. ಶ. ೧೫೦೦ನೇ ವರ್ಷದಲ್ಲಿ ಕೃಷಿಕರ್ಮದಿಂದ ಜೀವಿಸುತ್ತಿದ್ದ 'ಬಸವಪ್ಪ' ಎಂಬ ಗೃಹಸ್ಥನೊಬ್ಬನಿದ್ದನು. ಇವನು ವೀರಶೈವ ಮತಾವಲಂಬಿಯಾಗಿ, ಗುರು-ಲಿಂಗ-ಜಂಗಮಾರ್ಚಕನಾಗಿ ಹೆಸರು ಪಡೆದಿದ್ದನು. ಈತನಿಗೆ ಧರ್ಮಪತ್ನಿ

ಯಾದ 'ಬಸವಾಂಬೆ'ಯ ಗರ್ಭದಲ್ಲಿ 'ಚೌಡಪ್ಪ'-'ಭದ್ರಪ್ಪ' ಎಂಬೀ ರ್ವರು ಮಕ್ಕಳು ಹುಟ್ಟಿದರು.

ಬಸವಪ್ಪನು ಶಿವಭಕ್ತಿಸಂಪನ್ನನಾದುದರಿಂದ ದಿನೇ ದಿನೇ ಅಭಿವೃದ್ಧಿಯನ್ನು ಹೊಂದಿದನು. ಕುಮಾರರಾದ ಚೌಡಪ್ಪ-ಭದ್ರಪ್ಪ ಎಂಬುವರು ಪ್ರಾಯಸಮರ್ಥರಾಗಿ ಸಂಸಾರಭಾರವನ್ನು ನಿರ್ವಹಿಸುವ ಕಾಲಕ್ಕೆ ಬಸವಪ್ಪನು ಶಿವಸಾಯುಜ್ಯವನ್ನು ಸೇರಿದನು.

ಪತಿಯು ಶಿವಲೋಕವನ್ನೈದಿದ ಮೇಲೆ ಬಸವಾಂಬೆಯು ಚಿಂತಾಕ್ರಾಂತಳಾದರೂ ತಿಳಿವಳಿಕೆಯುಳ್ಳವಳಾದುದರಿಂದ ಮಕ್ಕಳಿಗೆ ಬುದ್ಧಿವಾದವನ್ನು ಹೇಳಿಕೊಂಡು ಕಾಲಹರಣ ಮಾಡುತ್ತಿದ್ದಳು. ಚೌಡಪ್ಪ-ಭದ್ರಪ್ಪರು ಸಹೋದರ ಪ್ರೇಮದಿಂದಲೂ, ಐಕಮತ್ಯದಿಂದಲೂ ಅಭಿವೃದ್ಧಿಗೆ ಬರುತ್ತಿದ್ದರು.

ಚೌಡಪ್ಪನು ಒಂದಾನೊಂದುದಿನ ನಿದ್ರಿಸುತ್ತಿದ್ದಾಗ ಶಂಕರನು ಜಂಗಮಾಕಾರದಿಂದ ಬಂದು, "'ಕೆಳದೀಪುರ' ಪ್ರಾಂತದಲ್ಲಿರುವ 'ಸೀಗೆವಳ್ಳಿ'ಯಲ್ಲಿ ಸೀಗೆಮೆಳೆಯಲ್ಲಿ 'ರಾಮೇಶ್ವರ' ಲಿಂಗವು ಭೂಮಿಯಲ್ಲಿ ಹೂತು ಹೋಗಿದೆಯೆಂದೂ, ಪ್ರತಿದಿನವೂ ಅಲ್ಲಿಗೆ ಒಂದು ಕಪಿಲೆಬಣ್ಣದ ಹಸುವು ಬಂದು ಹಾಲುಕರೆದು ಹೋಗುವುದೆಂದೂ, ಅದನ್ನು ನೀನು ತೆಗಿಯಿಸಿ ಪ್ರತಿಷ್ಠಿಸಿ ಪೂಜಿಸಿದರೆ ಇತೋಪ್ಯತಿಶಯವಾದ ಅಭಿವೃದ್ಧಿಯುಂಟಾಗುವುದೆಂದೂ" ಸ್ವಪ್ನದಲ್ಲಿ ಹೇಳಿದಂತೆ ಕೆಳದಿ ನೃಪವಿಜಯದಲ್ಲಿ ಅಭಿವರ್ಣಿತವಾಗಿದೆ.

ಚೌಡಪ್ಪನು ಸ್ವಪ್ನದಿಂದೆಚ್ಚತ್ತು ಸೀಗೆವಳ್ಳಿಗೆ ಹೋಗಿ ರಾಮೇಶ್ವರ ಲಿಂಗವನ್ನು ಶೋಧಿಸಿ, ಅಲ್ಲಿಯೇ ಪ್ರತಿಷ್ಠಿಸಿ ಶಿವನಪ್ಪಣೆಯಂತೆ ಪ್ರತಿದಿನವೂ ಭಕ್ತಿಯಿಂದ ಪೂಜಿಸುತ್ತಿದ್ದನು.

ಹೀಗೆ ಶಿವಕೃಪೆಗೆ ಪಾತ್ರನಾದ ಚೌಡಪ್ಪನು ತನ್ನ ಗದ್ದೆಯನ್ನು ಕಾಯ್ದುಲು ಹೋಗಿ ಬಿಸಿಲಿನ ಝಳವನ್ನು ತಡೆಯಲಾರದೆ ಒಂದು ಮರದ

ನೆರಳಿನಲ್ಲಿ ಮಲಗಿದ್ದನು. ಆಗ ಒಂದು ಕೃಷ್ಣಸರ್ಪವು ಹೆಡೆಯನ್ನು ಅಗಲಿಸಿ ಇವನ ತಲೆಯಮೇಲೆ ಬಿಸಿಲು ಬೀಳದಹಾಗೆ ನೆರಳು ಮಾಡುತ್ತಿದ್ದಿತು. ಇಷ್ಟರಲ್ಲಿ ವೇಳೆಗೆ ಸರಿಯಾಗಿ ಮನೆಗೆ ಊಟಕ್ಕೆ ಬರದ ಮಗನನ್ನು ಹುಡುಕಿಕೊಂಡು ಗದ್ದೆಯ ಬಳಿಗೆ ತಾಯಿಯಾದ ಬಸವಾಂಬೆಯು ಬಂದು ಮರದ ಕೆಳಗೆ ಮಲಗಿರುವ ಮಗನನ್ನೂ, ಅವನ ತಲೆಯಮೇಲೆ ಹೆಡೆಯಾಡುವ ಸರ್ಪವನ್ನೂ ನೋಡಿ ದಿಗ್ಭ್ರಾಂತಳಾಗಿ ಗಲಭೆ ಮಾಡಿದರೆ ಸರ್ಪದಷ್ಟನಾಗಿ ಮಗನು ಸಾಯುವನೆಂಬ ಭಯದಿಂದ ನಿಂತಿದ್ದಳು. ಸ್ವಲ್ಪ ಹೊತ್ತಿನೊಳಗಾಗಿ ಸರ್ಪವು ತನ್ನ ಹೆಡೆಯನ್ನು ವಿರಮಿಸಿ ಹರಿದು ಹೋಗುತ್ತಿತ್ತು. ಆಗ ಬಸವಾಂಬೆಯು ಓಡಿಬಂದು ಮಗನನ್ನು ಏಳಿಸಿ ನಡೆದ ಸಂಗತಿಯನ್ನು ಹೇಳಿದಳು. ವಿಚಾರಪರನಾದ ಚೌಡಪ್ಪನು ಸರ್ಪದ ಕಡೆಗೆ ಗಮನಿಸಿ ನೋಡುತ್ತಿದ್ದನು. ಆ ಸರ್ಪವು ಚೌಡಪ್ಪನಕಡೆಗೆ ತಿರುತಿರುಗಿ ನೋಡುತ್ತಾ ಹೆಡೆಯಿಂದ ಸಂಜ್ಞೆಮಾಡುತ್ತಾ ಗದ್ದೆಯ ಒಂದು ಪ್ರದೇಶವನ್ನು ಹೆಡೆಯಿಂದ ಬಡಿಬಡಿದು ತೋರಿಸಿ ಅದೃಶ್ಯವಾಯಿತು. ಇದನ್ನೆಲ್ಲ ನೋಡಿ ವಿಚಾರಿಯಾದ ಚೌಡಪ್ಪನು ತನ್ನ ತಮ್ಮನಾದ ಭದ್ರಪ್ಪನನ್ನು ಕರೆಯಿಸಿ, ಎಲ್ಲ ಸಂಗತಿಯನ್ನೂ ಹೇಳಿ, ಆ ಸ್ಥಳವನ್ನು ಏನಾದರೂ ಮಾಡಿ ಶೋಧಿಸಬೇಕೆಂದು ಸಂಕಲ್ಪಿಸಿ, ಸಹೋದರ ಸಮೇತನಾಗಿ ಆ ಸ್ಥಳವನ್ನು ಅಗೆದನು. ಅಲ್ಲಿ ಅಪಾರವಾದ ನಿಕ್ಷೇಪವೂ, 'ನಾಗಮುರಿಕತ್ತಿ'ಯೂ ಲಭ್ಯವಾದುವು.

ಶಿವಕೃಪೆಯಿಂದ ಲಭ್ಯವಾದ ನಿಧಿಯಿಂದಲೂ, ನಾಗಮುರಿಯ ಮಹಿಮೆಯಿಂದಲೂ ಚೌಡಪ್ಪನು ಎಲ್ಲ ವಿಷಯದಲ್ಲಿಯೂ ಬಲಶಾಲಿಯಾದನು. ತನ್ನ ಇಷ್ಟದೇವತೆಯಾದ ರಾಮೇಶ್ವರನಿಗೆ ದೇವಾಲಯವನ್ನು ಕಟ್ಟಿಸಿ ಸನ್ಮಾರ್ಗದಿಂದ ಕಾಲಹರಣ ಮಾಡುತ್ತಿರಲು, ಚೌಡಪ್ಪನಿಗೆ ಸುಮುಹೂರ್ತದಲ್ಲಿ ರಾಜ ಲಕ್ಷಣ ಸಂಪನ್ನನಾದ ಸದಾಶಿವನಾಯಕನು ಉದಯಿಸಿದನು.

ಕೆಳದಿಯ ಸೀಮೆಯಲ್ಲಿ ಚೌಡಪ್ಪ – ಭದ್ರಪ್ಪರಿಗೆ ನಿಧಿಪ್ರಾಪ್ತವಾದ ಸಂಗತಿಯೂ, ಇವರು ದಿನೇ ದಿನೇ ಗರಿಗಟ್ಟಿಕೊಳ್ಳುವ ಸಂಗತಿಯೂ ಆಗ ವಿಜಯ ನಗರದಲ್ಲಿ ಆಳುತ್ತಿದ್ದ ಕೃಷ್ಣದೇವರಾಯನಿಗೆ ಕರ್ಣಾಕರ್ಣಿಕೆಯಾಗಿ ತಿಳಿದುಬಂದಿತು. ಕೃಷ್ಣದೇವರಾಯನು ಚಾರರಮುಖದಿಂದ ಕೆಳದಿಯಲ್ಲಿದ್ದ

ಚೌಡಪ್ಪ-ಭದ್ರಪ್ಪರನ್ನು ಕರೆಯಿಸಿ ಯಾವದ್ವೃತ್ತಾಂತವನ್ನೂ ಕೇಳಿ, ದೂರಾಲೋಚನೆಯುಳ್ಳವನಾದುದರಿಂದ ಶಿವಕೃಪೆಗೆ ಪಾತ್ರರಾದವರನ್ನು ತನ್ನ ಮಾಂಡಲಿಕರನ್ನಾಗಿ ಮಾಡಿಕೊಳ್ಳುವುದು ಸಮಂಜಸವೆಂದು ಭಾವಿಸಿ, ತನ್ನ ಮಂತ್ರಿಗಳಲ್ಲಿ ಯೋಚಿಸಿ ಚೌಡಪ್ಪ-ಭದ್ರಪ್ಪರನ್ನು ಬಹಳ ಪ್ರೇಮ ದಿಂದ ಆದರಿಸಿದನು.

ಕೃಷ್ಣದೇವರಾಯನ ಪ್ರೇಮ ಪಾತ್ರರಾದ ಈ ಸಹೋದರರು ಕೆಲವು ಕಾಲ ವಿಜಯನಗರದ ರಾಜಾಸ್ಥಾನದಲ್ಲಿಯೇ ಇದ್ದರು. ಆಗ ವಿಜಯನಗರ ಸಾಮ್ರಾಜ್ಯದ ಪೂರ್ವಭಾಗದಲ್ಲಿ ಕೆಲವು ಮಂದಿ ದಂಗೆಕೋರರು ಗಲಭೆ ಮಾಡಲುಪಕ್ರಮಿಸಿದ್ದರು. ಕೃಷ್ಣದೇವರಾಯನು ಚೌಡಪ್ಪ-ಭದ್ರಪ್ಪನವರ ವಿಚಾರಣೆಯಲ್ಲಿ ಸೈನ್ಯವನ್ನು ಕಳುಹಿಸಿ ಪುಂಡರನ್ನು ಅಡಗಿಸುವಂತೆ ಆಜ್ಞೆ ಮಾಡಿದನು. ಆಗ ಶೂರನಾದ ಚೌಡಪ್ಪನು ತನ್ನ ಸಹೋದರ ಸಮೇತ ನಾಗಿ ಹೋಗಿ ರಾಜ್ಯದಲ್ಲಿ ಪುಂಡುಮಾಡುತ್ತಿದ್ದ ಧೂರ್ತರನ್ನೆಲ್ಲ ಸಾಹಸ ದಿಂದ ಅಡಗಿಸಿ ಜಯಾನ್ವಿತನಾಗಿ ಬಂದನು. ಇವನ ಸಾಹಸವನ್ನು ನೋಡಿ ರಾಜನು ಹರ್ಷಿತನಾಗಿ ಇವನನ್ನು ಮತ್ತೂ ಗೌರವಿಸುವುದಕ್ಕೆ ತೊಡಗಿದನು. ಇಷ್ಟರಲ್ಲೇ ರಾಜ್ಯದ ಉತ್ತರ ಭಾಗದಲ್ಲಿ ತುರುಕರ ಹಾವಳಿಯು ವಿಪರೀತ ವಾಯಿತು. ಆಗ ಕೃಷ್ಣದೇವರಾಯನು ಮುಂದಾಲೋಚನೆಯಿಂದ ಚೌಡಪ್ಪನನ್ನು ಕರೆದು, ಕೆಳದಿ, ಇಕ್ಕೇರಿ, ಪೆರ್ಬಯಲು ಮೊದಲಾದ ೮ ಮಾ ಗಣಿಗಳ ಒಡೆತನವನ್ನು ಕೊಟ್ಟು ಚೌಡಪ್ಪನಾಯಕ ನೆಂದು ನಾಮಕರಣ ಮಾಡಿ ಶಾ. ಶ. ೧೪೨೨ನೇ ಸಿದ್ಧಾರ್ಥಿ ಸಂವತ್ಸರದ ಮಾಘ ಶುದ್ಧ ತೃತೀ ಯದಲ್ಲಿ ಕೆಳದಿಯಲ್ಲಿ ಪಟ್ಟಾಭಿಷಿಕ್ತನಾಗುವಂತೆ ಅಪ್ಪಣೆಕೊಟ್ಟು, ಎಲ್ಲ ವಿಷಯದಲ್ಲೂ ತನಗೆ ಸಹಾಯಕರಾಗಿರುವಂತೆ ಬೆಸಸಿ ಕಳುಹಿಸಿದನು.

ಅದೇ ಪ್ರಕಾರ ಚೌಡಪ್ಪನಾಯಕನು ಕೆಳದಿಯ ರಾಜ್ಯದ ಮೊದಲನೇ ಅರಸನಾದನು. ಚೌಡಪ್ಪನು ಸ್ವಲ್ಪ ಕಾಲದೊಳಗಾಗಿ ರಾಜಧಾನಿಯನ್ನು ಕೆಳದಿಯಿಂದ ಇಕ್ಕೇರಿಗೆ ಬದಲಾಯಿಸಿದನು.

ಒಂದಾನೊಂದು ದಿನ ಚೌಡಪ್ಪನಾಯಕನು ಇಕ್ಕೇರಿಯ ಪ್ರಾಂತ ದಲ್ಲಿ ಬೇಟೆಯಾಡುತ್ತಿರುವಾಗ ಒಂದು ಮೊಲವು ಇವನ ಬೇಟೆಯ ನಾಯಿ

ಖುನ್ನು ಕಚ್ಚಿ ಓಡಿಹೋಯಿತು. ಇದನ್ನು ನೋಡಿದ ಚೌಡಪ್ಪನಾಯಕನು ಇದು ಗಂಡುಭೂಮಿಯೆಂದು ಭಾವಿಸಿ ಇಲ್ಲಿ ಕೋಟೆ–ಕೊತ್ತಲುಗಳನ್ನೂ, ಅರಮನೆ ಮೊದಲಾದುವುಗಳನ್ನೂ ಕಟ್ಟಿಸಿ ತನ್ನ ರಾಜಧಾನಿಯನ್ನು ಇಕ್ಕೇರಿಗೆ ಬದಲಾಯಿಸಿದನು. ಕಡೆಗೆ ತನಗೆ ಪಟ್ಟವಾದ ೧೩॥ ವರ್ಷದ ಮೇಲೆ ಶಿವಲೋಕವನ್ನು ಸೇರಿದನು. ಇವನ ಸಮಾಧಿ ಇಕ್ಕೇರಿಯ ಅರಮನೆ ಕೊಪ್ಪಲಿನಲ್ಲಾಯಿತು.

ಇದುವರೆಗೆ ಕೆಳದಿಯ ರಾಜ್ಯಸ್ಥಾಪನೆಯ ವಿಷಯವನ್ನು ಹೇಳಿದುದಾಯಿತು. ವಿಷಮ ಸ್ಥಿತಿಯಲ್ಲಿದ್ದ ಕರ್ಣಾಟಕದಲ್ಲಿ ಕ್ರಿ. ಶ. ೧೫೦೦ರ ಸುಮಾರಿನಲ್ಲಿ ಕೆಳದಿಯ ರಾಜ್ಯವು ಶಿವಕೃಪೆಗೆ ಪಾತ್ರನಾದ ಚೌಡಪ್ಪ ನಾಯಕನಿಂದ ಸ್ಥಾಪಿತವಾಯಿತು. ಆಗಿನ ಸಂದರ್ಭದಲ್ಲಿ ಒಂದು ಹಿಂದೂ ರಾಜ್ಯವು ಮಲೆನಾಡಿನಲ್ಲಿ ಸ್ಥಾಪನೆಯಾಗುವುದು ಅತ್ಯಾವಶ್ಯಕವಾಗಿದ್ದಿತು. ಆದರೆ ಇದಕ್ಕೆ ತೊಡಕುಗಳೂ ಬಹಳವಾಗಿದ್ದವು.

ಪರಮೇಶ್ವರನ ಕೃಪೆಗೆ ಪಾತ್ರನಾದ ಮನುಷ್ಯನು ಎಂತಹ ಮಹತ್ಕಾರ್ಯವನ್ನಾದರೂ ಲೀಲಾಮಾತ್ರದಿಂದ ನಡೆಸುವನೆಂಬುದಕ್ಕೆ ಚೌಡಪ್ಪ ನಾಯಕನು ಒಳ್ಳೆಯ ನಿದರ್ಶನವಾಗಿರುವನು. ಇವನು ಒಳ್ಳೆಯ ಮೇಧಾವಿಯೂ, ಗುರುದೈವತಾಭಕ್ತನೂ, ಶೂರನೂ, ಸಾಹಸಿಯೂ, ಗಂಭೀರನೂ, ದೂರದರ್ಶಿಯೂ ಆಗಿದ್ದನೆಂಬುದು ಇವನ ಚರಿತ್ರೆಯಿಂದ ಸ್ಪಷ್ಟವಾಗುವುದು. ಇಂತಹ ಸಾಮರ್ಥ್ಯವಂತನು ಕೆಳದಿಯ ಮೊದಲನೆಯ ರಾಜನಾದನೆಂಬುದು ಎಲ್ಲ ವಿಷಯದಲ್ಲಿಯೂ ಆ ರಾಜ್ಯಕ್ಕೆ ಶೋಭೆಯನ್ನುಂಟು ಮಾಡತಕ್ಕ ಸಂಗತಿಯು.

ಈ ಸಂದರ್ಭದಲ್ಲಿ ನಾವು ವಿಜಯನಗರದ ಕೃಷ್ಣದೇವರಾಯನನ್ನು ಮರೆಯುವಂತಿಲ್ಲ. ಈ ವಿಖ್ಯಾತನಾದ ಕನ್ನಡಿಗರರಸು ಚೌಡಪ್ಪನ ಯೋಗ್ಯತೆಯನ್ನೂ, ಶಕ್ತಿ ಸಾಮರ್ಥ್ಯವನ್ನೂ ಮನಗಂಡು ಇವನಿಗೆ ಕೆಳದಿಯ ಒಡೆತನವನ್ನು ದೂರದೃಷ್ಟಿಯಿಂದ ಕೊಟ್ಟದು ಅಭಿನಂದನೀಯವು.

ಕೃಷ್ಣದೇವರಾಯನ ಕಾಲದಲ್ಲಿ ಕರ್ಣಾಟಕದಲ್ಲಿ ನಾನಾ ವಿಪತ್ತುಗಳು ತಲೆಹಾಕುವ ಪ್ರಸಂಗವಿತ್ತು. ದಿನೇದಿನೇ ತುರುಕರ ಹಾಗೂ ಪರದೇಶೀಯರ ಹಾವಳಿಯು ಹೆಚ್ಚುತ್ತಿತ್ತು. ಇಂತಹ ಸಮಯದಲ್ಲಿ ದುರ್ಗಮವಾದ ಮಲೆನಾಡಿನಲ್ಲಿ ಒಬ್ಬ ಶೂರನಾದ ಹಿಂದೂರಾಜನು ತನಗೆ ಸಹಾಯಕನಾಗಿ ರಾಜ್ಯಭಾರಮಾಡುತ್ತಿರಲೆಂದೂ, ಇದು ಉತ್ತರೋತ್ತರ ಕರ್ಣಾಟಕಕ್ಕೆ ಪ್ರಯೋಜನಕರವೆಂದೂ ಭಾವಿಸಿ ಒಂದು ಹೊಸ ರಾಜ್ಯಸ್ಥಾಪನೆಗೆ ಸಹಾಯಕನಾದುದು ಅವನ ರಾಜನೀತಿಯನ್ನೂ, ಸಹೃದಯತೆಯನ್ನೂ ವ್ಯಕ್ತಪಡಿಸುವುದು. ಇವನ ಸಂಕಲ್ಪದಂದೆಯೇ ಈ ಹೊಸ ರಾಜ್ಯವು ೨॥ ಶತಮಾನಗಳವರೆಗೆ ಕನ್ನಡಿಗರಿಗೆ ನಾನಾರೀತಿಯಲ್ಲಿ ಸಹಾಯವಾಗಿದ್ದಿತು.

ಚೌಡಪ್ಪನಾದ ಮೇಲೆ ಹಲವು ಶೂರರಾದ ರಾಜರು ಇಕ್ಕೇರಿಗೆ ಅರಸರಾಗಿ ವಿಚಕ್ಷಣೆಯಿಂದ ರಾಜ್ಯಭಾರ ಮಾಡಿದರು. ಈ ಅರಸರ ಹೆಸರುಗಳನ್ನೂ, ಅವರು ರಾಜ್ಯಭಾರ ಮಾಡಿದ ಕಾಲವನ್ನೂ ಈ ಮುಂದೆ ಅರಿಯಬಹುದು.

| ಕೆಳದಿಯ ಅರಸರು; | ಆಳಿದಕಾಲ: |
|---|---|
| ೧. ಚೌಡಪ್ಪ | ಕ್ರಿ. ಶ. ೧೫೦೦–೧೫೧೪. |
| ೨. ಸದಾಶಿವನಾಯಕ | ೧೫೧೪–೧೫೪೬. |
| ೩. ದೊಡ್ಡಸಂಕಣ್ಣನಾಯಕ | ೧೫೪೬–೧೫೫೯. |
| ೪. ಚಿಕ್ಕ ಸಂಕಣ್ಣನಾಯಕ | ೧೫೫೯–೧೫೭೧. |
| ೫. ರಾಮರಾಜನಾಯಕ | ೧೫೭೧–೧೫೮೩. |
| ೬. ಹಿರಿಯ ವೆಂಕಟಪ್ಪ ನಾಯಕ | ೧೫೮೩–೧೬೩೦. |
| ೭. ವೀರಭದ್ರಪ್ಪನಾಯಕ | ೧೬೩೦–೧೬೪೬. |
| ೮. ಶಿವಪ್ಪನಾಯಕ | ೧೬೪೬–೧೬೬೧. |
| ೯. ಕಿರಿಯ ವೆಂಕಟಪ್ಪನಾಯಕ | ೧೬೬೧–೧೬೬೨. |
| ೧೦. ಭದ್ರಪ್ಪನಾಯಕ | ೧೬೬೨–೧೬೬೪. |
| ೧೧. ಹಿರಿಯ ಸೋಮಶೇಖರ ನಾಯಕ | ೧೬೬೪–೧೬೭೧. |

೧೨. ರಾಣಿ ಚನ್ನಮ್ಮಾಜಿ ೧೬೭೨–೧೬೯೭.
೧೩. ಹಿರಿಯ ಬಸವಪ್ಪನಾಯಕ ೧೬೯೭–೧೭೧೫.
೧೪. ಸೋಮಶೇಖರನಾಯಕ ೧೭೧೫–೧೭೪೦.
೧೫. ಕಿರಿಯ ಬಸವಪ್ಪನಾಯಕ ೧೭೪೦–೧೭೫೫.
೧೬. ಚನ್ನಬಸವಪ್ಪನಾಯಕ(ವೀರಮ್ಮಾಜಿ) ೧೭೫೫–೧೭೫೭.
೧೭. ಕಿರಿಯ ಸೋಮಶೇಖರನಾಯಕ ೧೬೫೭–೧೭೬೩.

ಕೆಳದಿಯಲ್ಲಿ ಚೌಡಪ್ಪನಾಯಕನಾದ ಮೇಲೆ ಆಳಿದ ರಾಜರಲ್ಲಿ ಸದಾಶಿವನಾಯಕ, ಉಭಯ ಸಂಕಣ್ಣನಾಯಕರು, ಹಿರಿಯ ವೆಂಕಟಪ್ಪನಾಯಕ, ಶಿವಪ್ಪನಾಯಕ, ಬಸವಪ್ಪನಾಯಕ ಎಂಬರಾಜರೂ ರಾಣಿಚನ್ನಮ್ಮಾಜಿಯೂ ಮುಖ್ಯರು.

ಚಿಕ್ಕ ಸಂಕಣ್ಣನ ಕಾಲದವರೆಗೆ ಕೆಳದಿಯ ರಾಜರು ವಿಜಯನಗರಕ್ಕೆ ಸಹಾಯರೂ, ಅಧೀನರೂ ಆಗಿ ರಾಜ್ಯವಾಳಿದರು. ವಿಜಯನಗರದ ಕೃಷ್ಣದೇವರಾಯ ಮೊದಲಾದ ರಾಜರು ಕೆಳದಿಯ ನಾಯಕರನ್ನು ಬಹಳವಾಗಿ ಮರ್ಯಾದಿಸಿದರು. ತನ್ಮೂಲಕ ಮಲೆನಾಡನ್ನು ಕರುಣಿಸಿದರು.

ಕರ್ಣಾಟಕ ಸಾಮ್ರಾಜ್ಯಭಾಸ್ಕರನು ಅಸ್ತಂಗತನಾಗುವ ಕ್ರಿ. ಶ. ೧೫೬೫ನೇ ವರ್ಷವು ಸಂಧಿಸಿತು. ಆಗ ತುರುಕರೆಲ್ಲ ಒಟ್ಟಾಗಿ ವಿಜಯನಗರದ ಮೇಲೆ ದಂಡೆತ್ತಿ ಬಂದರು. ರಾಜದ್ರೋಹಿಗಳಾದ ಕೆಲವರ ದೇಶದ್ರೋಹವೂ, ಕನ್ನಡಿಗರ ದುರದೃಷ್ಟ ಅನೈಕಮತ್ಯಗಳೂ, ತುರುಕರ ಪರಾಕ್ರಮವೂ ಆ ಮಹಾ ಸಾಮ್ರಾಜ್ಯವನ್ನು ರಾಕ್ಷಸತಂಗಡಗಿ ರಣಭೂಮಿಯಲ್ಲಿ ನೆಲಸಮಮಾಡಿದವು. ಆಗ ಚಿಕ್ಕಸಂಕಣ್ಣನಾಯಕನು ಆ ಯುದ್ಧದಲ್ಲಿ ಭಾಗಿಯಾಗಿದ್ದನು.

ಇಂತಹಕಾಲದಲ್ಲಿ ದಕ್ಷಿಣಪ್ರಾಂತದಲ್ಲಿದ್ದ ಮೈಸೂರೊಡೆಯರೂ, ಪಶ್ಚಿಮದ ಕೆಳದಿಯ ನಾಯಕರೂ ಸಾಹಸದಿಂದ ತಮ್ಮ ತಮ್ಮ ನಾಡುಗಳನ್ನು ಸ್ವತಂತ್ರವಾಗಿ ಆಳಲಾರಂಭಿಸಿದರು.



ಬಿದನೂರು ಪ್ರಭು
ವೀರ ಶಿವಪ್ಪ ನಾಯಕ

ಕೆಳದಿಯ ಚಿಕ್ಕಸಂಕಣ್ಣನಾಯಕನು ವಿಜಯನಗರವು ಮರೆಯಾದ ಮೇಲೆ ಸ್ವತಂತ್ರವಾಗಿ ರಾಜ್ಯವಾಳಲಾರಂಭಿಸಿದನು. ಇನ್ನು ಮುಂದೆ ಬಂದ ರಾಜರು ದಿನೇ ದಿನೇ ರಾಜ್ಯವನ್ನು ಅಭಿವೃದ್ಧಿ ಮಾಡುತ್ತಾ ಬಂದರು.

ಮೊದಲು ಕೆಳದಿಯಲ್ಲಿಯೂ, ಆಮೇಲೆ ಇಕ್ಕೇರಿಯಲ್ಲಿಯೂ, ಅನಂತರ ಬಿದನೂರು (ನಗರ) ದಲ್ಲಿಯೂ ರಾಜ್ಯಭಾರ ಮಾಡಿರುವುದರಿಂದ ಕೆಳದಿಯ ನಾಯಕರಿಗೆ 'ಇಕ್ಕೇರಿಯ ಅರಸರು' 'ಬಿದನೂರು ರಾಜರು' ಎಂದು ಬೇರೆ ಬೇರೆ ಹೆಸರುಗಳುಂಟು. ರಾಜಧಾನಿಗಳು ಮೂರಾದರೂ ರಾಜ್ಯಭಾರ, ರಾಜಮನೆತನ ಒಂದೇ ಆಗಿದೆ.

ಬಿದನೂರು ರಾಜ್ಯವು ತನ್ನ ವಿಸ್ತಾರದ ಕಾಲದಲ್ಲಿ ಈಗಿನ ಉತ್ತರ ಕನ್ನಡಜಿಲ್ಲಾ ದಕ್ಷಿಣಾರ್ಧ, ಸಂಪೂರ್ಣ ದಕ್ಷಿಣ ಕನ್ನಡ ಜಿಲ್ಲಾ, ಶಿವಮೊಗ್ಗ ಮತ್ತು ಕಡೂರು ಜಿಲ್ಲಾಗಳು, ಹಾಸನ ಜಿಲ್ಲಾ ಉತ್ತರಾರ್ಧ, ತುಮಕೂರು ಮತ್ತು ಚಿತ್ರದುರ್ಗಾಜಿಲ್ಲಾ ಹಲ ಕೆಲವು ಭಾಗಗಳು ಇಷ್ಟನ್ನು ಒಳಗೊಂಡು ಒಂದು ವಿಸ್ತಾರವಾದ ರಾಜ್ಯವೆನಿಸಿದ್ದಿತು.

ದಿನಕ್ರಮದಲ್ಲಿ ಗರಿಕಟ್ಟಿಕೊಂಡ ಕೆಳದಿಯ ರಾಜರು, ಸ್ವಾದಿ, ಬಿಳಗಿ, ತರೀಕೆರೆಯ ಪಾಳೆಯ ಪಟ್ಟುಗಳನ್ನು ಜಯಿಸಿ ಸ್ವಾಧೀನ ಮಾಡಿಕೊಂಡರು. ಮಲೆಯಾಳಿಗಳು, ತುಳುವರು, ಮರಾಠಿಗರು, ತುರುಕರು ಮೊದಲಾದವರ ಹಿಂಸೆಯಿಂದ ಮಲೆನಾಡಿನ ಕನ್ನಡಿಗರನ್ನು ಬಹುಕಾಲ ಧರ್ಮದಿಂದ ಕಾಪಾಡಿದರು. ಹಾಗೂ ಮಲೆನಾಡನ್ನು ಕಲೆಯುಬೀಡನ್ನಾಗಿ ಮಾಡಿದರು.

ಕೆಳದಿ ಅಥವಾ ಬಿದನೂರು ರಾಜ್ಯವು ದುರ್ಗಮವಾದ ಮಲೆನಾಡಿನಲ್ಲಿ ಸ್ಥಾಪಿಸಲ್ಪಟ್ಟಿತ್ತು. ಈಗಿನ ಜನರಿಂದ ಸಾಮಾನ್ಯವಾಗಿ ಅನಾರೋಗ್ಯ ಹಾಗೂ ಅನಾನುಕೂಲಸ್ಥಳವೆಂದು ಭಾವಿಸಲ್ಪಟ್ಟಿರುವ ಮಲೆನಾಡು ಈ ರಾಜ್ಯಭಾರದ ಕಾಲದಲ್ಲಿ ಸೌಭಾಗ್ಯದ ನೆಲೆವೀಡಾಗದ್ದಿತು.

ಕರ್ಣಾಟಕದ ಪಶ್ಚಿಮಸಮುದ್ರತೀರವು ಕೆಳದಿಯ ಅರಸರ ಅಧೀನದಲ್ಲಿಯೇ ಇದ್ದಿತು. ಈ ಸಮುದ್ರತೀರದಲ್ಲಿದ್ದ, ಕಾರವಾರ, ಮಂಗಳೂರು,

ಮಾಲ್ಪೆ, ಭಟ್ಕಳ ಮೊದಲಾದ ಬಂದರುಗಳು ಈ ರಾಜರ ಅಧೀನದಲ್ಲಿಯೇ ಇದ್ದವು. ವೀರಭದ್ರನಾಯಕ ಮತ್ತು ಶಿವಪ್ಪನಾಯಕ ಇವರುಗಳ ಆಳ್ವಿಕೆ ಯಲ್ಲಿ ಪೋರ್ತುಗೀಸರು ವ್ಯಾಪಾರದ ನಿಮಿತ್ತದಿಂದ ಈ ಬಂದರುಗಳಿಗೆ ಕಾಲಿಟ್ಟರು. ಪೊಡಗಳ್ಳಿಯಂತೆ ಪಸರಿಸಿದರು.

ಪೋರ್ತುಗೀಸರು ಕೆಳದಿಯ ರಾಜರಲ್ಲಿ ವಿಧೇಯರಾಗಿದ್ದು ಕುಳಿತು ಕೊಳ್ಳುವುದಕ್ಕೆ ಸ್ಥಳವಾದಮೇಲೆ ಅರಸರನ್ನು ಕೆಣಕಲು ಪ್ರಯತ್ನಪಟ್ಟರು. ಅಲ್ಲದೆ ತಮ್ಮ ಪಾದ್ರಿಗಳಿಂದ ಕ್ರೈಸ್ತಮತ ಪ್ರಚಾರಮಾಡಲು ಪ್ರಾರಂಭಿಸಿ ದರು. ಇದನ್ನು ಕಂಡು ವೀರಭದ್ರನಾಯಕನು ಇವರನ್ನು ಚೆನ್ನಾಗಿ ಶಾಸ ನಮಾಡಿ ಪದಾಕ್ರಾಂತರಾಗಿರುವಂತೆ ಮಾಡಿಕೊಂಡುದನ್ನು ಕೆಳದಿ ನೃಪವಿಜ ಯದಲ್ಲಿ ಓದಬಹುದು.

ಮಹಾರಾಷ್ಟ್ರ ದೇಶದಲ್ಲಿ ಶಿವಾಜಿಯೂ, ಕರ್ನಾಟಕದಲ್ಲಿ ವೀರಭದ್ರ ನಾಯಕನೂ ಧೈರ್ಯದಿಂದ ಪೋರ್ತುಗೀಸರನ್ನು ಸದೆಬಡಿಯದಿದ್ದರೆ ಆಗ ಪಶ್ಚಿಮ ಸಮುದ್ರತೀರದಲ್ಲಿ ಪೋರ್ತುಗೀಸರು ದೊಡ್ಡ ರಾಜ್ಯಸ್ಥಾಪನೆ ಮಾಡು ವುದಕ್ಕೆ ಹಿಂದು ಮುಂದು ನೋಡುತ್ತಿರಲಿಲ್ಲ. ಇಂತಹ ಪ್ರಸಂಗದಲ್ಲಿ ವೀರ ಭದ್ರನಾಯಕನೂ, ಶಿವಪ್ಪನಾಯಕನೂ ಕರ್ನಾಟಕದ ಕೀರ್ತಿಯನ್ನು ಉಳಿ ಸಿರುವರೆಂಬುದನ್ನು ಯಾವ ಇತಿಹಾಸವಿದನೂ ಮರೆಯಲಾರನು.

ಕೆಳದಿಯ ವೀರಶೈವರಾಜರು ಪರಾಕ್ರಮಿಗಳೂ, ರಾಜನೀತಿವಿಶಾರ ದರೂ, ಧಾರ್ಮಿಕರೂ, ನಿಷ್ಪಕ್ಷಪಾತಿಗಳೂ, ಸಾಹಿತ್ಯ-ಶಿಲ್ಪ-ಕಲಾದಿಗಳ ಉದ್ಧಾರಕರೂ ಎಂಬುದನ್ನು ಯಾರೂ ಅಲ್ಲಗಳೆಯಲಾರರು. ಇವರ ರಾಜ್ಯ ಭಾರವನ್ನು ಆಗ ಈ ಪ್ರಾಂತದಲ್ಲಿ ಸಂಚರಿಸಿದ ಪೋರ್ತುಗೀಸ ಹಾಗೂ ಆಂ ಗ್ಲೇಯ ಪ್ರಯಾಣಿಕರು ಕೊಂಡಾಡಿರುವರು.

ಕೆಳದಿ, ಇಕ್ಕೇರಿಗಳ ಸಂಪತ್ತನ್ನೂ, ಈ ರಾಜರ ಗುಣವನ್ನೂ ಇವರ ಆಶ್ರಿತರಾದ ಕವಿಗಳು ಮನೋಹರವಾಗಿ ವರ್ಣಿಸಿರುವರು. ಬಿದನೂರು ಚರಿತ್ರೆಯನ್ನು ಓದಿದ ಯಾವನಿಗೂ ಈ ಪದ್ಯಗಳು ಅತಿಶಯೋಕ್ತಿಯೆಂದು ಕಂಡು ಬರುವುದಿಲ್ಲ.

ಶ್ಲೋಕ॥ ವಾಣೀವಾರ್ಧಿಭವೋರುಹಂ ಪ್ರಥಮಿಕಾಲಾಸ್ಸೈ್ಯಕರಂಗಸ್ಥಲೀ ।
ದೇವಾನುಗ್ರಹಲಬ್ಧ ವೃಷ್ಣಿ ವಿಭವೋದಂಚತ್ಸುಭಿಕ್ಷೋದಯಃ॥
ಭೂಕಾಂತಾಮುಖಕರ್ಣ ಭೂಷಣತಯಾ ಕರ್ಣಾಟನಾಮಾಂಚಿತೋ।
ಭಾತಿ ಶ್ರೀಕೆಳದೀತಿ ಲೋಕವಿದಿತೋ ದೇಶೋತಿದೇಶೋದಿವಃ ॥

—ವೀರಶೈವ ಧರ್ಮಶಿರೋಮಣಿಃ

ವಾ॥ಷ॥ ಕರ್ಣಸಮುದಾನಶೂರರ್ ಸಕಲಮುನಿಜನಾ ।
ಕರ್ಣನೀಯಚರಿತ್ರ ಕೆಳದಿಯ ನೃಪರ್ಗೆ ಗೋ ।
ಕರ್ಣದಿಂದಾರುಯೋಜನದೊಳಿಹುದಾಗ್ನೇಯ ದಿಗ್ಭಾಗದಲ್ಲಿ
ಮೆರೆವಾ ॥
ಕರ್ಣಾಟಕಾವನೀ ಕಾಮಿನಿಯ ವದನಕಿದು ।
ಕರ್ಣತಾಟಂಕವೆನೆ ಶೋಭಿಸುತ್ತಿಗಳಿದ ।
ಕರ್ಣವಾಮೃತಮಹಿಯೊಳೆಣೆಯಿಲ್ಲವೆನಿಸಿಕೊಂಡಿಕ್ಕೇರಿಯೆಂಬ
ನಗರಂ ॥

—ಕರ್ಣಾಟಕ ಶಿವಗೀತೆ.

ಮೇಲೆಕಂಡ ಪದ್ಯಗಳನ್ನು ಬರೆದಿರುವ ಷಡಕ್ಷರಮಂತ್ರಿ ಮತ್ತು ತಿರುಮಲಭಟ್ಟ ಇವರು ಅಕ್ಷರಶಃ ಸತ್ಯಾಂಶವನ್ನೇ ಬರೆದಿರುವರೆಂಬುದು ಮುಂದಿನ ವಿಷಯವನ್ನು ಗಮನಿಸಿದವರಿಗೆ ವಿದಿತವಾಗದಿರದು.

**ರಾಜ್ಯಪ್ರಸರಣೆಃ**

ರಾಜನಾದವನಿಗೆ ಪರಾಕ್ರಮ, ಸಾಹಸ, ಇವು ಅತ್ಯಂತ ಗಣನೀಯವಾದವುಗಳು. ಕೆಳದಿಯಅರಸರಲ್ಲಿ ಸುಪ್ರಸಿದ್ಧರಾದ, ಸದಾಶಿವನಾಯಕ, ದೊಡ್ಡ ಸಂಕಣ್ಣನಾಯಕ, ಚಿಕ್ಕ ಸಂಕಣ್ಣನಾಯಕ, ವೆಂಕಟಪ್ಪನಾಯಕ,

ವೀರಭದ್ರನಾಯಕ, ಶಿವಪ್ಪನಾಯಕ ಬಸವಪ್ಪನಾಯಕ ಮೊದಲಾದವರು ಅತುಲ ಪರಾಕ್ರಮಿಗಳು. ಇವರು ಉತ್ತರದಕಡೆ ಮರಾಟೆಯುವರು ಮತ್ತು ಬಿಜಾಪುರ ಸುಲ್ತಾನರು, ದಕ್ಷಿಣದಕಡೆ ಮೈಸೂರೊಡೆಯರು ಮತ್ತು ಶೀರ್‍ಯದ ನವಾಬರು, ಪಶ್ಚಿಮದಕಡೆ ತುಳುವ ದೊರೆ ಮತ್ತು ಪರದೇಶಿಗಳು, ಪೂರ್ವದಿಕ್ಕಿನಲ್ಲಿ ತುಂಟರಾದ ಪಾಳೆಯಗಾರರು, ಇವರಲ್ಲದೆ ಅಕ್ಕಪಕ್ಕದ ಸ್ವಾದಿ, ಬಿಳಿಗಿ, ತರೀಕೆರೆಯ ಅರಸರು ಇವರುಗಳೊಡನೆಲ್ಲ ಯುದ್ಧಮಾಡಿ ತಮ್ಮ ಬಾಹುಬಲದಿಂದ ರಾಜ್ಯವನ್ನು ಕಾಪಾಡಿಕೊಂಡಿದ್ದರು.

ಕರ್ಣಾಟಕದ ರಾಣಿಯೆನಿಸಿದ ಚನ್ನಮ್ಮಾಜಿ ಹಾಗೂ ವೀರಮ್ಮಾಜಿ ಇವರ ಸಾಹಸವು ಯಾವ ಶೂರಪುರುಷನಿಗೂ ಕಡಿಮೆಯಾದ್ದುದಲ್ಲ.

ಬಿದನೂರರಸರಲ್ಲಿ ಅತ್ಯಂತ ವಿಖ್ಯಾತನಾದವನು ಶಿವಪ್ಪನಾಯಕನು. ಇವನ ಕಾಲದಲ್ಲಿಯಂತೂ ಈ ರಾಜ್ಯವು ಅತ್ಯಂತ ಊರ್ಜಿತಾವಸ್ಥೆಗೆ ಬಂದಿತು. ಚತುರನೂ, ಸಾಹಸಿಯೂ ಆದ ಇವನು, ನಾನಾದೇಶಗಳಿಂದ ಹಸ್ತಕೌಶಲ್ಯವುಳ್ಳವರು, ವ್ಯಾಪಾರಿಗಳು, ವಿದ್ವಾಂಸರು ಮೊದಲಾದವರನ್ನು ಕರೆಸಿ ತನ್ನ ರಾಜ್ಯದ, ವಿದ್ಯೆ-ವ್ಯಾಪಾರ-ವ್ಯವಸಾಯ-ಕೈಗಾರಿಕೆಗಳನ್ನು ಅಭಿವೃದ್ಧಿಗೆ ತಂದನು. ತನ್ನ ರಾಜ್ಯವನ್ನೆಲ್ಲಾ ಅಳೆಯಿಸಿ ನ್ಯಾಯವಾದ ಕಂದಾಯ ವಿಧಿಸಿದನು. ವ್ಯರ್ಥವಾಗಿದ್ದ ಭೂಮಿಯನ್ನೆಲ್ಲಾ ಹದಮಾಡಿಸಿದನು. ದೊಂಬಿಕಾರರ ಹುಟ್ಟಡಗಿಸಿದನು. ಜನರಿಗೆ ಭಾರವಾಗಿದ್ದ ವಿಶೇಷವಾದ ಸುಂಕ ತೆರಿಗೆಗಳನ್ನೆಲ್ಲಾ ತೆಗೆದುಹಾಕಿದನು. ವಿದ್ಯೆ, ಕಲೆ ಇವುಗಳನ್ನು ಪೋಷಣೆಮಾಡಿದನು. 'ಶಿವಪ್ಪನಾಯಕನ ಶಿಸ್ತು' ಎಂಬುದು ಈಗಲೂ ಮಲೆನಾಡಿನಲ್ಲಿ ಗೌರವಾರ್ಹವಾಗಿದೆ. ಎಷ್ಟೋಮಂದಿ ಆಧುನಿಕರು ಇವನ ರಾಜನೀತಿಯನ್ನು ಕೊಂಡಾಡಿದ್ದಾರೆ.

ಧರ್ಮಕಾರ್ಯಗಳು:

ಈ ರಾಜರು ಹಲವು ಧರ್ಮಕಾರ್ಯಗಳನ್ನು ಮಾಡಿರುವರು. ಕೆಳದಿಯಲ್ಲಿ ರಾಮೇಶ್ವರ ದೇವಾಲಯ, ವೀರಭದ್ರ ದೇವಾಲಯ, ಪಾರ್ವತೀ

ದೇವಾಲಯಗಳನ್ನು ಕಟ್ಟಿಸಿರುವರು. ಇಕ್ಕೇರಿಯ ಅಘೋರೇಶ್ವರ ದೇವಾಲಯ, ಕೊಲ್ಲೂರು ಮೂಕಾಂಬಿಕಾ ದೇವಾಲಯ, ಸಾಗರದ ವಿಶ್ವೇಶ್ವರ ದೇವಾಲಯ ಮೊದಲಾದವುಗಳನ್ನು ಕಟ್ಟಿಸಿದ್ದಾರೆ. ಬಾಳೇಹಳ್ಳಿಯ ಧರ್ಮ ಪೀಠ, ಶೃಂಗೇರಿಯ ಶಾರದಾಪೀಠ, ಮುಳುಬಾಗಿಲು ಕೃಷ್ಣಾನಂದಮಠ ಮೊದಲಾದವುಗಳಿಗೆ ನಿಷ್ಪಕ್ಷಪಾತ ಬುದ್ಧಿಯಿಂದ ಸಹಾಯಮಾಡಿದ್ದಾರೆ. ಅಲ್ಲದೆ, ಕೆಳದಿ, ಕ್ಯಾಸನೂರು, ಗೌರೀಕೆರೆ, ಗೊಗ್ಗಿಹಳ್ಳಿ, ತೊಗರ್ಸಿ, ಸಾಗರ, ಹೊನ್ನಾಳಿ ಮೊದಲಾದೆಡೆಗಳಲ್ಲಿ ಹಲವು ಜಂಗಮರ ಮಠಗಳನ್ನು ಕಟ್ಟಿಸಿ ಕೊಟ್ಟಿದ್ದಾರೆ. ಅಲ್ಲದೆ ತಮ್ಮ ಆಶ್ರಯದಲ್ಲಿದ್ದ ಕವಿಗಳಿಗೂ, ಪಂಡಿತರಿಗೂ ಎಷ್ಟೋ ಮಾನ್ಯಗಳನ್ನು ಬಿಟ್ಟುಕೊಟ್ಟಿದ್ದಾರೆ. ತಮಗೆ ವಿಧೇಯರಾಗಿ ನಡೆದ ಮುಹಮ್ಮದೀಯ ಹಾಗೂ ಕ್ರೈಸ್ತರಿಗೂ ಸಹಾಯಮಾಡಿದ್ದಾರೆ. ಭುವನಗಿರಿಯಲ್ಲಿ ವೆಂಕಟಪ್ಪನಾಯಕನು ಮುಸಲ್ಮಾನರಿಗೆ ಒಂದು ಮಸೀತಿ ಕಟ್ಟಿಸಿ ಕೊಟ್ಟಿದ್ದಾನೆ.

ವಿಶ್ವನಾಥಪುರ, ತೀರ್ಥರಾಜಪುರ, ಶಿವರಾಜಪುರ, ವೆಂಕಟಪುರ ಮೊದಲಾದ ನೂರಾರು ಗ್ರಾಮಗಳನ್ನು ಕಟ್ಟಿಸಿ ಬ್ರಾಹ್ಮಣರಿಗೆ ದಾನಮಾಡಿದ್ದಾರೆ. ಶೃಂಗೇರಿ ಮಠಕ್ಕೆ ಬಹಳವಾಗಿ ಪ್ರೋತ್ಸಾಹವಿತ್ತಿದ್ದಾರೆ.

ಇದಲ್ಲದೆ ತಮ್ಮ ರಾಜ್ಯದಲ್ಲಿನ ಎಲ್ಲ ದೇವಾಲಯಗಳಲ್ಲಿಯೂ ಪೂಜಾದಿ ಕಾರ್ಯಗಳು ಕ್ರಮವಾಗಿ ನಡೆಯುವಂತೆ ವ್ಯವಸ್ಥೆ ಮಾಡಿದ್ದಾರೆ. ಶ್ರಾವಣ ಮಾಸ, ಕಾರ್ತೀಕ ಮಾಸಗಳಲ್ಲಿ ದೇವತಾಸೇವೆ, ದೀಪಾರಾಧನೆ ಮುಂತಾದ ಕಾರ್ಯಗಳು ಉತ್ತಮ ರೀತಿಯಿಂದ ನಡೆಯುವಂತೆ ವ್ಯವಸ್ಥೆಮಾಡಿದ್ದಾರೆ.

ರಾಜಕೀಯಕ್ಕೂ ಅನುಕೂಲವಾಗುವಂತೆ, ಭುವನಗಿರಿ ದುರ್ಗ, ಚನ್ನಗಿರಿ ದುರ್ಗ, ಬಿದನೂರು ದುರ್ಗ ಮೊದಲಾದ ದುರ್ಗಮ ದುರ್ಗಗಳನ್ನೂ, ಕೋಟೆ ಕೊತ್ತಲಗಳನ್ನೂ ವಿಪುಲವಾಗಿ ಕಟ್ಟಿಸಿ ದೇಶೋಪಕಾರ ಮಾಡಿದ್ದಾರೆ. ಹಾಗೂ ತಮ್ಮ ಸಾಹಸವನ್ನು ಮೆರೆದಿದ್ದಾರೆ.

ಕೆಳದಿಯ ರಾಜರು ಸಾಹಿತ್ಯ ಸೇವೆಯಲ್ಲಿಯೂ ಉತ್ತಮ ಸ್ಥಾನವನ್ನೇ ಸೇರುವರು. ಶಿವತತ್ವ ರತ್ನಾಕರವನ್ನು ಬರೆದ ಬಸವರಾಜನು ಕರ್ಣಾ

ಟಕದ ಭೋಜನೆಂದರೂ ಸಲ್ಲುವುದು. ಅಲ್ಲದೆ ಇವನು ಸಂಸ್ಕೃತದಲ್ಲಿಯೇ 'ಸುಭಾಷಿತ ಸುರದ್ರುಮ' ಎಂಬ ಗ್ರಂಥವನ್ನೂ, ಕರ್ಣಾಟಕ ಸಂಸ್ಕೃತ ಮಿಶ್ರವಾಗಿ 'ಸೂಕ್ತಿ ಸುಧಾಕರ' ಎಂಬ ವಸ್ತುಕಕಾವ್ಯವನ್ನೂ ರಚಿಸಿರು ವನು. ಹರದತ್ತಾಚಾರ್ಯನ 'ಪಂಚ ಶ್ಲೋಕಿ'ಗೆ ವ್ಯಾಖ್ಯಾನವನ್ನು ಬರೆದ ವನೂ ಈತನೇ. ಷಡಕ್ಷರ ಮಂತ್ರಿಯು 'ವೀರಶೈವ ಧರ್ಮ ಶಿರೋ ಮಣಿ'ಯನ್ನು ಬರೆದುದು, ನಿರ್ವಾಣ ಮಂತ್ರಿಯು 'ಕವಿಕರ್ಣ ರಸಾ ಯನ'ಕ್ಕೆ ವ್ಯಾಖ್ಯಾನ ಬರೆದುದು ಇವನ ವಂಶೀಯ ಬೂದಿ ಬಸವಪ್ಪನಾ ಯಕನ ಆಶ್ರಯದಲ್ಲಿ.

ಹಿರಿಯ ವೆಂಕಟಪ್ಪನಾಯಕನು ಕವಿ ತಿರುಮಲ ಭಟ್ಟನಿಂದ 'ಕರ್ಣಾ ಟಕ ಶಿವಗೀತೆ', 'ಶಿವಾಷ್ಟ ಪದಿ', 'ಗೀತಗೌರೀವರ'ಗಳನ್ನು ಬರೆಸಿದನು. ರಂಗನಾಥ ದೀಕ್ಷಿತನಿಂದ 'ತಂತ್ರಸಾರ'ವೆನಿಪ ಗ್ರಂಥದ ವ್ಯಾಖ್ಯಾನವನ್ನೂ, ಅಶ್ವ ಪಂಡಿತನಿಂದ 'ಮಾನಸಪ್ರಿಯ' ಎಂಬ ಅಶ್ವಶಾಸ್ತ್ರವನ್ನೂ ಬರೆಸಿದನು.

'ಶಿವಸಹಸ್ರ ನಾಮ ವ್ಯಾಖ್ಯಾನ' ವನ್ನು ಬರೆದ ಸಂಗಮೇಶನೂ, 'ವೀರಶೈವಾನಂದ ಚಂದ್ರಿಕೆ'ಯನ್ನು ಬರೆದ ಮರಿತೋಂಟದಾರ್ಯನೂ, ವೀರಶೈವಾಚಾರ ಕೌಸ್ತುಭ ಬರೆದ ಮೌನಪ್ಪಪಂಡಿತನೂ ಬೂದಿಬಸವಪ್ಪ ನಾಯಕನ ಆಸ್ಥಾನಕವಿಗಳು.

ಮೇಲೆಕಂಡ ಗ್ರಂಥಗಳೇ ಅಲ್ಲದೆ ಈ ಅರಸರು ಇನ್ನೂ ಹಲವು ಗ್ರಂಥ ಗಳನ್ನು ಬರೆಸಿರಬಹುದೆಂದು ಕಂಡುಬರುತ್ತದೆ. ಈ ರಾಜರ ವಿಷಯವಾಗಿ ಲಿಂಗಣ್ಣ ಮೊದಲಾದ ಕವಿಗಳು 'ಕೆಳದಿ ನೃಪವಿಜಯ', 'ಕೆಳದಿರಾಯರ ವಂಶಾವಳಿ' ಇವೇ ಮೊದಲಾದ ಚಾರಿತ್ರಕ ಗ್ರಂಥಗಳನ್ನು ಬರೆದಿದ್ದಾರೆ.

ಇದುವರೆಗೂ ಹೇಳಿದಂತೆ ಕೆಳದಿಯ ವೀರಶೈವ ರಾಜರು ಪರಾಕ್ರಮಿ ಗಳೂ, ಸಾಹಿತ್ಯ ಪ್ರಿಯರೂ, ನಿಷ್ಪಕ್ಷಪಾತಿಗಳೂ, ಜನಾನುರಾಗಿಗಳೂ ಆಗಿ ೨॥ ಶತಮಾನ ಕಾಲ ದಕ್ಷತೆಯಿಂದ ಮಲೆನಾಡಿನ ಸೇವೆ ಮಾಡಿದರೆಂದು ವಾಚಕರಿಗೆ ತಿಳಿದುಬಂದಂತಾಯಿತು. ಇನ್ನು ಇಂತಹ ರಾಜ್ಯವು ಹೇಗೆ

ನಾಶವಾಯಿತೆಂಬುದನ್ನು ವಿವೇಚಿಸಿ ಈ ಲೇಖನವನ್ನು ಮುಗಿಸಲಾಗುವುದು.

**ಕೆಳದಿಯ ರಾಜ್ಯದ ಕಡೆಗಾಲ:**

ಕೆಳದಿಯ ರಾಜ್ಯವನ್ನು ಆಳಿದವರಲ್ಲಿ ಕಿರಿಯ ಸೋಮಶೇಖರನೇ ಕಡೆಯವನು. ಇವನು ಕ್ರಿ. ಶ. ೧೭೫೮ರಿಂದ ೧೭೬೩ರ ವರೆಗೆ ರಾಜ್ಯವಾಳಿದನು. ಹೆಸರಿಗೆ ಮಾತ್ರ ಸೋಮಶೇಖರ ನಾಯಕನು ರಾಜನೆನಿಸಿದ್ದರೂ ರಾಜ್ಯಸೂತ್ರವೆಲ್ಲ ಇವನ ಸಾಕು ತಾಯಿಯಾದ ವೀರಮ್ಮಾಜಿಯ ಕೈಯ್ಯಲ್ಲಿತ್ತು.

ವೀರಮ್ಮಾಜಿಯ ರಾಜ್ಯಭಾರದಲ್ಲಿ ಬಹಳ ಅಮಂಗಲ ಹಾಗೂ ಅಸಮಂಜಸ ಕಾರ್ಯಗಳಾದುವೆಂದು ತಿಳಿಯುತ್ತದೆ. ಈಕೆಯು ಅಸದ್ವರ್ತನೆಯುಳ್ಳವಳಾಗಿದ್ದಳೆಂದು ಕೆಲವು ಇತಿಹಾಸಕಾರರು ಹೇಳುವರು. ಬಹುಮಟ್ಟಿಗಲ್ಲದಿದ್ದರೆ ಕೆಲಮಟ್ಟಿಗಾದರೂ ಇದು ನಿಜವೆಂದು ತೋರುತ್ತದೆ. ಇಲ್ಲವಾದರೆ ಅಂತಹ ರಾಜ್ಯವು ನಾಶವಾಗಲು ಕಾರಣವೇನು ?

ವೀರಮ್ಮಾಜಿಗೂ ಆಗಿನ ಕಾಲದಲ್ಲಿದ್ದ ಬಾಳೇಹಳ್ಳಿ ವೀರಸಿಂಹಾಸನಾಧೀಶ್ವರರಿಗೂ ಏನೋ ಕಾರಣಾಂತರದಿಂದ ವೈಮನಸ್ಯ ಬಂದಿತೆಂದೂ, ಆಗ ವೀರಮ್ಮಾಜಿಯು ಆ ಸಂಸ್ಥಾನದ ಮೇಲೆ ಸೈನ್ಯ ಕಳುಹಿಸಿ, ಕೊಳ್ಳೆಮಾಡಿಸಿ, ಮಠಕ್ಕೆ ಬೆಂಕಿ ಇಡಿಸಿದಳೆಂದೂ, ಅದರ ಐಶ್ವರ್ಯವನ್ನೆಲ್ಲಾ ಶೃಂಗೇರಿ ಮಠಕ್ಕೆ ಕೊಡಿಸಿದಳೆಂದೂ ಜನಜನಿತವಾದ ವಾರ್ತೆಯಿದೆ. ಕೆಳದೀ ನೃಪ ವಿಜಯದಲ್ಲಿ ಈ ವಿಷಯ ಹೇಳಲ್ಪಟ್ಟಿಲ್ಲ.

ವೀರಮ್ಮಾಜಿಯು ತನ್ನಕಡೆಗಾಲದಲ್ಲಿ ಚಿನ್ನಭಂಡಾರದ ಹೊವಯ್ಯನನ್ನು ಕಳುಹಿಸಿ, ಶೃಂಗೇರಿಯಲ್ಲಿದ್ದ ಸಚ್ಚಿದಾನಂದ ಭಾರತೀಸ್ವಾಮಿಗಳನ್ನು ವೇಣುಪುರಕ್ಕೆ (ಬಿದನೂರು) ಕರೆತರಿಸಿ, ಬಣ್ಣದಚಾವಡಿಯಲ್ಲಿ ದರ್ಶನ ತೆಗೆದುಕೊಂಡು, ಅವರಿಗೆ ಸ್ಫಟಿಕಲಿಂಗ, ರನ್ನಖಚಿತಗೋಪಾಲಕೃಷ್ಣ ಪ್ರತಿಮೆ,ತಾಲಿ, ಸರಪಣಿ, ಪದಕ ಮೊದಲಾದ ಬೆಲೆಬಾಳುವ ಆಭರಣಗಳನ್ನು ಕೊಟ್ಟು ದೇವರಿಗೆ ಎಪ್ಪತ್ತುನಾಲ್ಕು ವರಹ ಭೂಸ್ವಾಸ್ತಿಯನ್ನೂ, ಮಠಕ್ಕೆ ಮುನ್ನೂರು ವರಹ ಆಸ್ತಿಯನ್ನೂ ಕೊಟ್ಟು, ಮಠದ ಆಗಿನ ಸಾಲವನ್ನೆಲ್ಲಾ

ತೀರಿಸಿದಳೆಂದು ಕೆಳದಿನೃಪವಿಜಯದಲ್ಲಿವೆ. ಈ ಕಥೆಯನ್ನು ಓದಿದರೆ ಬಾಳೇಹಳ್ಳಿ ಪೀಠದ ವಿಷಯವು ನಿಜವೆಂದು ಊಹಿಸಲು ಕಾರಣವಿದೆ.

ಕೆಳದಿಯ ರಾಜರು ವೀರಶೈವರು. ಎಷ್ಟೋ ಜಂಗಮ ಮಠಗಳನ್ನು ಉದ್ಧಾರಮಾಡಿದವರು. ವೀರಶೈವ ಧರ್ಮಗ್ರಂಥಗಳನ್ನು ಬರೆಸಿದವರು. ಇಂತಹ ವಂಶದಲ್ಲಿ ಹುಟ್ಟಿ ಬೆಳೆದ ವೀರಮ್ಮಾಜಿಯು ಏನುಕಾರಣ ಬಾಳೇಹಳ್ಳಿ ಧರ್ಮಪೀಠವನ್ನು ಮರೆತಳು? ಪರಧರ್ಮದವರಿಗೆ ಸಹಾಯ ಮಾಡುವುದು ನೀತಿಯಾದರೂ, ಅಂತಹ ಸಮದಲ್ಲಿ ಸ್ವಧರ್ಮದ ಗುರುಗಳನ್ನು ಮರೆಯುವುದರ ರಹಸ್ಯವೇನು? ಇತ್ಯಾದಿ ಪ್ರಶ್ನೆಗಳಿಗೆ ವೀರಮ್ಮಾಜಿ ಚರಿತ್ರೆಯಲ್ಲಿ ಉತ್ತರಗಳು ಕಂಡುಬರದೇ ಇರುವುದರಿಂದ ಜನಜನಿತವಾದ ವಾರ್ತೆಯು ನಿಜವೆಂದು ನಂಬಲವಕಾಶವಿದೆ.

ವೀರಮ್ಮಾಜಿಯು ರಾಜ್ಯಭಾರದಲ್ಲಿ ರಾಜ್ಯದಲ್ಲಿ ಬಿಗಿತಪ್ಪಿತು. ಪುಂಡಾಟಗಳು ವೃದ್ಧಿಯಾದುವು. ಒಳಸಂಚುಗಳು ನಡೆಯಲಾರಂಭವಾದುವು. ರಾಜದ್ರೋಹಿಗಳು ಮುಂದುವರಿದರು. ಇಂತಹ ಸಮಯವನ್ನೇ ಎದುರು ನೋಡುತ್ತಿದ್ದ ಧೂರ್ತನೂ ಸ್ವಾಮಿದ್ರೋಹಿಯೂ ಚಾಣಾಕ್ಷನೂ ಆದ ಹೈದರನಿಗೆ ಬಿದನೂರು ರಾಜ್ಯದ ರಹಸ್ಯವನ್ನೆಲ್ಲ ಅರಿತಿದ್ದ ಲಿಂಗಣ್ಣ ಮೊದಲಾದವರ ಸಹಾಯ ಸಿಕ್ಕಿತು. ಕ್ರಿ. ಶ. ೧೭೬೩ ರಲ್ಲಿ ಹೈದರನು ಬಿದನೂರನ್ನು ಹಿಡಿದನು. ಆಗ ವೀರಮ್ಮಾಜಿಯು ಸಾಮದಾನಗಳಿಂದ ಹೈದರನನ್ನು ತೃಪ್ತಿಪಡಿಸಹೋದರೂ ಧೂರ್ತನಾದ ಹೈದರನ ಮುಂದೆ ಅವಳ ಆಟ ಸಾಗದಾಯಿತು. ವಿಧಿ ಅವಳ ಬೆನ್ನಹತ್ತಿತು.

ವೀರಮ್ಮಾಜಿಯು ಕಡೆಗೆ ಯತ್ನವಿಲ್ಲದೆ ನಂಜಯ್ಯನೊಡನೆ ಬಲ್ಲಾಳರಾಯನ ದುರ್ಗಕ್ಕೆ ಓಡಿಹೋದಳು. ವೀರಮ್ಮಾಜಿಯು ಓಡಿಹೋಗುವಾಗ ಅರಮನೆಗೆ ಬೆಂಕಿಹಾಕಿಸಿದಳು. ಜನರು ಮಕ್ಕಳು–ಮರಿಗಳನ್ನೆಲ್ಲಾ ಕಟ್ಟಿಕೊಂಡು ಕಾಡಿಗೆ ಓಡಿಹೋದರು. ಹೈದರನು ಲಿಂಗಣ್ಣನು ತೋರಿಸಿದ ಗುಪ್ತಮಾರ್ಗದಿಂದ ಕೋಟೆಯೊಳಗೆ ಬಂದು ಅರಮನೆಯ ಬೆಂಕಿಯನ್ನು ಆರಿಸಿ ಸುಮಾರು ೧೮ ಕೋಟಿ ರೂ.ಗಳಷ್ಟು ಐಶ್ವರ್ಯವನ್ನು ವಶಪಡಿಸಿ




ಶಿವಾಜಿಯಪುತ್ರ ರಾಜಾರಾಮನಿಗೆ ರಾಣಿ ಚೆನ್ನಮ್ಮಾಜಿ
ಅಭಯಪ್ರಧಾನ ಮಾಡುತ್ತಿರುವುದು

ಕೊಂಡು ಸಂಪೂರ್ಣವಾಗಿ ನಗರ ವಶವಾದಮೇಲೆ ಬಿದನೂರೆಂಬ ಹೆಸರನ್ನು ತೊರೆದು ಹೈದರ್ ನಗರ ಎಂದು ಹೆಸರಿಟ್ಟನು. ಅದು ಈಗ 'ನಗರ' ಎಂದು ಮಾತ್ರ ಜನರಲ್ಲಿ ರೂಢಿಯಾಗಿದೆ.

ಸಾಹಸಿಯಾದ ಹೈದರನು ಬಳ್ಳಾಳರಾಯನ ದುರ್ಗದಲ್ಲಿದ್ದ ವೀರಮ್ಮಾಜಿ, ನಂಜಯ್ಯ ಮುಂತಾದವರನ್ನು ಸೆರೆಹಿಡಿಸಿ ಮಧುಗಿರಿ (ಮದ್ದಗಿರಿ) ಯಲ್ಲಿ ಸೆರೆಹಾಕಿದನು. ತನಗೆ ಸಹಾಯ ಮಾಡಿದ ಬಿದನೂರು ರಾಜ ದ್ರೋಹಿಗಳನ್ನೂ ಕಡೆಗೆ ಕೊಲ್ಲಿಸಿದನು. ನಗರದಲ್ಲಿ ತನ್ನ ಠಾಣ್ಯವನ್ನು ಸ್ಥಾಪಿಸಿದನು. ವಿಜಯೋನ್ಮಾದದಿಂದ ಅಹಂಕರಿಸಿದನು.

ಇತ್ತ ಪುಣೆಯ ಶ್ರೀಮಂತ ಮಾಧವರಾಯ ಪೇಷ್ವೆಯು ಮಧುಗಿರಿಯನ್ನು ಮುತ್ತಿ ಸ್ವಾಧೀನ ಪಡಿಸಿಕೊಂಡು ಅಲ್ಲಿ ಸೆರೆಬಿದ್ದಿದ್ದ ಕೆಳದಿಯ ರಾಣಿ ವೀರಮ್ಮಾಜಿ ಮತ್ತು ರಾಜಬಂಧುಗಳನ್ನು ನೋಡಿ ಮನಮರುಗಿ ಅವರನ್ನು ಪುಣೆಗೆ ಸಾಗಿಸಲು ಅಪ್ಪಣೆ ಮಾಡಿದನು. ವೀರಮ್ಮಾಜಿಯು ಮಾರ್ಗದಲ್ಲಿಯೇ ವಿಧಿವಶಳಾದಳು. ಬಿದನೂರು ರಾಜಮನೆತನದಲ್ಲಿ ಉಳಿದವರು ಪುಣೆಯಲ್ಲಿದ್ದರು. ಆಮೇಲೆ ಮರಾಟಿಗರು ಮತ್ತುಹೈದರ ಇವರಿಗೆ ಯುದ್ಧ ಪ್ರಾರಂಭವಾಗುವ ಸಂದರ್ಭ ಒದಗಿದುದರಿಂದ ನರಗುಂದಕ್ಕೆ ಸಾಗಿಸಲ್ಪಟ್ಟರು. ಗತವೈಭವವುಳ್ಳ ಕೆಳದಿಯ ರಾಜಸಂತತಿಯವರು ಇಂದಿಗೂ ನರಗುಂದದಲ್ಲಿರುವರು.

ಇಂತು ಶಿವಕೃಪಾಬಲದಿಂದ ಚೌಡಪ್ಪನಾಯಕನು ಕ್ರಿ. ಶ. ೧೫೦೦ ರಲ್ಲಿ ಸ್ಥಾಪಿಸಿದ ಈ ರಾಜ್ಯವು ವೀರಮ್ಮಾಜಿಯ ಕಾಲದಲ್ಲಿ ಕ್ರಿ. ಶ. ೧೭೬೩ ರಲ್ಲಿ ಕಾಲಪುರುಷನ ಕಠಿಣ ವಕ್ತ್ರಕ್ಕೆ ಸಿಕ್ಕಿ ನಾಶವಾಯಿತು.

ವೀರಶೈವರು ಪಾರಮಾರ್ಥಿಕ ಸಾಮ್ರಾಜ್ಯದಲ್ಲಿಯೂ, ಸಾಹಿತ್ಯ ಸಾಮ್ರಾಜ್ಯದಲ್ಲಿಯೂ ಹೆಸರುಪಡೆದಿರುವಂತೆಯೇ ರಾಜ್ಯಭಾರದಲ್ಲಿಯೂ ಅದ್ವಿತೀಯ ಶಕ್ತಿಯುಕ್ತರಾಗಿದ್ದರೆಂಬುದಕ್ಕೆ ಇನ್ನೂರರುವತ್ತುಮೂರು ವರ್ಷ

ಕಾಲ ಕರ್ಣಾಟಕದಲ್ಲಿ ಉದಾರ ಭಾವದಿಂದ ರಾಜ್ಯಭಾರ ಮಾಡಿದ ಕೆಳ ದಿಯ ವೀರಶೈವ ಅರಸರೇ ಸಾಕ್ಷಿಯಾಗಿರುವರು.

ಕಂದ॥ ವರ ವೀರಶೈವ ರಾಜರ್ ।
ಧರೆಯೊಳ್ ಜಸಮಾಂತು ಬಾಳ್ದ ಚರಿತೆಯನೆಲ್ಲಂ ॥
ಕರದರ್ಪಣದೊಳ್ ತೋರುವ ।
ಪರಿಯಂ ಪಿರಿದೆಂದು ಪೇಳ್ವರಲ್ಲವೆ ಜಾಣರ್ ॥

ಕೆಳದಿ ರಾಜರ ಬಗ್ಗೆ ವಿದ್ವಾಂಸರ ಅಭಿಪ್ರಾಯಗಳು:

"........ಈ ಕೆಳದಿ ರಾಜರು ತಾಳೀಕೋಟೆಯ ಯುದ್ಧದಲ್ಲಿ ವಿಜಯ ನಗರದ ಅರಸರಿಗೆ ಸೋಲಾದ ಮೇಲೂ ಕೂಡ ಚಕ್ರಾಧಿಪತಿಗಳೆಂದು ಅವರ ವಿಷಯದಲ್ಲಿ ಭಯ-ಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು. ಈ ಭಕ್ತಿಯೂ, ಮೈತ್ರಿಯೂ ಅನೂಚಾನವಾಗಿ ಕೆಳದಿಯವರ ಸಂತತಿ ಪರಂಪರೆಯಾಗಿ ಬಂದದ್ದೇ ಹೊರತು ಗೆದ್ದ ಎತ್ತಿನ ಬಾಲಹಿಡಿದು ಗೆದ್ದವರು ನಮ್ಮವರು ಎಂಬ ಅಲ್ಪ ಮಾರ್ಗವನ್ನು ಇವರು ಕಂಡವರೇ ಅಲ್ಲ.

"........ಶಿವಪ್ಪನಾಯಕನು ಯೂರೋಪಿನ ಜನರನ್ನು ಅಡಗಿಸಿ ಅವರ ಹಾವಳಿಯನ್ನು ನಿಲ್ಲಿಸಿದನು."

"..........ಶಿವಾಜಿಯ ಮಗ ರಾಜಾರಾಮನು ಔರಂಗಜೇಬನ ಸೇನೆಗೆ ಅಂಜಿ ಇಕ್ಕೇರಿ ಸಂಸ್ಥಾನದ ರಾಣಿ ಚನ್ನಮ್ಮಾಜಿಯ ಮರೆ ಬಿದ್ದನು. ತುರುಕರು ಎಷ್ಟು ಪ್ರಯತ್ನ ಮಾಡಿದರೂ ಆ ವೀರರಾಣಿಯು ಶರಣಾಗತನನ್ನು ಬಿಟ್ಟು ಕೊಡುವುದಿಲ್ಲವೆಂದು ಹೇಳಿ ಮೊಗಲರ ಸೇನೆಯನ್ನು ಯುದ್ಧಮಾಡಿ ಸೋಲಿಸಿ ಓಡಿಸಿದಳು. ಔರಂಗಜೇಬನಿಗೆ ಪೂರ್ತಿಯಾದ ಪರಾಭವವನ್ನು ಉಂಟುಮಾಡಿವ ಗೌರವಕ್ಕೆ ಚನ್ನಮ್ಮಾಜಿಯೂ ಅವಳ ದಂಡಿನವರೂ ಪಾತ್ರರಾಗುತ್ತಾರೆ.

"..........ದಿಲ್ಲಿಯಲ್ಲಿ ಅಂಕುಶಖಾನನನ್ನು ಒಂದೇಟಿಗೆ ಸೊಂಟಕ್ಕೆ ಸರಿ ಯಾಗಿ ಹೊಡೆದು ಎರಡುಮಾಡಿ ಒಂದು ನಿಮಿಷದಲ್ಲಿ ಕತ್ತರಿಸಿ ದಿಂಬದ ಮೇಲೆ ದಿಂಬವನ್ನು ಅಲುಗಾಡದಂತೆ ನಿಲ್ಲಿಸಿದ ಮಹಾವೀರ ದೊಡ್ಡ ಸಂಕ

ಣ್ಣನಾಯಕನೂ, 'ದೋಖಂಡೇರಾಯ' ನೆಂದು ಬಿರುದುಪಡೆದ ಹಿರಿಯ ವೆಂಕಟಪ್ಪನಾಯಕನೂ, ಅನೇಕ ಯುದ್ಧಗಳಲ್ಲಿ ಜಯವನ್ನು ಹೊಂದಿದ ಶಿವಪ್ಪನಾಯಕನೂ ಯಾವ ಕಾಲಕ್ಕಾದರೂ ಮಹಾಶೂರರೆನಿಸಿಕೊಳ್ಳ ಲಿಕ್ಕೆ ಅರ್ಹರಾಗಿದ್ದಾರೆ.

"......ಶೃಂಗೇರಿ ಮಠಕ್ಕೆ ಇವರು ಸಹಾಯ ಮಾಡಿದ್ದಕ್ಕೆ ಲೆಕ್ಕವೇ ಇಲ್ಲ. ಮುಖ್ಯ ಈ ದೊರೆಗಳ ಅವಲಂಬನವಿಲ್ಲದಿದ್ದರೆ ಆ ಮಠದ ಸರಸ್ವತೀ ಪೀಠಕ್ಕೆ ಈಗಿರುವ ಐಶ್ವರ್ಯವೂ ಗೌರವವೂ ಸಿದ್ಧವಾಗಿರುತ್ತಿರಲಿಲ್ಲ.

—ಇಕ್ಕೇರಿ ಸಂಸ್ಥಾನದ ಚರಿತ್ರೆ.

"........ಕೆಳದೀ ರಾಜ್ಯದ ಸಂಪತ್ತು-ಸಮೃದ್ಧಿಯನ್ನು ಬಳೆಸಿದವನು ಅತ್ಯಂತ ಹೆಸರಾದವನಾದ ಶಿವಪ್ಪನಾಯಕನು. 'ಶಿವಪ್ಪನಾಯಕನ ಶಿಸ್ತು' ಎಂಬ ಭೂಗಂದಾಯ ಪದ್ಧತಿ ಜಾರಿಯಾದುದು ಇವನ ಕಾಲದಲ್ಲಿ.

"......—ಇಕ್ಕೇರಿಗೆ ಓಡಿಬಂದ ವಿಜಯನಗರದ ಶ್ರೀರಂಗರಾಯನಿಗೆ ಬೇಲೂರು ಮತ್ತು ಸಕ್ಕರೇಪಟ್ಟಣಗಳ ಆಡಳಿತವನ್ನು ವಹಿಸಿಕೊಟ್ಟ ಉದಾರಿ ಶಿವಪ್ಪನಾಯಕ.

"........ಬಿದನೂರಿನ ಇತಿಹಾಸದಲ್ಲಿ ಅತ್ಯಂತ ಗಮನಾರ್ಹವಾದ ಸಂಗತಿಯೆಂದರೆ ರಾಣಿ ಚನ್ನಮ್ಮಾಜಿ, ಶಿವಾಜಿಮಗ ರಾಜಾರಾಮನು ಮೊಗಲರಿಂದ ತಲೆತಪ್ಪಿಸಿಕೊಂಡಿದ್ದಾಗ ಅವನಿಗೆ ಆಶ್ರಯಕೊಟ್ಟದ್ದು. ರಾಜಾ ರಾಮನು ತನ್ನ ದೇಶಕ್ಕೆ ತಪ್ಪಿಸಿಕೊಂಡು ಹೋಗಲು ಚನ್ನಮ್ಮಾಜಿಯ ಸಹಾಯ ಇವೆಲ್ಲವೂ ಇಂಡಿಯಾದ ಭವಿಷ್ಯದ ಮೇಲೆ ತುಂಬ ಪರಿಣಾಮಕಾರಿ ಯಾಗಿತ್ತು. ಇದರಿಂದ ಉತ್ತರದಲ್ಲಿ ಮಹಾರಾಷ್ಟ್ರರ ಆಳಿಕೆ ಉಳಿಯುವಂ ತಾಯಿತು. ಹೀಗೆ ಮುಸ್ಲಿಮರು ಹಿಂದುಗಳನ್ನು ಜೈಸದಂತೆ ಅವರನ್ನು ಮತ್ತೊಮ್ಮೆ ಪಾರುಮಾಡಿದ್ದು ಕರ್ಣಾಟಕವೇ ಎಂದಾಯಿತು.

—ಕನ್ನಡ ನಾಡಿನ ಚರಿತ್ರೆ

———

# ದಕ್ಷಿಣ ಕಾಶಿ-ಶಿವಗಂಗಾ [A]

ಹಳ್ಳಿಗರು—'ಶಿವಗಂಗೆ' ಅಂದರೆ ಏನು ? ಅದು ಎಲ್ಲಿದೆ ? ಅಲ್ಲಿ ಏನು ವಿಶೇಷ ಸಂಗತಿಗಳಿವೆ ದಯವಿಟ್ಟು ಹೇಳುವಿರಾ ?

ಶಾಸ್ತ್ರಿಗಳು—ಶಿವಗಂಗೆ ಎಂಬುದು ಒಂದು ಪುಣ್ಯಸ್ಥಳ. ಅಲ್ಲಿ ಶಿವ ಮತ್ತು ಗಂಗೆ ಇದ್ದಾರೆ. ಅದು ಬೆಂಗಳೂರಿಗೆ ೩೪ ಮೈಲಿ ದೂರದಲ್ಲಿದೆ. ಅಲ್ಲಿಗೆ ಹೋಗಿಬರಲು ಬೆಂಗಳೂರು ಮತ್ತು ತುಮಕೂರಿನಿಂದ ಬಸ್ಸಿನ ಸೌಕರ್ಯವಿದೆ. ಬೆಂಗಳೂರು ಮತ್ತು ತುಮಕೂರು ಮಧ್ಯದಲ್ಲಿರುವ ನಿಡುವಂದ ರೈಲ್ವೆ ಸ್ಟೇಷನ್ನಿನಿಂದ ಶಿವಗಂಗೆ ಕೇವಲ ಆರು ಮೈಲಿ ದೂರದಲ್ಲಿದೆ. ಶಿವಗಂಗೆಯಲ್ಲಿ ಒಂದು ದೊಡ್ಡ ಬೆಟ್ಟವಿದೆ. ಅದು ಸಮುದ್ರ ಮಟ್ಟಕ್ಕೆ ೪೫೫೯ ಅಡಿ ಎತ್ತರವಾಗಿಯೂ ಭೂಮಿಯ ಮಟ್ಟಕ್ಕೆ ೧೬೦೦ ಅಡಿ ಎತ್ತರದಲ್ಲಿಯೂ ಇದೆ. ಸುತ್ತುಮುತ್ತಲೂ ಬಯಲು ಪ್ರದೇಶವಿರುವುದರಿಂದ ದೂರದಿಂದ ನೋಡುವವರಿಗೆ ಈ ಬೆಟ್ಟವು ರಮ್ಯವಾಗಿ ಕಾಣುತ್ತದೆ. ನಮ್ಮ ನಾಡಿನ ಎತ್ತರವಾದ ಬೆಟ್ಟಗಳಲ್ಲಿ ಇದೂ ಒಂದು.

ಹಳ್ಳಿಗರು—ಅಲ್ಲಿ ಯಾವ ದೇವಸ್ಥಾನಗಳಿವೆ ? ಜಾತ್ರೆ ಗೀತ್ರೆ ಏನಾದರೂ ಆಗುವುದುಂಟೋ ? ತೀರ್ಥ ಗೀರ್ಥ ಏನಾದರೂ ಇವೆಯೋ ? ಅದೇನು ಸಮಾಚಾರ ಸ್ವಾಮಿ ?

ಶಾಸ್ತ್ರಿಗಳು—ನೀವು ಒಳ್ಳೆಯ ಪ್ರಶ್ನೆ ಕೇಳುತ್ತಿದ್ದೀರಪ್ಪ, ನನಗೆ ಹೇಳುವುದಕ್ಕೆ ತುಂಬಾ ಸಂತೋಷವಾಗುತ್ತದೆ. ಶ್ರದ್ಧೆಯಿಂದ ಕೇಳಿರಿ.

---

A ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಆಸ್ಥಾನವಿದ್ವಾನ್, ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ದಿನಾಂಕ ೧೬-೨-೬೨ರಂದು ಬೆಂಗಳೂರು ಆಕಾಶವಾಣಿಯಲ್ಲಿ ದಕ್ಷಿಣಕಾಶಿ ಶಿವಗಂಗಾದ ಬಗ್ಗೆ ನಿರೂಪಿಸಿದ ಭಾಷಣ.

ತಿಳಿದುಕೊಳ್ಳಬೇಕಾದ ವಿಚಾರ ಇದು. ಶಿವಗಂಗೆಯ ಬೆಟ್ಟದಲ್ಲಿ ಶ್ರೀ ಗಂಗಾಧರೇಶ್ವರ ಮತ್ತು ಹೊನ್ನಮ್ಮದೇವಿ ಹೆಸರಿನ ಪ್ರಸಿದ್ಧ ದೇವಾಲಯ ಗಳಿವೆ. ಪ್ರತಿವರ್ಷ ಈ ಎರಡು ದೇವರುಗಳ ಹೆಸರಿನಲ್ಲಿ ಜಾತ್ರೆ ನಡೆಯು ತ್ತವೆ. ಪ್ರತಿವರ್ಷ ಸಂಕ್ರಾಂತಿ ದಿನ ಈ ಗಂಗಾಧರೇಶ್ವರನಿಗೂ ಹೊನ್ನಮ್ಮ ದೇವಿಗೂ ಮದುವೆಯಾಗುತ್ತದೆ. ಆ ವಿವಾಹವನ್ನು 'ಗಿರಿಜಾ ಕಲ್ಯಾಣ' ಎಂದು ಕರೆಯುತ್ತಾರೆ. ಬೆಟ್ಟದಮೇಲೆ 'ಪಾತಾಳ ಗಂಗೆ' ಎಂಬ ಒಂದು ತೀರ್ಥವಿದೆ. ಇದಕ್ಕೂ ಕಾಶಿಯ ಗಂಗೆಗೂ ಸಂಬಂಧವಿದೆಯೆಂದು ಹೇಳು ತ್ತಾರೆ. ಅಲ್ಲದೆ ಬೆಟ್ಟದ ಬುಡದಲ್ಲಿ ೧೦೮ ಲಿಂಗಗಳ ಕೊಳ ಅಥವಾ ಅಗಸ್ತ್ಯತೀರ್ಥ ಎಂಬ ಕೊಳವಿದೆ. 'ಕಮಲ ತೀರ್ಥ' ಎಂಬ ವಿಶಾಲದಾದ ಪುಷ್ಕರಣಿಯೂ ಇದೆ. ಅಲ್ಲದೆ ಬೆಟ್ಟದ ಮೇಲೆ ಕಪಿಲ, ಕಣ್ವ, ಕುಂಭಾ ವತಿ, ಚಕ್ರ, ಕಮಂಡಲ, ಮೈತ್ರೇಯ, ಮೌದ್ಗಲ್ಯ ಎಂಬ ತೀರ್ಥಗಳಿವೆ. ಇದಲ್ಲದೆ ಬೆಟ್ಟದ ಪಶ್ಚಿಮ ಪ್ರದೇಶದಲ್ಲಿ ಭೀಷ್ಮರು ತಪಸ್ಸುಮಾಡಿದ ಸ್ಥಳದಲ್ಲಿ ಗಂಗಾ ತೀರ್ಥವಿದೆ.

ಹಳ್ಳಿಗರು—ಆ ಕ್ಷೇತ್ರದಲ್ಲಿ ಏನಾದರೂ ಮಠಮಾನ್ಯ ಇವೆಯಾ ಸ್ವಾಮಿ ?

ಶಾಸ್ತ್ರಿಗಳು—ಹೌದಪ್ಪಾ ಇವೆ. ಬೆಟ್ಟದಮೇಲೆ ಮೇಲಣಗವಿ ವೀರ ಸಿಂಹಾಸನಮಠ, ಹೊನ್ನಮ್ಮಗವಿಮಠ ಇವೆ. ಬೆಟ್ಟದ ಕೆಳಗೆ ಬ್ರಾಹ್ಮಣರ ಮಠ, ಕಂಬಾಳುಮಠ ಇವೆ. ಈ ಮೇಲೆಕಂಡ ನಾಲ್ಕು ಮಠಗಳಲ್ಲಿ ಶ್ರೀ ಶಂಕರಾಚಾರ್ಯರ ಪರಂಪರೆಗೆ ಸೇರಿದ ಒಂದು ಬ್ರಾಹ್ಮಣ ಮಠವನ್ನು ಬಿಟ್ಟರೆ ಉಳಿದ ಮೂರು ಮಠಗಳೂ ವೀರಶೈವ ಧರ್ಮಕ್ಕೆ ಸೇರಿದುವು. ಬ್ರಾಹ್ಮಣರ ಮಠದಲ್ಲಿ ಶಾರದಾದೇವಿಯ ವಿಗ್ರಹವೂ, ಮೇಲಣಗವಿ ಮಠ ದಲ್ಲಿ ರುದ್ರಮುನಿಸ್ವಾಮಿ ವಿಗ್ರಹವೂ ಇವೆ. ಹೊನ್ನಮ್ಮಗವಿ ಮಠದಲ್ಲಿ ವೀರಭದ್ರಸ್ವಾಮಿಯ ವಿಗ್ರಹವಿದೆ. ಮೇಲಣಗವಿಯ ಮಠವು ಶ್ರೀ ರೇಣು ಕಾಚಾರ್ಯ ಪರಂಪರೆಗೂ, ಕಂಬಾಳ ಮಠವು ಉಜ್ಜಯನಿ ಮರುಳುಸಿದ್ಧರ ಪರಂಪರೆಗೂ ಸೇರಿದುವೆಂದು ಹೇಳುತ್ತಾರೆ. ಕ್ರಿ. ಶ. ೧೫೩೦ರಲ್ಲಿ ಗುಬ್ಬಿಯ ಲ್ಲಿದ್ದ ಮಹಾಕವಿ ಮಲ್ಲಣಾರ್ಯನು ವೀರಶೈವಾಮೃತ ಮಹಾಪುರಾಣ

ಎಂಬ ತನ್ನ ಗ್ರಂಥದಲ್ಲಿ ಮೇಲಣಗವಿಯ ಗುರುಪರಂಪರೆಯ ಶಾಂತನಂಜೇಶನ ಶಿಷ್ಯನೆಂದು ತಾನು ಹೇಳಿಕೊಂಡಿದ್ದಾನೆ. ಆ ಗ್ರಂಥವನ್ನು ಶಿವಗಂಗೆ ಶರಣೆ ಜ್ಯೋತಿಯಮ್ಮನ ಮಠದಲ್ಲಿ ಬರೆದಂತೆ ಹೇಳಿದ್ದಾನೆ. ೧೫ನೇ ಶತಕದವನಾದ ಬೊಮ್ಮರಸ ಕವಿ ಆಚಾರ್ಯ ರೇವಣಸಿದ್ಧನು ಕಕುದ್ಗಿರಿಗೆ ಬಂದಂತೆ ಹೇಳಿದ್ದಾನೆ. ೧೭ನೇ ಶತಕದ ಗಣ್ಯಕವಿ ಬಸವಲಿಂಗನು ತನ್ನ ಕೊಟ್ಟೂರು ಬಸವಪುರಾಣದಲ್ಲಿ ಮೇಲಣಗವಿ ಸಿಂಹಾಸನಾಧಿಪ ಮುಲೆಯ ಶಾಂತೇಶನ ಶಿಷ್ಯ ತಾನು ಎಂದಿದ್ದಾನೆ.

ಹಳ್ಳಿಗರು—ಬೆಟ್ಟದಲ್ಲಿ ಇನ್ನೇನಾದರೂ ಗುಡಿಗೋಪುರ ಇವೆಯಾ ಸ್ವಾಮಿ ?

ಶಾಸ್ತ್ರಿಗಳು—ಆ ಕ್ಷೇತ್ರದಲ್ಲಿ ಎಲ್ಲೆಲ್ಲೂ ಗುಡಿಗೋಪುರಗಳು ತುಂಬಿವೆ. ಊರಬಾಗಿಲಿಗೆ ಒಂದು ದೊಡ್ಡಗೋಪುರವಿದೆ. ಬೆಟ್ಟವನ್ನು ಹತ್ತುವಾಗ ಒಂದು ದೊಡ್ಡ ಗೋಪುರವಿದೆ. ಹೊನ್ನಮ್ಮದೇವಿ, ಗಂಗಾಧರೇಶ್ವರ ಗುಡಿಗಳ ಮೇಲೂ ಗೋಪುರಗಳಿವೆ. ಬೆಟ್ಟದ ಪೂರ್ವಭಾಗದಲ್ಲಿ ರೇವಣ ಸಿದ್ಧೇಶ್ವರನ ದೇವಾಲಯವಿದೆ. ಬೆಟ್ಟದ ಕೆಳಗಡೆ ವೀರಭದ್ರನ ದೇವಾಲಯವಿದೆ. ಬೆಟ್ಟದಮೇಲೆ ಗಣಪತಿ, ಸುಬ್ರಹ್ಮಣ್ಯ, ಭೈರವ, ಬಸವಣ್ಣ ಮೊದಲಾದ ಗುಡಿಗಳಿವೆ.

ಹಳ್ಳಿಗರು—ಈ ಶಿವಗಂಗೆಬೆಟ್ಟ ಒಂದೊಂದು ದಿಕ್ಕಿಗೆ ಒಂದೊಂದು ರೀತಿ ಕಾಣುತ್ತದೆ ಅಂತಾರೆ, ಅದರ ಸಮಾಚಾರ ಏನು ಸ್ವಾಮಿ ?

ಶಾಸ್ತ್ರಿಗಳು—ಹೌದಪ್ಪ, ನಿಮ್ಮ ಮಾತು ನಿಜ. ಈ ಬೆಟ್ಟವು ಪೂರ್ವ ದಿಕ್ಕಿಗೆ ವೃಷಭವಾಗಿ, ಪಶ್ಚಿಮಕ್ಕೆ ಗಣೇಶಾಕಾರವಾಗಿ, ಉತ್ತರಕ್ಕೆ ಲಿಂಗಾಕಾರವಾಗಿ, (ಹಿಮಾಲಯದ ಕೈಲಾಸದಂತೆ) ದಕ್ಷಿಣಕ್ಕೆ ಸರ್ಪಾಕಾರವಾಗಿ ಕಾಣುತ್ತದೆ. ಇದು ತುಂಬ ಮಹಿಮಾಯುಕ್ತವಾದ ಕ್ಷೇತ್ರ. ಆದ್ದರಿಂದಲೇ ಇದಕ್ಕೆ ದಕ್ಷಿಣಕಾಶಿ, ಕಕುದ್ಗಿರಿ ಎಂಬ ಹೆಸರುಗಳಿವೆ. ಈ ಕ್ಷೇತ್ರಕ್ಕೆ ಕೃತಯುಗದಲ್ಲಿ ಮಂದಾಕಿನಿ, ತ್ರೇತಾಯುಗದಲ್ಲಿ ಏಕಶೃಂಗಾದ್ರಿ, ದ್ವಾಪರ

ದಲ್ಲಿ ಪುಂಗವಾದ್ರಿ, ಕಲಿಯುಗದಲ್ಲಿ ಕಕುದ್ಗಿರಿ ಎಂಬ ಹೆಸರುಗಳಿವೆ. ಈ ಕ್ಷೇತ್ರದಲ್ಲಿ, ವಸಿಷ್ಠ, ಜಮದಗ್ನಿ, ಪರಶುರಾಮ, ಶುಕ, ಶೌನಕ, ವ್ಯಾಸ, ಕಣ್ವ, ಕಪಿಲ ಮೊದಲಾದ ಋಷಿಗಳು ಬಂದು ತಪಸ್ಸು ಮಾಡಿದ್ದಾರೆ. ಅದಕ್ಕೆ ಅವರ ಹೆಸರಿನ ಸ್ಮಾರಕಗಳು ಇಲ್ಲಿವೆ. ಅಲ್ಲದೆ, ಪುರಾಣ ಕಾಲದ ಮಹಾರಾಜರು ವಿಕ್ರಮಾದಿತ್ಯ, ತ್ರಿಶಂಕು, ಜನಮೇಜಯ, ಹರಿಶ್ಚಂದ್ರ, ಧರ್ಮರಾಜ ಮೊದಲಾದವರು ಬಂದು ಗಂಗಾಧರೇಶ್ವರನನ್ನು ಆರಾಧಿಸಿ ಇಲ್ಲಿ ಧನ್ಯರಾಗಿದ್ದಾರೆ. ನಂದಿಯು ಇಲ್ಲಿ ತಪಸ್ಸುಮಾಡಿ ಈಶ್ವರನನ್ನು ಪ್ರತ್ಯಕ್ಷ ಮಾಡಿಕೊಂಡಂತೆ ಪುರಾಣಗಳಲ್ಲಿ ಹೇಳಿದೆ.

ಹಳ್ಳಿಗರು—ಈ ಕ್ಷೇತ್ರದಲ್ಲಿರುವ ಗುಡಿಗೋಪುರ ಕಟ್ಟಿಸಿದ ಪುಣ್ಯಾತ್ಮರು ಯಾರು ಸ್ವಾಮಿ ?

ಶಾಸ್ತ್ರಿಗಳು—ತಲಕಾಡಿನ ಗಂಗರು, ಕಲ್ಯಾಣದ ಕಾಲಚುರ್ಯರು, ಕಂಚಿಯ ಚೋಳರು, ಹಳೇಬೀಡಿನ ಹೊಯ್ಸಳರು, ವಿ ಜ ಯ ನ ಗ ರ ದ ರಾಯರು, ಕೆಳದಿ ಮತ್ತು ಕೊಡಗಿನ ಅರಸರು, ಈ ಕ್ಷೇತ್ರದ ದೇವಾಲಯಗಳಿಗೆ, ಮಠಮಾನ್ಯಗಳಿಗೆ ವಿಪುಲವಾದ ದತ್ತಿಗಳನ್ನು ಕೊಟ್ಟಿದ್ದಾರೆ. ೧೬ನೆಯ ಶತಮಾನದಲ್ಲಿ ಯಲಹಂಕದಲ್ಲಿ ಆಳುತ್ತಿದ್ದ ಮೊದಲನೆಯ ಕೆಂಪೇಗೌಡನು ಈಗಿರುವ ಹಲವಾರು ಗೋಪುರಗಳನ್ನು ಕಟ್ಟಿಸಿ ದೇವಾಲಯಗಳನ್ನು ವಿಸ್ತರಿಸಿ ಬೆಟ್ಟದಮೇಲೆ ತನ್ನ ಹೆಸರಿನ ಒಂದು ಹಜಾರವನ್ನು ನಿರ್ಮಿಸಿದ್ದಾನೆ. ಇದನ್ನು ಕೆಂಪೇಗೌಡನ ಹಜಾರ ಎನ್ನುತ್ತಾರೆ. ಹೊಯ್ಸಳರ ವಿಷ್ಣುವರ್ಧನ ಮಹಾರಾಜನ ಪಟ್ಟದ ಮಹಿಷಿಯಾದ ಶಂತಲಾದೇವಿಯು ಈ ಬೆಟ್ಟದ ಕೋಡುಗಲ್ಲಿನ ಮೇಲಿಂದ ಕೆಳಕ್ಕೆ ಬಿದ್ದು ಅಸುವನ್ನು ನೀಗಿದಳೆಂಬ ಒಂದು ಕಥೆ ಚರಿತ್ರೆಯಲ್ಲಿ ಪ್ರಸಿದ್ಧವಾಗಿದೆ.

ಹಳ್ಳಿಗರು—ಈ ಬೆಟ್ಟದಲ್ಲಿ ಇನ್ನೇನಾದರೂ ವಿಶೇಷವಾದ ಸಮಾಚಾರಗಳಿವೆಯೇ ಸ್ವಾಮಿ ?

ಶಾಸ್ತ್ರಿಗಳು—ಇನ್ನೂ ಬೇಕಾದಷ್ಟು ಸಂಗತಿಗಳಿವೆ. ಗಂಗಾಧರೇಶ್ವರ ಮತ್ತು ಹೊನ್ನಮ್ಮದೇವಿಯ ಗುಡಿಗಳು ಗುಹಾಂತರ್ಗತ ದೇವಾಲಯ

ಗಳು. ಗಂಗಾಧರೇಶ್ವರನ ಗುಡಿಯಲ್ಲಿ ಭಕ್ತ ಕೆಂಪೇಗೌಡನ ನಾಲ್ಕಡಿ ಎತ್ತರದ ಕಂಚಿನ ವಿಗ್ರಹವಿದೆ. ಇದನ್ನು ಕ್ರಿ. ಶ. ೧೫೦೮ರಲ್ಲಿ ಕೆತ್ತಿದರೆಂದು ಅದರ ಪೀಠದಡಿಯಲ್ಲಿರುವ ಶಾಸನವು ಹೇಳುತ್ತದೆ. ಬೆಟ್ಟದ ತುತ್ತುತುದಿಯಲ್ಲಿ ಎರಡು ಕಂಬಗಳಿವೆ. ಅವನ್ನು ಉರಿಗಂಬ, ತೀರ್ಥಕಂಬ ಎಂದು ಹೇಳುತ್ತಾರೆ. ಈ ದೇವಸ್ಥಾನದಲ್ಲಿ ಕೆಲವು ಗಂಟೆಗಳಿವೆ. ಅದರಲ್ಲಿ ಒಂದು ಕ್ರಿ. ಶ. ೧೫೬೭ರಲ್ಲಿ ಚಿಕ್ಕಗಿರಿಯಪ್ಪಗೌಡನ ಸೊಸೆ ಅಜಗಮ್ಮ ಕೊಟ್ಟದ್ದು. ಮತ್ತೊಂದು ೧೫೮೮ರಲ್ಲಿ ಯಲಹಂಕನಾಡ ಪ್ರಭು ಕೆಂಪೇಗೌಡನು ಕೊಟ್ಟದ್ದು. ಈ ಬೆಟ್ಟದ ದೇವಾಲಯಗಳಲ್ಲಿ ಅನೇಕ ರಾಜರಿಂದ ಕೊಡಲ್ಪಟ್ಟ ಶಿಲಾಶಾಸನಗಳಿವೆ. ಈ ಬೆಟ್ಟದಮೇಲೆ ಹತ್ತಿಹೋಗಲು ಭೈರಪ್ಪನಾಯಕನ ಮಗ ಚಿಕ್ಕಕಾಮ ನಾಯಕನು ಕೆತ್ತಿಸಿದ ಮೆಟ್ಟಲುಗಳಿವೆ. ಸುಪ್ರಸಿದ್ಧ ಶಿವಾಜಿ ಮಹಾರಾಜನ ತಂದೆ ಷಾಜಿಯು ಕಣ್ವತೀರ್ಥ ಮಂಟಪವನ್ನು ಕಟ್ಟಿಸಿದ್ದಾನೆ. ಮೈಸೂರಿನ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರು, ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು ಮಿಗಿಲಾದ ಸೇವೆಯನ್ನು ಸಲ್ಲಿಸಿದ್ದಾರೆ. ಕೋಡುಗಲ್ಲು ಬಸವನನ್ನು ಕ್ರಿ.ಶ. ೧೩೮೮ರಲ್ಲಿ ಕೆತ್ತಿಸಿದರಂತೆ. ಇದನ್ನು ಪ್ರದಕ್ಷಿಣೆ ಮಾಡಿದವರಿಗೆ ಮಕ್ಕಳಾಗುವುವೆಂದೂ ಮೋಕ್ಷಪ್ರಾಪ್ತವಾಗುವುದೆಂದೂ ಜನರುನಂಬುತ್ತಾರೆ.

ಹಳ್ಳಿಗರು—ಇಲ್ಲಿ ಆಗುವ ಜಾತ್ರೆಗಳ ಸಮಾಚಾರ ಏನುಸ್ವಾಮಿ ?

ಶಾಸ್ತ್ರಿಗಳು—ಮಕರಸಂಕ್ರಾಂತಿಯ ದಿನ ಶಿವಗಂಗೆ ಬೆಟ್ಟದಮೇಲೆ ಇರುವ ತೀರ್ಥ ಕಂಬದಲ್ಲಿ ಗಂಗಾತೀರ್ಥ ಉದ್ಭವವಾಗುತ್ತದೆ. ಅದನ್ನು ಬಹಳ ಪವಿತ್ರವೆಂದು ಜನ ಭಾವಿಸಿದ್ದಾರೆ. ಆ ಕಾಲದಲ್ಲಿ ಗಂಗಾಧರೇಶ್ವರನ ಹೆಸರಿನಲ್ಲಿ ದೊಡ್ಡಜಾತ್ರೆ ಸೇರುತ್ತದೆ. ಸುಮಾರು ೨೫ ಸಾವಿರ ರಾಸುಗಳು ಕೂಡುತ್ತವೆ. ಅನಂತರ ಕೆಲವು ದಿನಗಳ ಮೇಲೆ ಸೇರುವ ಹೊನ್ನಮ್ಮದೇವಿಯ ಜಾತ್ರೆಯು ಇದಕ್ಕಿಂತ ಸ್ವಲ್ಪ ಕಿರಿದಾಗಿರುತ್ತದೆ. ಈ ಜಾತ್ರೆಯ ಕಾಲದಲ್ಲಿ ವ್ಯಾಪಾರ ವ್ಯವಹಾರ ಬಹಳವಾಗಿ ನಡೆಯುತ್ತದೆ. ಜಾತ್ರೆಗೆ ಬಂದು ಇಳಿದುಕೊಳ್ಳಲು ಒಂದೆರಡು ಛತ್ರಗಳಿವೆ. ಜತೆಗೆ ಬಂದ ಜನರ ಯೋಗಕ್ಷೇಮವನ್ನು ಸರ್ಕಾರದವರು ಬಹಳ ಎಚ್ಚರದಿಂದ ನೋಡಿ



ಕನ್ನಡ-ಸಂಸ್ಕೃತ ಮಹಾಕವಿ
ಶ್ರೀ ಸರ್ಪಭೂಷಣ ಶಿವಯೋಗಿಗಳು
ಬೆಂಗಳೂರು

ಕೊಳ್ಳುತ್ತಾರೆ. ಪುಣ್ಯಾತ್ಮರಾದ ಕೆಲವು ಶ್ರೀಮಂತರು ಜಾತ್ರೆಗೆ ಬಂದ ಜನರಿಗೆ ದಾಸೋಹಗಳನ್ನು ನಡೆಸಿ ಊಟ ಉಪಚಾರಗಳಿಗೆ ಅನುಕೂಲ ಮಾಡಿ ಕೊಡುತ್ತಾರೆ. ಮತ್ತೆ ಕೆಲವರು ಅರವಂಟಿಕೆಗಳನ್ನು ಇಡಿಸಿ ಬಾಯಾರಿದ ಜನರಿಗೆ ನೀರನ್ನೂ ಮಜ್ಜಿಗೆಯನ್ನೂ ಒದಗಿಸುತ್ತಾರೆ.

ಹಳ್ಳಿಗರು—ಈ ತೀರ್ಥಕ್ಷೇತ್ರಗಳಿಗೆ ಹೋಗುವುದರಿಂದ ನಮಗೇನು ಪ್ರಯೋಜನ ಸ್ವಾಮಿ ?

ಶಾಸ್ತ್ರಿಗಳು—ತುಂಬಾ ಪ್ರಯೋಜನವಿದೆ. ಇಂತಹ ಕ್ಷೇತ್ರಗಳಿಗೆ ಹೋಗುವುದರಿಂದ ಮನಸ್ಸಿನ ಶಾಂತಿ ಹೆಚ್ಚುತ್ತದೆ. ಆ ಕ್ಷೇತ್ರಗಳಲ್ಲಿರುವ ಮಂತ್ರಶಕ್ತಿಯಿಂದ ಅಲ್ಲಿಗೆ ಹೋದವರ ಮನಸ್ಸಿನಲ್ಲಿ ಒಳ್ಳೆಯ ಭಾವನೆಗ ಳುಂಟಾಗುತ್ತವೆ. ಅಲ್ಲಿರುವ ತೀರ್ಥಗಳ ಸ್ನಾನಗಳಿಂದ ಮನುಷ್ಯನ ಪಾಪ ಗಳು ಪರಿಹಾರವಾಗುತ್ತವೆ. ತೀರ್ಥಕ್ಷೇತ್ರಗಳ ಸಂಚಾರ ನಿಮಿತ್ತವಾಗಿ ದೇಶಾಟನ ಮಾಡುವುದರಿಂದ ಯಾತ್ರಿಕರಿಗೆ ಹೆಚ್ಚಿನ ಲೋಕಾನುಭವ ಉಂ ಟಾಗುತ್ತದೆ. ಪರಿಷೆಗಳಿಗೆ ಹೋಗುವುದರಿಂದ ವ್ಯಾಪಾರ ವ್ಯವಹಾರಗಳಿಗೂ ಜನಗಳನ್ನು ಪರಸ್ಪರ ಪರಿಚಯ ಮಾಡಿಕೊಳ್ಳುವುದಕ್ಕೂ ಒಳ್ಳೆಯ ರಾಸು ಗಳನ್ನು ಕೊಳ್ಳುವುದಕ್ಕೂ ಹೆಚ್ಚಿನ ಅನುಕೂಲ ಒದಗುತ್ತದೆ. ಇದಕ್ಕಿಂತ ಹೆಚ್ಚು ಪ್ರಯೋಜನ ಇನ್ನೇನಾಗಬೇಕಪ್ಪ ? ನೀವೇ ಯೋಚನೆಮಾಡಿ ನೋಡಿರಿ. ಕ್ಷೇತ್ರಗಳಿಂದ ಇಹವೂ ಉಂಟು, ಪರವೂ ಉಂಟು.

ಹಳ್ಳಿಗರು—ನಿಜ ಸ್ವಾಮಿ, ತಾವು ಹೇಳೋದು ಬಹಳ ನ್ಯಾಯ ಅಂತ ಕಾಣ್ತದೆ. ಆದಕ್ಕೇ ನಮ್ಮ ಜನ, ಕಾಶಿ, ರಾಮೇಶ್ವರ, ಶ್ರೀಶೈಲ, ಗೋ ಕರ್ಣ, ಕಂಚಿ, ಕಾಳಹಸ್ತಿ, ತಿರುಪತಿ, ಪಂಡರಪುರ, ಕೇದಾರ, ಕೈಲಾಸ ಮೊದಲಾದ ಕಡೆ ಹೋಗಬೇಕೂಂತ ತವಕ ಪಡುತ್ತಾರೆ.

ಶಾಸ್ತ್ರಿಗಳು—ಹೌದಪ್ಪ, ಹಿಂದೂಜನರಲ್ಲಿ ಮಾತ್ರವಲ್ಲ. ಕ್ರೈಸ್ತರು, ಮುಸಲ್ಮಾನರು ಮೊದಲಾದ ಇತರ ಮತೀಯರಲ್ಲೂ ಈ ಭಾವನೆಯಿದೆ.

# ಸಂಗೀತ ಮತ್ತು ಸಾಹಿತ್ಯ

"ಸಂಗೀತಮಪಿ ಸಾಹಿತ್ಯಂ ಸರಸ್ವತ್ಯಾಃ ಸ್ತನದ್ವಯಂ ।
ಏಕಮಾಪಾತ ಮಧುರಂ ಅನ್ಯದಾಲೋಚನಾಮೃತಂ ॥

—ಸಂಗೀತ ರತ್ನಾಕರಂ

ಎಂದು ಹಾಡಿದ ರಸಿಕಶಿಖಾಮಣಿಯಾದ ಕವಿ ಶಾರ್ಙ್ಗದೇವನು ಒಂದನ್ನು ಬಿಟ್ಟು ಒಂದಿರಲಾರದೆಂಬ ಅವುಗಳ ಅವಿನಾಭಾವವನ್ನು ಕುರಿತು ಸೂಚಿಸಿದನು. ಆದರೆ ಆತನ ಉತ್ಸಾಹಭರದಲ್ಲಿ ಮತ್ತು ವೈಶಿಷ್ಟ್ಯ ಸೂಚನೆಯ ಸಡಗರದಲ್ಲಿ ಶಬ್ದಗಳಿಗೆ ಕೊಡಬೇಕಾದ ರೂಪವನ್ನು ಮರೆತನೋ ಎನಿಸುತ್ತದೆ. ಇವೆರಡರಲ್ಲಿ ಸ್ವತಂತ್ರವಾಗಿ ಒಂದಿರುವುದಂತು ಅಶಕ್ಯ, ಅಸಂಭವ, ಹಾಗದ್ದರೆ ಆದು ಕಲಾಶರೀರದಲ್ಲಿ ವಿಕಾರವೇ ಎನಿಸೀತು. ಒಂದು ಮಾತ್ರ ಆಪಾತಮಧುರವೆಂತಲೂ ಮತ್ತೊಂದು ಆಲೋಚನಾಮೃತವೆಂತಲೂ ನುಡಿಯುವುದು ಅರ್ಧಸತ್ಯವೋ, ಸತ್ಯದಿಂದ ದೂರವೋ ಆಗುತ್ತದೆ. ಒಂದನ್ನು ಬಿಟ್ಟು ಒಂದಿರುವುದು ಅಸಂಭವವಾದ ಈ ಕಲಾಧಿದೇವಿಯ ಉನ್ನತವೂ ಉತ್ತುಂಗವೂ ಆದ ಸ್ತನದ್ವಂದವು ರಸಿಕಶಿಶುವನ್ನು ತನ್ನ ಅಮೃತ ಸ್ತನ್ಯದಿಂದ ಪೋಷಿಸಿ ರಸಪುಷ್ಟನನ್ನಾಗಿಸುವುದೆಂದು ಆತನ ಅಭಿಪ್ರಾಯವಿರಬೇಕು. ತಾಯಿಯ ಎರಡುಎದೆಯಲ್ಲಿಯೂ ಹಾಲುಕುಡಿಯುವ ಮಗುವಿಗೆ ಉಭಯಸ್ತನಗಳೂ ಸಮಾನವಾದ ತೃಪ್ತಿಯನ್ನು ಉಂಟುಮಾಡುವುವಷ್ಟೆ.

ಸಂಗೀತ ಶಬ್ದಾರ್ಥವನ್ನು ವಿವರಿಸಲಿಕ್ಕೆ ಸಾಹಿತ್ಯದ ಸಾಹಚರ್ಯವು ಅಗತ್ಯ. 'ಸಮ್ಯಕ್ ಗೀತಂ ಸಂಗೀತಂ' ಚೆನ್ನಾಗಿ ಹಾಡಲ್ಪಟ್ಟದು, ಹಾಡತಕ್ಕದು ಎಂದು ಮುಂತಾಗಿ ಇದರ ಅರ್ಥ ವಿವರಣೆ ಮಾಡುವುದಾದರೂ ಏನನ್ನು ? ಭಾಷೆ ಹುಟ್ಟಿದುದೇ ಭಾವದ ವಿನಿಮಯಕ್ಕಾಗಿ. ಸುಖ ದುಃಖ,

ಕಾವು ನೋವು, ಆಶ್ಚರ್ಯ ಆನಂದ, ಮುಂತಾದ ಹೃದಯದ ಭಾವಗಳಿಗೆ ಕವಚವಾಗಿರುವುದೂ ರಥವಾಗಿರುವುದೂ ಮನಸ್ಸಿನ ಅಭಿಪ್ರಾಯಗಳನ್ನು ಹೊರಗೆಡಹಿ ತಿಳುಹಬಲ್ಲುದೂ ಭಾಷೆ. ಈ ಕ್ರಮದಲ್ಲಿಯೇ ಅಂತರಂಗದ ಭಾವತರಂಗಗಳನ್ನು ಇತರರಿಗೆ ಹೃದಯಂಗಮವಾಗುವಂತೆ ಅವರ ಮನೋ ವೇದಿಕೆಯ ತಲಸ್ಪರ್ಶವಾಗುವಂತೆ ಮಾಡತಕ್ಕುದು ಸಂಗೀತ. ಸ್ವಲ್ಪ ಚೆನ್ನಾಗಿ ವಿವರಿಸಿ ನುಡಿಯುವುದಾದರೆ ಅನ್ಯರ ಮನಸ್ಸನ್ನು ಮುಟ್ಟಿ ಅವರ ಸಹೃದಯತೆಯನ್ನು ಉದ್ಬೋಧಿಸಲು ತಕ್ಕಷ್ಟು ವೇಗ ಸಾಲದೆ ಸ್ತಬ್ಧವಾದ ಸಾಹಿತ್ಯವು ಸಂಗೀತಶಕ್ತಿಯಿಂದ ಪ್ರಚಲಿತವಾಗಿ, ವೇಗಹೊಂದಿ, ಸಶಕ್ತ ವಾಗಿ, ಜಡವಾದ ಹೃದಯವನ್ನೂ ಮುಟ್ಟಿ ಎಚ್ಚರಿಸಿ, ಅಭಿಮುಖತೆಯ ನ್ನುಂಟುಮಾಡಿ, ನೆನಸಿ ಆರ್ದ್ರವಾಗುವಂತೆ, ರಸಮಯವೆನಿಸುವಂತೆ, ಮಾಡುತ್ತದೆ. ಭಾವವು ಉದ್ರಿಕ್ತವಾದಾಗ ಭಾಷೆ ಸಂಗೀತವಾಗುತ್ತದೆ. "ಶ್ಲೋಕಃ ಶೋಕತ್ವ ಮಾಗತಃ" ತಾನೆ. ಆದಿ ಕವಿ ವಾಲ್ಮೀಕಿಯ ದುಃಖೋದ್ರೇಕವು ಭಾಷೆಗೆ ಛಂದಸ್ಸನ್ನು ಒದಗಿಸಿತು. ಸಾಹಿತ್ಯ, ಗೀತ ರೂಪವಾಗಿ ಹೊರಟಿತು. ಇದು ಜಗತ್ಪ್ರಸಿದ್ಧವಾದ ವಿಷಯ. ಈಶ್ವರನ ಡಮರುಗಧ್ವನಿಯಿಂದ ವ್ಯಾಕರಣಸೂತ್ರಗಳು ಹೊರಹೊಮ್ಮಿದುವೆಂಬ ಚೋದ್ಯವನ್ನು ಇಲ್ಲಿ ಸ್ಮರಿಸಬಹುದಾಗಿದೆ. ಪಾಣಿನಿಯನ್ನು ಅರಿತವರಿಗೆ ಇದು ಅನುಭವಗಮ್ಯವಾಗಿದೆ.

ಈ ಸಂದರ್ಭದಲ್ಲಿ ಸಾಹಿತ್ಯದಲ್ಲಿ ಛಂದಸ್ಸಿನ ಸ್ಥಾನವೇನೆಂಬುದನ್ನು ಸ್ವಲ್ಪ ಯೋಚಿಸಿದರೆ ಪ್ರಯೋಜನವುಂಟು. ಹೇಳಬೇಕಾದುದನ್ನು ಮನ ಮುಟ್ಟುವಂತೆ ಹೇಳಲಾಗುವುದು ಛಂದಸ್ಸಿನ ನೆರವಿನಿಂದ. ಛಂದಸ್ಸು ಸಂಗೀ ತದ ಒಂದು ಅಂಗ. ಸುಪ್ತವಾದ ಜಡಚೇತಸ್ಸೂ ಛಂದೋಮಯವಾದ ವಾಣಿಯಿಂದ ಉದ್ಬುದ್ಧವಾಗಿ ಜಾಗೃತಿಗೊಂಡು ಹೊಂದಬೇಕಾದ ಅನುಭವ ವನ್ನು ಹೊಂದುತ್ತದೆ. ಸಾಹಿತ್ಯಕ್ಕೆ ಛಂದಸ್ಸಿನ ಜೋಡಣೆ ರಸತರಂಗದಸ್ತ ರಕ್ಕೆ ಅನುಸಾರವಾಗಿ ಮನೋಯಂತ್ರವನ್ನು ತಿರುಗಿಸಿದಂತೆ ರೇಡಿಯೋ ಯಂತ್ರವನ್ನು ತಿರುಗಿಸಿ ಧ್ವನಿತರಂಗಕ್ಕೆ (Wave length) ಅನುಗುಣ ನಾಗಿಟ್ಟು ಸಿದ್ಧಗೊಳಿಸಿದಂತೆ ಇದರಿಂದ ಉದ್ದೇಶವು ನೆರವೇರುತ್ತದೆ.

ಹಿಂದೆ ಸೂಚಿಸಿದಂತೆ ಸಂಗೀತ ಎಂದರೆ ಹಾಡಲ್ಪಟ್ಟುದು, ಹಾಡಲ್ಪಡಬಹುದಾದುದು. ಹಾಡುವುದೆಂದರೆ ಮನಸ್ಸಿನ ಭಾವಕ್ಕೆ ಒಂದು ವಿಶಿಷ್ಟವಾದ ರೀತಿಯಲ್ಲಿ ರೂಪುಕೊಡುವುದೆಂದರ್ಥ. ಹಾಗೆ ವಿಶಿಷ್ಟವಾದ ಒಂದು ರೂಪವನ್ನು ಕೊಡುವ ಉದ್ದೇಶ ಒಬ್ಬರ ಭಾವ ಮತ್ತೊಬ್ಬರದಾಗುವಂತೆ, ಒಬ್ಬರ ಅನುಭವ ಮತ್ತೊಬ್ಬರದೆನಿಸುವಂತೆ ಮಾಡುವುದು. ಈಶ್ವರನ ಅತ್ಯದ್ಭುತ ಸೃಷ್ಟಿಯಿಂದ ಮಿದುಳಿನ ಯಂತ್ರವನ್ನು ವಿಕ್ರಿಯೆಗೆ ಸಿದ್ಧಗೊಳಿಸಿ ಸದೃಶವೂ ಅನುರೂಪವೂ ಆದ ಧ್ವನಿತರಂಗಗಳ ಪ್ರತಿಗ್ರಹಕ್ಕೆ ಅವಕಾಶವನ್ನು ಮಾಡಿ ಭಿನ್ನಹೃದಯಗಳಿಗೆ ಸೇತುವೆಯನ್ನು ಕಲ್ಪಿಸುವುದು, ಅವುಗಳನ್ನು ಒಡಗೂಡಿಸುವುದು ಬೆಸೆಯುವುದು ಸಂಗೀತ. ಸಾಹಿತ್ಯದಲ್ಲಿ ನವರಸಗಳಿವೆ. ಸಂಗೀತದಲ್ಲಿ ವಿವಿಧರಾಗಗಳಿವೆ. ಸಪ್ತಸ್ವರಗಳ ವಿವಿಧಕ್ರಮದ ಸಮ್ಮೇಳನವು ರಾಗ ವಿಶೇಷಗಳಿಗೆ ಆಧಾರ. ಸಂಗೀತದ ಒಂದೊಂದು ರಾಗ ಸಾಹಿತ್ಯದ ಒಂದೊಂದು ವಿಶಿಷ್ಟರಸಕ್ಕೆ ಹೊಂದತಕ್ಕುದೆಂಬ ವಿಷಯ ಪ್ರಸಿದ್ಧ. ಸಾಹಿತ್ಯ ಸಂಗೀತಗಳ ಯುಕ್ತವಾದ ಸಮ್ಮೇಳನದಿಂದ ಬ್ರಹ್ಮಾನಂದ ಸದೃಶವಾದ ಕಾವ್ಯಾನಂದವು ಅಮೋಘವಾದ ಕ್ರಮದಲ್ಲಿ ರಾಶಿರಾಶಿಯಾಗಿ ಸಹೃದಯರಿಗೆ ಒದಗಿ ಕಲೆಯ ಉದ್ದೇಶವು ಸಾರ್ಥಕವೆನಿಸುತ್ತದೆ.

ವಿಶ್ವದ ಪ್ರಪ್ರಥಮ ಸಾಹಿತ್ಯವಾದ ವೇದಗಳಲ್ಲಿ ಋಗ್ವೇದವು ಬಹುಪಟ್ಟಿಗೆ ಛಂದೋಬದ್ಧವಾಗಿದೆ. ಸಾಮವೇದವಂತೂ ಸಂಗೀತಕ್ಕೆ ಮಾತೃಕೆಯೇ ಎನಿಸಿದೆ. ಭಾರತೀದೇವಿಯು ಮೊಟ್ಟಮೊದಲು ಪಾದವಿನ್ಯಾಸಮಾಡಿದ ವಾಲ್ಮೀಕಿಯ ಜಿಹ್ವೆ ಲೋಕದ ಮೊಟ್ಟಮೊದಲ ಕಾವ್ಯವಾದ ರಾಮಾಯಣವನ್ನು ಹಾಡಿತು. ತಂತ್ರೀಲಯಸಮನ್ವಿತವಾಗಿ ಮೃದುಮಧುರ ಲಲಿತ ಗಂಭೀರವಾಗಿ ಕುಶಲವರು ರಾಜಾಸ್ಥಾನದಲ್ಲಿ ತಾನ ವಿಶೇಷಗಳನ್ನು ಜೋಡಿಸಿ ಆದಿಕಾವ್ಯವನ್ನು ಹಾಡಿ ಕೇಳಿದವರ ಮನಸ್ಸನ್ನು ರಸಸಮುದ್ರದಲ್ಲಿ ಮುಳುಗಿಸಿದರು. ಭರತಭೂಮಿಯ ಎರಡನೆಯ 'ಇತಿಹಾಸ'ವಾದ ಭಾರತವೂ ಛಂದೋಮಯವಾಗಿ ಹಾಡಲನುಕೂಲವಾಗಿಯೇ ಋಷಿಕವಿ ವ್ಯಾಸರಿಂದ ರಚಿಸಲ್ಪಟ್ಟಿತು. ಸಾಹಿತ್ಯ ಕಲಾದೇವಿ ಛಂದಸ್ಸಿನ ಮನೋಹರವಾದ ಉಡಿಗೆ ತೊಡಿಗೆಗಳಿಂದ ಅಲಂಕೃತಳಾಗಿ ಸಹೃದಯರ ಮನಸ್ಸನ್ನು ಸೂರೆಗೊ

ಳ್ಳುವ ಕ್ರಮ ಹೀಗಾಯಿತು. ಪಾಶ್ಚಾತ್ಯ ಮಹಾಕಾವ್ಯಗಳಾದ ಮಿಲ್ಟನ್ನಿನ ಪ್ಯಾರಡೈಸ್ ಲಾಸ್ಟ್, ಹೋಮರನ ಓಡಿಸ್ಸಿ ಮತ್ತು ಇಲಿಯಡ್ ಮುಂತಾದುವೂ ಛಂದೋಬದ್ಧವಾದ ಉದ್ದೇಶ, ಕಾರಣ ಕವಿ ಸಹೃದಯರ ಮನೋಯಂತ್ರಗಳನ್ನು ಸಜ್ಜುಗೊಳಿಸಿ ಅವೆರಡಕ್ಕೆ ಸೇತುವೆಯನ್ನೂ, ಸಂಬಂಧವನ್ನೂ ನೆಟ್ಟಗೆಮಾಡಿ ಎರಡೂ ಸಮಾನವಾದ ಕಾವ್ಯಾನಂದದಲ್ಲಿ ಮುಳುಗುವಂತೆ ಮಾಡುವುದು.

ಸಂಗೀತದ ಉದ್ದೇಶ ಮತ್ತು ವ್ಯಾಪಾರ ತೊರೆದುಹೋದ ಬ್ರಹ್ಮಸಂಸ್ಪರ್ಶವನ್ನು ಜೀವಚ್ಛೈತನ್ಯಕ್ಕೆ ಮತ್ತೆ ಉಂಟುಮಾಡುವುದು. ನಿಜವಾದ ಸಾಹಿತ್ಯದ ಮುಖ್ಯವಾದ ಗುರಿಯೂ ಇದೇ ಆಗಬೇಕು. ಅದು ಸ್ವತಃ ಈ ಕಾರ್ಯಕ್ಕೆ ಅಸಮರ್ಥವಾದ ಸಂಗೀತದ ನೆರವು ಬಹಳ ಪ್ರಮುಖವಾಗುತ್ತದೆ. 'ಶಿಶುರ್ವೇತ್ತಿ ಪಶುರ್ವೇತ್ತಿವೇತ್ತಿಗಾನರಸಂ ಫಣೀ' ಎಂಬ ಮಾತಿನ ತಿರುಳು ಇದು. ಜಡನಲ್ಲಿಯೂ ಚೈತನ್ಯೋದ್ಭವವನ್ನುಂಟುಮಾಡಿ ಸಹೃದಯತೆಯನ್ನುಂಟುಮಾಡಬಲ್ಲುದು ಸಂಗೀತ. ಇದರಿಂದ ಸಾಹಿತ್ಯ ಉಪಕೃತವಾಗುತ್ತದೆ. ಸಂಗೀತ ಸಾಹಿತ್ಯಗಳ ಮೇಳ, ಹಾಲು ಸಕ್ಕರೆ ಸೇರಿದಂತೆ ಬೆಳುದಿಂಗಳು ವಸಂತ ಕೂಡಿದಂತೆ, ಐಶ್ವರ್ಯ ಔದಾರ್ಯ ಬೆರೆತಂತೆ ಮನಮೋಹಕವಾದುದು.

ಸಂಗೀತದಲ್ಲಿ ವಿವಿಧಕ್ರಮದ ಗಮಕಗಳೂ (ಸ್ವರವಿನ್ಯಾಸಗಳೂ) ಆಲಾಪನಾ ವೈಖರಿಗಳೂ ಏತಕ್ಕಾಗಿ ? ಒಂದೊಂದು ಕ್ರಮದಲ್ಲಿ ಒಂದೊಂದು ಭಾವ ವಿಶೇಷ ಅಲ್ಲಿ ದ್ಯೋತನ ಹೊಂದುತ್ತದೆ. ಸಾಹಿತ್ಯದಲ್ಲಿ ಧ್ವನಿಯಿಂದ ನಡೆಯುವ ಕೆಲಸ ಸಂಗೀತದಲ್ಲಿ ಆಲಾಪನೆಯ ಮೂಲಕ ಕೃತಕೃತ್ಯವಾಗುತ್ತದೆ. ಸಾಹಿತ್ಯದ ರಸಮಯವಾದ ಒಂದು ವಾಕ್ಯದಲ್ಲಿ ಎಷ್ಟು ಭಾವಗಳು ತುಂಬಿರಬಲ್ಲುವೆಂಬುದನ್ನೂ ಸ್ಪಷ್ಟಪಡಿಸಬೇಕಾದರೆ ಸಂಗೀತವು ಅವಶ್ಯವಾಗಿ ಬೇಕಾದೀತು, ಸಮರ್ಥವಾದೀತು. ನಿಪುಣನಾದ ಗಾಯಕನ ಗಾನ ವೈಖರಿಯಿಂದಲೇ ಕವಿಯ ಶಬ್ದಶಕ್ತಿಯ ವೈಶಿಷ್ಟ್ಯವು ಸ್ಫುರಿಸಿ ಶ್ರಾವಕರಿಗೆ ಆನಂದಾನುಭವವು ಉಚ್ಚಮಟ್ಟದಲ್ಲಿ ಆಗಬಲ್ಲುದು. ಹಾಗೆಯೇ ಸಂಗೀತದ ಆಲಾಪನಾ ವಿಶೇಷಗಳ ಅರ್ಥವೇನೆಂದು ಕೇಳಿದರೆ ಅದನ್ನು ವಿವರಿಸಲು

ವಿಸ್ತಾರವಾದ ಸಾಹಿತ್ಯವೇ ಬೇಕಾದೀತು. ಒಂದು ಮನಸ್ಸನ್ನು ಮತ್ತೊಂದು ಮನಸ್ಸಿಗೆ ತೆರೆಯುವುದು ಸಾಹಿತ್ಯ. ಒಂದು ಹೃದಯವನ್ನು ಮತ್ತೊಂದು ಹೃದಯಕ್ಕೆ ಶ್ರುತಿಗೊಳಿಸುವುದು ಸಂಗೀತ. ಒಂದು ಮತ್ತೊಂದರಿಂದ ಆಲೋಚನಾಮೃತವಾಗುತ್ತದೆ. ಮತ್ತೊಂದರಂತೆಯೇ ಆಪಾತ ಮಧುರವೂ ಅಹುದು. ಇದರಿಂದ ಬಹುಶಃ ಆ ಶ್ಲೋಕ ಹೀಗಿಗಿದ್ದಿರೆ ವಾಸಿಯೆಂದು ನಮ್ಮ ಎಣಿಕೆ.

ಸಂಗೀತ ಮಪಿ ಸಾಹಿತ್ಯಂ ಸರಸ್ವತ್ಯಾಃಸ್ತನದ್ವಯಂ ||
ಆಪಾತ ಮಧುರೇಚೋಭೇ ತಥೈವಾಲೋಚನಾಮೃತೇ ||

'ಗೀತ' ಅಂದರೆ ಹಾಡುವುದು ಎಂದೂ 'ಸಂಗೀತ' ಎಂದರೆ ವೀಣೆ, ಪಿಟೀಲು, ಮೃದಂಗ ಮೊದಲಾದ ಸಂಗೀತ ವಾದ್ಯಗಳೊಡನೆ ಹಾಡುವುದೆಂದೂ ಶಾಸ್ತ್ರಜ್ಞರ ಮತ. ನಾಟ್ಯಶಾಸ್ತ್ರ, ಸಂಗೀತ ರತ್ನಾಕರ, ಚತುರ್ದಂಡಿ ಪ್ರಕಾಶಿಕಾ ಮೊದಲಾದ ಸಂಸ್ಕೃತ ಗ್ರಂಥಗಳಲ್ಲಿ ಸಂಗೀತ ಶಾಸ್ತ್ರದ ವಿಷಯನ್ನು ಕೂಲಂಕುಶವಾಗಿ ನಿರೂಪಿಸಲಾಗಿದೆ. ಕರ್ಣಾಟಕದಲ್ಲಿ ೧೨ನೆಯ ಶತಕದಲ್ಲಿಯೇ ಕಲ್ಯಾಣದ ಅನುಭವ ಮಂಟಪದಲ್ಲಿಯೇ ವಚನ ರಚನೆಯ ಜತೆಜತೆಯಲ್ಲಿಯೇ ಹಾಡುಗಳ ರಚನೆಯು ಪ್ರಾರಂಭವಾಗಿದೆ. ಶ್ರೀ ನಿಜಗುಣರು, ಶ್ರೀ ಕನಕದಾಸರು, ಶ್ರೀ ಪುರಂದರದಾಸರು, ಶ್ರೀ ಸರ್ಪಭೂಷಣರು ಮೊದಲಾದ ಕನ್ನಡ ಕವಿಗಳು ಉತ್ತಮವಾದ ಕೃತಿಗಳನ್ನು ರಚಿಸಿ ಕನ್ನಡವನ್ನು ಕಳೆಗೊಳಿಸಿದ್ದಾರೆ. ಈ ವರಕವಿಗಳ ಹಾಡುಗಬ್ಬಗಳು ಕೇವಲ ಗಾನಾನಂದವನ್ನೇ ಅಲ್ಲದೆ ಜ್ಞಾನಾನಂದವನ್ನೂ ಉಂಟುಮಾಡಲು ಸಮರ್ಥವೆನಿಸಿವೆ. ದಕ್ಷಿಣಭಾರತದ ತ್ಯಾಗರಾಜರು, ಶ್ಯಾಮಾಶಾಸ್ತ್ರಿಗಳು, ದೀಕ್ಷಿತರು ಪ್ರಸಿದ್ಧ ವಾಗ್ಗೇಯಕಾರರಾಗಿದ್ದಾರೆ. ಚಾಲುಕ್ಯ, ಹೊಯ್ಸಳ, ಯಾದವ, ವಿಜಯನಗರ, ಮೈಸೂರು, ಕೆಳದಿ ರಾಜಮನೆತನದವರು ಸಂಗೀತ ಸಾಹಿತ್ಯಗಳೆರಡರ ಅಭಿವೃದ್ಧಿಗೂ ಉದಾರವಾಗಿ ಆಶ್ರಯವಿತ್ತಿದ್ದಾರೆ. ಸಂಗೀತವು ಜನತೆಗೆ ಆನಂದವನ್ನೂ ಉತ್ಸಾಹವನ್ನೂ ಉಂಟುಮಾಡಲು ಸಮರ್ಥವೆನಿಸಿದೆ.

ನಮ್ಮ ರಾಷ್ಟ್ರದಲ್ಲಿ ದೇವಾಲಯ, ಆಶ್ರಮ, ವಿದ್ಯಾಲಯ, ರಾಜಸಭೆ, ವಿದ್ವತ್ಸಭೆ, ಹಬ್ಬ, ಹುಣ್ಣಿಮೆ ಇತ್ಯಾದಿಗಳೆಲ್ಲದರಲ್ಲಿಯೂ ಸಂಗೀತಕ್ಕೆ ಪ್ರಥಮ ಸ್ಥಳವಿದೆ. ಸಾಹಿತ್ಯದ ಗುಟ್ಟುಗುರಿಗಳು ಜನಸಾಮಾನ್ಯರ ಹೃದಯಕ್ಕೆ ತಾಕಲು ಸಂಗೀತದ ನೆರವು ಬೇಕು. ಒಂದು ಪುಸ್ತಕದಿಂದ ಆಗುವ ಲಾಭವನ್ನು ಸಂತರ ಒಂದು ಕೃತಿಯನ್ನು ಕೇಳುವುದರಿಂದ ಪಡೆಯಬಹುದು. ಅದರಿಂದಲೇ ಕನ್ನಡದಲ್ಲಿ ಹಾಡುಗಬ್ಬಗಳನ್ನು ನಮ್ಮ ಶರಣರೂ ದಾಸರೂ ರಚಿಸಿದ್ದಾರೆ. ಆ ಭಕ್ತಿಸಾಹಿತ್ಯದ ಲಾಭವನ್ನು ಜನ ಮಾಡಿಕೊಳ್ಳಬೇಕು. ಹಿಂದೂಧರ್ಮದಲ್ಲಿ ಪೂಜ್ಯ ದೇವತೆಗಳೆನಿಸಿರುವ ಶಿವನು ತಾಂಡವ ನೃತ್ಯ ಪ್ರೇಮಿ, ಶ್ರೀ ಕೃಷ್ಣದು ವೇಣುಗಾನಾನಂದಲೋಲ, ಸರಸ್ವತಿ ವೀಣಾಪಾಣಿ, ನಂದಿ ಮೃದಂಗ ವಿಶಾರದ, ಭೃಂಗಿ ನೃತ್ಯ ಕಲಾಕೋವಿದ ಎಂದು ಮೊದಲಾಗಿ ಚಿತ್ರಿಸಲಾಗಿದೆ. ಇದರ ತಾತ್ಪರ್ಯವನ್ನು ಜನ ತಿಳಿಯಬೇಕು. ಕಲೆಯ ದೈವತ್ವವನ್ನು ಅರಿಯಬೇಕು.

ಹಿಂದಿನ ರಾಜಮಹಾರಾಜರು ಸಂಗೀತ ಸಾಹಿತ್ಯಕ್ಕೆ ಇತ್ತ ಪ್ರೋತ್ಸಾಹವನ್ನು ಇಂದು ರಾಷ್ಟ್ರದ ಹಾಗೂ ರಾಜ್ಯದ ಸಂಗೀತ ಮತ್ತು ಸಾಹಿತ್ಯ ಅಕ್ಯಾಡಮಿಗಳು, ಸಾಹಿತ್ಯ ಪರಿಷತ್ತುಗಳು ನೀಡುತ್ತಿರುವುದು ಸಮಾಧಾನದ ಸಂಗತಿ.

ಮಾನವತೆಯ ಉನ್ನತಿಯಾಗಬೇಕಾದರೆ, ಜನಜೀವನದಲ್ಲಿ ಸಂಗೀತ-ಸಾಹಿತ್ಯಗಳ ಸಮರಸವಾಗಬೇಕು. ಸಾಹಿತ್ಯದ ಜ್ಞಾನ, ಸಂಗೀತದ ಆನಂದ ಇವುಗಳು ಒಟ್ಟುಕೂಡಿದರೆ ಜೀವನು ದೇವನಾಗಲು ಸಾಧ್ಯವಾಗುತ್ತದೆ. ವಿಶ್ವಕವಿ ರವೀಂದ್ರರು ಸಂಗೀತ–ಸಾಹಿತ್ಯಗಳ ಸಮರಸರೆನಿಸಿದ್ದರೆಂಬುದನ್ನು ನಾವಿಲ್ಲಿ ಸ್ಮರಿಸಿಕೊಳ್ಳಬಹುದು. ಜೀವನವು ರಸಮಯವಾಗಲು ಸಂಗೀತ–ಸಾಹಿತ್ಯಗಳೆರಡೂ ಅಗತ್ಯ. ಆದುದರಿಂದಲೇ ಕನ್ನಡ ನಾಡಿನ ಶರಣರು, ದಾಸರು ಓದುಗಬ್ಬಗಳ ಜತೆಗೆ ಹಾಡುಗಬ್ಬಗಳನ್ನೂ ರಚಿಸಿದುದು.

———

## ರಾಜ್ಯ, ಪ್ರಜಾಹಿತ ರಕ್ಷಣೆ, ಶಾಂತಿಪಾಲನೆ

ಸಾಮ್ರಾಜ್ಯ, ಸಮ್ರಾಜ ಮುಂತಾದ ಶಬ್ದಗಳು ಮನಸ್ಸಿಗೆ ಹಿತವಾದ, ಒಂದು ವಿಧವಾದ ಸೌಖ್ಯದ ಭಾವನೆಯನ್ನು ತರುತ್ತವೆ. ಇದಕ್ಕೆ ಕಾರಣ ರಾಜ್ಯಸ್ಥಾಪನೆಯೇ ಪ್ರಜೆಗಳ ಹಿತಕ್ಕಾಗಿ ಆಗಿ ಬಂದುದರಿಂದ. 'ರಾಜ' ಎಂಬ ಮೂಲ ಶಬ್ದವೇ 'ರಂಜಯತಿ ಇತಿ ರಾಜಾ' ಎಂಬ ವ್ಯುತ್ಪತ್ತಿಯಿಂದ. ಪ್ರಜೆಗಳ ನೆಮ್ಮದಿಯನ್ನು ಎಲ್ಲ ವಿಧದಲ್ಲಿಯೂ ಕಾಪಾಡುವ ಗುರಿಯಿಂದಲೇ ರಾಜತ್ವದ ಏರ್ಪಾಡಾಯಿತು. ವೇದಗಳ ಕಾಲದಿಂದಲೂ ಭರತಭೂಮಿಯಲ್ಲಿ ಜನತೆಯ ಹಿತಸಂರಕ್ಷಣೆ, ರಾಜ್ಯಪಾಲನೆಯ ಧ್ಯೇಯ ಮತ್ತು ಅರ್ಥವಾಗಿದ್ದಿತು. ವರ್ಣವ್ಯವಸ್ಥೆ, ಸ್ವಭಾವವನ್ನು ಅನುಸರಿಸಿ ಉದ್ಯೋಗ ಕಲ್ಪನೆ........ಮುಂತಾದುವೆಲ್ಲವೂ ಈ ಉದ್ದೇಶ ಸಾಧನೆಗಾಗಿ. ದೇಶದಲ್ಲಿ ವರ್ಚಸ್ವಿಗಳಾದ ದ್ವಿಜರು, ಶೂರರಾದ ರಾಜನ್ಯರು, ಕೊಡಹಾಲ್ಗರೆವ ಹಸುಗಳು, ವೇಗಶಾಲಿಗಳಾದ ಅಶ್ವಗಳು........ಇಂತಹ ಸಂಪತ್ತು ಹಲವು ಹುಟ್ಟಿ ಬಳೆಯಲೆಂದು ಮುಂತಾಗಿ ಆಶಿಸುವ ವೇದಗಳ ಹಾರೈಕೆ ಪ್ರಜೆಗಳ ಶಾಂತಿ ಸೌಖ್ಯಕ್ಕಾಗಿ; ಸುಖಸಾಧಕವಾದ ರಾಜ್ಯಶಾಸನ ಚಿಂತನೆಗಾಗಿ ವರ್ಚಸ್ವಿಗಳಾಗಿ ಮೇಧಾವಿಗಳು,ಚಿಂತಿತವಾದ ಮತ್ತು ರೂಪಿತವಾದ ಶಾಸನವ್ಯವಸ್ಥೆಯ ಪಾಲನೆಗಾಗಿ ಶೂರರಾದ ತೇಜೋವಂತರು, ದೇಶದ ಅಭ್ಯುದಯಕ್ಕೆ ಸಾಧಕವಾದ ಸಾಮಗ್ರಿಗಳ ಸಂಗ್ರಹಕ್ಕಾಗಿ ಸಮರ್ಥರಾದ ಸ್ಥಿತಿಶೀಲರು, ಅವರಿಗೆ ಅವಶ್ಯವಾದ ನೆರವನ್ನು ಒದಗಿಸಿ ಕೊಡಲು ಟೊಂಕಕಟ್ಟಿ ನಿಲ್ಲಬಲ್ಲ ಗಟ್ಟಿಗರು ಅವಶ್ಯವೆಂಬ ವಿಷಯದ ದೃಷ್ಟಿ ಆಗ ಇತ್ತೆಂದು ಇದರಿಂದ ಮನದಟ್ಟಾಗುತ್ತದೆ....ಸಮಾಜವೂ ಸಮಾಜದ ಹಿತಕ್ಕೆ ವಿರೋಧವಾಗಿ ನಡೆಯುವ ಸ್ವಭಾವದ ವ್ಯಕ್ತಿಗಳೂ ಈಗ ಮಾತ್ರ ಹುಟ್ಟಿ ಬಂದವರಲ್ಲ, ಅನಾದಿ ಕಾಲದಿಂದಲೂ ಇರುತ್ತಲೇ ಇದ್ದಾರೆ. 'ಪ್ರಪಂಚ' ಎಂದೊಡನೆ ವೈವಿಧ್ಯ, ಏರುಪೇರುಗಳುಳ್ಳ ಸನ್ನಿವೇಶದಲ್ಲಿ ಬಳಸಿಕೊಂಡು ಬಂದ ವಾಸನೆಗನುಸಾರವಾಗಿ, ಸ್ವಾರ್ಥದೃಷ್ಟಿಯೇ ಕೇಂದ್ರವಾಗಿ ಇತರರ ಹಿತಕ್ಕೆ ಧಕ್ಕೆ ತರುವ ರೀತಿಯಲ್ಲಿ ವ್ಯವ

ಹರಿಸತಕ್ಕ ವ್ಯಕ್ತಿಗಳೂ ಅವರನ್ನು ಅಡಗಿಸಿ ಸಮಾಜದ-ದೇಶದ ಹಿತವನು ಸಾಧಿಸಬೇಕಾದ ಆವಶ್ಯಕತೆ ಮೊದಲಿನಿಂದಲೂ ಇದ್ದೇ ಇದೆ. ಮಧುಕೈಟಭಾದಿ ರಾಕ್ಷಸರ, ತಾರಕಾಸುರನೇ ಮೊದಲಾದ ದನುಜರ ಮತ್ತು ಅವರ ಪರಿವಾರದವರ ಹೆಸರು ಬಂದೊಡನೆ ಎಂತೆಂಥವರು ಇದ್ದಿರಬಹುದೆಂದು ಊಹಿಸಿಕೊಳ್ಳಬಹುದು. 'ದಸ್ಯು' ಎಂಬ ಹೆಸರಂತೂ ಬಹಳ ಪ್ರಾಚೀನದ್ದು. ರಾಷ್ಟ್ರದಲ್ಲಿ ಸಾಧಾರಣವಾಗಿದ್ದಿರಬಹುದಾದ ಸಮಾಜಹಿತ ಘಾತುಕರನ್ನು ಅವರು ಅಲ್ಪರಾಗಿದ್ದರೆ (ಅವರ ಸಂಖ್ಯೆ ಅಲ್ಪವಾಗಿದ್ದರೆ) ರಾಜ್ಯದಲ್ಲಿಯೇ ಅಡಗಿಸುವ ಏರ್ಪಾಡು ಸಮಾಜದ ಪ್ರಮುಖನಿಗೆ ಸೇರಿದುದಾಗಿದ್ದಿತು. ಹಾಗೆಯೇ ಪ್ರಮುಖರಾದ ಪ್ರಬಲರಾದ ಹೊರಗಿನ ಶತ್ರುಗಳನ್ನು ನಿವಾರಿಸಲು ಸೈನ್ಯದ ಸಹಾಯವು ಬೇಕಿದ್ದಿತು. ಅಂತು ಇದಕ್ಕಾಗಿ ಒಂದು ಪದ್ಧತಿ, ಒಂದು ಕ್ರಮ, ಒಂದು ನೀತಿ ಅವಶ್ಯವಾಯಿತು. ಜನತೆಯ ಹಿತಕ್ಕೆ ಅಡ್ಡಿಗಳಾಗಿ ಮುಳ್ಳಿನಂತೆ ಇರುವುದರಿಂದ ಅಂತಹ ವಿಘಾತ ಹೇತುಗಳಿಗೆ "ಕಂಟಕ" ಗಳೆಂದು ಹೆಸರಾಯಿತು. ಅವರನ್ನು ಅಡಗಿಸುವ ನೀತಿಗೆ "ದಂಡನೀತಿ" ಅಥವಾ "ಕಂಟಕಶೋಧನ" ಎಂಬ ಸೊಗಸಾದ ಅಂಕಿತವನ್ನು ಹೊಂದಿತು. ಇದನ್ನು ವ್ಯವಸ್ಥೆಯಿಂದ ನಡೆಸುವ ಏರ್ಪಾಡಿಗಾಗಿ ಪ್ರಜೆಗಳೇ ಪ್ರಯತ್ನಿಸಬೇಕಾಯಿತು. ಅವರು ಶೂರ ಧೀರನನ್ನು ಆರಿಸಿಕೊಂಡು ಅವನನ್ನು ಪ್ರಾರ್ಥಿಸಿ, ಉತ್ತೇಜನ ಕೊಟ್ಟು, ತಮ್ಮ ರಕ್ಷಣೆಯ ವ್ಯವಸ್ಥೆಗಾಗಿ ಕೋರಿ ಗೌರವವನ್ನು ಸಲ್ಲಿಸುವ ಕ್ರಮ ಮೊದಲಾಯಿತು. ಆತನ ಸಹಾಯಕ್ಕಾಗಿ ಅನುಗುಣರೂ ಅನುರೂಪರೂ ಆದ ವ್ಯಕ್ತಿಗಳು ಸಿದ್ಧರೇ ಆದರು. 'ರಾಜ' ಎಂಬ ಹೆಸರೇ ಹಿಂದೆ ಹೇಳಿದಂತೆ ಇದನ್ನು ಸೂಚಿಸುತ್ತದೆ. "ರಂಜಯತಿ ಪ್ರಜಾಃ ರಾಜಾ" ಪ್ರಜೆಗಳನ್ನು ಸಂತೋಷಪಡಿಸುವವನು, ಮೆಚ್ಚಿಸುವವನು ರಾಜ; ಎಲ್ಲ ಹಿತದ ಏರ್ಪಾಡುಗಳನ್ನೂ ನಡೆಸಿ ವ್ಯವಸ್ಥೆಯನ್ನು ನೆಲೆಗೊಳಿಸುವವನು. ಎಂಬ ಅರ್ಥ ಇದರಿಂದ ಸ್ಪಷ್ಟ. ಅಲ್ಲದೆ ಈ ಹೆಸರಿನಿಂದಲೇ ಮೆಚ್ಚಿಸಲ್ಪಡುವ ಪ್ರಜೆಗಳಿಗೆ ಪ್ರಾಮುಖ್ಯವೂ ಇತ್ತೆಂಬುದು ವಿದಿತವಾಗುತ್ತದೆ.

ಅಂತೂ ಪ್ರಾಚೀನ ಕಾಲದಿಂದಲೂ ಪ್ರಜಾಸಮುದಾಯಕ್ಕೆ ಅಹಿತವನ್ನು ಆಚರಿಸುವ ವ್ಯಕ್ತಿಗಳು, ಅವರನ್ನು ದಮನಮಾಡಬೇಕಾದ ಆವಶ್ಯಕತೆ, ಅದಕ್ಕಾಗಿ ನಿಯಮಿತರಾದ-ಅಥವಾ ಪ್ರಾರ್ಥಿತರಾದ ಅಧಿಕಾರಿವಿಶೇಷ, ಅವರ ದಕ್ಷತೆಯಿಂದ ಸಂತುಷ್ಟರಾದ ಪ್ರಜೆಗಳು, ಅಂಥವರಿಗೆ ಅದ್ಭುತವಾದ ರೀತಿಯಲ್ಲಿ ಗೌರವವನ್ನು ತೋರಿಸಿ ನಡೆಸುತ್ತಿದ್ದ ವೀರಪೂಜೆ ........ಮುಂತಾದುವು ನಮಗೆ ಪ್ರಾಚೀನ ಗ್ರಂಥಗಳಲ್ಲಿ ಕಾಣಿಸಿಕೊಳ್ಳುತ್ತವೆ.

ಪ್ರಾಚೀನರಲ್ಲಿ ದಂಡನೀತಿಯ ನಿರ್ವಹಣ ಕ್ರಮವೇನಿತ್ತೆಂಬುದಕ್ಕೆ ವಿವರವಾದ ಕ್ರಮಸೂಚನೆಯಿಲ್ಲ. ಆದರೆ ವಿವರಣೆಯಿಲ್ಲದಿದ್ದರೂ ಅದಕ್ಕಾಗಿ ಒಂದು ಖಾತೆ ಇದ್ದಿತೆಂದೂ, ಆ ಶಾಖೆ ತನಗೆ ವಿಾಸಲಾಗಿದ್ದ ಕೆಲಸವನ್ನು ತೃಪ್ತಿಕರವಾಗಿ ನಡೆಸಿ ಜನರಿಂದ ಮೆಚ್ಚುಗೆ ಪಡೆಯುತ್ತಿತ್ತೆಂದೂ ಊಹಿಸಬಹುದಾಗಿದೆ.

ಶ್ರೀ ರಾಮಾಯಣದಲ್ಲಿ ದಶರಥ ಮಹಾರಾಜನಿಗೆ ಎಂಟು ಜನ ಮಂತ್ರಿಗಳು ಇದ್ದರೆಂದು ಉಲ್ಲೇಖವಿದೆ. ಈ ಎಂಟು ಜನರ ಆವಶ್ಯಕತೆಯೇನು ?-ಎಂಬುದನ್ನು ಸ್ವಲ್ಪ ವಿಮರ್ಶಿಸಿದರೆ ಬಹುಶಃ ಈಗಿನಂತೆಯೇ ಆಗಲೂ ಕಾರ್ಯಸೌಲಭ್ಯಕ್ಕಾಗಿ ಶಾಖೆಗಳು (Port folios) ವಿಂಗಡವಾಗಿದ್ದುವೇನೋ ಎನಿಸುತ್ತದೆ. ನಿಷ್ಕಂಟಕವಾದ ಆ ದಶರಥನ ರಾಜ್ಯದಲ್ಲಿ ಮಂತ್ರಿಗಳು ಹೇಗಿದ್ದರೆಂದು ವರ್ಣಿಸುವಾಗ ವಾಲ್ಮೀಕಿ ಮುನಿಗಳು ಹೀಗೆನ್ನುತ್ತಾರೆ.

ಪ್ರಾಪ್ತಕಾಲಂ ಯಥಾದಂಡಂ
ಧಾರಯೇಯುಃ ಸುತೇಷ್ವಪಿ ||
ಅಹಿತಂಚಾಪಿ ಪುರುಷಂ
ನ ಹಿಂಸ್ಯುಃ ಅವಿದೂಷಕಂ ||
ವೀರಾಶ್ಚನಿಯತೋತ್ಸಾಹಾಃ
ರಾಜಶಾಸ್ತ್ರ ಮನುವ್ರತಾಃ
ಶುಚೀನಾಂ ರಕ್ಷಿತಾರಶ್ಚ........

ಸುತೀಕ್ಷ್ಣ ದಂಡಾಃ ಸಂಪ್ರೇಕ್ಷ್ಯ....(ಶ್ರೀರಾಮಾ-I-೭-೧೧,-೧೪.)

[ಆ ಅಮಾತ್ಯರು, ತಪ್ಪಿತಸ್ಥನು ಸ್ವಂತ ಮಗನಾದರೂ ದಂಡಿಸದೆ ಬಿಡುತ್ತಿರಲಿಲ್ಲವಂತೆ. ಶತ್ರುವಾದರೂ ನಿರ್ದೋಷಿಯನ್ನು ದಂಡಿಸಲಿಕ್ಕೆ ಕೈ ಹಚ್ಚುತ್ತಿರಲಿಲ್ಲವಂತೆ. ಶೂರರಾಗಿ, ಉತ್ಸಾಹಶಾಲಿಗಳಾಗಿ ನೀತಿಶಾಸ್ತ್ರ ವನ್ನು ಅನುಸರಿಸಿ ನಡೆಯುತ್ತಾ, ಶುಚಿಗಳಾಗಿ, ದುಷ್ಟರನ್ನು ತೀಕ್ಷ್ಣವಾದ ದಂಡದಿಂದ ಅಡಗಿಸಿ ಮತ್ತೆ ದೋಷವು ತಲೆಯೆತ್ತಲವಕಾಶವಿಲ್ಲದಂತೆ ಮಾ ಡುತ್ತಿದ್ದರಂತೆ.]

ಹಾಗೆಯೇ ರಾಮಾಯಣದಲ್ಲಿ ಭರತನು ಶ್ರೀರಾಮನನ್ನು ಚಿತ್ರಕೂಟ ದಲ್ಲಿ ಭೇಟಿಯಾದಾಗ ಭರತನ ಮುಖದ ನಿಸ್ತೇಜಸ್ಕತೆಯನ್ನೂ ದೈನ್ಯವನ್ನೂ ನೋಡಿ ಶ್ರೀರಾಮನು ಹೀಗೆ ಮಾತನಾಡುತ್ತಾನೆ. "ಅಪ್ಪಾ ಭರತ! ದ್ರವ್ಯ ಲೋಭದಿಂದ ನಿನ್ನ ಅಧಿಕಾರಿಗಳು ಯಾರೂ ಪರಿಶುದ್ಧನಾದ ನಿರಪರಾಧಿ ಯಾದ ಯಾರನ್ನೂ ಹಿಡಿದು ಆತನ ಮೇಲೆ ಕಳ್ಳತನದ ಆರೋಪವನ್ನು ಹೊರಿಸಿ ಶಿಕ್ಷಿಸಿಲ್ಲವಷ್ಟೆ ? ಅಂತೆಯೇ ನಿಜವಾಗಿಯೂ ಅಪರಾಧಿಯಾದ ದುಷ್ಟ ಚೋರನನ್ನು ಅಪರಾಧಿಯೆಂದು ಚೆನ್ನಾಗಿ ಮನಗಂಡೂ ದ್ರವ್ಯಲೋ ಭದಿಂದಲೇ (ಲಂಚ ರುಷುವತ್ತುಗಳ ಆಸೆಯಿಂದ) ಬಿಟ್ಟುಬಿಟ್ಟಿಲ್ಲವಷ್ಟೆ ? ನಿನ್ನ ಈ ನಿಸ್ತೇಜಸ್ಕತೆಗೆ ಕಾರಣವೇನು?" ಎಂದು ಮುಂತಾಗಿ ಪ್ರಶ್ನಿಸು ತ್ತಾನೆ.

ಈ ಇಷ್ಟು ಮಾತುಗಳಿಂದ ಆ ಕಾಲದ ರಕ್ಷಣಾ ಶಾಖೆಯು (Law and Order) ನ್ಯಾಯ ಮತ್ತು ಶಿಸ್ತುಗಳನ್ನು ಕಾಪಾಡುವ ವ್ಯವಸ್ಥೆ ಹೇಗಿದ್ದಿರಬಹುದೆಂದು ಊಹಿಸಿ ತಿಳಿಯಬಹುದು. ಮಹಾಭಾರತ, ಮನು ಸ್ಮೃತಿ ಮುಂತಾದ ಗ್ರಂಥಗಳಲ್ಲಿಯೂ, ರಾಜನಾದವನಿಂದ ನಡೆಯಬೇಕಾದ ದುಷ್ಟ ಶಿಕ್ಷಣ, ಶಿಷ್ಟರಕ್ಷಣ ಕ್ರಮದ ಸ್ಪಷ್ಟವಾದ ರಚನೆಗಳಿವೆ. ಆದರೆ ಆ ಇಲಾಖೆಯ ಮುಖ್ಯಾಧಿಕಾರಿ–ಅಧೀನಾಧಿಕಾರಿಗಳು–ಮತ್ತು ಅದರ ಕಾರ್ಯ ವಿಭಾಗ–ಇವುಗಳ ವಿವರಣೆಗೆ ಪ್ರಯತ್ನಿಸಿಲ್ಲ. ಆದರೆ ಇಲಾಖೆಯಿಲ್ಲದೆ ವ್ಯವ ಸ್ಥೆಯೆಂತು ? ಹೆಸರು ಹೇಳಿಲ್ಲ–ಅಷ್ಟೆ. ಊಹಿಸಿ ತಿಳಿಯಬೇಕಾದ ವಿಷಯವು ಮಿಕ್ಕವು.

ಚಂದ್ರಗುಪ್ತಮೌರ್ಯ ಮತ್ತು ಕೌಟಲ್ಯರ ಕಾಲಕ್ಕೆ ಈ ದಂಡನೀತಿಯ ವ್ಯವಸ್ಥೆ ಹೇಗಿತ್ತೆಂಬುದು ಸ್ಪಷ್ಟವಾಗುತ್ತದೆ. ಕೌಟಲ್ಯನ ಅರ್ಥಶಾಸ್ತ್ರದಲ್ಲಿ 'ಕಂಟಕ ಶೋಧನ' ನಿರೂಪಣೆಗಾಗಿಯೇ ಒಂದು ವಿಭಾಗ ನ್ಯಾಸಲಾಗಿಡಲ್ಪಟ್ಟಿದೆ. ಒಂದು ವಿಶೇಷವೇನೆಂದರೆ- ಎಷ್ಟು ಬಗೆಯ ಅಪರಾಧಗಳು ನಡೆಯಬಹುದಾಗಿತ್ತೆಂಬ ಅರಿವು ಆಗಿನ ಕಾಲಕ್ಕೆ ಇದ್ದಿತು. ಸ್ವಾರ್ಥದೃಷ್ಟಿಯಿಂದ ಕೂಡಿದ ಜನರು ಪ್ರೈವುರಿತವನನ್ನು ಮೋಸಗೊಳಿಸಲು ಆಗಲೂ ಬೇಕಾದಷ್ಟು ಬಗೆಯಲ್ಲಿ ಪ್ರಯತ್ನಿಸುತ್ತಿದ್ದರೆಂದು ತಿಳಿದು ಬರುತ್ತದೆ.

ಕೌಟಲ್ಯನ ಅರ್ಥಶಾಸ್ತ್ರದಲ್ಲಿ- ಕಳ್ಳತನ, ದರೋಡೆ, ಋತಿಮತಿಯಾಗದ ಕನ್ನಿಕೆಯೊಡನೆ ಸಂಭೋಗ (Rape) ಅಕ್ರಮ ಸಂಭೋಗ, ಬಲಾತ್ಕಾರ ಸಂಭೋಗ, ಖೋಟಾ ನಾಟ್ಯಗಳ ತಯಾರಿಕೆ, ಯಂತ್ರ ಮಂತ್ರಗಳ ನೆಪದಲ್ಲಿ ಇತರರನ್ನು ಮೋಸಗೊಳಿಸುವುದು, ಹೊಲ್ಲದ ಔಷಧವನ್ನು ಕೊಟ್ಟು ವಿಕಾರವನ್ನು ಉಂಟು ಮಾಡುವುದು,ಗರ್ಭಸ್ರಾವ ಮಾಡಿಸುವುದು, ವಿಷ ಹಾಕುವುದು, ಮಾದಕ ದ್ರವ್ಯಗಳಿಂದ ಇತರರಿಗೆ ಮೋಸಗೊಳಿಸುವುದು, ಅಪ್ಪಣೆ ಇಲ್ಲದೆ ನಡೆಸುವ ಜೂಜು, ರಹಸ್ಯವಾದ ಕೊಲೆ, ಲಂಚಕೋರತನ, ಅರಣ್ಯದ ಉತ್ಪನ್ನಗಳನ್ನು ಅಪ್ಪಣೆಯಿಲ್ಲದೆ ಸಾಗಿಸುವುದು, ಕೊಳೆತ ಮತ್ತು ಕೆಟ್ಟಪದಾರ್ಥಗಳನ್ನು ಮಾರುವುದು, ಕಳ್ಳರಿಗೆ ಆಶ್ರಯ ಕೊಡುವುದು, ಒತ್ತಾಸೆ ಮಾಡುವುದು, ಪ್ರಚೋದನೆ, ಕೆರೆಕಟ್ಟೆಗಳನ್ನು ಒಡೆಯುವುದು, ಮನೆಗಳಿಗೆ, ವಸ್ತುಗಳಿಗೆ ಬೆಂಕಿ ಹಚ್ಚುವುದು, ಆಯುಧಗಳನ್ನು ಅಕ್ರಮವಾಗಿ ಇಟ್ಟುಕೊಂಡಿರುವುದು, ಕದಿಯುವದು, ಸಾರ್ವಜನಿಕಗಳಾದ ಮರಗಳನ್ನು ಕಡಿಯುವುದು, ಪ್ರಾಣಿಗಳ-ಕಾಲ್ನಡೆಗಳ ಅಪಹಾರ, ಪ್ರಾಣಿಹಿಂಸೆ, ಪ್ರಾಣಿಗಳ ಮೂಲಕ ಹಿಂಸೆಯೊದಗಿಸುವುದು, ಶುದ್ಧವಾದ ಹಾಲು, ತುಪ್ಪ ಮುಂತಾದುವಕ್ಕೆ ಬೆರಕೆಮಾಡುವುದು ಇತ್ಯಾದಿ ಅಪರಾಧಗಳನ್ನು ಸೂಚಿಸಿ ಅವಕ್ಕೆ ಯಥೋಚಿತವಾದ ಶಿಕ್ಷೆಗಳು ಸೂಚಿಸಲ್ಪಟ್ಟಿವೆ.

ಈ ಅಪರಾಧಗಳನ್ನು ಪತ್ತೆಹಚ್ಚುವುದಕ್ಕೂ. ಅಪರಾಧ ಮಾಡಿದವರನ್ನು ನ್ಯಾಯಾಧಿಕಾರಿಗಳ ಮುಂದೆ ತಂದು ನಿಲ್ಲಿಸುವುದಕ್ಕೂ, ಅವರು ವಿಧಿ

ಸಿದ ಶಿಕ್ಷೆಯನ್ನು ನೆರವೇರಿಸಲಿಕ್ಕೂ ಸಹ ಸ್ಪಷ್ಟವಾಗಿ ಅಧಿಕಾರಿ ವಿಶೇಷಗಳಿಂದ ಕೂಡಿದ ಒಂದು ಶಾಖೆ ಕೆಲಸ ಮಾಡುತ್ತಲೇ ಇದ್ದಿರಬೇಕಷ್ಟೆ. 'ನಾಗರೀಕರು', 'ಕಕ್ಷಿಗಳು' ಈ ಸನ್ನಿವೇಶದಲ್ಲಿ ಹೆಸರಿಸಲ್ಪಟ್ಟ ವ್ಯಕ್ತಿಗಳು.

"ರಾಜಾನಃ ಚಾರಚಕ್ಷುಷಃ"-ಎಂಬುದು ಅನಾದಿಯಾಗಿ ರಾಮಾಯಣಾದಿಗಳ ಕಾಲದಿಂದಲೂ ಬಂದ ಮಾತು. ಗೂಢಚಾರರ ಮೂಲಕ ದೇಶದಲ್ಲಿ ನಡೆಯಬಹುದಾದ ಪ್ರಜಾಹಿತ ವಿರೋಧಗಳನ್ನು ತಿಳಿದು ಯಥೋಚಿತವಾದ ಪ್ರತಿಬಂಧನವನ್ನು ನಡೆಯಿಸಲು ಹಿಂದಿನಿಂದಲೂ ಪ್ರಯತ್ನವಿದ್ದಿತು. ಗೂಢಚಾರರು ಹೇಗಿರಬೇಕೆಂಬುದನ್ನು ಸೂಚಿಸುವುದಕ್ಕೂ, ಅವರನ್ನು ತರಬೇತು ಮಾಡಬೇಕಾದ ಕ್ರಮವನ್ನು ತಿಳಿಸುವುದಕ್ಕೂ ಅರ್ಥಶಾಸ್ತ್ರದಲ್ಲಿ ಸ್ಪಷ್ಟವಾದ ಪ್ರಕರಣಗಳಿವೆ. "ಚಾರೈಃ ಪಶ್ಯಂತಿ ರಾಜಾನಃ"-ಭಾರತದ ನುಡಿಯಿದು.

ಇದರಿಂದ [C. I. D.] ಗಳ ವ್ಯವಸ್ಥೆ ಇಂದು ಮಾತ್ರವಲ್ಲ-ಹಿಂದೆಯೂ ಇತ್ತೆಂಬುದು ಸ್ಪಷ್ಟ........

ಮುದ್ರಾರಾಕ್ಷಸದಲ್ಲಿ ಚಂದನದಾಸನ ಪ್ರಕರಣ, ಚಾರುದತ್ತ ಮತ್ತು ಮೃಚ್ಛಕಟಿಕಗಳಲ್ಲಿ ವಸಂತಸೇನೆಯ ಕೊಲೆಯ ಆರೋಪಣೆ, ಶಾಕುಂತಲದಲ್ಲಿ ಶಕುಂತಲೆಯು ಕಳೆದುಕೊಂಡಿದ್ದ ಉಂಗುರವು ಬೆಸ್ತರವನಿಗೆ ದೊರೆತ ಪ್ರಕರಣ ಮತ್ತು ಆತನನ್ನು ರಾಜನ ಮುಂದೆ 'ಹಾಜರು' ಪಡಿಸಿದುದು.... ಇತ್ಯಾದಿ ಉಲ್ಲೇಖಗಳು ಹಿಂದಿನ ಕಾಲದಲ್ಲಿ 'ಪೋಲೀಸ್' ಇಲಾಖೆಯ ರೀತಿಯ ಅಧಿಕಾರಿ ವರ್ಗದ ಕಾರ್ಯಕ್ರಮವಿತ್ತೆಂದು ಸೂಚಿಸಲೂ ಸಾಕು.

ಪ್ರಾಚೀನ ಕನ್ನಡ ಗ್ರಂಥಗಳಲ್ಲಿ ಗ್ರಾಮರಕ್ಷಕ ಮುಂತಾದ ಅಧಿಕಾರಿಗಳ ಹೆಸರುಂಟು. ವಡ್ಡಾರಾಧನೆಯಲ್ಲಿ 'ತಳಾವರ'-ಕಳ್ಳರನ್ನು ಹಿಡಿಯಲು ನಿಯುಕ್ತನಾದ ಮುಖ್ಯಾಧಿಕಾರಿ. ದಶಕುಮಾರ ಚರಿತೆಯಲ್ಲಿ "ಆತನು ಪುರಾಧಿಪಂ ತಳವರಂ ಶಶಿ" ಎಂದು ಮುಂತಾಗಿ ವಿವರಣೆಯಿದೆ. "ಎಳ್ಳು ಗಾಣಿಗ ಬಲ್ಲ, ಸುಳ್ಳು ಸಿಂಪಿಗ ಬಲ್ಲ, ಕಳ್ಳರನು ಬಲ್ಲ ತಳವಾರ, ಬಣಜಿಗ

ನೆಲ್ಲವನು ಬಲ್ಲ ಸರ್ವಜ್ಞ" ಇದು ಸರ್ವಜ್ಞನ ಪದ. ಇದರಲ್ಲಿಯೂ ತಳವಾರನ ಹೆಸರು ಬಂದಿದೆ.

ವಡ್ಡಾರಾಧನೆಯಲ್ಲಿ ವಿದ್ಯುಚ್ಚೋರನೆಂಬ ಕಳ್ಳನ ಕಥೆ ಬಹಳ ಹೃದಯಂಗಮವಾಗಿ ಚೌರ್ಯದ ಕಲೆ ಮತ್ತು ಕಳ್ಳರನ್ನು ಹಿಡಿಯಬಲ್ಲ ತಳವಾರನ 'C. I. D' ಶಾಖಾಕ್ರಮವಾದ ಪತ್ತೇದಾರಿ ಚಾತುರ್ಯದ ಕಲೆ ರಮ್ಯವಾಗಿ ಚಿತ್ರಿತವಾಗಿದೆ. ಅಲ್ಲಿನ ನಿರೂಪಣೆಯಿಂದಲೇ ಆ ವೇಳೆಗೆ ಎಂದರೆ ಸುಮಾರು ೯ನೆಯ ಶತಮಾನದ ವೇಳೆಗಾಗಲೇ "ಡಿಟೆಕ್ಟಿವ್" ಕ್ರಮ ವ್ಯವಸ್ಥೆ ಕ್ರಮವಾಗಿ ವೃದ್ಧಿಗೊಂಡಿತ್ತೆಂಬುದೂ ಸೂಚಿತವಾಗುತ್ತದೆ........ಇರಲಿ.

ಅಂತೂ ಈಗ ಎಲ್ಲಾ ರಾಜ್ಯಗಳಲ್ಲಿರುವಂತೆ ಹಿಂದೆ ನಮ್ಮ ದೇಶದಲ್ಲಿ ಧರ್ಮ ಎಂದರೆ ಸಾರ್ವಜನಿಕ ಹಿತವಾದ ನಡೆ ನುಡಿ ಯಾವುದೆಂಬುದನ್ನು ತಿಳಿಯಪಡಿಸುವ ಶಾಸನಾಂಗ (Legislature)ವನ್ನು ಅನುಸರಿಸಿ ಜನರು ನಡೆದುಕೊಳ್ಳುವಂತೆ ಏರ್ಪಡಿಸುವ ಕಾರ್ಯನಿರ್ವಾಹಕಾಂಗವೂ (Executive) ಶಾಸನ ವಿರುದ್ಧವಾದ ವ್ಯವಹಾರಗಳ ಸನ್ನಿವೇಶದಲ್ಲಿ ತಪ್ಪು ನೆಪ್ಪುಗಳನ್ನು ನಿರ್ಣಯಿಸಿ ಮುಂದುವರಿಯಬೇಕಾದ ಕ್ರಮವನ್ನು ಸೂಚಿಸುವ ನ್ಯಾಯಾಂಗವೂ ಇದ್ದುವೆಂಬುದು ಅಲ್ಲಲ್ಲಿ ಸೂಚಿತವಾಗುತ್ತದೆ. ಪ್ರಾಚೀನರಲ್ಲಿ ನ್ಯಾಯನಿರ್ಣಯವು-ಧರ್ಮಶಾಸ್ತ್ರ ನಿಪುಣರೂ ನಿಃಸ್ಪೃಹರೂ ನೀತಿವಂತರೂ, ಪಕ್ಷಪಾತರಹಿತರೂ ಆದ ಮೂರು ಜನ ನ್ಯಾಯಪರರ ಸಮಕ್ಷದಲ್ಲಿ ಮಂತ್ರಿಗಳ (ನ್ಯಾಯಾಧಿಕಾರಿಗಳ) ಕೂಡ ನಡೆದ ತಪ್ಪು-ನೆಪ್ಪುಗಳ ನಿರ್ಣಯವಾಗಿ ಶಿಕ್ಷೆ-ರಕ್ಷೆಗಳು ಒದಗುತ್ತಿದ್ದುವು. ಈಗ ಅದೇ ವಿಚಾರ ನ್ಯಾಯಾಧಿಕಾರಿಗಳ-ಜ್ಯೂರಿಗಳ ಮೂಲಕ ನಡೆಯುತ್ತಿದೆಯಲ್ಲವೆ ?

ಅಂತು ! ರಾಜ್ಯವೆಂದೊಡನೆ ವ್ಯಕ್ತಿ ಸ್ವಾತಂತ್ರ್ಯದ, ಸಮಾಜ ಹಿತದ, ಎಲ್ಲ ವಿಧವಾದ ಅಭ್ಯುದಯದ ಸಾಧನೆಯ ಒಂದು ಸಂಸ್ಥೆ. ಅದರ ಕೆಲಸ-ವ್ಯಕ್ತಿಗಳ ಹಕ್ಕು-ಬಾಧ್ಯತೆಗಳೇನು ? ಅದಕ್ಕೆ ಒದಗಬಹುದಾದ ಧಕ್ಕೆಗಳೇನು ? ಆ ಆತಂಕಗಳನ್ನು ಪರಿಹರಿಸುವ ಕ್ರಮ, ನೀತಿಗಳು ಯಾವುವು ?

........ಎಂದು ಮುಂತಾದ ಹಲವು ಅಂಗಗಳಿಂದ ಕೂಡಿದ ಸಂಸ್ಥೆ ಎಂದ ಹಾಗಾಯಿತು.

ಪ್ರಾಚೀನರಲ್ಲಿ ಮನು, ಯಾಜ್ಞವಲ್ಕ್ಯ, ಬೃಹಸ್ಪತಿ, ಪರಾಶರ ಮುಂತಾದವರು ರಚಿಸಿದ ಸ್ಮೃತಿಧರ್ಮಶಾಸ್ತ್ರದ ಗ್ರಂಥಗಳೂ ಶಾಸನಾಂಗದ ಶಾಸನಗಳಾಗಿ ಪರಿಗಣಿಸಲ್ಪಟ್ಟು ಅವಕ್ಕೆ ಅನುಸಾರವಾಗಿ ನಡೆನುಡಿಗಳಿರಬೇಕೆಂದು ವ್ಯವಸ್ಥೆ-ಕಾಯಿದೆಗಳು ಏರ್ಪಟ್ಟಿದ್ದುವು. ವಿರುದ್ಧಾಚರಣೆಯರಿಗೆ ಶಿಕ್ಷೆ ನ್ಯಾಯಾಧಿಕಾರಿಗಳಿಂದ ವಿಧಿಸಲ್ಪಡುತ್ತಿದ್ದಿತು. ಕಾರ್ಯನಿರ್ವಾಹಾಂಗದ ಒಂದು ಶಾಖೆ ಅದನ್ನು ನೆರವೇರಿಸುತ್ತಿದ್ದಿತು. ಈಗಲೂ ಒಂದಲ್ಲ ಒಂದು ಬಗೆಯಲ್ಲಿ ಈ ಕ್ರಮ ಅನುಸರಿಸಲ್ಪಡುತ್ತಿದೆ. ಆದರೆ ಆ ಅತ್ಯಂತ ಆಧುನಿಕ ಯಂತ್ರ ಯುಗದಲ್ಲಿ ವ್ಯವಸ್ಥೆ ಬಹುಮಟ್ಟಿಗೆ ಸಮಯೋಚಿತವಾಗಿ ವಿಕಾಸಗೊಳ್ಳುತ್ತಿದೆ. ಇಷ್ಟಾದರೂ ವಿವಿಧ ದೇಶಗಳಲ್ಲಿ ಈ ಬಗೆಗೆ ವೈವಿಧ್ಯವಿಲ್ಲದೆ ಇಲ್ಲ.

ಶಾಂತಿ-ಶಿಸ್ತುಗಳನ್ನು ಪಾಲಿಸುವ ಪೋಲೀಸು ಇಲಾಖೆ ದೇಶದಲ್ಲಿ ಅತ್ಯಂತ ಪ್ರಧಾನ ಶಾಖೆಯಿಲ್ಲದಿದ್ದರೆ ಶಾಸನಾಂಗವಾಗಲಿ ಬೇರಾವ ರಾಜ್ಯಾಂಗವಾಗಲಿ ಸರಿಯಾಗಿ ನಡೆಯುವಂತಿಲ್ಲ. ದೇಶವು ಅನಾಯಕವಾಗಿ ರಾಜ್ಯದ ನೆಮ್ಮದಿಯೂ, ಹೆಸರೂ ಇಲ್ಲದಂತಾದೀತು. ಯಾವ ಶಾಸನವನ್ನು ಯಾರು ರಚಿಸಿದರೆ ತಾನೆ ಏನು ? ಸ್ವಾರ್ಥಪರತೆ ಮರೆಯಾಗದಿರುವ ಎಲ್ಲ ರಾಜ್ಯಗಳಲ್ಲಿಯೂ ಶಿಸ್ತು ಸಂಯಮಗಳನ್ನು ಉಳಿಸಿ ಸೌಖ್ಯವನ್ನು ಕಾಪಾಡಬೇಕಾದರೆ 'ರಕ್ಷಿಗಳ'-'ಕಂಟಕ ಶೋಧಕರ' ಶಾಖೆ, ಪ್ರಧಾನವಾಗಿರಬೇಕು. ಕೈಕೆಸರಾಗದಂತೆ ಬಾಯಿ ಮೊಸರಾಗ ಬೇಕೆಂದು ಬಯಸುವ ಜನ ಯಾವ ಕಾಲದಲ್ಲಿ ಎಲ್ಲಿ ತಾನೇ-ಇರಲಿಲ್ಲ. ಅಂಥವರಿಂದ ಸಮಾಜಕ್ಕೆ-ದೇಶಕ್ಕೆ ಉಂಟಾಗಬಹುದಾದ ಕಂಟಕವನ್ನು ನೀಗಬೇಕಾದವರು-ರಕ್ಷಿಗಳು-ಅವರ ಕೆಲಸಗಳು ಕಠಿಣತಮವಾದುವು. ಅವರು ಎಷ್ಟು ಸಮರ್ಥರಾದರೆ, ಶುಚಿಗಳಾದರೆ, ನಿಃಸ್ಪೃಹರಾದರೆ, ಪಕ್ಷಪಾತ ರಹಿತರಾದರೆ, ದೇಶ ಹಿತಚಿಂತನೆಯ -ಸಮಾಜಹಿತಸಾಧನೆಯ ಗುರಿಯಲ್ಲಿ ನೆಟ್ಟ ಮನಸ್ಸುಳ್ಳವರಾದರೆ, ಅಷ್ಟು ಕ್ಷೇಮ. ಅವರ ಧರ್ಮನಿಷ್ಠೆ, ಕಾರ್ಯಶ್ರದ್ಧೆ, ಸತ್ಯಪ್ರಿಯತೆ-ಮುಂತಾದುವು

ವನ್ನು ಅವಲಂಬಿಸಿರುತ್ತದೆ ರಾಷ್ಟ್ರದ ಯೋಗಕ್ಷೇಮ. ಯಾವ ದೇಶದಲ್ಲಿ ಅಂಥವರ ಸಂಖ್ಯೆ-ಸ್ವಭಾವಗಳು ಉತ್ತಮವಾಗಿಯೋ ಆ ದೇಶವು ಭಾಗ್ಯ ಶಾಲಿ. ಭರತ ಭೂಮಿ ಉತ್ತಮವಾದ ಆ ಶಾಖಾಧಿಕಾರಿಗಳಿಂದ ಶ್ರೇಯ ಸ್ಸಿನ ಗುರಿಯನ್ನು ಮುಟ್ಟಲು ಅವಕಾಶವಾಗಲೆಂದು ಆಶಿಸುತ್ತೇವೆ.

ಹಿಂದಿನ ಕಾಲದ ರಾಜರು ಪ್ರಜಾರಂಜನೆಯಲ್ಲಿ ತಮ್ಮ ಜೀವನೋ ದ್ದೇಶವಾಗಿ ಉಳ್ಳವರಾಗಿದ್ದರು. ರಾಮಾಯಣದಲ್ಲಿ ಶ್ರೀರಾಮನು ಗೂಢ ಚಾರರ ಮುಖದಿಂದ ಸೀತೆಯಮೇಲೆ ಅಪವಾದ ಬಂತೆಂದು ಕೇಳಿ ಗರ್ಭಿಣಿ ಯಾದ ಆಕೆಯನ್ನೇ ತ್ಯಜಿಸಿದನು ಎಂಬ ಕಥೆಯಿದೆ. ಆಗ ಗೂಢಚಾರರು ದಿನವೂ ಸುದ್ದಿಗಳನ್ನು ತಂದು ರಾಜನಿಗೆ, ಅಧಿಕಾರಿಗಳಿಗೆ ಹೇಳುತ್ತಿದ್ದರೆಂದು ಇದರಿಂದ ಅರ್ಥವಾಗುತ್ತದೆ. ಶೈವಪುರಾಣಗಳಲ್ಲಿನ ಮನುಚೋಳನು ಕರು ವನ್ನು ಕೊಂದ ತನ್ನ ಮಗನನ್ನೇ ರಥದಗಾಲಿಗೆ ಕಟ್ಟಿಕೊಲ್ಲಿಸಿದನು. ಸತ್ಯೇಂ ದ್ರಚೋಳರಾಜನು ಮಗುವನ್ನು ಕುದುರೆ ಕಾಲಿಗೆ ಸಿಗಿಸಿ ಸಾಯಿಸಿದ ತನ್ನ ಮಗ ರಾಜಶೇಖರನನ್ನು ವಧಿಸುವಂತೆ ಅಪ್ಪಣೆಮಾಡಿದರು.

ಚೋಳರಾಜನೊಬ್ಬನು ದೈವಾಪಚಾರಮಾಡಿದ ಹೆಂಡತಿಯ ಕೈ ಕತ್ತರಿ ಸಿದನು. ಆದರ್ಶ ಹಿಂದೂ ರಾಜನೊಬ್ಬನು ಸಂಸಾರದಲ್ಲಿ ಅಹಂಕರಿಸಿದ ಹೆಂಡತಿಯನ್ನು ಆಜೀವ ಪರ್ಯಂತ ತ್ಯಜಿಸಿದನು. ಇತ್ಯಾದಿ ವಿಷಯ ಗಳನ್ನು ನಾವು ನೆನಸಿಕೊಂಡರೆ ಹಿಂದಿನ ರಾಜ್ಯಾಧಿಕಾರಿಗಳ ನ್ಯಾಯನಿಷ್ಠೆ, ಸತ್ಯಪ್ರಿಯತೆ ವಿದಿತವಾಗುತ್ತದೆ.

"ಇಮ್ಮಡಿ ಪುಲಿಕೇಶಿಯ ಕಾಲದಲ್ಲಿ ಸುಂದರ ತರುಣಿಯೊಬ್ಬಳು ಗೋ ದಾವರಿಯಿಂದ ರಾಮೇಶ್ವರದವರೆಗೆ ಏಕಾಂಕಿಯಾಗಿ ನಿರ್ಭೀತಳಾಗಿ ಹೋಗಿ ಬರುತ್ತಿದ್ದಳು" ಎಂದು ಹೀವನತ್ಸಾಂಗನು ಬರೆದಿದ್ದಾನೆ. ಚಂದ್ರಗುಪ್ತನ ಕಾಲದಲ್ಲಿ ಗ್ರೀಸರ ರಾಯಭಾರಿಯಾಗಿದ್ದ ಮೆಗಸ್ಥನೀಸನು 'ಹಿಂದೂ ಜನ ರಿಗೆ ಕಳ್ಳತನ ಗೊತ್ತಿಲ್ಲ' ಎಂದು ಬರೆದಿದ್ದಾನೆ. ಚಾಳುಕ್ಯ ರಾಜಧಾನಿ ಯಾದ ಕಲ್ಯಾಣದಲ್ಲಿ ಬೀದಿಯಲ್ಲಿ ಬಿಸಾಡಿದ ಹಣದ ಗಂಟು ಬೆಳಗಿನಿಂದ ಸಂಜೆವರೆಗೆ ಬಿದ್ದಿತ್ತೆಂದು ಕಥೆ ಇದೆ. ಇದೆಲ್ಲವೂ ನಮ್ಮನಾಡಿನಲ್ಲಿ ಆಗ ರಕ್ಷಣಾ ವ್ಯವಸ್ಥೆಯು ಎಷ್ಟು ಉತ್ತಮವಾಗಿತ್ತೆನ್ನಲು ಸಹಾಯವಾಗಿದೆ.

ಈಗಿನ ಕಾಲದಲ್ಲಿ ಕೂಡ ನಮ್ಮ ಮೈಸೂರು ರಾಜ್ಯದಲ್ಲಿಯೂ ಭಾರತ ರಾಷ್ಟ್ರದಲ್ಲಿಯೂ ಉತ್ತಮ ರಕ್ಷಣಾ ವ್ಯವಸ್ಥೆಯಿದೆ ಎಂಬುದಕ್ಕೆ ಜನರು ಸುಖ ಸಂತೋಷದಿಂದ ಬಾಳಿ ಬದುಕುತ್ತಿರುವುದೇ ನಿದರ್ಶನವಾಗಿದೆ. ಕನ್ನಡ ಕಾವ್ಯಗಳಲ್ಲಿ ರಾಜನೀತಿ ಬೋಧೆ ಮೇಲಿಂದ ಮೇಲೆ ಬರುತ್ತದೆ. ರಾಜಶೇಖರ ವಿಳಾಸ, ಚೆನ್ನಬಸವ ಪುರಾಣಗಳಲ್ಲಿ ಈ ಪ್ರಸಂಗಗಳನ್ನು ಓದಬಹುದು.

ಇಂಗ್ಲೆಂಡ್ ದೇಶದ ಸ್ಕಾಟ್ಲೆಂಡ್ ವಿಭಾಗದಲ್ಲಿ ಉತ್ತಮ ಪೋಲೀಸ್ ವ್ಯವಸ್ಥೆ ಇದೆಯಂತೆ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಬೀದಿಯಲ್ಲಿ ಬಿದ್ದ ವಸ್ತು-ಒಡವೆಗಳನ್ನು ಜನರು ಪೋಲೀಸಿಗೆ ಒಪ್ಪಿಸಿ, ಕಳೆದುಕೊಂಡ ಮಾಲೀಕರಿಗೆ ಅದನ್ನು ತಲ್ಪಿಸುವಂತೆ ಮಾಡುತ್ತಾರಂತೆ. ಬೀದಿಯಲ್ಲಿ ಇಟ್ಟಿರುವ ಹಣ್ಣಿನ, ಪತ್ರಿಕೆಗಳ ಬುಟ್ಟಿಯಲ್ಲಿನ ವಸ್ತುಗಳನ್ನು ಕೊಂಡ ಜನ ಹಣವನ್ನು ಹಾಕಿ ಪಡೆಯುವರಂತೆ ಇಂತಹ ಜೀವನ ಶುದ್ಧಿ, ನ್ಯಾಯನಿಷ್ಠೆ, ಎಲ್ಲ ರಾಷ್ಟ್ರಗಳಿಗೂ ಅಗತ್ಯವೆನಿಸುತ್ತದೆ.

ಸ್ವತಂತ್ರ ಭಾರತದಲ್ಲಿ ನಮ್ಮ ಕರ್ಣಾಟಕ ರಾಜ್ಯದಲ್ಲಿ ಅಂತಹ ಜನ ಇಂದಿಗೂ ಇದ್ದಾರೆ. ಮನೆಗೆ ಬೀಗಗಳನ್ನು ಹಾಕದೆ ಇರುವ ಹಳ್ಳಿಗಳೂ ಇವೆ- ಆದರೆ ಇಂಥವರ ಸಂಖ್ಯೆ ಕಡಿಮೆಯಾಗಿದೆ ಮಾತ್ರ. ರಾಜ್ಯದ ಅಧಿಕಾರಿಗಳಲ್ಲಿ ಸತ್ಯಸಂಧತೆ, ಜನದಲ್ಲಿ ದೇಶಾಭಿಮಾನ ಹೆಚ್ಚಿದರೆ ಉತ್ತಮ ಸುವ್ಯವಸ್ಥೆ ಏರ್ಪಟ್ಟರೆ ನಮ್ಮ ರಾಜ್ಯಗಳು ನ್ಯಾಯನಿಷ್ಠೆಗಳ ನೆಲೆವೀಡುಗಳಾಗ ಬಹುದಲ್ಲವೆ ?

---

# ಮಹಾ ಮಂತ್ರಿ ಮಹಮುದ್ ಗವಾ೯

ಗವಾ೯ ಬಹಮನೀ ರಾಜ್ಯದಲ್ಲಿ ಮುಖ್ಯಮಂತ್ರಿಯಾಗಿದ್ದನು. ಇವನಿಗೆ ದರ್ಬಾರಿನಲ್ಲಿ "ಬಾಬಾ ಜಿಹಾ೯" ಎಂಬ ಹಿರಿಯ ಬಿರುದಿದ್ದಿತು. ಇವನು ಬಹಮನಿಗಳ ರಾಜಧಾನಿ ಬಿದರೆಯನ್ನು ವಿದ್ಯಾಕೇಂದ್ರವೆನಿಸಿದನು. ಇಂದಿಗೂ ಬಿದರೆಯಲ್ಲಿರುವ 'ಮದರಸಾ' ಕಟ್ಟಡ ಇದಕ್ಕೆ ನಿದರ್ಶನವೆನಿಸಿದೆ.

ಬಹಮನೀರಾಜರ ಕಾಲದಲ್ಲಿ ಪ್ರತಿ ಗ್ರಾಮದಲ್ಲೂ ಒಂದು ಮಸೀತಿ ಮತ್ತು ಒಂದು ವಿದ್ಯಾಶಾಲೆ ಇರುತ್ತಿದ್ದುವು. ಆಗ ಬೀದರದಲ್ಲಿ ಮಾತ್ರ ಒಂದು ವೈದ್ಯಶಾಲೆ ಇರುತ್ತಿತ್ತು. ಅಲ್ಲಿ ಮಾತ್ರ ಉಚಿತ ಔಷಧ ಜನರಿಗೆ ದೊರೆಯುತ್ತಿತ್ತು.

ಬಹಮನಿಯ ಕಾಲದಲ್ಲಿ ಪ್ರತಿ ಊರಿನಲ್ಲಿಯೂ ಖಾಜಿ ನ್ಯಾಯ ವಿಮರ್ಶೆ ಮಾಡುತ್ತಿದ್ದನು. 'ಕೊತ್ವಾಲ್, ಅಪರಾಧಿಗಳಿಗೆ ಶಿಕ್ಷೆಕೊಡುತ್ತಿದ್ದನು. ದೊಡ್ಡ ವ್ಯವಹಾರವನ್ನು ರಾಜನೇ ತೀರ್ಮಾನಿಸುತ್ತಿದ್ದನು. ಇವರ ಕಾಲದಲ್ಲಿ ಹಿಂದುಗಳ ಮೇಲೆ 'ಜಿಸಿಯಾ' ಎಂಬ ತಲೆಗಂದಾಯ ಇರಲಿಲ್ಲ. ಆ ಕಾಲದಲ್ಲಿ ಸರ್ಕಾರಿ ಕೆಲಸದಲ್ಲಿ ಬ್ರಾಹ್ಮಣರು ಬಹಳವಾಗಿದ್ದರು. ಬಹಮನೀ ಕಾಲದಲ್ಲಿ ರಾಜ್ಯದ ಪ್ರಾಂತಾಧಿಕಾರಿಗೆ 'ತರದ್ ದಾರ್' ಎಂದು ಹೆಸರು. ಜಮೀನು ಕಂದಾಯ ವಸೂಲಿ ಬಗೆಗೆ ಗವಾನನು ಉತ್ತಮ ವ್ಯವಸ್ಥೆ ಮಾಡಿದ್ದನು. ೧೦೦೦ ಕುದುರೆ ಸೈನ್ಯಾಧಿಕಾರಿಗೆ ಬಹಮನಿಯಲ್ಲಿ 'ಹಸಾರಿ' ಎಂದು ಹೆಸರು. ಬಹಮನಿ ರಾಜ್ಯದಲ್ಲಿ ಸರ್ಕಾರಿ ಉದ್ಯೋಗವು ಯೋಗ್ಯತೆ ಮೇಲೆ ಸಲ್ಲುತ್ತಿತ್ತು. ಹಳೇ ಹೈದರಾಬಾದಿನಲ್ಲಿದ್ದಂತೆ ಜಾತಿಯೇ ಅಲ್ಲಿ ಮುಖ್ಯವೆನಿಸಿರಲಿಲ್ಲ ಎಂಬುದು ಗಮನಾರ್ಹವಾಗಿದೆ.

ಮಹಮ್ಮದ್ ಗವಾ೯ ಮಹಾಮಂತ್ರಿಯಾದರೂ ತನ್ನ ಜೀವನಕ್ಕಾಗಿ ವ್ಯಾಪಾರಮಾಡುತ್ತಿದ್ದನು. ಔರಂಗಜೇಬನು ತನ್ನ ಸ್ವಂತಕ್ಕಾಗಿ ಖುರಾನ್

ಗಳನ್ನು ಪ್ರತಿಮಾಡುತ್ತಿದ್ದ ವಿಷಯವನ್ನು ಇಲ್ಲಿ ಸ್ಮರಿಸಬಹುದು. ಇದು ಬಸವಣ್ಣನವರ ಕಾಯಕ ತತ್ವಕ್ಕೆ ಸಮಾನವೇ ಸರಿ. ಇವನ ಸಂಬಳದ ಹಣವನ್ನು ಬಡವರ ಉಪಯೋಗಕ್ಕೆ ದಾನಮಾಡುತ್ತಿದ್ದನು.

ಕ್ರಿ. ಶ. ೧೪೭೨ರಲ್ಲಿ ಬೀದರದಲ್ಲಿ ಬಂದ ಬರಗಾಲದಲ್ಲಿ ಮಹಮದ್ ಗವಾ೯ ತನ್ನ ಐಶ್ವರ್ಯವನ್ನೆಲ್ಲಾ ಕೊಟ್ಟು ಬಡವರ ಪ್ರಾಣ ಉಳಿಸಿದನು. ಬಡವರಿಗೆ ಊಟ ಹಾಕಿಸಿದನು. ದರಿದ್ರ ನಾರಾಯಣನನ್ನು ಉದ್ಧರಿಸಿದನು. ತನ್ನ ಜನತಾ ಪ್ರೇಮವನ್ನು ವ್ಯಕ್ತಪಡಿಸಿದನು.

ಗವಾನನು ಸುಲ್ತಾನ್ ಮಹಮದ್ ಷಹನ ಕಾಲದಲ್ಲಿ ರಾಜ್ಯದ ಮುಖ್ಯ ಮಂತ್ರಿಯಾಗಿದ್ದನು.

ಗವಾನನು ನಿರಹಂಕಾರಿಯೂ, ದಯಾಪರನೂ, ವಿದ್ವಾಂಸನೂ ದೈವ ಭಕ್ತನೂ ಆಗಿದ್ದನು.

ಭಾರತದಲ್ಲಿ ಗವಾನನ್ನು ಹೋಲುವ ಮಂತ್ರಿಗಳು, ವಿಶಾಲ ಮೈಸೂರಿನ ದಿವಾ೯ ರಂಗಾಚಾರ್ಲು೯, ಸರ್ ಎಂ. ವಿಶ್ವೇಶ್ವರಯ್ಯ, ಸರ್ ಮಿರ್ಜಾ ಇಸ್ಮಾಯಿಲ್, ಬಂಗಾಳದ ಬಿ. ಸಿ. ರಾಯ್ ಹೀಗೆ ಕೆಲವರು ಮಾತ್ರ ಲಭಿಸಬಹುದು.

ಗವಾನನಿಗೆ ರಾಜನೀತಿಶಾಸ್ತ್ರ, ಗಣಿತ ಶಾಸ್ತ್ರ, ಖಗೋಳಶಾಸ್ತ್ರ, ಅರಬಿ, ಪಾರ್ಶಿ, ಉರ್ದು೯ ಭಾಷೆಗಳು ಬರುತ್ತಿದ್ದುವು. ಇವನು ದೊಡ್ಡ ಕವಿ. ಪಾರ್ಶಿ ಮತ್ತು ಅರಬ್ಬಿ ಭಾಷೆಗಳಲ್ಲಿ ಹಲವು ಗ್ರಂಥಗಳನ್ನು ಬರೆದಿದ್ದಾನೆ. ಇವನನ್ನು ಪಿತೂರಿಕಾರರು ಸಿಕ್ಕಿಸಿಕೊಳ್ಳಲು ಮಹಮದ್‌ಷಹನು ೧೪೮೧ನೇ ಇಸವಿ ಏಪ್ರಿಲ್ ತಾರೀಖು ೪ರಲ್ಲಿ ಕೊಲ್ಲಿಸಿದನು. ಲೋಕೋಪಕಾರಿಗಳಾದ ಸಾಕ್ರಟೀಸ್, ಯೇಸುಕ್ರಿಸ್ತ, ಅಬ್ರಹಾಂ ಲಿಂಕನ್, ಮಹಾತ್ಮಗಾಂಧಿಯುವರಂತೆ ಈ ಮಹಾಪುರುಷನಿಗೆ ಇಂತಹ ಅಪಮೃತ್ಯು ಪ್ರಾಪ್ತವಾಯಿತು. ಗವಾನನು ಸತ್ತ ಏಳು ವರ್ಷಗಳಲ್ಲಿ ಬಹಮನೀ ರಾಜ್ಯ ಹಾಳಾಯಿತು. ಬುದ್ಧಿಯಿಲ್ಲದ ಅರಸನರಾಜ್ಯ ಉಳಿವುದೆಂತು? ಬೆಳೆಯುವುದೆಂತು?

ಗವಾನನು ಪಾರ್ಶಿಸ್ಥಾನಕ್ಕೆ ಸೇರಿದ ಗಿರ್ಲಾದೇಶದ ರಾಜವಂಶಕ್ಕೆ ಸೇರಿದವನು. ಗವಾನನ ಜನನ ೧೪೦೮. ಇವನ ತಂದೆ ಖಾಜಾ ಮೊಹಮದ್ ಗವಾನನು. ವ್ಯಾಪಾರದ ಕಾರಣ ತನ್ನ ದೇಶವನ್ನು ಬಿಟ್ಟು ಭಾರತಕ್ಕೆ ಬಂದನು. ಗವಾನನು ಮಕ್ಕಾಪಟ್ಟಣದಲ್ಲಿ ಕೆಲಕಾಲ ಇದ್ದನು. ಗವಾನನಿಗೆ ಸಾಧುಗಳ ಬಗ್ಗೆ ಮಮತೆ, ಗ್ರಂಥಾವಲೋಕನದಲ್ಲಿ ಆಸಕ್ತಿ ಹೆಚ್ಚಾಗಿತ್ತು. ಅವನಲ್ಲಿ ೩೦೦೦ ಪುಸ್ತಕಗಳಿದ್ದವು. ಅವನ್ನು ಬೀದರದಲ್ಲಿದ್ದ ಮದರಸಾಗೆ (ವಿದ್ಯಾಶಾಲೆ) ಕೊಟ್ಟನು. ಮಹಮದ್ ಗವಾನನು ಯುದ್ಧಕಲಾಪ್ರವೀಣನಾಗಿದ್ದು ಹಲವಾರು ಯುದ್ಧಗಳನ್ನು ಜಯಿಸಿ ಬಹಮನಿ ರಾಜ್ಯವನ್ನು ಬಲಪಡಿಸಿದನು. ಬಹುಮನಿ ರಾಜ್ಯವು ಕ್ರಿ. ಶ. ೧೩೪೭ರಲ್ಲಿ ಕಲ್ಬುರ್ಗಿಯಲ್ಲಿ ಸ್ಥಾಪನೆಯಾಯಿತು. ಹಸ್ಸಗಂಗೂ ಬಹಮನಿ ಈ ರಾಜ್ಯ ಸ್ಥಾಪಕನು. ಈ ರಾಜ್ಯ ೧೫೨೭ರಲ್ಲಿ ಒಡೆದು ಹಾಳಾಯಿತು. ಈ ರಾಜ್ಯವು ಅರಬ್ಬೀ ಸಮುದ್ರದಿಂದ ಬಂಗಾಳ ಕೊಲ್ಲಿಯವರೆಗೆ, ಕೃಷ್ಣಾನದಿಯಿಂದ ಮಾಳವ ದೇಶದವರೆಗೆ ಹಬ್ಬಿತ್ತು. ಕಡೆಗೆ ಈ ರಾಜ್ಯ ಐದು ಭಾಗಗಳಾಗಿ, ಬೀದರ್, ಬಿಹಾರ್, ಅಹಮದ್ ನಗರ, ಬಿಜಾಪುರ, ಗೋಲ್ಕಂಡ ಎಂದು ಭಾಗಗಳಾಯಿತು. ಈ ೫ ರಾಜ್ಯಗಳು ಒಂದಾಗಿ ಕೃಷ್ಣಾತೀರದ ರಕ್ಕಸತಂಗಡಗಿಯ ಹತ್ತಿರ ಯುದ್ಧ ಮಾಡಿ ೧೫೬೫ರಲ್ಲಿ ವಿಜಯ ನಗರವನ್ನು ಹಾಳು ಮಾಡಿದವು. ಸುಪ್ರಸಿದ್ಧ ಚಾಂದಬೀಬಿ ಬಿಜಾಪುರದ ರಾಣಿಯಾಗಿದ್ದಳು. ಬಹಮನೀ ರಾಜ್ಯಕ್ಕೆ ಮೊದಲು ಗುಲ್ಬರ್ಗ, ಅನಂತರ ಬೀದರೆ ರಾಜಧಾನಿ ಎನಿಸಿದುವು. ಅವರ ಕಾಲದಲ್ಲಿ ಕಟ್ಟಿದ ಕೋಟೆ, ಮಸೀತಿ ಮೊದಲಾದುವನ್ನು ಕಲ್ಬುರ್ಗಿ ಮತ್ತು ಬೀದರಗಳಲ್ಲಿ ನಾವು ಇಂದಿಗೂ ನೋಡಬಹುದು.

ಬಹಮನೀ ರಾಜ್ಯದಲ್ಲಿ ಗವಾನನೇ ಅತ್ಯಂತ ಕೀರ್ತಿಶಾಲಿ. ಆ ರಾಜ್ಯ ನಾಶವಾದರೂ ಅವನ ಕೀರ್ತಿ ಮಾತ್ರ ಭಾರತದಲ್ಲಿ ನಿಂತಿದೆ. ದಿವಂಗತ ಎಂ. ಎಸ್. ಪುಟ್ಟಣ್ಣನವರು ೧೯೨೨ರಲ್ಲಿ 'ಮಹಮದ್ ಗವಾನನ ಚರಿತ್ರೆ' ಯನ್ನು ಕನ್ನಡದಲ್ಲಿ ಬರೆದು ನಾಡಿಗೆ ಉಪಕಾರ ಮಾಡಿದ್ದಾರೆ.

ಇತ್ತೀಚಿನ ಕಾಲದಲ್ಲಿ ಮಂತ್ರಿಗಳಾಗುವ ಆಶೆ ಬಹು ಜನರಿಗೆ ಬರುತ್ತಿದೆ. ಅದಕ್ಕೆ ಪರಿಸ್ಥಿತಿಯೇ ಕಾರಣವೆನಿಸಿದೆ. ಅಂತಹ ಜನರು ಮಹ

ಮದ್ ಗರ್ವಾ, ಸರ್ ಮಿರ್ಜಾ ಇಸ್ಮಾಯಿಲ್, ದಿರ್ವಾ ರಂಗಾಚಾರ್ಲು, ಸರ್ ವಿಶ್ವೇಶ್ವರಯ್ಯ ಇಂತಹ ಮಹನೀಯರ ಚರಿತ್ರೆಗಳನ್ನು ಓದುವುದು ಅಗತ್ಯ ಹಾಗೂ ಲಾಭಪ್ರದ.

"ಪಲವೋದನೋದಿ ಮನವಂ
ವಲಗೆಡಿಸುವುದದೇಕೆ ?"

—ಕನ್ನಡ ಕವಿ



# ಸಾಹಿತ್ಯದಲ್ಲಿ ನಾಟಕದ ಸ್ಥಾನ?

ಪ್ರಪಂಚದ ಯಾವ ಸಾಹಿತ್ಯದಲ್ಲಿ ನೋಡಿದರೂ ನಾಟಕಗಳಿಗೆ ಅಗ್ರ ಪೂಜೆ ಇದ್ದಂತೆ ತೋರುತ್ತದೆ. ಇದಕ್ಕೆ ಕಾರಣ ಗುರುತರವಾಗಿಯೇ ಇರಬೇಕು. "ಕಾವ್ಯೇಷು ನಾಟಕಂ ರಮ್ಯಂ" ಎಂಬ ಸಂಸ್ಕೃತೋಕ್ತಿಯು ಸಾಹಿತ್ಯದಲ್ಲಿ ನಾಟಕಗಳ ಹಿರಿಮೆಯನ್ನು ಸಾರಿ ಹೇಳುತ್ತದೆ. ಸಾಹಿತ್ಯ ಪಂಡಿತರಲ್ಲಿ ಪ್ರಚಾರದಲ್ಲಿರುವ 'ನಾಟಕಾಂತ ಸಾಹಿತ್ಯ' ಎಂಬ ಮಾತು ವಿದ್ಯಾರ್ಥಿಗಳಿಗೆ ಕಟ್ಟಕಡೆಯಲ್ಲಿ ನಾಟಕಗಳ ಪಾಠವಾಗಬೇಕು ಎಂಬುದನ್ನು ಸ್ಪಷ್ಟಪಡಿಸುತ್ತದೆ. ವೇದವಾಙ್ಮಯದಲ್ಲಿ ಉಪನಿಷತ್ತು ಹೇಗೆ ಮುಖ್ಯವೋ ಸಾಹಿತ್ಯದಲ್ಲಿ ನಾಟಕಗಳು ಹಾಗೆ ಮುಖ್ಯ ಎಂದು ಪ್ರಾಜ್ಞರ ಅಭಿಪ್ರಾಯವಾಗಿದೆ.

ನಾಟಕಗಳ ಹಿರಿಮೆಯನ್ನು ಕುರಿತಾದ ಈ ಮಾತು, ಕೇವಲ ಭಾರತೀಯ ಸಾಹಿತ್ಯಕ್ಕೆ ಮಾತ್ರ ಅನ್ವಯಿಸುವುದಿಲ್ಲ. ಪ್ರಪಂಚದ ಪ್ರಖ್ಯಾತ ಹಾಗೂ ಪ್ರಾಚೀನ ವಾಙ್ಮಯಗಳಾದ, ಇಂಗ್ಲಿಷ್, ಗ್ರೀಕ್, ಸಾಹಿತ್ಯಗಳ ಚರಿತ್ರೆಯಲ್ಲಿಯೂ ಇದಕ್ಕೆ ನಿದರ್ಶನವಿದೆ. ಆಂಗ್ಲ ಸಾಹಿತ್ಯದಲ್ಲಿ ಪ್ರಖ್ಯಾತ ನಾಟಕಗಳ ಕರ್ತೃವಾದ ಷೇಕ್ಸ್‌ಪಿಯರ್ ಮಹಾಕವಿಗೆ ಇರುವಷ್ಟು ಪ್ರಾಮುಖ್ಯತೆಯು, ಷೆಲ್ಲಿ, ವರ್ಡ್ಸ್‌ವರ್ತ್, ಗೋಲ್ಡ್ ಸ್ಮಿತ್ ಮೊದಲಾದ ಇತರ ಕವಿಗಳಿಗೆ ಇಲ್ಲವಾಗಿದೆ. ಗ್ರೀಕ್ ಸಾಹಿತ್ಯದಲ್ಲಿ ಕೂಡ, ಈಸ್ಕಿಲಸ್, ಸಾಫೋಕ್ಲೀಸ್, ಯೂರಿಪಿಡೀಸ್, ಎಂಬ ನಾಟಕ ಕವಿಗಳಿಗೆ ಇರುವಷ್ಟು ಮಾಹಾತ್ಮ್ಯವು ಹೋಮರ್ ಮೊದಲಾದ ಮಹಾಕವಿಗಳಿಗೆ ಇಲ್ಲವಾಗಿದೆ. ಆದುದರಿಂದ 'ಕಾವ್ಯಗಳಲ್ಲಿ ನಾಟಕವು ಶ್ರೇಷ್ಠವಾದುದು' ಎಂಬ ಮಾತನ್ನು ಪ್ರಾಚೀನ ಕಾಲದ ಭಾರತೀಯರು, ಯೂರೋಪಿನ ಗ್ರೀಕರು ಮತ್ತು ಇಂಗ್ಲೀಷರು ಏಕಕಂಠದಿಂದ ಒಪ್ಪಿಕೊಂಡಿರುವರೆಂದು ನಾವು ನಿರ್ಧರಿಸಬಹುದು.

ನಮ್ಮ ಅಲಂಕಾರ ಶಾಸ್ತ್ರಜ್ಞರು ವರ್ಣನಾತ್ಮಕ ಕಾವ್ಯಗಳನ್ನು ಶ್ರವ್ಯ ಕಾವ್ಯಗಳೆಂದೂ, (ಕಿವಿಯಿಂದ ಕೇಳತಕ್ಕುವು), ರಂಗಭೂಮಿಯ ನಾಟಕ ಗಳನ್ನು ದೃಶ್ಯಕಾವ್ಯಗಳೆಂದೂ (ಕಣ್ಣಿನಿಂದ ನೋಡತಕ್ಕುವು) ಹೇಳಿರು ತ್ತಾರೆ. ಭಾರತೀಯ ನಾಟಕಗಳ ಉತ್ಪತ್ತಿಗೆ ಭರತಮುನಿಯ ನಾಟ್ಯ ಶಾಸ್ತ್ರ ವೇ (ಸು. ಕ್ರಿ. ಶ. ೧ನೇ ಶತಮಾನ) ಮೂಲವೆಂದು ತೋರುತ್ತದೆ. ಭರತನ ನಾಟ್ಯಶಾಸ್ತ್ರದಲ್ಲಿ ಬ್ರಹ್ಮದೇವರು ದೇವತೆಗಳ ಪ್ರಾರ್ಥನೆಯಂತೆ ಅವರಿಗಾಗಿ ಒಂದು ಕ್ರೀಡೆಯನ್ನು ದಯಪಾಲಿಸಿದನೆಂದೂ, ಆ ಕ್ರೀಡೆಯಲ್ಲಿ ಋಗ್ವೇದದ ಸಾಹಿತ್ಯ, ಯಜುರ್ವೇದದ ಅಭಿನಯ, ಸಾಮವೇದದ ಸಂಗೀತ, ಅಥರ್ವಣದ ರಸಗಳು ಇವುಗಳನ್ನು ಕೂಡಿಸಿ ನಾಟ್ಯವೆಂಬ ಬೇರೊಂದು ಶಾಸ್ತ್ರವನ್ನು ನಿರ್ಮಿಸಿದನೆಂದೂ, ಅದೇ ನಮ್ಮ ನಾಟಕದ ಮೂಲವಾಯಿ ತೆಂದೂ ಹೇಳಿದೆ. ಇದರ ತಾತ್ಪರ್ಯ ನಾಟಕ ಸಾಹಿತ್ಯವು ಚತುರ್ವೇದಗಳ ಸಾರಭೂತ, ಹಾಗೂ ಬ್ರಹ್ಮಾದಿ ದೇವತೆಗಳೇ ಇದರ ಕರ್ತೃ ಎಂದು ಹೇಳಿ ದಂತಾಯಿತು.

ಹಿಂದೂ ಜನರು ಭಗವಂತನನ್ನು ಜಗನ್ನಾಟಕ ಸೂತ್ರಧಾರಿ ಎಂದು ಹೇಳುವುದುಂಟು. ಸಂಸ್ಕೃತ ರೇಣುಕ ಚಂಪೂ ಕಾವ್ಯ ಕರ್ತೃವು 'ಕೈಲಾಸ ದಲ್ಲಿ ನಂದಿ, ಭೃಂಗಿ ಮೊದಲಾದ ಪ್ರಮಥರು ಶಿವನ ಸನ್ನಿಧಿಯಲ್ಲಿ ವೇದಾಂತ ಕಥಾವಸ್ತುವಿನಿಂದ ಕೂಡಿದ ಒಂದು ನಾಟಕವನ್ನು ಆಡಿದರು' ಎಂದು ಹೇಳಿ ರುತ್ತಾನೆ. ಇದು ನಮ್ಮ ನಾಟಕ ಕಲೆಯ ಪ್ರಾಚೀನತೆಗೆ ನಿದರ್ಶನವಾಗಿದೆ. ಹಿಂದೂ ಅರಸರು, ಹಿಂದಿನ ಕಾಲದಿಂದಲೂ ನಾಟಕ ಕಲೆಗೆ ಪ್ರೋತ್ಸಾಹ ವೀಯುತ್ತಾ ಬಂದಿದ್ದಾರೆ. ವಿಜಯನಗರದ ರಾಯರು, ಕೆಳದಿಯ ಅರಸರು, ತಮ್ಮ ತಮ್ಮ ಅರಮನೆಗಳಲ್ಲಿ ನಾಟಕಶಾಲೆಗಳನ್ನು ನಿರ್ಮಿಸಿದ್ದರು, ಎಂಬುದಕ್ಕೆ ಪ್ರಮಾಣಗಳುಂಟು. ರಾಜಾಸ್ಥಾನಗಳಲ್ಲಿ ಕವಿ, ಗಮಕಿ, ಗಾಯಕರಿಗಿದ್ದಂತೆ ನಟರಿಗೂ ಮನ್ನಣೆಯಿತ್ತು. ಮೈಸೂರಿನ ಅರಸರು, ಕನ್ನಡ ನಾಟಕಕಲೆಗೆ ಬಹಳ ವರ್ಷಗಳಿಂದ ಬೆಂಬಲವೀಯುತ್ತ ಬಂದಿದ್ದಾರೆಂಬುದಕ್ಕೆ ಚಿಕ್ಕದೇವರಾಜ ಒಡೆಯರ

ಆಸ್ಥಾನ ಕವಿ ಸಿಂಗಳಾರ್ಯನ ಮಿತ್ರಾವಿಂದಾ ಗೋವಿಂದ ಮತ್ತು ಕೈ|| ಚಾಮರಾಜ ಒಡೆಯರ ಆಸ್ಥಾನ ಕವಿ ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳ ಕನ್ನಡ ಶಾಕುಂತಲ ನಾಟಕ, ಉತ್ತರ ರಾಮಚರಿತೆ ನಾಟಕ, ಚಂಡಕೌಶಿ ನಾಟಕ, ಶೂರಸೇನ ಚರಿತೆ (ಒಥೆಲೋ ಭಾಷಾಂತರ) ಮೊದಲಾದುವುಗಳು ನಿದರ್ಶನವಾಗಿವೆ. ಅಲ್ಲದೆ ಮೈಸೂರಿನಲ್ಲಿ ನಾಟಕ ಕಲೆಗೆ ಪ್ರೋತ್ಸಾಹ ಕೊಡುವ ಸಲುವಾಗಿಯೇ ಅರಮನೆಯ ಉದಾರಾಶ್ರಯದಲ್ಲಿ ನಿರ್ಮಿತವಾಗಿರುವ "ಜಗನ್ಮೋಹನ ಭವನ" ಪ್ರತ್ಯಕ್ಷ ಸಾಕ್ಷಿಯಾಗಿದೆ. ಪ್ರಾಚೀನ ಭಾರತದ ಪ್ರಖ್ಯಾತ ಸಂಸ್ಕೃತ ಕವಿಯಾದ ಶ್ರೀ ಹರ್ಷನು, (ಸು. ಕ್ರಿ. ಶ. ೬೫೦–೬೪೭) ರತ್ನಾವಳಿ, ಪ್ರಿಯ ದರ್ಶಿಕೆ, ನಾಗಾನಂದ ಎಂಬ ಮೂರು ಮಹತ್ವದ ನಾಟಕಗಳನ್ನು ಬರೆದಿರುವುದೂ, ಪ್ರಖ್ಯಾತ ವಿಜಯನಗರದ ಕೃಷ್ಣದೇವರಾಯನು (೧೫೦೯–೨೯) ನಾಟಕ ಕರ್ತೃಗಳಿಗೆ ಹೆಚ್ಚು ಹೆಚ್ಚು ಪ್ರೋತ್ಸಾಹ ಕೊಟ್ಟುದೂ ಅಲ್ಲದೆ ರಾಜನೇ ಸ್ವಂತವಾಗಿ 'ಜಾಂಬುವತೀ ಕಲ್ಯಾಣಮು' ಎಂಬ ನಾಟಕವನ್ನು ಬರೆದು ಆಡಿಸಿದುದೂ ನಮ್ಮ ಜನ ಪೂರ್ವದಿಂದಲೂ ನಾಟಕ ಸಾಹಿತ್ಯಕ್ಕೆ ಪ್ರೋತ್ಸಾಹವಿತ್ತಿರುವರೆಂಬುದಕ್ಕೆ ನಿದರ್ಶನವಾಗಿದೆ.

ಭಾರತೀಯ ಸಾಹಿತ್ಯದಲ್ಲಿ ವಿಖ್ಯಾತವಾದ ಸ್ವಪ್ನ ವಾಸವದತ್ತ, ಪ್ರತಿಜ್ಞಾಯೌಗಂಧರಾಯಣ, ಚಾರುದತ್ತ, ದೂತವಾಕ್ಯ, ಊರುಭಂಗ, ಪ್ರತಿಮಾ, ಅಭಿಷೇಕ, ಮೊದಲಾದ ನಾಟಕಗಳ ಕರ್ತೃ ಭಾಸ, ಶಾಕುಂತಲ ವಿಕ್ರಮೋರ್ವಶೀಯ, ಮಾಲವಿಕಗ್ನಿಮಿತ್ರ ನಾಟಕಗಳ ಕರ್ತೃ ಕಾಳಿದಾಸ, ಉತ್ತರರಾಮ ಚರಿತೆ, ಮಾಲತೀ ಮಾಧವ, ಮಹಾವೀರ ಚರಿತೆ ನಾಟಕಗಳ ಕರ್ತೃ ಭವಭೂತಿ, ಮೃಚ್ಛಕಟಿಕ ನಾಟಕದ ಕರ್ತೃ ಆರ್ಯಕ್ಷೇಮೀಶ್ವರ, ಪ್ರಬೋಧ ಚಂದ್ರೋದಯದ ಕವಿ ಕೃಷ್ಣಮಿಶ್ರ ಇತ್ಯಾದಿ ಕಬ್ಬಿಗರಿಗೆ ಇರುವಷ್ಟು ಪ್ರಾಮುಖ್ಯತೆಯೂ, ಜನಪ್ರಿಯತೆಯೂ, ಇತರ ಶ್ರವ್ಯ ಕಾವ್ಯ ಕರ್ತೃಗಳಿಗೆ ಇಲ್ಲದಿರುವುದು ಗಮನಾರ್ಹವಾಗಿದೆ.

ಇದೇ ಬಗೆಯ ಮನೋಧರ್ಮ ಪಾಶ್ಚಾತ್ಯರಿಗೂ ಉಂಟೆಂಬುದಕ್ಕೆ ಇಂಗ್ಲಿಷ್ ಚರಿತ್ರೆಯಲ್ಲಿ ಕೆಲವು ನಿದರ್ಶನಗಳಿವೆ. ಷೇಕ್ಸ್‌ಪಿಯರ್ ಮಹಾ

ಕವಿಯ ನಾಟಕಾಭಿನಯವನ್ನು ನೋಡಲು ಎಲಿಜಬೆತ್ ಮಹಾರಾಣಿಯು ನಾಟಕ ರಂಗಕ್ಕೆ ಬಂದಿದ್ದಳು. ಟೆನಿಸನ್ ಮಹಾಕವಿಯು ತನ್ನ ಮರಣ ಕಾಲದಲ್ಲಿ ಷೇಕ್ಸ್‌ಫಿಯರನ ಉದ್ಗ್ರಂಥಗಳನ್ನು ಕೈಯ್ಯಲ್ಲಿಟ್ಟುಕೊಂಡು ಪ್ರಾಣವನ್ನು ಬಿಟ್ಟನು. ಲಾರ್ಡ್ ಮೆಕಾಲೆಯು ಇಂಗ್ಲೀಷ್ ಸಾಮ್ರಾಜ್ಯ ವನ್ನಾದರೂ ಬಿಟ್ಟು ಕೊಡಬಹುದು. ಆದರೆ ಷೇಕ್ಸ್‌ಪಿಯರ್ ಮಹಾಕವಿಯ ಗ್ರಂಥಗಳನ್ನು ಮಾತ್ರ ಬಿಟ್ಟುಕೊಡಲಾಗುವುದಿಲ್ಲ ಎಂದು ಹೇಳಿದನು. ಇತ್ಯಾದಿ ಮಾತುಕತೆಗಳು ಆಂಗ್ಲೇಯರ ಕಲಾಭಿಜ್ಞತೆಗೂ, ನಾಟಕ ಪ್ರೇಮಕ್ಕೂ ನಿದರ್ಶನವಾಗಿವೆ.

ಈಗಲೂ ಪ್ರಪಂಚದಲ್ಲಿ ನಾಟಕಕರ್ತೃಗಳಿಗೆ ಹೆಚ್ಚು ಮನ್ನಣೆ ಉಂಟೆಂಬುದಕ್ಕೆ ದಿವಂಗತ ರವೀಂದ್ರನಾಥ ಠಾಗೂರರು ಬರೆದಿರುವ ಪ್ರಕೃತಿಯ ಪ್ರತಿಶೋಧ, ಚಿತ್ರಾಂಗದಾ, ಮಾಲಿನಿ, ಅಂಚೆಯಮನೆ, ಫಾಲ್ಗುಣಿ, ರಕ್ತಕವೀರ, ಚಿರಕುಮಾರ ಸಭಾ ನಾಟಕಗಳು ಜಗತ್ತಿನ ಮನ್ನಣೆಗೆ ಪಾತ್ರ ವಾಗಿರುವುದು ನಿದರ್ಶನವಾಗಿದೆ. ಇಂಗ್ಲೆಂಡಿನಲ್ಲಿ ರಸಿಕ ನಾಟಕ ಕರ್ತೃ ವಾಗಿದ್ದ ಮಹಾಕವಿ ಜಾರ್ಜ್ ಬರ್ನಾಡ್‌ಷಾ ತನ್ನ ನಾಟಕ ಪ್ರತಿಭೆಯಿಂದ ಜಗತ್ತಿನ ಮನ್ನಣೆಗೆ ಪಾತ್ರನಾಗಿರುವುದನ್ನು ನಾವು ಗಮನಿಸಬಹುದು- ಕರ್ಣಾಟಕದಲ್ಲಿ ದಿವಂಗತ ಕೈಲಾಸಂ ತನ್ನ ವಿಲಕ್ಷಣ ಪ್ರತಿಭೆಯಿಂದ ವಿನೂತನ ಶೈಲಿಯಲ್ಲಿ ರಮಣೀಯವಾದ ನಾಟಕಗಳನ್ನು ವಿರಚಿಸಿ ನೂತನ ಸಾಹಿತ್ಯಾಚಾರ್ಯರೆನಿಸಿದರೆಂಬುದನ್ನು ನಾವು ಪರಿಶೀಲಿಸಬಹುದು.

ಹೀಗೆ ಪ್ರಪಂಚದಲ್ಲೆಲ್ಲಾ ನಾಟಕ ಸಾಹಿತ್ಯವು, ವಾಙ್ಮಯ ಪ್ರಪಂಚ ದಲ್ಲಿ ಹೆಚ್ಚಿನ ಮನ್ನಣೆಯನ್ನು ಪಡೆಯಲು ಅದಕ್ಕೆ ಕೆಲವು ಮಹತ್ವದ ಕಾರಣಗಳು ಇರಲೇಬೇಕೆಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ನಾಟಕ ಗಳಲ್ಲಿ, ಸಂಗೀತ, ಸಾಹಿತ್ಯ, ಚಿತ್ರ, ಶಿಲ್ಪ, ನೃತ್ಯ ಮೊದಲಾದ ಎಲ್ಲ ಕಲೆಗಳ ಸಮಾವೇಶವುಂಟು. ಅದುಕಾರಣವೇ ಇದು ಹೆಚ್ಚು ಜನಪ್ರಿಯ ವಾಗಿದೆ. ಅಲ್ಲದೆ ನಾಟಕಗಳು ಜೀವಂತ ವ್ಯಕ್ತಿಗಳಿಂದ ರಂಗಭೂಮಿಯ ಮೇಲೆ ಸಕಲ ವೈಭವಗಳಿಂದ ಕೂಡಿದ ಸನ್ನಿವೇಶಗಳೊಡನೆ ಅಭಿನಯಿಸಲ್ಪಡು ವುದರಿಂದ ಅದು ಪ್ರೇಕ್ಷಕರ ಮೇಲೆ ಪ್ರತ್ಯಕ್ಷ ದೃಶ್ಯಗಳೋ ಎಂಬಂತೆ ಮಿಗಿ

ಲಾದ ಪರಿಣಾಮವನ್ನು ಉಂಟುಮಾಡುವುದು ಸಹಜವಾಗಿಯೇ ಇದೆ. ಯಾವನಾದರೊಬ್ಬ ಶ್ರೋತೃವು ಒಂದು ವರುಷ ಕೇಳಿದ ಪುರಾಣದ ಕಥೆಯೊಂದನ್ನು ರಂಗಭೂಮಿಯ ಮೇಲೆ ಒಂದು ದಿನ ನೋಡಿದಾಗ ಅವನಿಗಾಗುವ ಸಂತೋಷವು ಅದೆಷ್ಟೋಪಾಲು ಮಿಗಿಲಾದುದು ಎಂಬುದನ್ನು ನಾವು ಅನುಭವದಿಂದ ಹೇಳಬಹುದು. ಆದುದರಿಂದ ವಸ್ತುಕ ವರ್ಣಕಾದಿ ಶ್ರವ್ಯ ಕಾವ್ಯಗಳು ಶ್ರೋತೃಗಳ ಮೇಲೆ ಒಂದು ವರ್ಷಮಾಡುವ ಪರಿಣಾಮವನ್ನು ದೃಶ್ಯಕಾವ್ಯವಾದ ನಾಟಕವು, ಪ್ರೇಕ್ಷಕರ ಮೇಲೆ ಕೆಲವು ಘಂಟೆಗಳಲ್ಲಿ ರಂಗಭೂಮಿಯ ಮೇಲೆ ಉಂಟುಮಾಡುತ್ತದೆ ಎಂಬುದನ್ನು ಒಪ್ಪಿಕೊಂಡರೆ ನಾಟಕದ ಹಿರಿಮೆ, ಪ್ರಭಾವ ತಾನಾಗಿ ತಿಳಿದುಬರುತ್ತದೆ.

ಸುಪ್ರಸಿದ್ಧ ಭಾರತೀಯ ವಿದುಷಿ ದಿವಂಗತೆ ಸರೋಜಿನೀದೇವಿಯವರು ತಮ್ಮದೊಂದು ಭಾಷಣದಲ್ಲಿ "ಒಂದು ದೇಶದ ನಾಗರೀಕತೆಯನ್ನೂ, ಜ್ಞಾನಾನುಭವಗಳ ಮಟ್ಟವನ್ನೂ ಆ ದೇಶದ ಕೆಲವು ನಾಟಕಗಳನ್ನು ನೋಡಿ ನಿರ್ಧರಿಸಬಹುದು" ಎಂದು ಹೇಳಿರುವ ಮಾತು ನಿಜವಾಗಿಯೂ ಅರ್ಥಪೂರ್ಣವಾಗಿದೆ. ರಾಷ್ಟ್ರಪುರುಷ ಗಾಂಧೀಜಿ ತಮ್ಮ ಆತ್ಮಚರಿತ್ರೆಯಲ್ಲಿ "ತಾವು ಬಾಲ್ಯದಲ್ಲಿ ನೋಡಿದ ಸತ್ಯ ಹರಿಶ್ಚಂದ್ರ ಮತ್ತು ತಾಂಡವ ಮುನಿಯ ನಾಟಕಾವಲೋಕನವು ತಮ್ಮ ಮನಸ್ಸಿನ ಮೇಲೆ ಅಭೂತಪೂರ್ವವಾದ ಒಳ್ಳೆಯ ಸದ್ಗುಣಗಳ ಪರಿಣಾಮವನ್ನು ಉಂಟುಮಾಡಿದವು" ಎಂದು ಬರೆದಿರುವುದು ಸಾಹಿತ್ಯದಲ್ಲಿ ನಾಟಕಗಳ ಸ್ಥಾನನಿರ್ಣಯಕ್ಕೆ ಯೋಗ್ಯತಾಪತ್ರ ವಿತ್ತಂತಿದೆಯಲ್ಲವೆ ?

ಸಾಹಿತ್ಯದಲ್ಲಿ ನಾಟಕಗಳನ್ನು ಕುರಿತಾದ ಈ ಪ್ರಬಂಧದಲ್ಲಿ ನಾಟಕಗಳ ಲಕ್ಷಣ, ಅವುಗಳ ವೈಲಕ್ಷಣ್ಯ ಮತ್ತು ಮಾಧುರ್ಯಗಳನ್ನು ಕುರಿತು ಕೆಲವು ಮಾತುಗಳನ್ನು ಬರೆಯುವುದು ಅಗತ್ಯವೆಂದು ತೋರುತ್ತದೆ. 'ನಟ್ 'ಎಂಬ ಧಾತುವಿನಿಂದ ನಾಟ್ಯ, ನಾಟಕ ಎಂಬ ಶಬ್ದಗಳಾಗಿವೆ. ನಟ್ ಎಂದರೆ ಕುಣಿ ಎಂದರ್ಥ. ಆದುದರಿಂದ ನಾಟಕದ ಮೂಲ ಕುಣಿತವಿದ್ದಿರಬೇಕು. ಈಗಲೂ ಬೈಲಾಟಗಳ ಕುಣಿತ ಇದಕ್ಕೆ ನಿದರ್ಶನವಾಗಿದೆ. ಅಲಂಕಾರ ಶಾಸ್ತ್ರಜ್ಞರು ದೃಶ್ಯ ಕಾವ್ಯಗಳನ್ನು ೧. ನಾಟಕ, ೨. ಪ್ರಕರಣ,

೩. ಭಾಣ, ೪. ಪ್ರಹಸನ, ೫. ಡಿಮ, ೬. ವ್ಯಾಯೋಗ, ೭. ಸಮ ವಾಕಾರ, ೮. ವೀಥಿ, ೯. ಅಂಕ, ೧೦. ಈಹಾಮೃಗ ಎಂದು ಹತ್ತು ವಿಧವಾಗಿ ವಿಂಗಡಿಸಿದ್ದಾರೆ. ಇವುಗಳಲ್ಲದೆ, ನಾಟಿಕೆ, ತ್ರೋಟಕ, ಗೋಷ್ಠಿ, ಸಟ್ಟಕ, ನಾಟ್ಯರಾಸಕ, ಪ್ರಸ್ಥಾನಕ, ಉಲ್ಲಾಸ್ಯ, ಕಾವ್ಯ, ಪ್ರೇಂಖಣ, ರಾಸಕ, ಸಂಲಾಪಕ, ಶ್ರೀಗದಿತ, ಶಿಲ್ಪಿಕ, ವಿಲಾಸಿಕಾ, ದುರ್ಮಲ್ಲಿಕಾ, ಪ್ರಕರ್ಣಿಕಾ, ಹಲ್ಲೀಶ, ಭಾಣಿಕಾ ಎಂದು ಹದಿನೆಂಟು ಉಪರೂಪಕಗಳನ್ನು ಹೇಳಿರುತ್ತಾರೆ.

ನಾಟಕದಲ್ಲಿ ಕಥಾವಸ್ತು, ನಾಯಕ ಮತ್ತು ರಸ ಎಂಬ ಈ ಮೂರು ಅಂಶಗಳು ಬಹುಮುಖ್ಯವೆನಿಸಿವೆ. ಕಾಳಿದಾಸನ ಶಾಂಕುತಲ ಮತ್ತು ಭಾಸನ ಸ್ವಪ್ನವಾಸವದತ್ತ ಇವು ಶೃಂಗಾರ ರಸಪ್ರಧಾನವಾಗಿಯೂ, ಭವ ಭೂತಿಯ ಉತ್ತರ ರಾಮಚರಿತೆಯು ಕರುಣರಸ ಪ್ರಧಾನವಾಗಿಯೂ, ಭಟ್ಟ ನಾರಾಯಣನ ವೇಣೀಸಂಹಾರವು ವೀರರಸಪ್ರಧಾನವಾಗಿಯೂ ಇರುವುದನ್ನು ನಾವು ಸ್ಮರಿಸಿಕೊಳ್ಳಬಹುದು. ಶ್ರವ್ಯ ಮತ್ತು ದೃಶ್ಯಕಾವ್ಯಗಳೆರಡಕ್ಕೂ ರಸವು ಪ್ರಾಣ ಸ್ವರೂಪವೇ ಸರಿ. ಆದರೆ ನಾಟಕಗಳಲ್ಲಿ ಯಾವುದಾದ ರೊಂದು ರಸಕ್ಕೆ ಪ್ರಾಮುಖ್ಯತೆ ಇರುವ ಮಟ್ಟಿಗೆ ಶ್ರವ್ಯಕಾವ್ಯಗಳಲ್ಲಿ ಇರು ವುದಿಲ್ಲ ಎಂಬುದನ್ನು ಹೇಳುವುದೇ ಇಲ್ಲಿ ನಮ್ಮ ತಾತ್ಪರ್ಯವಾಗಿದೆ. ಕಾವ್ಯಗಳ ಕವಿಗಿರುವಷ್ಟು ಸ್ವಾತಂತ್ರ್ಯ ನಾಟಕ ಕವಿಗಿರುವುದಿಲ್ಲ. ಕಾವ್ಯ ಕವಿ ಮನಬಂದಂತೆ ತಾನೇ ತಾನಾಗಿ ಮಾತಾಡುವಂತೆ ನಾಟಕ ಕವಿ ಮಾತಾಡಲಾರನು. ರೂಪಕ ಕವಿ ಪ್ರತಿಯೊಂದು ಮಾತನ್ನೂ ಪಾತ್ರಗಳ ಮುಖದಿಂದಲೇ ಆಡಿಸಬೇಕು. ಆದ್ದರಿಂದಲೇ ಪರಕಾಯಪ್ರವೇಶದಂತೆ ನಾಟಕನಿರ್ಮಾಣವು ಕಲಾಪೂರ್ಣವಾದ ಕಷ್ಟತಮ ಕಾರ್ಯವಾಗಿದೆ.

ರೂಪಕಗಳು ಗದ್ಯ, ಪದ್ಯ, ಗೀತೆ, ನೃತ್ಯ ಇತ್ಯಾದಿಗಳಿಂದ ಕೂಡಿರು ವುದರಿಂದ ಅವು ಓದುಗರನ್ನೂ, ಪ್ರೇಕ್ಷಕರನ್ನೂ ಆಕರ್ಷಿಸುವ ಸಂಮೋಹನ ಶಕ್ತಿಯಿಂದ ಕೂಡಿರುತ್ತವೆ. ನಾಟಕದ ವಿದೂಷಕನು ಹಾಸ್ಯದ ಗೊಂಬೆ ಯಂತೆ ಓದುಗರ ಉತ್ಸಾಹವನ್ನು ಹೆಚ್ಚಿಸುತ್ತಾನೆ. ನಾಟಕದ ಕಥಾವಸ್ತು ವಿಮಾನದ ಪ್ರಯಾಣದಂತೆ ವೇಗವಾಗಿ ಪ್ರತಿಭಾಮಯವಾಗಿ ಮುಂದು

ವರಿಯುತ್ತದೆ. ಕಾವ್ಯದ ವಸ್ತು ಗಾಡಿಯ ಪ್ರಯಾಣದಂತೆ ಮಂದಮಂದ ವಾಗಿ ನಡೆಯುತ್ತದೆ. ಒಂದು ನಾಟಕವು ಉತ್ತಮವಾಗಿರಬೇಕಾದರೆ, ಶ್ರೇಷ್ಠವಾದ ಕಥಾವಸ್ತು, ಆಕರ್ಷಕವಾದ ಸಂಭಾಷಣೆ, ಮನಸ್ಸನ್ನು ಕರಗಿಸುವ ರಸನಿರೂಪಣೆ, ಉತ್ತಮವಾದ ಶೈಲಿ, ಧೀರೋದಾತ್ತ ಕಥಾ ನಾಯಕ ಇವು ಮುಖ್ಯವೆಂದು ಹೇಳಬಹುದು. ನಾಟಕದ ಉದ್ದೇಶವು ಜನ ಮನರಂಜನೆಯೇ ಅಲ್ಲದೆ ಜನಾಂಗದ ಉನ್ನತಿಯೂ ಅಹುದು ಪ್ರಾಚೀನ ಭಾರತದಲ್ಲಿ ಈ ದೃಷ್ಟಿಯಿಂದಲೇ ನಾಟಕಗಳಿಗೆ ಪ್ರೋತ್ಸಾಹ ಸಿಗುತ್ತಿತ್ತೆಂದು ಭಾವಿಸಲು ಆಧಾರವಿದೆ. ಈಗಲೂ ಮುಂದುವರಿದ, ಅಮೆರಿಕ, ಇಂಗ್ಲೆಂಡ್, ರಷ್ಯ ಮೊದಲಾದ ದೇಶಗಳಲ್ಲಿ ಈ ನಾಟಕಗಳ ಪ್ರಯೋಗವನ್ನು ಈ ದೃಷ್ಟಿಯಿಂದಲೇ ನಡೆಸುತ್ತಿರುವರೆಂದು ನಾವು ಕೇಳುತ್ತೇವೆ.

ಭಾರತೀಯ ನಾಟಕಗಳು ಪ್ರಾಯೇಣ ಸುಖಾಂತವಾದವುಗಳು (Comedy). ಪಾಶ್ಚಾತ್ಯ ನಾಟಕಗಳು ವಿಶೇಷವಾಗಿ ದುಃಖಾಂತ ವಾದುವುಗಳು(Tragedy). ಈ ರೀತಿ ನಾಟಕದ ಗುರಿಯಲ್ಲಿ ಪೌರ್ವಾತ್ಯ ರಿಗೂ ಪಾಶ್ಚಾತ್ಯರಿಗೂ, ಭೇದವಾಗಲು ಆಯಾ ದೇಶೀಯ ಜನರ ಪರಿ ಸ್ಥಿತಿಗಳೂ ರುಚಿಭೇದಗಳೂ ಕಾರಣವೆಂದು ಊಹಿಸಬಹುದು. ಷೇಕ್ಸ್ ಪಿಯರ್ ಮಹಾಕವಿಯ ಪ್ರಖ್ಯಾತ ನಾಟಕಗಳಾದ ಹ್ಯಾಮ್ಲೆಟ್, ಒಥೆಲೋ, ಮ್ಯಾಕ್‌ಬೆತ್ ಮೊದಲಾದುವು ದುರಂತ ನಾಟಕಗಳೆಂಬುದು ಪ್ರಪಂಚಕ್ಕೆ ಗೊತ್ತಿರುವ ಮಾತು. ಪ್ರಖ್ಯಾತ ಗ್ರೀಕ್ ನಾಟಕ ಕರ್ತೃಗಳಾದ, ಈಸ್ಕಿಲಿಸ್, ಸಾಫೋಕ್ಲೀಸ್, ಯೂರಿಪಿಡೀಸ್ ಮೊದಲಾದವರ ನಾಟಕಗಳೂ ಕೂಡ ದುರಂತವಾಗಿಯೇ ಇರುತ್ತವೆ. "ಎಲ್ಲರನ್ನೂ ಬಡಿದು ಬಗ್ಗಿಸಿ ರಾಗಗಳನ್ನು ಉದ್ರೇಕಿಸಿ ಉಪಶಮನ ಗೈದು ಮಾನವನ ಮೂಲಪ್ರಕೃತಿಯ ಕಡೆಗೆ ದೃಷ್ಟಿಯನ್ನು ತಳ್ಳಿ, ಅಂತಃಕರಣವನ್ನು ಪರಿಪಕ್ವ ಮಾಡುವ ಸಾಮಾರ್ಥ್ಯವು ಘನ ವಿಷಾದಕ್ಕೆ ಮಾತ್ರ ಉಂಟು" ಎಂದು ಷೇಕ್ಸ್‌ಪಿಯರ್ ನಾಟಕಗಳ ವಿಮರ್ಶಕರಾದ ಶ್ರೀಮಾನ್ ಎಸ್. ವಿ. ರಂಗಣ್ಣನವರು ಹೇಳಿರು ತ್ತಾರೆ. ಭಾರತೀಯ ನಾಟಕಗಳು ಸುಖಾಂತವಾಗಿರಲು ಕಾರಣ ಓದುಗರ ಅಥವಾ ನೋಟಕರ ಮನಸ್ಸಿನ ಮೇಲೆ ಆಗುವ ಕಟ್ಟಕಡೆಯ ಪರಿಣಾಮ

ಮಂಗಳಲದಲ್ಲಿ ಮುಗಿಯಬೇಕು ಎಂಬ ಶಾಸ್ತ್ರಸಂಪ್ರದಾಯವನ್ನು ಅನುಸರಿಸಿಯೇ ಆಗಿರಬೇಕೆಂದು ತೋರುತ್ತದೆ.

ನಾಟಕಗಳನ್ನು ಪೌರಾಣಿಕ, ಸಾಮಾಜಿಕ, ಐತಿಹಾಸಿಕ ಎಂದು ಮೂರು ಗುಂಪುಗಳಾಗಿ ವಿಂಗಡಿಸಬಹುದು. ಭಾರತೀಯ ಪ್ರಾಚೀನ ನಾಟಕಗಳು ಬಹುಮಟ್ಟಿಗೆ ಪೌರಾಣಿಕಗಳು. ಗ್ರೀಕ್ ನಾಟಕಗಳೂ ಇದೇ ಜಾತಿಗೆ ಸೇರಿದುವು. ಆದರೆ ಷೇಕ್ಸ್‌ಪಿಯರ್ ಮೊದಲಾದ ಪಾಶ್ಚಾತ್ಯ ಕವಿಗಳ ನಾಟಕಗಳು ಹೆಚ್ಚು ಐತಿಹಾಸಿಕವಾದುವುಗಳು. ಈ ಹಿಂದೆ ಹೇಳಿದಂತೆ ಪೌರಾಣಿಕ, ಐತಿಹಾಸಿಕ ನಾಟಕಗಳಿಗೆ, ಶೃಂಗಾರ, ಕರುಣ ಮತ್ತು ವೀರರಸಗಳು ಪ್ರಧಾನವಾದರೆ, ಸಮಾಜವನ್ನು ಸುಧಾರಿಸುವ ಉದ್ದೇಶದಿಂದ ವಿರಚಿತವಾದ ನಾಟಕಗಳಿಗೆ, ಹಾಸ್ಯರಸವು ಪ್ರಧಾನವಾಗಿರಬೇಕೆಂದು ತೋರುತ್ತದೆ. ಕರ್ಣಾಟಕದ ಕೈಲಾಸಂರವರ ನಾಟಕಗಳೂ, ಇಂಗ್ಲೆಂಡಿನ ಷಾರವರ ನಾಟಕಗಳೂ ಈ ನಮ್ಮ ಮಾತಿಗೆ ನಿದರ್ಶನವಾಗಿವೆ.

ನಾಟಕದ ಪ್ರಾಧಾನ್ಯತೆಯನ್ನು ಕುರಿತಾದ ಈ ಬರೆಹದಲ್ಲಿ ಕರ್ಣಾಟಕಕ್ಕೂ ನಾಟಕ ಸಾಹಿತ್ಯಕ್ಕೂ ಇರುವ ಬಾಂಧವ್ಯವನ್ನು ಕುರಿತು ನಾವು ವಿಚಾರ ಮಾಡುವುದು ಅಗತ್ಯವಾಗಿದೆ. ಕನ್ನಡ ಕವಿಚರಿತೆಕಾರರು "ಭಟ್ಟಾಕಳಂಕನು ತನ್ನ ಕಾಲದಲ್ಲಿ, ಕನ್ನಡ ನಾಟಕಗಳು ಇದ್ದಂತೆ ಹೇಳುತ್ತಾನೆ. ಪ್ರಾಚೀನ ನಾಟಕಗಳಾವೂ ಈಗ ದೊರೆತಿಲ್ಲ. ಆದರೆ ಕರ್ಣಪಾರ್ಯನು ಬರೆದುದಾಗಿ ತಿಳಿದು ಬರುವ ಮಾಳವೀಮಾಧವವೂ ಕೇಶಿರಾಜನು ಬರೆದಿರುವಂತೆ ಹೇಳಿಕೊಂಡಿರುವ ಸುಭದ್ರಾಹರಣವೂ, ಪ್ರಬೋಧಚಂದ್ರವೂ ನಾಟಕಗಳಾಗಿರಬಹುದು. ರತ್ನಾವಳಿನಾಟಕೆಯ ಭಾಷಾಂತರವಾದ ಸಿಂಗರಾರ್ಯಕೃತ 'ಮಿತ್ರವಿಂದಾಗೋವಿಂದ' ಎಂಬ ನಾಟಕೆಯೊಂದೇ ಈಗ ದೊರೆತಿದೆ. ಇದು ೧೭ನೆಯ ಶತಮಾನದಲ್ಲಿ ಹುಟ್ಟಿದೆ" ಎಂದು ಹೇಳಿದ್ದಾರೆ. ಕರ್ಣಪಾರ್ಯನು ಕ್ರಿ. ಶ. ೧೧೪೦ರಲ್ಲಿ ಇದ್ದವನು. ಕೇಶಿರಾಜನು ೧೨೬೦ರಲ್ಲಿ ಇದ್ದವನು. ಆದುದರಿಂದ ಕರ್ಣಾಟಕದಲ್ಲಿ ೧೨ನೇ ಶತಮಾನಪಲ್ಲಿಯೇ ನಾಟಕಗಳನ್ನು ರಚಿಸುವ ಕಾರ್ಯ ಪ್ರಾರಂಭವಾಗಿರಬೇಕೆಂಧು ತೋರುತ್ತದೆ.

ಪ್ರಾಚೀನ ಕನ್ನಡದ ಕವಿಗಳಲ್ಲಿ ಪ್ರಖ್ಯಾತರಾದ ರನ್ನ, ಹರಿಹರ, ರಾಘವಾಂಕ, ಕುಮಾರವ್ಯಾಸ, ಚಾಮರಸ, ಲಕ್ಷ್ಮೀಶ, ರತ್ನಾಕರವರ್ಣಿ, ಷಡಕ್ಷರದೇವ ಮೊದಲಾದ ಕವಿಗಳ ಕಾವ್ಯಗಳಲ್ಲಿ ನಾಟಕಗಳ ತಿರುಳಾದ ಸಂಭಾಷಣಾವೈಖರಿ ಅಂದರೆ ನಾಟಕೀಯತೆ ಇರುವುದರಿಂದಲೇ ಅವು ಹೆಚ್ಚು ಜನಪ್ರಿಯವಾಗಿವೆ. ದಿವಂಗತ ಶ್ರೀಯವರು ರನ್ನನ ಗದಾಯುದ್ಧವನ್ನು ನಾಟಕವಾಗಿ ಸಂಗ್ರಹಿಸಿದ್ದಾರೆ. ಶ್ರೀ. ವಿ. ಬಿ. ನಾಯಕರು ಕುಮಾರ ವ್ಯಾಸ ಭಾರತದ ಕೀಚಕವಧಾ ಪ್ರಸಂಗವನ್ನು ನಾಟಕವಾಗಿ ಸಂಗ್ರಹಿಸಿಸ್ದಾರೆ. ಹರಿಶ್ಚಂದ್ರ ಕಾವ್ಯ, ಗಿರಿಜಾಕಲ್ಯಾಣ, ಪ್ರಭುಲಿಂಗಲೀಲೆ, ರಾಮಾಶ್ವಮೇಧ, ಯಶೋಧರ ಚರಿತೆ, ಶಬರಶಂಕರವಿಳಾಸ ಮೊದಲಾದುವುಗಳನ್ನು ನಾಟಕರೂಪದಲ್ಲಿ ಪರಿವರ್ತಿಸಲು ಸಾಧ್ಯವಿದೆ.

ನಿಜವಾಗಿ ಹೇಳುವದಾದರೆ ಇತ್ತೀಚಿನ ಕಾಲದಲ್ಲಿ ಸುಮಾರು ೧೮೭೮ರ ಸಮಯದಲ್ಲಿ ಮೈಸೂರಿಗೆ ಬಂದ ಪಾರ್ಸಿ ನಾಟಕ ಕಂಪನಿಯೊಂದನ್ನು ನೋಡಿ ಸ್ಫೂರ್ತಿಗೊಂಡು ಕೈ॥ ಚಾಮರಾಜ ಒಡೆಯರು ಕನ್ನಡ ರಂಗಭೂಮಿಯನ್ನೂ ಕನ್ನಡ ನಾಟಕ ಸಾಹಿತ್ಯವನ್ನೂ ಉದ್ಧಾರ ಮಾಡಲು ಸಂಕಲ್ಪಿಸಿದುದೇ ನಮ್ಮದೇಶದಲ್ಲಿ ನಾಟಕಯುಗದ ಮೊದಲನೆಯ ಕಾಲವೆನ್ನಬಹುದು. ಒಂದು ದೃಷ್ಟಿಯಿಂದ ಅಭಿನವಕಾಳಿದಾಸ ಬಸವಪ್ಪಶಾಸ್ತ್ರಿಯು ಕನ್ನಡ ನಾಟಕ ಸಾಹಿತ್ಯದ ಆಚಾರ್ಯ ಪುರುಷನೆಂದು ಹೇಳಬಹುದು. ಕನ್ನಡದ ರಂಗಭೂಮಿಯ ಶತಮಾನೋತ್ಸವವಾದ ಈ ಕಾಲದಲ್ಲಿ ನಾವು ಈ ವಿಷಯಗಳನ್ನು ಸ್ಮರಿಸಿಕೊಳ್ಳುವುದು ಅಗತ್ಯ.

ಕರ್ಣಾಟಕದಲ್ಲಿ ಬಹಳ ಪ್ರಾಚೀನ ಕಾಲದಿಂದ ಯಕ್ಷಗಾನ ರೂಢಿಯಲ್ಲಿ ಇರುವಂತೆ ತಿಳಿದು ಬಂದಿದೆ. ಈ ಯಕ್ಷಗಾನವು ದ್ರಾವಿಡ ಸಂಸ್ಕೃತಿಯಿಂದ ಕೂಡಿದಿದು ಎಂದು ಸಂಶೋಧಕರು ಅಭಿಪ್ರಾಯ ಪಡುತ್ತಾರೆ. ದ್ರಾವಿಡ ಕುಲದ ರಾವಣನು ಸಂಗೀತ ಪ್ರವೀಣನಾಗಿದ್ದನೆಂದು ರಾಮಾಯಣದಲ್ಲಿ ಸಿದ್ಧವಾಗಿದೆ. ಕನ್ನಡದಲ್ಲಿ ಪ್ರಸಿದ್ಧವಾಗಿರುವ ಚತ್ತಾಣವು ಶ್ರವ್ಯಕಾವ್ಯವೆಂದೂ, 'ಬೆನಂಡೆಯು' ದೃಶ್ಯಕಾವ್ಯವೆಂದೂ ಸಂಶೋಧಕರು ಹೇಳಿದ್ದಾರೆ. ಈ

ಯಕ್ಷಗಾನವನ್ನು ಬಾಜನೆಗಬ್ಬ, ಹಾಡುಗಬ್ಬ ಎಂಬ ಹೆಸರಿನಿಂದ ನಮ್ಮ ದೇಶದಲ್ಲಿ ಕರೆಯುವವಾಡಿಕೆಯುಂಟು. ಈ ಜಾತಿಯ ಕವಿಗಳಲ್ಲಿ ಪಾರ್ತಿ ಸುಬ್ಬನು ಪ್ರಖ್ಯಾತನಾಗಿದ್ದಾನೆ. ರಾಮಾಶ್ವಮೇಧ ಮೊದಲಾದ ಮಹಾ ಕಾವ್ಯಗಳ ಕರ್ತೃ ಮುದ್ದಣನೂ ಇಂತಹ ಯಕ್ಷಗಾನ ನಾಟಕಗಳನ್ನು ಬರೆದಿರುವದಾಗಿ ! ತಿಳಿದುಬಂದಿದೆ. ಕರ್ಣಾಟಕದ ಎಲ್ಲ ಭಾಗಗಳಲ್ಲಿಯೂ ವಿಶೇಷವಾಗಿ ಹಳ್ಳಿಗಾಡುಗಳಲ್ಲಿ, ರೂಢಿಯಲ್ಲಿರುವ ಬಯಲಾಟಗಳು ನಮ್ಮ ನಾಡಿನಲ್ಲಿ ನಾಟಕಗಳು ಪ್ರಾಚೀನ ಕಾಲದಿಂದ ನಡೆದುಬಂದಿವೆ ಎಂಬುದಕ್ಕೆ ನಿದರ್ಶನವಾಗಿವೆ. ಈ ಬೈಲಾಟಗಳು ಒಳ್ಳೆಯ ಕಲಾಪೂರ್ಣವಾಗಿಯೂ ಸಂಗೀತ, ಸಾಹಿತ್ಯ, ನೃತ್ಯ ಮೊದಲಾದವುಗಳಿಂದ ಮನೋಜ್ಞವಾಗಿಯೂ ಇರುತ್ತವೆ ಎಂಬುದನ್ನು ನಾವು ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಈಗಲೂ ಜೀವಂತವಾಗಿ ಉಳಿದು ಬಂದಿರುವ ಈ ಭಾಗವತರ ಆಟಗಳನ್ನು ನೋಡಿ ಚೆನ್ನಾಗಿ ಅರ್ಥಮಾಡಿಕೊಳ್ಳಬಹುದು.

ನಮಗೆ ತಿಳಿದು ಬಂದಿರುವ ಮಟ್ಟಿಗೆ ಕರ್ಣಾಟಕ ರಂಗಭೂಮಿಯ ಕೀರ್ತಿಯನ್ನು ಹೆಚ್ಚಿಸಿದ ಗೌರವ ದಿವಂಗತರಾದ ನಾಟಕಂ ಸುಬ್ಬಣ್ಣನವರು, ನಾಟಕ ಶಿರೋಮಣಿ ವರದಾಚಾರ್ಯರು, ಮಹಮದ್ ಪೀರರು, ಗುಳೇದಗುಡ್ಡ ಗುರುಲಿಂಗಪ್ಪ ಇವರ ಮಗಳು ಗಾನರತ್ನ ಗಂಗೂಬಾಯಿ, ಬಳ್ಳಾರಿ ರಾಘವಾ ಚಾರ್ಯರು, ಹಂದಿಗನೂರು ಸಿದ್ದರಾಮಪ್ಪ, ಇತ್ಯಾದಿಗಳಿಗೆ ಸಲ್ಲತಕ್ಕದೆಂದು ಹೇಳಬಹುದು. ಕರ್ಣಾಟಕದಲ್ಲಿ ನಾಟಕಕಲೆಗೆ ಅಪರಿಮಿತವಾಗಿ ಜನ ಮನ್ನಣೆ ದೊರೆಯುವಂತೆ ಮಾಡಿದ ಕೀರ್ತಿ ಮ|| ರಾ|| ನಾಟಕರತ್ನಂ ವೀರಣ್ಣ ನವರು, ನಾಟಕಾಲಂಕಾರ ಗರುಡ ಸದಾಶಿವರಾಯರು, ಶಿರಹಟ್ಟಿ ವಾಮನರಾಯರು., ಮಂಗಳೂರು ರಂಗನಾಥ ಭಟ್ಟರು, ಸಂಗೀತ ವಿದುಷಿ ಸುಂದರಮ್ಮ, ಗುಬ್ಬಿ ಗಂಗಾಧರರಾಯರು, ಚಿಕ್ಕನಾಯ್ಕನಹಳ್ಳಿ ಮಲ್ಲಪ್ಪ ನವರು ಇತ್ಯಾದಿಗಳಿಗೆ ಮೀಸಲಾದುದೆಂದು ಹೇಳಬಹುದು.

ಇತರ ಪ್ರಾಣಿಗಳಿಗಿಂತಲೂ ಮನುಷ್ಯನು ಮಾತನಾಡುವ ಭಾಗ್ಯ ಪಡೆದು ಪ್ರಗತಿಯನ್ನು ಹೊಂದುತ್ತಿದ್ದಾನೆ. ಆಡುವ ಮಾತನ್ನು ಸ್ವಾರಸ್ಯ

ವಾಗಿ, ಹಿತಮಿತವಾಗಿ ಸಮಯೋಚಿತವಾಗಿ ಅಂದಚೆಂದವಾಗಿ ಆಡಿದರೆ ಅದು ಸಾಹಿತ್ಯವಾಗುತ್ತದೆ. ಸಂಸ್ಕೃತದಲ್ಲಿ ಸಾಹಿತ್ಯ ಅಂದರೆ, "ಸಹಿತಾನಾಂ ಭಾವಃ ಸಾಹಿತ್ಯಮ್"ಎಂದೂ 'ರಸಾತ್ಮಕಂ ವಾಕ್ಯಂ ಕಾವ್ಯಂ' ಎಂದೂ, 'ರಮಣೀಯಾರ್ಥ ಪ್ರತಿ ಪಾದಕ ಶಬ್ದಃ ಕಾವ್ಯಂ' ಎಂದೂ, ನಾನಾಬಗೆಯಲ್ಲಿ ಸಾಹಿತ್ಯದ ಅರ್ಥವಿವರಣೆ ಮಾಡಿದ್ದಾರೆ. 'ಸವಿಕಟ್ಟಾದ ಮಾತುಗಳ ಸಮೂಹವನ್ನು ಸಾಹಿತ್ಯ" ಎಂದು ನಾವು ಕನ್ನಡದಲ್ಲಿ ಸರಳವಾಗಿ ಹೇಳಿ ಕೊಳ್ಳಬಹುದು. 'ರಸವತ್ತಾದ ವಾಕ್ಯಗಳ ಸಮೂಹವು ಕಾವ್ಯ' ಎಂಬುದೇ ಮತ್ತೊಂದು ಮಾತಿನ ತಾತ್ಪರ್ಯ. 'ಚೆಲುವಾದ ಶಬ್ದಗಳು ಕಾವ್ಯ' ಎಂದು ಮತ್ತೊಂದರ ಅರ್ಥ.

ಹೃದಯವನ್ನು ಅರಳಿಸುವ, ಮನಸ್ಸನ್ನು ಕರಗಿಸುವ, ಕಿವಿಗೆ ಇಂಪೆನಿಸುವ, ಚಿತ್ತಕ್ಕೆ ತಂಪೆನಿಸುವ, ಜೀವನಿಗೆ ಕಂಪೆನಿಸುವ ಮಾತುಗಳನ್ನು 'ಸಾಹಿತ್ಯ' ಎಂದು ನಾವು ಹೇಳಿಕೊಳ್ಳಬಹುದು. ಮುಖ್ಯವಾಗಿ ಸಾಹಿತ್ಯದ ಲಕ್ಷಣ ದಿಂದಕೂಡಿದ ಮಾತುಗಳು "ಶಶಿಯುದಿಸಿ ಬಂದಂತೆ" ಜಗತ್ತಿಗೆ ಆಹ್ಲಾದ ಕರವಾಗಿರಬೇಕು. ಸಾಹಿತ್ಯವೇ ಜನಪ್ರಿಯವಾಗಿರುವಾಗ ಅದರ ಸಾರಸ ರ್ವಸ್ವವಾದ ಅಥವಾ ಸಾಹಿತ್ಯವೆಂಬ ಮಂದಿರಕ್ಕೆ ಗೋಪುರದಂತೆ ಶೋಭಿಸುವ ನಾಟಕ ವಾಙ್ಮಯವನ್ನು ಕುರಿತು ಹೇಳುವ ಕಾವ್ಯಗಳು, ಬರೆಯುವ ಕಬ್ಬಿ ಗನು, ನಿಜಕ್ಕೂ ಶ್ರೇಷ್ಠನು. ದೇಶಾಟನ, ಪಂಡಿತ ಭಾಷಣ, ಶಾಸ್ತ್ರಾಧ್ಯ ಯನ ಮೊದಲಾದುವುಗಳಿಂದ ಚಿತ್ತಸಂಸ್ಕರವನ್ನು ಪಡೆದಿರಬೇಕು. ಆದರೆ ನಾಟಕ ಕರ್ತೃವು ಇಂತಹ ಕವಿಗಳಿಗಿಂತಲೂ, ಹೆಚ್ಚಿನ ಲೋಕಾನು ಭವಿಯೂ, ಪ್ರತಿಭಾಶಾಲಿಯೂ ಆಗಿರಬೇಕೆಂಬುದನ್ನು ನಾವು ಮಹಾಕವಿ ಗಳ ನಾಟಕಗಳನ್ನು ಓದಿ ತಿಳಿದುಕೊಳ್ಳಬಹುದು.

ಕಾಳಿದಾಸ ಮಹಾಕವಿಯ ಶಾಂಕುಂತಲ ನಾಟಕದಲ್ಲಿ ದುಷ್ಯಂತ ಮಹಾರಾಜನು ಕಣ್ವಾಶ್ರಮಕ್ಕೆ ಅನಸೂಯೆಯು ಬಂದಾಗ ಅತಿಥಿಯನ್ನು ಪ್ರಶ್ನಿಸಿದ ಮಾತುಗಳಿಂದ ಸಾಹಿತ್ಯಕ್ಕೂ ಸಾಮಾನ್ಯವಾದ ಮಾತಿಗೂ ಇರುವ ವ್ಯತ್ಯಾಸವನ್ನು ನಾವು ಚೆನ್ನಾಗಿ ಅರಿಯಬಹುದು.

೧. ಆರ್ಯನಾದ ನಿನ್ನಿಂದ ಯಾವ ರಾಜವಂಶವು ಅಲಂಕೃತವಾಗಿರುವುದು ?

೨. ನಿನ್ನ ವಿಯೋಗದಿಂದ ಯಾವ ದೇಶದ ಜನವು ಕಳವಳ ಪಡುವುದು ?

೩. ಸುಕುಮಾರನಾದರೂ ನೀನು ಈ ತಪೋವನದ ಪರಿಶ್ರಮಕ್ಕೆ ಪಾತ್ರನಾಗಲು ಕಾರಣವೇನು ?

ಮೇಲೆ ಕಂಡ ಈ ಮೂರು ಪ್ರಶ್ನೆಗಳನ್ನು ಸಾಮಾನ್ಯವಾದ ಮಾತುಗಳಿಂದ ಕೇಳುವುದಾದರೆ,

೧. ಅಯ್ಯಾ ನಿನ್ನ ಮನೆತನವಾವುದು ?

೨. ನೀನು ಯಾವ ದೇಶದವನು ?

೩. ನೀನು ಈ ಕಾಡಿಗೆ ಏತಕ್ಕಾಗಿ ಬಂದೆ ?

ಎಂದು ಪ್ರಶ್ನಿಸಬೇಕಾಗುತ್ತದೆ. ಆದರೆ ಕಾಳಿದಾಸನ ಮಾತುಗಳು ಕಲಾಪೂರ್ಣವಾದ ಸಾಹಿತ್ಯಾಂಶದಿಂದ ಕೂಡಿವೆ. ಆದ್ದರಿಂದಲೇ ಅದು ರಸಸಾಹಿತ್ಯ. ಆ ಮಾತುಗಳಲ್ಲಿ ಮಾಧುರ್ಯವಿದೆ. ಗಾಂಭೀರ್ಯವಿದೆ, ನವೀನತೆಯಿದೆ. ಅದೇ ಪ್ರಶ್ನೆಗಳನ್ನು ಸಾಮಾನ್ಯವಾದ ಮಾತುಗಳಲ್ಲಿ ಕೇಳಿದರೆ ಅವು ನೀರಸವಾಗಿ ಕಾಣುತ್ತವೆ. ಸಾಹಿತ್ಯದ ಮಾತುಗಳು ಗಮಗಮಿಸುವ ಪುಷ್ಪಗಳಂತೆ, ಸಾಮಾನ್ಯವಾದ ಮಾತುಗಳು ಶುಷ್ಕ ಕಾಗದದ ಹೂವಿನಂತೆ.

ಭವಭೂತಿಯು ಉತ್ತರರಾಮಚರಿತ್ರೆಯಲ್ಲಿ ಮತ್ತೊಂದು ಮನೋಜ್ಞವಾದ ಸಂದರ್ಭವನ್ನು ನಾವು ವಾಚಕರ ನೆನಪಿಗೆ ತರುತ್ತೇವೆ. ಸಖಿಯಾದ ವಾಸಂತಿಯು ಶ್ರೀರಾಮಚಂದ್ರನನ್ನು ಕುರಿತು 'ಸೀತೆಯನ್ನು ರಾಮಚಂದ್ರನು ವಂಚಿಸಿದನು' ಎಂಬ ಅರ್ಥದ ಮಾತುಗಳನ್ನು ಆಡುವಾಗ, "ಎಲೈ ರಾಮಚಂದ್ರಾ, ನೀನೇ ನನಗೆ ಜೀವಿತ, ನೀನೇ ನನಗೆ ನಯನಾನಂದಿನಿ" ಎಂಬ ಸವಿಮಾತುಗಳಿಂದ ಏನನ್ನೂ ತಿಳಿಯದ ಆ ಜಾನಕಿಯನ್ನು" ಎಂದು ಹೇಳುತ್ತಾ ವಾಸಂತಿ ಮೂರ್ಛೆ ಬೀಳುವಳು. ಈ ಪ್ರಸಂಗವನ್ನು

ಮರ್ಮಜ್ಞನಾದ ಭವಭೂತಿಯು ತನ್ನ ನಾಟಕದಲ್ಲಿ ತಂದು ಜಗತ್ತಿನ ರಸಿಕರ ಚಿತ್ತವನ್ನು ಸೂರೆಗೊಂಡಿರುವನು. ಈ ಸನ್ನಿವೇಶದಲ್ಲಿ ಉಚಿತ ಪದಜ್ಞನಾದ ಆ ಕವಿಯು ಸೀತಾದೇವಿಯನ್ನು 'ಮುಗ್ಧಾ' ಎಂದು ಸಂಬೋಧಿಸಿರುವುದು ಇಡೀ ನಾಟಕಕ್ಕೇ ಕಳೆಯನ್ನು ಕೊಟ್ಟಂತಾಗಿದೆ. ಇಂತಹ ಸೂಕ್ಷ್ಮವಾದ ಸಂದರ್ಭ ಸನ್ನಿವೇಶಗಳು ಶ್ರವ್ಯಕಾವ್ಯಗಳಲ್ಲಿ ಬರುವುದು ಕಷ್ಟ. ಆದುದರಿಂದಲೇ ರಸಜ್ಞರು, "ಕಾವ್ಯೇಷು ನಾಟಕಂ ರಮ್ಯಂ" ಎಂದು ಹೇಳಿ ಸಾಹಿತ್ಯದಲ್ಲಿ ನಾಟಕಕ್ಕೆ ಮಿಗಿಲಾದ ಸ್ಥಾನವನ್ನು ಕಲ್ಪಿಸಿ ಕೊಟ್ಟಿರಬೇಕು.

ಹಳಗನ್ನಡದ ಸಾಹಿತ್ಯದಲ್ಲಿ ನಾಟಕಗಳು ಅಪರೂಪವೆಂದರೆ ತಪ್ಪಿಲ್ಲ. ಆದರೆ ಹೊಸಕನ್ನಡದಲ್ಲಿ ಹಲವು ಗಣ್ಯರಾದ ಕವಿಗಳು ಹುಟ್ಟಿ, ಪೌರಾಣಿಕ, ಐತಿಹಾಸಿಕ ಮತ್ತು ಸಾಮಾಜಿಕ ನಾಟಕಗಳನ್ನು ಬರೆದು ರಸಿಕರಿಗೆ ಔತಣವಿತ್ತಿದ್ದಾರೆ. ನೂತನ ಸಾಹಿತ್ಯದಲ್ಲಿ ಬೆಳೆಗಿಂತ ಕಳೆ ಹೆಚ್ಚೆಂಬುದರಲ್ಲಿ ಅನುಮಾನವಿಲ್ಲ. ಆದರೆ ದಿವಂಗತ ಶ್ರೀ ಅವರ ಅಶ್ವತ್ಥಾಮನ್, ಪಾರಶಿಕರು, ಡಿ.ವಿ.ಜಿ. ವಿದ್ಯಾರಣ್ಯ ವಿಜಯ, ಸಿ.ಕೆ.ವಿ. ರವರ ಮಂಡೋದರಿ, ಕುವೆಂಪು ರಕ್ತಾಕ್ಷಿ, ಕಾರಂತರ ಮುಕ್ತದ್ವಾರ, ಎಂ. ಆರ್. ಶ್ರೀ ನಾಗರಿಕ, ಶ್ರೀ ದೇವುಡುರವರ ವಿಚಾರಣೆ, ಶ್ರೀ ಬೆಳ್ಳಾವೆಯವರ ಪೌರಾಣಿಕ ನಾಟಕಗಳು, ದಿ|| ಗರುಡರ ಹಲವು ನಾಟಕಗಳು, ಶ್ರೀ ಬಿ. ಪುಟ್ಟಸ್ವಾಮಯ್ಯನವರ ಕುರುಕ್ಷೇತ್ರ, ಗೌತಮ ಬುದ್ಧ, ಷಹಜಹಾನ್ ಮೊದಲಾದವು, ಆಧುನಿಕರಾದ ಶ್ರೀರಂಗ, ಕ್ಷೀರಸಾಗರ, ಗುಂಡಣ್ಣ ಮೊದಲಾದವರ ನಾಟಕಗಳು ಸಹೃದಯರ ಮನಸ್ಸನ್ನು ಸೆಳೆದಿವೆ. ಈಗೀಗ ರವೀಂದ್ರರ ನಾಟಕಗಳು ಕನ್ನಡಕ್ಕೆ ಹೆಚ್ಚುಹೆಚ್ಚಾಗಿ ಬರುತ್ತಿರುವುದು ಶುಭ ಸೂಚಕವಾಗಿದೆ. ಹೊಸ ಕನ್ನಡದಲ್ಲಿ ನಾಟಕಸಾಹಿತ್ಯ ತಲೆ ಎತ್ತಿರುವುದು ಗಮನಾರ್ಹವಾಗಿದೆ. ಬಿ.ಎಂ. ಶ್ರೀರವರ 'ಗದಾಯುದ್ಧ ನಾಟಕ, ಬಿ. ಎಸ್. ಎಸ್. ರವರ 'ಹರಿಶ್ಚಂದ್ರ ಕಾವ್ಯ ನಾಟಕ' ಹುಟ್ಟಿ ಕನ್ನಡಕ್ಕೆ ಒಳ್ಳೆಯ ಕೀರ್ತಿತಂದಿವೆ ಯೆನ್ನಬಹುದು. ಹೊಸ ಕನ್ನಡದಲ್ಲಿ ಸಾಮಾಜಿಕ ನಾಟಕಗಳು ಹೆಚ್ಚಾಗಿಯೂ ಮಿಕ್ಕವು ವಿರಳವಾಗಿಯೂ ಬರುತ್ತಿವೆ.

# ಅಜಂತ ಮತ್ತು ಎಲ್ಲೋರಗಳಲ್ಲಿ ಕನ್ನಡಿಗರ ಪ್ರತಿಭೆ

ಭರತಖಂಡದ ಹಿರಿಮೆಗೆ ಅದರ ತತ್ವಜ್ಞಾನ ಮತ್ತು ಸಾಹಿತ್ಯ ಸಂಪತ್ತು ಹೇಗೆ ನಿದರ್ಶನವೋ, ಹಾಗೆಯೇ ಅದರ ಮಿಗಿಲಾದ ಶಿಲ್ಪ, ಚಿತ್ರ ಇತ್ಯಾದಿ ಕಲೆಗಳ ಪ್ರೌಢಿಮೆಯೂ ನಿದರ್ಶನ. ಭಾರತೀಯರ ಲಲಿತಕಲೆಯ ಪ್ರತಿಭೆಗೆ ಹಿಂದೂಸ್ಥಾನದಲ್ಲಿ ಅದರಲ್ಲಿಯೂ ಕರ್ಣಾಟಕದಲ್ಲಿ ಗಣ್ಯವಾದ ಸಾಕ್ಷಿಗಳಿವೆ. ಹಳೇಬೀಡು, ಬೇಲೂರು, ಸೋಮನಾಥಪುರ, ಶ್ರವಣಬೆಳುಗೊಳ, ಕಾರ್ಕಳ, ಬನವಾಸಿ, ಹಂಪೆ, ಲೇಪಾಕ್ಷಿ, ನಂದಿ, ಕುರುಡುಮಲೆ, ಶೃಂಗೇರಿ, ಇಟಗಿ, ಬಾದಾಮಿ, ಐಹೊಳೆ, ಪಟ್ಟದಕಲ್ಲು, ಕಾರ್ಲೆ, ಕನ್ಹೇರಿ, ಎಲಿಫೆಂಟ, ಹನುಮಗೊಂಡ, ಅಜಂತ ಮತ್ತು ಎಲ್ಲೋರ ಮೊದಲಾದ ಕಲಾಕ್ಷೇತ್ರಗಳು ಕನ್ನಡ ಕಲಾವಿದರ ಪ್ರತಿಭೆಗೂ ಪಾಂಡಿತ್ಯಕ್ಕೂ ನಿದರ್ಶನವೆನಿಸಿವೆ.

ಪ್ರಕೃತದಲ್ಲಿ ಪ್ರಪಂಚದ ಶಿಲ್ಪ ಮತ್ತು ಚಿತ್ರಕಲಾಪ್ರೇಮಿಗಳನ್ನೆಲ್ಲಾ ತಮ್ಮೆಡೆಗೆ ಸೆಳೆದು ಪ್ರಾಚೀನ ಭಾರತೀಯರ ಶ್ರೇಷ್ಠಕಲಾ ನೈಪುಣ್ಯತೆಗೆ ನಂದಾದೀಪದಂತಿರುವ ಅಜಂತ ಮತ್ತು ಎಲ್ಲೋರ ಕಲಾಕ್ಷೇತ್ರಗಳಲ್ಲಿ ಕನ್ನಡ ನಾಡಿನ ಸಂಬಂಧವೆಷ್ಟೆಂಬುದನ್ನು ಪರಿಶೀಲಿಸುವುದೇ ಈಗ ನಮ್ಮ ತಾತ್ಪರ್ಯವಾಗಿದೆ.

ಮಹಾರಾಷ್ಟ್ರದ ಔರಂಗಾಬಾದು ಪಟ್ಟಣಕ್ಕೆ ಅನತಿದೂರದಲ್ಲಿ ಎಲ್ಲೋರದ ಬೆಟ್ಟದಲ್ಲಿ ಸುಪ್ರಸಿದ್ಧ ೩೪ ಗುಹಾಂತರ್ಗತ ದೇವಾಲಯಗಳಿವೆ. ಈ ಗವಿಗಳನ್ನು ನಮ್ಮ ಪ್ರಾಚೀನರು ನಿರ್ಮಿಸಿದ್ದಾರೆ. ವಿಖ್ಯಾತ ಕನ್ನಡ ರಾಜರಾದ ಯಾದವರ ರಾಜಧಾನಿ 'ದೇವಗಿರಿಯು' ಎಲ್ಲೋರದ ಪಕ್ಕದಲ್ಲಿಯೇ ಇದೆ. ಈ ಎಲ್ಲೋರವು ಔರಂಗಾಬಾದು ಜಿಲ್ಲೆಯ 'ಕನ್ನಡ' ಎಂಬ ಹೆಸರುಳ್ಳ ತಾಲ್ಲೂಕಿನಲ್ಲಿಯೇ ಇದೆ. ಈ ೩೪ ಗವಿಗುಡಿಗಳಲ್ಲಿ ನಡುವಿನ ಕೈಲಾಸದೇವಾಲಯವು ಕರ್ಣಾಟಕ ಸಾರ್ವಭೌಮ ರಾಷ್ಟ್ರಕೂಟ ಕೃಷ್ಣದೇವನಿಂದ (ಕ್ರಿ. ಶ. ೭೫೩–೭೭೫) ನಿರ್ಮಿತವಾಯಿತೆಂದು ಅದೇ

ಗವಿಗಳಲ್ಲಿನ ಕನ್ನಡ ಶಾಸನವು ಹೇಳುತ್ತದೆ. ಆ ಕೈಲಾಸ ಗುಡಿಯ ಮುಂದೆ ಒಂದು ಮೈಲಿ ದೂರದಲ್ಲಿ ಜ್ಯೋತಿರ್ಲಿಂಗ ಘೃಷ್ಣೇಶ್ವರ ಕ್ಷೇತ್ರವಿದೆ.

ಎಲ್ಲೋರದ ೩೪ ಗವಿಗಳಲ್ಲಿ ಮೊದಲ ೧೨ ಬೌದ್ಧ ವಿಹಾರಗಳು, ಕಡೆಯ ೪ ಜಿನಬಸದಿಗಳು, ನಡುವಣ ೧೪ ಹಿಂದು ಪೌರಾಣಿಕ ಗುಡಿಗಳು. ಇವುಗಳಲ್ಲಿ ನಡುವಣ ಕೈಲಾಸಗುಡಿಯು ಜಗದಾಶ್ಚರ್ಯಕರವೂ, ಅದ್ಭುತ ಶಿಲ್ಪಕಲಾನಿವಾಸವೂ, ಮಾನವ ಪ್ರತಿಭೆಯ ಪರಮಾವಧಿದ್ಯೋತಕವೂ ಲಲಿತಕಲೆಗಳ ವಿಶ್ವವಿದ್ಯಾಲಯವೂ ಎನಿಸಿದೆ. ಇದಕ್ಕೆ ಎರಡನೆಯದಾಗಿ ಇಂದ್ರಸಭಾ, ಜಗನ್ನಾಥಸಭಾ, ರಾವಣಗವಿ, ವಿಶ್ವಕರ್ಮಗವಿ ಮೊದಲಾದುವು ಪ್ರೇಕ್ಷಕರ ಕಣ್ಮನಗಳನ್ನು ಸೆಳೆಯುತ್ತವೆ. ಈ ಗವಿಗಳು ಕ್ರಿ. ಶ. ೬ ರಿಂದ ೧೦ನೇ ಶತಮಾನದವರೆಗೆ ಚಾಲುಕ್ಯ ಹಾಗೂ ರಾಷ್ಟ್ರಕೂಟ ರಾಜರ ಕಾಲ ದಲ್ಲಿಯೇ ವೈದಿಕ ಮತ್ತು ಜೈನಗುಡಿಗಳು ಆಗಿರಬೇಕೆಂದೂ, ಬೌದ್ಧ ಗುಡಿಗಳು, ಕೊಂಚ ಪ್ರಾಚೀನವಾಗಿರಬೇಕೆಂದೂ ಸಂಶೋಧಕರಾದ ವಿದ್ವಾಂಸರು ತರ್ಕಿಸಿದ್ದಾರೆ.

ಒಂದು ದೊಡ್ಡ ಬೆಟ್ಟದಲ್ಲಿ ಈ ವಿಶಾಲವಾದ ದೇವಾಲಯವನ್ನು ವಿರಚಿಸಿದುದು ಸಾಮಾನ್ಯವಲ್ಲ. ಕೈಲಾಸದೇವಾಲಯದ ಭವ್ಯತೆಯೂ ನವ್ಯತೆಯೂ ಅಸದೃಶತೆಯೂ ವರ್ಣನಾತೀತವೆನಿಸಿದೆ. ರಾವಣನು ಕೈಲಾಸವನ್ನು ಎತ್ತುವುದು, ಗಂಗೆ, ಯಮುನೆ, ಸರಸ್ವತಿ, ನದ್ಯಂಗನೆಯರು, ವಿಷ್ಣುವಿನ ದಶಾವತಾರಗಳು, ಗಿರಿಜಾಕಲ್ಯಾಣ, ಗಂಗಾವತರಣ, ಶಿವನ ಲೀಲೆಗಳು ಇತ್ಯಾದಿ ವಾಸ್ತುಶಿಲ್ಪಗಳನ್ನು ನಿರ್ಮಿಸುವಲ್ಲಿ ಕನ್ನಡ ರೂವಾರಿ ಗಳು ತೋರಿರುವ ಅಭಿಜ್ಞತೆ ಜಗತ್ತನ್ನೇ ಮೂಕಗೊಳಿಸುವಂತಿದೆ. ಅಲ್ಲದೆ ಉತ್ತಮ ಕಲೆಗಾರರನ್ನೂ ಅಚ್ಚರಿಗೊಳಿಸುವಂತಿದೆ.

ಇನ್ನು ಅದೇ ಮಹಾರಾಷ್ಟ್ರ ನಾಡಿನಲ್ಲಿ ಔರಂಗಾಬಾದಿಗೆ ೬೫ ಮೈಲಿ ದೂರದಲ್ಲಿ ಮನೋಹರವಾದ ಪ್ರಕೃತಿಸೌಂದರ್ಯದ ನಡುವೆ ಎರಡು ಬೆಟ್ಟಗಳ ಮಧ್ಯದ ಕಣಿವೆಯ ಪ್ರದೇಶದಲ್ಲಿ ವಾಘೋರಾನದಿಯ ಮುಂಭಾಗದಲ್ಲಿ ಕುದುರೆಯ ಗೊರಸಿನಂತೆ ವರ್ತುಳಾಕಾರವಾದ ಒಂದು ಬೆಟ್ಟದಲ್ಲಿ ನಿರ್ಮಿತ

ವಾಗಿರುವ ಅಜಂತೆಯ ೨೭ ಬುದ್ಧ ಗವಿಗಳು ಪರಿಶೀಲನಾರ್ಹವಾಗಿವೆ. ಈ ಗವಿಗಳು ಬೌದ್ಧಧರ್ಮವು ದಕ್ಷಿಣಕ್ಕೆ ಬಂದ ಕಾಲದಲ್ಲಿ ನಿರ್ಮಿತವಾಗಿರ ಬೇಕೆಂದೂ ಕ್ರಿ. ಪೂ. ೨ ರಿಂದ ಕ್ರಿ. ಶ. ೭ನೇ ಶತಮಾನಗಳ ತನಕ ಈ ಗವಿಗಳು ವಿರಚಿತವಾಗಿರಬೇಕೆಂದೂ ಸಂಶೋಧಕರು ನಿರ್ಧರಿಸಿದ್ದಾರೆ.

ಅಜಂತಗವಿಗಳು ಶಿಲ್ಪಕಲೆಯಲ್ಲಿ ಎಲ್ಲೋರದ ಗವಿಗಳನ್ನು ಸರಿಗಟ್ಟ ಲಾರವು. ಅಜಂತೆಗೆ ಲೋಕದಲ್ಲಿ ಪ್ರಾಪ್ತವಾದ ಕೀರ್ತಿಗೆ ಆ ಗವಿಗಳ ಗೋಡೆಗಳ ಮೇಲಿರುವ ವಿಶ್ವಮೋಹಕ ಚಿತ್ರಗಳು ಕಾರಣ. ಹಿಂದೆ ಈ ಎಲ್ಲ ಗವಿಗಳ ಗೋಡೆಗಳ ಮೇಲೂ ಚಿತ್ರಗಳಿದ್ದಂತೆ ಕಾಣುತ್ತದೆ. ಎಲ್ಲೋ ರದ ಗವಿಗಳ ಗೋಡೆ ಮತ್ತು ಚಾವಣಿಗಳಲ್ಲೂ ಇಂತಹ ಚಿತ್ರಗಳಿದ್ದಿರ ಬೇಕೆಂದು ಅಲ್ಲಲ್ಲಿ ಮಿಣುಕುವ ಗುರುತುಗಳಿಂದ ಹೇಳಬಹುದು. ಆದರೆ ಈಗ ನಮಗೆ ಅಜಂತೆಯ ಗವಿ ೧, ೨, ೧೬ ಮತ್ತು ೧೭ ರಲ್ಲಿನ ಭಿತ್ತಿ ಚಿತ್ರಗಳು ಮಾತ್ರ ತೋರಿಬರುತ್ತಿವೆ. ಮಿಕ್ಕ ಗವಿಗಳ ಚಿತ್ರಗಳು ಕಾಲ ಗರ್ಭಕ್ಕೆ ಸೇರಿವೆ.

ಅಜಂತೆಯ ೧ ಮತ್ತು ೨ನೇ ಗವಿಗಳನ್ನು ಕನ್ನಡ ರಾಜರಲ್ಲಿ ಪ್ರಖ್ಯಾತ ನಾದ ಇಮ್ಮಡಿ ಪುಲಿಕೇಶಿ ನಿರ್ಮಿಸಿದನೆಂದು ತಿಳಿದುಬಂದಿದೆ. ಇದಕ್ಕೆ ನಿದರ್ಶನವಾಗಿ ೧ನೇ ಗವಿಯ ೧ನೇ ಚಿತ್ರವೇ ಇಮ್ಮಡಿ ಪುಲಿಕೇಶಿಯ ಒಡ್ಡೋಲಗವಾಗಿ ಚಿತ್ರಿತವಾಗಿರುವುದನ್ನೂ ಪುಲಿಕೇಶಿಯ ಮಿತ್ರ ಪರ್ಶಿಯಾ ದೇಶದ ಖುಸ್ರುವು ಮತ್ತೊಂದೆಡೆ ಚಿತ್ರಿಸಲ್ಪಟ್ಟಿರುವುದನ್ನೂ ನಾವು ನೋಡ ಬಹುದು. ಅಜಂತೆಯ ಸಮೀಪದ 'ಇಂದು ಕಾಂತ'ವು ಕೆಲಕಾಲ ಪುಲಿ ಕೇಶಿಯ ರಾಜಧಾನಿಯಾಗಿತ್ತೆಂಬುದು ಈ ಬಗೆಗೆ ನಮ್ಮ ಕುತೂಹಲ ವನ್ನು ಕೆರಳಿಸುತ್ತದೆ. ಕೆಲವರು ೧ನೇ ಮತ್ತು ೨ನೇ ಗವಿಗಳನ್ನು ಪುಲಿ ಕೇಶಿ ನಿರ್ಮಿಸಿದನೆಂದೂ, ಚಿತ್ರಗಳನ್ನು ಬರೆವ ಕಾರ್ಯ ಅವನಿಂದಲೇ ಪ್ರಾರಂಭವಾಗಿರಬೇಕೇದೂ ತರ್ಕಿಸುತ್ತಾರೆ. ಅಜಂತದ ಗವಿಗಳಲ್ಲಿನ ಪದ್ಮಪಾಣಿ ಬೋಧಿಸತ್ವ, ಶಿಬಿಯ ಕಥೆ, ರಾಜದ್ವಾರದ ಭಿಕ್ಷು, ನಲ್ಲನಲ್ಲೆ, ಮೋಹಾಕರ್ಷಣ, ಕಾಳರಾಣಿ, ಬುದ್ಧ ಜನನ, ಇಂದ್ರಾವತಿ, ರಾಜಕನ್ಯೆ, ನ್ಯಾಯಾ, ರಾಜಸಭೆ ಮೊದಲಾದ ಚಿತ್ರಗಳು ಜಗತ್ತಿನ ಕಲಾವಿದರ

ಮನ್ನಣೆಗೆ ಪಾತ್ರವಾಗಿವೆ. ಈ ಚಿತ್ರಗಳೆಲ್ಲವೂ ಅಥವಾ ಹಲವಾದರೂ ಕನ್ನಡ ಕಲಾವಿದರಿಂದಾದುವು ಎಂಬುದು ಇಲ್ಲಿ ನಮ್ಮ ಹೆಮ್ಮೆಗೆ ಕಾರಣ ವಾಗಿದೆ.

ಲೇಪಾಕ್ಷಿಯ ವೀರಭದ್ರಗುಡಿ, ಹಂಪೆಯ ವಿರೂಪಾಕ್ಷಗುಡಿ ಮೊದ ಲಾದುವುಗಳಲ್ಲಿ ಶಿಲ್ಪಕಲೆಯೊಡನೆ ಚಿತ್ರಕಲೆಯೂ ಬೆರೆತು ಕಲಾವಿದರಿಗೆ ಅಮಿತಾನಂದವನ್ನುಂಟುಮಾಡಿದೆಯೆಂದೂ, ಕನ್ನಡಿಗರ ಪ್ರತಿಭೆಗೆ ಸಾಕ್ಷಿ ಯಾಗಿದೆಯೆಂದೂ ನಾವು ಅರಿತಿರಬೇಕಾಗಿದೆ. ಅಜಂತೆಯ ಚಿತ್ರಗಳು ಹಿಂದಿನ ಕನ್ನಡಿಗರಿಗೇ ಅಲ್ಲದೆ ಇಂದಿನ ಭಾರತೀಯರಿಗೂ ನೂತನ ಸ್ಫೂರ್ತಿ ಯನ್ನು ಕೊಡುತ್ತಿವೆ. ಎಲ್ಲೋರದ ಜಿನಗುಡಿಗಳು ಶ್ರವಣಬೆಳಗೊಳ, ಕಾರ್ಕಳ, ಮೂಡಬಿದರೆ, ವೇಣೂರುಗಳಲ್ಲಿನ ಜಿನ ಶಿಲ್ಪಕ್ಕೆ ಸ್ಫೂರ್ತಿ ಯನ್ನು ಕೊಟ್ಟಿರಬೇಕು. ಬಾದಾಮಿ, ಐಹೊಳೆ ಮತ್ತು ಪಟ್ಟದಕಲ್ಲುಗಳ ಗವಿ-ಗುಡಿಗಳು ಕೈಲಾಸದ ಶಿಲ್ಪಗಳಿಗೆ ಮಾರ್ಗದರ್ಶಕವಾಗಿರಬೇಕು.

ಮುಖ್ಯವಾಗಿ ಭಾರತೀಯ ಶಿಲ್ಪ ಮತ್ತು ಚಿತ್ರಕಲೆಗೆ ಶಿರೋಮಣಿ ಪ್ರಾಯವಾಗಿರುವ, ಜಗತ್ತಿನ ನಾನಾ ದೇಶಗಳ ಕಲೆಗಾರರನ್ನು ಸಂದರ್ಶನ ಮಾತ್ರದಿಂದ ತಲೆದೂಗಿಸುತ್ತಿರುವ, ಎಲ್ಲೋರದ ಗವಿ-ಗುಡಿಗಳ ಹಾಗೂ ಅಜಂತದ ಗವಿ ಚಿತ್ರಗಳ ನಿರ್ಮಾಣ ಕಾರ್ಯದಲ್ಲಿ ನಮ್ಮ ಪ್ರಾಚೀನ ಕನ್ನಡಿಗರು, ವಿಶೇಷವಾಗಿ ಕರ್ಣಾಟಕದ ಸಾರ್ವಭೌಮರಾದ ಇಮ್ಮಡಿ ಪುಲಿ ಕೇಶಿ ಮತ್ತು ರಾಷ್ಟ್ರಕೂಟ ೧ನೇ ಕೃಷ್ಣದೇವರು ಅಮಿತವಾದ ಕಲಾಸಕ್ತಿ ಯನ್ನೂ ನೂತನ ಪ್ರತಿಭೆಯನ್ನೂ ವೆಚ್ಚಮಾಡಿರುವರೆಂಬುದು ಈ ವಿಷಯ ದಲ್ಲಿ ನಮಗೆ ಗಮನಾರ್ಹವಾಗಿದೆ.

ಭರತವರ್ಷದಲ್ಲಿ ಚಿತ್ರ ಮತ್ತು ಶಿಲ್ಪಕಲೆಗೆ ಬಹುಪೂರ್ವದಿಂದಲೂ ಪ್ರಾಮುಖ್ಯತೆಯಿದೆ. ಅದು ಕಾರಣವೇ ಪ್ರಾಚೀನಕಾಲದಿಂದಲೂ ನಮ್ಮ ದೇಶದಲ್ಲಿ ಈ ಉಭಯ ಕಲೆಗಳೂ ಬಳೆದು ಬಂದಿವೆ. ಭಾರತೀಯರ ಭಗವದ್ಭಕ್ತಿ, ಸೌಂದರ್ಯದರ್ಶನ, ಕಲಾ ಪ್ರತಿಭೆಗಳು ಅವರಿಗೆ ಈ ವಿಷಯ ದಲ್ಲಿ ಪೋಷಕವಾಗಿರಬೇಕು. ಗ್ರೀಸ್, ಇಟಲಿ, ಈಜಿಪ್ಟ್, ಮೊದ

ಲಾದ ವಿದೇಶಗಳಲ್ಲಿ ಭರತಖಂಡಕ್ಕಿಂತಲೂ ಪ್ರಾಚೀನ ಶಿಲ್ಪ ಕಲಾಕ್ಷೇತ್ರ ಗಳುಂಟೆಂದು ತಿಳಿದುಬಂದಿದೆ. ಆದರೆ ಹರಪ್ಪ ಮೋಹಂಜದಾರೋ ಸಂಶೋಧನೆಗಳಿಂದ ಅವಕ್ಕೂ ಹಿಂದಿನ ಶಿಲ್ಪ, ಚಿತ್ರಗಳು ಭರತಖಂಡ ದಲ್ಲಿ ವಿರಚಿತವಾಗಿವೆಯೆಂದು ಹೇಳಬಹುದಾಗಿದೆ.

ಭರತಖಂಡದಲ್ಲಿ ಶಿಲಾಯುಗದಿಂದಲೂ ಚಿತ್ರ ಶಿಲ್ಪಗಳು ರಚನೆ ಯಾಗಿವೆ. ಪ್ರಾಚೀನ ರಾಜರ ಅರಮನೆಗಳಲ್ಲಿ ಈ ಕಲೆಗೆ ತುಂಬಾ ಪ್ರೋತ್ಸಾಹ ಸಿಕ್ಕಿದೆ. ರಾಮಾಯಣ, ಮಹಾಭಾರತ, ಬೌದ್ಧಜಾತಕ, ಕಾಮಸೂತ್ರಾದಿ ಗ್ರಂಥಗಳು ನಮ್ಮವರಿಗೆ ಲಲಿತಕಲೆಗಳಲ್ಲಿ ಪಾಂಡಿತ್ಯ ವಿತ್ತೆಂಬುದಕ್ಕೆ ಸಾಕ್ಷಿಯನ್ನು ಈಯುತ್ತವೆ. ಚೀಣರು ಭಾರತೀಯರಿಂದ ಚಿತ್ರಕಲೆಯನ್ನು ಕಲಿತರೆಂದು ಹ್ಸಿಯೆಹೋ ಎಂಬ ಚೀಣದ ವಿದ್ವಾಂಸನು ಬರೆದಿರುವನು.

ಭಾರತೀಯರೇ ಆದ ಕನ್ನಡಿಗರು ತತ್ವಶಾಸ್ತ್ರ ಮತ್ತು ಸಾಹಿತ್ಯ ನಿರ್ಮಾಣದಲ್ಲಿಯೂ, ಚಿತ್ರ, ಶಿಲ್ಪ ಮೊದಲಾದ ಲಲಿತ ಕಲೆಗಳ ನಿರ್ಮಾಣ ದಲ್ಲಿಯೂ ವಿಶಾಲ ಭಾರತದಲ್ಲಿಯೇ ಅಗ್ರಗಣ್ಯರೆನಿಸಿರುವರು. ಲೋಕ ವಿಖ್ಯಾತ ಕಲಾಕ್ಷೇತ್ರಗಳಾದ ಎಲ್ಲೋರ, ಅಜಂತಗಳಲ್ಲಿ ಕೂಡ ತಮ್ಮ ಕಲಾ ಪ್ರತಿಭೆಗಳನ್ನು ತೋರಿಸಿರುವರು.

—o಼o—

# ಕವಿ ಮತ್ತು ಶೈಲಿ

ಸಾಹಿತ್ಯದ ಮಾಧುರ್ಯವನ್ನು ಅರಿಯಲಿಚ್ಛಿಸುವವರು, ಕಾವ್ಯಗಳ ಸಾಮರ್ಥ್ಯವನ್ನು ತಿಳಿಯಲಾಶಿಸುವವರು, ಮಹಾಕಾವ್ಯಗಳಲ್ಲಿನ "ಶೈಲಿ"ಯ ಗುಟ್ಟು ಗುರಿಗಳನ್ನು ಅರಿಯುವುದು ಅವಶ್ಯವಾಗಿದೆ. ಪ್ರಾಚೀನಕವಿಗಳು ಹಾಗೂ ಲಾಕ್ಷಣಿಕರು "ಶೈಲಿ" ಎಂಬ ಪದಕ್ಕೆ ರೀತಿ, ಮಾರ್ಗ, ಮೊದಲಾದುವು ಪರ್ಯಾಯಪದಗಳುಅನ್ನುವರು. ಕನ್ನಡಸಾಹಿತ್ಯದಲ್ಲಿ ಮಹಾಕವಿಗಳಾದ ಆದಿಪಂಪ, ಕವಿರನ್ನ, ಹರೀಶ್ವರ, ರಾಘವಾಂಕ, ಲಕ್ಷ್ಮೀಶ, ಷಡಕ್ಷರದೇವ, ಕುಮಾರವ್ಯಾಸ, ಮುದ್ದಣ, ಬಸವಪ್ಪಶಾಸ್ತ್ರಿ ಮೊದಲಾದವರು ತಮ್ಮತಮ್ಮ ಕಾವ್ಯಗಳಲ್ಲಿ ಸ್ವಕೀಯವಾದ ಶೈಲಿಯೊಂದನ್ನು ಸ್ಥಾಪಿಸಿಕೊಂಡು ಸಾಹಿತ್ಯ ಸಾಮ್ರಾಜ್ಯದಲ್ಲಿ ನಕ್ಷತ್ರಗಳಂತೆ ಕಂಗೊಳಿಸುತ್ತಿದ್ದಾರೆ. ಸಂಸ್ಕೃತ ಕವಿಗಳಲ್ಲಿ ಭಾಸ, ಕಾಳಿದಾಸ, ಬಾಣ, ಭಾರವಿ, ಭವಭೂತಿ ಮೊದಲಾದವರ ಕಾವ್ಯಗಳ ಶೈಲಿಯು ಆ ವಾಙ್ಮಯದಲ್ಲಿ ಪ್ರಖ್ಯಾತವಾಗಿದೆ.

ಪಾಶ್ಚಾತ್ಯಕವಿಗಳು ಸಾಹಿತ್ಯದಲ್ಲಿ ಶೈಲಿಗೆ ಅತ್ಯಂತ ಮಹತ್ವಕೊಟ್ಟಿದ್ದಾರೆ. The style is the man. ಶೈಲಿಯು ಮನುಷ್ಯ, Style is personal ಎಂಬ ಮಾತುಗಳು, ಶೈಲಿಯು ಸ್ವಕೀಯವಾದುದು ಎಂಬುದಕ್ಕೂ, ಅವರು, ಕವಿ ಮತ್ತು ಶೈಲಿಗೆ ಎಂತಹ ಅವಿನಾಭಾವ ಸಂಬಂಧವನ್ನು ಕಲ್ಪಿಸಿದ್ದಾರೆಂಬುದಕ್ಕೂ ನಿದರ್ಶನವಾಗಿವೆ. "ಶೈಲಿ" ಎಂಬುದು "ಶೀಲ" ಎಂಬ ಸಂಸ್ಕೃತ ಶಬ್ದದಿಂದ ಹುಟ್ಟಿದೆ. ಅದುದರಿಂದ "ಕಾವ್ಯದ ಶೈಲಿಯು ಕವಿಯ ಶೀಲದ ಪರಿಣಾಮ" ಎಂಬುದು ಸ್ಪಷ್ಟವಾಗುತ್ತದೆ. ವಿದ್ವಾಂಸರು "ಶೈಲಿ" ಎಂಬ ಪದಕ್ಕೆ ಈ ಮುಂದೆ ಹೇಳುವಂತೆ ಬಗೆ ಬಗೆಯಾಗಿ ಅರ್ಥವಿವರಣೆ ಮಾಡಿದ್ದಾರೆ. "ಕಾವ್ಯದ ವಿಶಿಷ್ಟಗುಣಸಂಯೋಗದಿಂದುಂಟಾದ ವಿಜಾತೀಯ ಚಮತ್ಕೃತಿ ಭಾವನೆಯೇ ಶೈಲಿ". "ಮನಸ್ಸಿನ ನಿಗೂಢವಾದ ಸಂಭವಾದಿ ಸಂಸ್ಕಾರಗಳನ್ನು ಪ್ರಬೋಧಿಸಿ ನಿರತಿಶಯಾನಂದವನ್ನುಂಟುಮಾಡುವ ಕವಿಗಳ ಉದ್ಗಾರವೇ ಶೈಲಿ." "ಉಚಿತಪದ ಪ್ರಯೋಗ ಮತ್ತು ಭಾವನಾ ವಿಶೇಷಾರ್ಥದಿಂದ ಕೂಡಿದಿದು ಶೈಲಿ." "ಭಾವಾನುಗುಣವಾದ ರಸ, ರಸಾಭಿವ್ಯಂಜಕವಾದ ಪದ್ಯಘಟನೆ, ಘಟನಾನು

ಕೂಲವಾದ ಶಬ್ದಗಳುಳ್ಳ ಸರಸ ಮಾತಿನಮಾಲೆಯೇ ಶೈಲಿ." "ಸುಂದರ ಕಾವ್ಯ ದೇವಿಯ ಮುಖಬಣ್ಣದ ಹೊಳಪೇ ಶೈಲಿ." ಕಾವ್ಯಸೌಂದರ್ಯ ಸಮಗ್ರ ವಿಮರ್ಶೆಯೇ ಶೈಲಿ." "ಕವಿಯ ಭಾವಗಳನ್ನು ವಾಚಕರ ಮನಸ್ಸಿನ ಮೇಲೆ ಸ್ಪಷ್ಟವಾಗಿ ಮೂಡುವಂತೆ ಮಾಡುವ ಇಂದ್ರಜಾಲ ವಿದ್ಯೆಯೇ ಶೈಲಿ." "ಭಾವರಸಾಲಂಕಾರಾದಿ ಸಾಧನಗಳಿಂದೊಡವೆರದು ಸೂಸುವ ಕವಿಪ್ರತಿಭಾವೈಖರಿಯೇ ಶೈಲಿ" ಇತ್ಯಾದಿ. ಉತ್ತಮವಾದ ಕಾವ್ಯ ಗಳಲ್ಲಿ ಒಳ್ಳೆಯ ಕಥಾವಸ್ತು, ಹೃದಯಂಗಮವಾದ ವರ್ಣನೆಗಳು, ಮನೋ ಹರವಾದ ರಸಭಾವಗಳು, ಮೃದುಮಧುರವಾದ ಶಬ್ದಗಳು, ಸ್ವಾರಸ್ಯ ವಾದ ಅರ್ಥಚಮತ್ಕಾರಗಳು, ಕುತೂಹಲ ಜನಕವಾದ ಸಂಭಾಷಣೆಗಳು, ಆಕರ್ಷಕವಾದ ಜಾಣ್ಣುಡಿಗಳು ಇತ್ಯಾದಿಗಳೆಲ್ಲವೂ ಆವಶ್ಯಕವಾದುವೇ ಸರಿ. ಆದರೆ ಇಷ್ಟೆಲ್ಲವೂ ಇದ್ದು ಯಾವಕಾವ್ಯವು ಪ್ರಾಸಾದಿಕವಾದ ಶೈಲಿಯಿಂದ ಕೂಡಿರುವುದಿಲ್ಲವೋ ಅದು ಲಾವಣ್ಯವಿಲ್ಲದ ತರುಣಿಯಂತೆ ರಸಿಕರನ್ನು ಮೆಚ್ಚಿಸಲಾರದು. ಸಮರ್ಥನಾದ ಕವಿಯು ನಾರಿಕೇಳ, ಕದಳಿ, ಮತ್ತು ದ್ರಾಕ್ಷಾ ಎಂಬ ಯಾವಪಾಕದಲ್ಲಿ ತನ್ನಕಾವ್ಯವನ್ನು ರಚಿಸಿದರೂ, ಅದಕ್ಕೆ ಸ್ವಕೀಯವಾದ ಶೈಲಿಯೊಂದಿದ್ದರೆ ಮಾತ್ರ ಅವನ ಕೃತಿ ಸಹೃದಯರನ್ನು ಆಕರ್ಷಿಸುವುದು. ಉದಾಹರಣೆಗೆ ನಾರಿಕೇಳ ಪಾಕದ ರಾಜಶೇಖರವಿಳಾಸ, ಕದಳೀಪಾಕದ ಜೈಮಿನಿ ಭಾರತ, ದ್ರಾಕ್ಷಾಪಾಕದ ಸರ್ವಜ್ಞವಚನಗಳು ಕನ್ನಡನಾಡಿನಲ್ಲಿ ಅಭಿಜ್ಞರ ಮನಸ್ಸನ್ನು ಸೂರೆಗೊಂಡಿವೆ ಎಂಬುದನ್ನು ನಾವು ಸ್ಮರಿಸಿಕೊಳ್ಳಬಹುದು.

ನಮ್ಮ ದೇಶದಲ್ಲಿ ಕಾವ್ಯವಾಚನ ಮತ್ತು ಪುರಾಣಶ್ರವಣಗಳನ್ನು ಪ್ರಾಚೀನಕಾಲದಿಂದ ಪ್ರೋತ್ಸಾಹಿಸುತ್ತಾ ಬಂದಿದ್ದಾರೆ. 'ಕಾವ್ಯಾನಂದ'ವು ಪಂಡಿತರು ಸ್ವಂತವಾಗಿ ಓದುವುದರಿಂದ ಅವರಿಗೆ ಆಗುವಂತೆಯೇ, ಪಾಮ ರರು ಅಂತಹವುಗಳನ್ನು ಕೇಳುವುದರಿಂದಲೂ ಪಡೆಯಬಹುದು. ಇದನ್ನು ಕಾವ್ಯಾನಂದದ 'ಅಮರಶಕ್ತಿ' ಎಂದು ಹೇಳಬಹುದು. ಮಧುರವಾದ ಶಬ್ದ ಗಳು, ಸ್ವಾರಸ್ಯವಾದ ಅರ್ಥಚಮತ್ಕಾರಗಳು, ವಿಧವಿಧವಾದ ಛಂದಸ್ಸು, ಅನುಭವ ಪೂರ್ಣವಾದ ವರ್ಣನೆಗಳು, ಮನವನ್ನು ಕರಗಿಸುವ ರಸನಿರೂಪಣೆ, ಉಜ್ವಲವಾದ ಭಾವಗಳು, ಇವೆಲ್ಲಕ್ಕೂ ಮಿಗಿಲಾಗಿ ತೇಜಃಪೂರ್ಣವಾದ

ಶೈಲಿ ಇವುಗಳಿಂದ ಕೂಡಿದ ಕಾವ್ಯವನ್ನು ಓದಿ ಅಥವಾ ಕೇಳಿ ಸುಖಿಸುವುದು ಒಂದುಬಗೆಯ ಸ್ವರ್ಗಾನಂದವೇ ಸರಿ.

ಕವಿಗೆ ಲೋಕಾನುಭವ, ಶಾಸ್ತ್ರಪಾಂಡಿತ್ಯ ಮತ್ತು ದೇಶಾಟನಗಳು ಎಷ್ಟು ಮುಖ್ಯವೋ, ಅದಕ್ಕೂ ಹೆಚ್ಚಾಗಿ "ಮಾರಾರಿಯ ಕೃಪೆ" ಅಗತ್ಯ. "ಕ್ಷುದ್ರ" ನೂ "ಅತಿ ಶಬ್ದದರಿದ್ರ"ನೂ ನವೀನಕಾವ್ಯಾರಂಭವನ್ನು ಮಾಡುವುದು ಸಾಧ್ಯವಿಲ್ಲವೆಂದು ಹರಿಹರನು ಹೇಳಿದ್ದಾನೆ. ಷಡಕ್ಷರ ಕವಿಯು ಹೇಳುವಂತೆ "ಶಾಸ್ತ್ರಶ್ರೀರೋಹಣ ಪರ್ವತ"ವನ್ನು ಏರಿದವರಿಗೆ ಕವಿತಾನಾಮಕ ಚಿಂತಾರತ್ನವು ಲಭಿಸಬೇಕಾದರೆ ಪರಶಿವನ ದಯೆಬೇಕು ಎಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಸಂಸ್ಕೃತ ಸಾಹಿತ್ಯದಲ್ಲಿ ಮಹಾಕವಿಗಳಾದ, ಭಾಸ, ಕಾಳಿದಾಸ, ಭವಭೂತಿ ಮತ್ತು ಬಾಣಭಟ್ಟರು ತಮ್ಮದೇ ಆದ ಶೈಲಿಯನ್ನು ರಚಿಸಿ ಆ ವಾಙ್ಮಯದ ಘನತೆಯನ್ನು ಹೆಚ್ಚಿಸಿದ್ದಾರೆ. ಇಂಗ್ಲಿಷ್ ಸಾಹಿತ್ಯದಲ್ಲಿ ಷೇಕ್ಸ್‌ಪಿಯರ್, ಮಿಲ್ಟನ್, ಗೋಲ್ಡ್‌ಸ್ಮಿತ್, ವರ್ಡ್ಸ್ ವರ್ತ್, ಬರ್ನಾಡ್‌ಷಾ ಮೊದಲಾದವರು ತಮ್ಮದೇ ಆದ ಶೈಲಿಯನ್ನು ರಚಿಸಿ ಆಂಗ್ಲಸಾಹಿತ್ಯವನ್ನು ದಿಗಂತ ವಿಶ್ರಾಂತಗೊಳಿಸಿದ್ದಾರೆ. ಹಾಗೆಯೇ ಕನ್ನಡ ಸಾಹಿತ್ಯದಲ್ಲಿ ಋಷಿಕವಿಗಳಾದ,ಆದಿಪಂಪ,ಹರೀಶ್ವರ, ಕುಮಾರವ್ಯಾಸಾದಿಗಳು ಉತ್ತಮವಾದ ಶೈಲಿಯ ಸಂಪತ್ತನ್ನುಗಳಿಸಿ ಲೋಕಪೂಜ್ಯರಾಗಿದ್ದಾರೆ. ಕಾವ್ಯಸಮಾಧಿಯಲ್ಲಿ ಸಿದ್ಧರಾಗದವರಿಗೆ, ಜನ್ಮಾಂತರ ಸುಕೃತವಿಲ್ಲದವರಿಗೆ, ಸಕಲ ಕಲಾನಿಪುಣರಲ್ಲದವರಿಗೆ, 'ವಾಗ್ವಶ್ಯ'ರೆಂಬ ಅಪಕೀರ್ತಿಗೆ ದೂರವಾಗಿ 'ವಶ್ಯವಾಕ್ಕು' ಎನಿಸದವರಿಗೆ ಉತ್ತಮ ಕವಿತಾಶೈಲಿಯು ಪ್ರಾಪ್ತವಾಗಲಾರದು. ಆಧುನಿಕ ಸಾಹಿತ್ಯದಲ್ಲಿ ಕೂಡ ಡಾ|| ಮಾಸ್ತಿ, ಶ್ರೀಯುತ ಆಲೂರು ವೆಂಕಟರಾಯರು, ಕವಿ ಬೇಂದ್ರೆ, ಪಂಡಿತ ತಿಮ್ಮಪ್ಪಯ್ಯ, ಕವಿ ಪುಟ್ಟಪ್ಪ ಮೊದಲಾದ ಹಿರಿಯ ಸಾಹಿತಿಗಳು ತಮ್ಮದೇ ಆದ ಶೈಲಿಯನ್ನು ಅಳವಡಿಸಿಕೊಂಡು ಕನ್ನಡ ಸಾಹಿತ್ಯವನ್ನು ಜೀವಂತವಾಗಿ ಕಂಗೊಳಿಸುವಂತೆ ಮಾಡಿದ್ದಾರೆ. ಹಿಂದಿನ ಮಹಾಕವಿಗಳೂ, ನಮ್ಮ ವಿಖ್ಯಾತ ಸಾಹಿತಿಗಳೂ ಕನ್ನಡಿಗರ ಹೆಮ್ಮೆಗೆ ಕಾರಣರಾಗಿದ್ದಾರೆ. ಸಾಹಿತ್ಯ ಸರಸ್ವತಿಯ ಕೃಪೆಯಿಂದ ಅವರು ಅಳವಡಿಸಿಕೊಂಡ ಶೈಲಿಯೇ ಅವರ ಕೀರ್ತಿಗೆ ಕಾರಣವಾಗಿದೆ. ಇದುವೇ ಕನ್ನಡನುಡಿ ಗುಡಿಯ ಹೊನ್ನಿನ ಕಲಶಕ್ಕೆ ಕಾಂತಿಯಿತ್ತಿದೆ.

# ಕರ್ಣಾಟಕ ಮತ್ತು ಕಾಲಿದಾಸ

ಕರ್ಣಾಟಕಕ್ಕೂ ಕಾಳಿದಾಸನಿಗೂ ಇರುವ ಬಾಂಧವ್ಯವು ಕೇವಲ ಕಕಾರದ ಬಳ್ಳಿಯಿಂದ ಮಾತ್ರವಲ್ಲ ಎಂಬುದಕ್ಕೆ 'ಕಾಳಿದಾಸನ ಕವಿತೆ ಕವಳದಾಸನಿಗೇನುಗೊತ್ತು' ಎಂಬ ಕನ್ನಡ ಗಾದೆಯಿಂದ ತಿಳಿದು ಬರುತ್ತಿದೆ. ಕನ್ನಡಿಗರ ಲಗ್ನ ಪತ್ರಿಕೆಯ ಮೇಲೆ ಕಾಳಿದಾಸನ ರಘುವಂಶದ ಮೊದಲನೆಯ ಶ್ಲೋಕವನ್ನು ಹಾಕುವ ರೂಢಿಯು ಹಲವು ಶತಮಾನಗಳಿಂದ ಬಂದಿದೆ. ಮೈಸೂರು ರಾಜಧಾನಿಯಲ್ಲಿ ೧೯ನೆಯ ಶತಮಾನದ ಕಟ್ಟಕಡೆಯಲ್ಲಿ ಪ್ರಸಿದ್ಧಿಗೆ ಬಂದ ಮಹಾಕವಿ ಬಸವಪ್ಪ ಶಾಸ್ತ್ರಿಗೆ 'ಅಭಿನವ ಕಾಳಿದಾಸ' ಎಂಬ ಬಿರುದು ಪ್ರಾಪ್ತವಾಗಿರುವುದು ಕನ್ನಡಿಗರಿಗೆ ಕಾಳಿದಾಸನಬಗೆಗೆ ಇರುವ ಮಾನ್ಯತೆಗೆ ಮತ್ತೊಂದು ನಿದರ್ಶನವಾಗಿದೆ. ಕರ್ಣಾಟಕದ ಜನಸಾಮಾನ್ಯಕ್ಕೂ ಕಾಳಿದಾಸನ ಪರಿಚಯ ಉಂಟೆಂಬುದಕ್ಕೆ ಮೇಲಿನ ಗಾದೆಯು ಮಾತು ನಿದರ್ಶನವಾಗಿದೆ. ಮಹಾಕವಿ ಕಾಳಿದಾಸನಿಗೂ ನಮ್ಮ ಕನ್ನಡ ನಾಡಿಗೂ ಇರುವ ಐತಿಹಾಸಿಕ, ವಾಙ್ಮಯಾತ್ಮಕ ಸಂಬಂಧವೆಂತಹುದೆಂಬುದನ್ನು ಈ ಲೇಖನವು ಸ್ಪಷ್ಟಗೊಳಿಸಿದೆ.

ಕಾಳಿದಾಸ ಮಹಾಕವಿಯ ಕೀರ್ತಿಯನ್ನು ಕೇಳದಿದ್ದವನು ನಾಗರಿಕ ಪ್ರಪಂಚದಲ್ಲಿ ವಿರಳ. ಕಾಳಿದಾಸನನ್ನು ಹೋಲುವ ಕವಿಗಳು ಪ್ರಪಂಚದ ಸಾಹಿತ್ಯದಲ್ಲಿ ಕೆಲವರು ಮಾತ್ರ. ಇಂಗ್ಲೆಂಡಿನ ಷೇಕ್ಸ್‌ಪಿಯರ್, ಗ್ರೀಸಿನ ಹೋಮರ್ ಎಂಬಿಬ್ಬರು ಪ್ರಾಚೀನ ಕವಿಗಳು ಕಾಳಿದಾಸನ ಪರಂಪರೆಗೆ ಅರ್ಹರು ಎಂದು ವಿದ್ವಾಂಸರ ನಂಬಿಕೆ. ಭರತಖಂಡದಲ್ಲಿ ಮಹಾಕವಿಗಳಾದ ಭಾಸ, ಬಾಣ, ಭವಭೂತಿಗಳನ್ನು ಕಾಳಿದಾಸನ ಮಟ್ಟಕ್ಕೆ ಏರಿಸುವ

-----

ತಾ॥ ೨೪–೧೧–೧೯೪೪ರಲ್ಲಿ ಬೆಂಗಳೂರು ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ನಡೆದ ಕಾಳಿದಾಸ ಮಹಾಕವಿಯ ಜಯಂತಿ ಸಮಾರಂಭದಲ್ಲಿ ಶಾಸ್ತ್ರಿಗಳು ಹೇಳಿದ ಭಾಷಣದ ಸಂಗ್ರಹವು ಈ ಲೇಖನ ರೂಪವಾಗಿ ಪ್ರಕಟವಾಗಿದೆ,

ಚಪಲವು ಹಲವು ಮಂದಿ ಪಂಡಿತಪ್ರಕಾಂಡರಿಗುಂಟು. ಆದರೆ ಎಲ್ಲ ದೃಷ್ಟಿಯಿಂದ ವಿಚಾರಮಾಡಿ ನೋಡಿದರೆ ಕಾಳಿದಾಸನನ್ನು ಹೋಲುವ ಕವಿಗಳು ವಿಶ್ವದ ಸಾಹಿತ್ಯದಲ್ಲಿಯೇ ವಿರಳವೆಂದು ವಿಚಾರಪರರು ಒಪ್ಪಿಕೊಳ್ಳುತ್ತಾರೆ.

'ಕಾಳಿದಾಸಂಗೆ ದಾಸರೆನಿಸರ್ ಕವಿಗಳ್' 'ಕವಿಷು ಕಾಳಿದಾಸಃ ಶ್ರೇಷ್ಠಃ' 'ಕವಿಕುಲಗುರುಃ ಕಾಳಿದಾಸೋವಿಲಾಸಃ' 'ಉಪಮಾ ಕಾಲಿದಾಸಸ್ಯ' ಕವಿತಾ ಕಲಾನಿವಾಸನ ಕಾಲಿದಾಸನ, ಕಾಲಿದಾಸನ ರಸವೃತ್ತಿ, 'ಕಾಲಿದಾಸನ ನುಡಿಯು ಕೋಲುಜೇನಿನ ಗುಡಿಯು' ಈ ಮೊದಲಾದ ಪ್ರಾಚೀನ ಕವಿಗಳ ಮುತ್ತಿನಂತಹ ಮಾತುಗಳು ಕಾಳಿದಾಸನ ಹಿರಿಮೆಗೂ ಗರಿಮೆಗೂ ನಿದರ್ಶನವಾಗಿವೆ.

ಪುರಾ ಕವಿನಾಂ ಗಣನಾ ಪ್ರಸಂಗೇ ಕನಿಷ್ಠಿಕಾಧಿಷ್ಠಿತಕಾಳಿದಾಸಾ ।
ಅದ್ಯಾಪಿ ತತ್ತುಲ್ಯಕವೇರಭಾವಾದನಾಮಿಕಾ ಸಾರ್ಥವತೀ ಬಭೂವ ॥

ಎಂಬ ಸುಪ್ರಸಿದ್ಧ ಶ್ಲೋಕವು ಕಾಳಿದಾಸನು ನಿರುಪಮನಾದ ಕವಿಯೆಂಬುದನ್ನು ಡಂಗೂರ ಹೊಯ್ಯುತ್ತಿದೆ.

ನಿರ್ಗತಾಸು ಮಹಾಕವೇಃ ಕಾಳಿದಾಸಸ್ಯ ಸೂಕ್ತಿಷು ।
ಪ್ರೀತಿರ್ಮಧುರಸಾದ್ರಾಸು ಮಂಜರೀಷ್ವಿವ ಜಾಯತೇ

ರಸಋಷಿ ಕಾಳಿದಾಸನು ಸಾಹಿತ್ಯದ ಸ್ವರೂಪವನ್ನೂ ಜೀವನದ ಗುಟ್ಟು ಗುರಿಗಳನ್ನೂ ತ್ರಿಕಾಲಾಬಾಧಿತವಾದ ಧರ್ಮತತ್ವವನ್ನೂ ಚೆನ್ನಾಗಿ ಅರಿತಿದ್ದನೆಂಬುದಕ್ಕೆ ಅವನ ಗ್ರಂಥಗಳಲ್ಲಿ ಬೇಕಾದಷ್ಟು ನಿದರ್ಶನಗಳಿವೆ. ಅಭಿಜ್ಞಾನ ಶಾಕುಂತಲ ನಾಟಕದಲ್ಲಿ:

ಆಪರಿತೋಷಾದ್ವಿದುಷಾಂ ನಸಾಧುಮನ್ಯೇ ಪ್ರಯೋಗ ವಿಜ್ಞಾನಂ ।
ಬಲವದಪಿ ಶಿಕ್ಷಿತಾನಾಂ ಆತ್ಮನ್ಯಪ್ರತ್ಯಯಂ ಚೇತಃ ॥

( ಅಂಕ. ೧. ಶ್ಲೋಕ. ೨. )

ಎಂದು ಕವಿಯು ಹೇಳಿರುವ ಮಾತು ಎಲ್ಲ ಸಾಹಿತ್ಯಕ್ಕೂ ಮಾನ್ಯವಾದುದಾಗಿದೆ. ಒಂದು ಕಾವ್ಯದ ಹಿರಿಮೆಯು ಅದಕ್ಕೆ ರಸಿಕರು

ಕೊಡುವ ಮೆಚ್ಚುಗೆಯಿಂದಲ್ಲದೆ ಮತ್ತಾವುದರಿಂದ ಪ್ರಾಪ್ತವಾದೀತು ? ಎಂಬ ನಿಗೂಢವಾದ ತತ್ವವನ್ನು ಕಾಳಿದಾಸನು ಚೆನ್ನಾಗಿ ತಿಳಿದಿದ್ದನು. ಮಾಲವಿಕಾಗ್ನಿಮಿತ್ರ ನಾಟಕದಲ್ಲಿ:

ಪುರಾಣಮಿತ್ಯೇವ ನಸಾಧು ಸರ್ವಂ ನಚಾಪಿ ಕಾವ್ಯಂ ನವಮಿತ್ಯವದ್ಯಂ।
ಸಂತಃ ಪರೀಕ್ಷಾನ್ಯತರದ್ಭಜಂತೇ ಮೂಢಃ ಪರಪ್ರತ್ಯಯನೇಯ
ಬುದ್ಧಿಃ ॥

(ಅಂಕ ೧. ಪದ್ಯ. ೨.)

ಅಂದರೆ ಒಂದು ಕಾವ್ಯವು ಹಳೆಯದಾದ್ದರಿಂದ ಸರ್ವೋತ್ಕೃಷ್ಟವೆಂದು ಹೇಳುವುದು, ಹೊಸದಾದ ಮಾತ್ರಕ್ಕೇ ಅದು ಸಾಮಾನ್ಯವೆಂದು ವಾದಿಸುವುದು ನ್ಯಾಯವಲ್ಲವೆಂದೂ ಕೇವಲ ಅದರ ಗುಣದಿಂದಲೇ ಕಾವ್ಯಕ್ಕೆ ಬೆಲೆ ಕಟ್ಟಬೇಕೆಂದೂ ಕಾಳಿದಾಸನು ಹೇಳುತ್ತಾನೆ. ಈ ವಿಷಯವನ್ನು ಎಲ್ಲ ಕಾಲದ ಎಲ್ಲದೇಶದ ವಿದ್ವಾಂಸರೂ ಮಾನ್ಯ ಮಾಡಲೇಬೇಕಾಗಿದೆ.

ಈ ಮೇಲೆ ಹೇಳಿದ ಶ್ಲೋಕಾಭಿಪ್ರಾಯಗಳಿಂದ ಕಾಳಿದಾಸನು ಸಾಹಿತ್ಯದ ತಿರುಳನ್ನೂ ಜೀವನದ ಹುರುಳನ್ನೂ ಅರಿತ ವಿವೇಕಿಯಾದ ಕವಿಯಾಗಿದ್ದನೆಂಬುದನ್ನು ನಾವು ಒಪ್ಪಿಕೊಳ್ಳುವಂತಿದೆ.

ಸತಾಂಹಿ ಸಂದೇಹ ಪದೇಷು ವಸ್ತುಷು ಪ್ರಮಾಣಮಂತಃಕರಣ
ಪ್ರವೃತ್ತಯಃ।

(ಅ. ಶಾ. ಅಂಕ ೫. ಪದ್ಯ ೧೯)

'ಸಂದೇಹದ ಸನ್ನಿವೇಶಗಳಲ್ಲಿ ಸತ್ಪುರುಷರ ಮನಸ್ಸು ಎಲ್ಲಿ ರಮಿಸುತ್ತದೆಯೋ ಅದೇ ಧರ್ಮವಾದುದು' ಎಂದು ಶಕುಂತಲೆಯನ್ನು ಕಂಡ ದುಷ್ಯಂತನು ಹೇಳಿದ ಮಾತು,

'ಆರ್ತತ್ರಾಣಾಯ ವಃ ಶಸ್ತ್ರಂ ನಪ್ರಹರ್ತುಮನಾಗಸಿ'

(ಅಂಕ. ೧. ಪದ್ಯ ೧೦)

'ದೇವರು ನಿನ್ನ ಕೈಯ್ಯಲ್ಲಿ ಶಸ್ತ್ರಗಳನ್ನು ಕೊಟ್ಟಿರುವುದು ಸತ್ಪುರುಷರನ್ನು ಕಾಪಾಡುವುದಕ್ಕಾಗಿ, ಕೊಲ್ಲುವದಕ್ಕಲ್ಲ' ಎಂದು ವೈಖಾನಸನು

ರಾಜಾ ದುಷ್ಯಂತನನ್ನು ಕುರಿತು ಹೇಳಿದ ಮಾತು ಕಾಳಿದಾಸನು ಶಾಸ್ತ್ರ ಮತ್ತು ಧರ್ಮವನ್ನು ಚೆನ್ನಾಗಿ ಬಲ್ಲವನೆಂಬುದಕ್ಕೆ ನಿದರ್ಶನವಾಗಿದೆ.

ಕವಿಕುಲ ಗುರುವಾದ ಕಾಳಿದಾಸನು ಅತ್ಯಂತ ವಿನಯ ಶೀಲ ನೆಂಬುದಕ್ಕೆ ·

ಕ್ವಸೂರ್ಯಪ್ರಭವೋವಂಶಃ ಕ್ವಚಾಲ್ಪವಿಷಯಾಮತಿಃ |
ತೀತೀರ್ಷುರ್ದುಸ್ತರಂ ಮೋಹಾದುಡುಪೇನಾಸ್ಮಿಸಾಗರಮ್ ||
ಮಂದಃ ಕವಿಯಶಃ ಪ್ರಾರ್ಥೀ ಗಮಿಷ್ಯಾಮ್ಯಪಹಾಸ್ಯತಾಂ |
ಪ್ರಾಂಶುಲಭ್ಯೇಫಲೇ ಲೋಭಾದುದ್ಬಾಹುರಿವ ವಾಮನಃ ||
ಅಥವಾ ಕೃತವಾಗ್ದ್ವಾರೇ ವಂಶೇಸ್ಮಿನ್ ಪೂರ್ವಸೂರಿಭಿಃ |
ಮಣೌವಜ್ರ ಸಮುತ್ಕೀರ್ಣೇ ಸೂತ್ರಸ್ಯೇವಾಸ್ತಿ ಮೇ ಗತಿಃ ||

ಎಂಬ ರಘುವಂಶದ ಶ್ಲೋಕಗಳಲ್ಲಿ, "ಶ್ರೇಷ್ಠವಾದ ಸೂರ್ಯವಂಶ ವೆಲ್ಲಿ ? ಅಲ್ಪ ಬುದ್ಧಿಯುಳ್ಳನಾನೆಲ್ಲಿ ? ಈ ನನ್ನ ಪ್ರಯತ್ನವು ಒಂದು ಚಿಕ್ಕ ತೆಪ್ಪದಿಂದ ಸಮುದ್ರವನ್ನು ದಾಟುವವನಂತಾಗಿದೆ. ನಾನು ಮೂಢನು. ಮಹಾಕವಿಯ ಕೀರ್ತಿಯನ್ನು ಅಪೇಕ್ಷಿಸುತ್ತೇನೆ. ನನ್ನ ಈ ಪ್ರಯತ್ನವು ಗಿಡ್ಡನಾದವನು ಎತ್ತರವಾದ ಮರದ ಹಣ್ಣಿಗೆ ಕೈಹಾಕಿ ಅಪಹಾಸ್ಯಕ್ಕೆ ಈಡಾದಂತಾಗಿದೆ. ಪ್ರಾಚೀನರಾದ ವಾಲ್ಮೀಕಿಗಳೇ ಮೊದ ಲಾದ ಋಷಿಕವಿಗಳಿಂದ ಹೃದಯಂಗಮವಾಗಿ ನಿರೂಪಿತವಾಗಿರುವ ಪವಿತ್ರವಾದ ರಘುವಂಶದ ಚರಿತ್ರೆಯನ್ನು ಅವರು ಹೋದ ದಾರಿಯಲ್ಲಿ ಭಕ್ತಿಯಿಂದ ಅಡಿಯಿಡುತ್ತಾ ನಾನು ಬರೆಯಲು ತೊಡಗುತ್ತೇನೆ" ಎಂದು ಹೇಳುವಲ್ಲಿ ಕವಿಯ ವಿನಯಗುಣವು ಎಂತಹ ಶ್ರೇಷ್ಠ ತರಗತಿಗೆ ಸೇರಿದುದೆಂದು ನಾವು ಊಹಿಸಬಹುದು.

ಮಹಾಕವಿ ಕಾಳಿದಾಸನು ತಿಳಿವಳಿಕೆಯಿಂದ ಅದ್ವೈತಿಯಾಗಿದ್ದರೂ, ನಡೆವಳಿಕೆಯಿಂದ ಶಿವಭಕ್ತನಾಗಿದ್ದನೆಂದು ತಿಳಿಯಲು ಅವನ ಗ್ರಂಥಗಳಲ್ಲಿ ನಿದರ್ಶನಗಳಿವೆ. ರಘುವಂಶ, ಅಭಿಜ್ಞಾನ ಶಾಕುಂತಲ, ಮಾಲವಿಕಾಗ್ನಿಮಿತ್ರ ಮತ್ತು ವಿಕ್ರಮೋರ್ವಶೀಯ ಗ್ರಂಥಗಳ ಪ್ರಾರಂಭದಲ್ಲಿ ತನ್ನ ಇಷ್ಟದೈವವಾದ

ಪರಶಿವನ ಸ್ತೋತ್ರವನ್ನು ಮಾಡಿಯೇ ಕವಿಯು ತನ್ನ ಗ್ರಂಥಗಳನ್ನು ಪ್ರಾರಂಭಿಸಿದ್ದಾನೆ. ಇದು ಅವನ ಶಿವಭಕ್ತಿಗೆ ಸುಸ್ಪಷ್ಟವಾದ ನಿದರ್ಶನ ವಾಗಿದೆ. ಆದುದರಿಂದಲೇ ಕರ್ಣಾಟಕದ ವೀರಶೈವ ಕವಿಗಳೂ ಬಸವಾದಿ ಶಿವಶರಣರೂ ಕಾಳಿದಾಸನನ್ನು ತಮ್ಮ ಗ್ರಂಥಗಳಲ್ಲಿ ಬಹಳವಾಗಿ ಸ್ಮರಿಸಿ ದಂತೆ ಕಾಣುತ್ತದೆ.

ಕಾಳಿದಾಸನು ಒಳ್ಳೆಯ ವೇದಾಂತಿ ಎಂಬುದಕ್ಕೆ ಕುಮಾರ ಸಂಭವ ದಲ್ಲಿ ಅವನು ತಪೋಧನನಾದ ಚತುರ್ಮುಖ ಬ್ರಹ್ಮನನ್ನ ಕುರಿತು ದೇವತೆ ಗಳ ಮುಖದಿಂದ ಹಾಡಿಸಿದ ಶ್ಲೋಕಗಳು ನಿದರ್ಶನವಾಗಿವೆ.

ಜಗದ್ಯೋನಿರಯೋನಿಸ್ತ್ವಂ ಜಗದಂಡೋ ನಿರಂತಕಃ ।
ಜಗದಾದಿರನಾದಿಸ್ತ್ವಂ ಜಗದೀಶೋ ನಿರೀಶ್ವರಃ ॥
ಆತ್ಮಾನಾಮಾತ್ಮನಾ ವೇತ್ಸಿ ಸೃಜಯಸ್ಯಾತ್ಮಾನಮಾತ್ಮನಾ ।
ಆತ್ಮಾನಾ ಕೃತಿನಾಚತ್ವಂ ಆತ್ಮನ್ಯೇವಪ್ರಲೀಯಸೇ ॥
ತ್ವಂಪಿತ್ಯಾಣಾಮಪಿ ಪಿತಾ ದೇವಾಣಾಮಪಿ ದೇವತಾ ।
ಪರತೋಽಪಿ ಪರಶ್ಚಾಸಿ ವಿಧಾತಾ ವೇದಸಾಮಪಿ ॥
ತ್ವಮೇವಹವ್ಯಂ ಹೋತಾಚಭೋಜ್ಯಂ ಭೋಕ್ತಾಚ ಶಾಶ್ವತಃ ।
ವೇದ್ಯಂಚ ವೇದಿತಾಽಚಾಸಿ ಧ್ಯಾತಾಧ್ಯೇಯಂಚ ಯತ್ಪರಂ ॥

( ಕುಮಾರ ಸಂಭವಂ, ದ್ವಿತೀಯಸರ್ಗಃ )

ಮೇಲಿನ ಶ್ಲೋಕಗಳು ಕಾಲಿದಾಸ ಮಹಾಕವಿಯ ತತ್ವಜ್ಞಾನಕ್ಕೆ, ಅವನ ಒಳಗಣ್ಣಿನ ಪ್ರಕಾಶಕ್ಕೆ ಕೈಗನ್ನಡಿಯಂತಿವೆ. ರಘುವಂಶದಲ್ಲಿ ಕವಿಯು ಮಾಡಿರುವ ವಿಷ್ಣುವಿನ ಸ್ತೋತ್ರದಲ್ಲಿಯೂ ಇಂತಹ ತತ್ವಗಳನ್ನೇ ನಾವು ನೋಡಬಹುದು. ನಾವು ಇದುವರೆಗೆ ಹೇಳಿದ ಸಂಗತಿಗಳಿಂದ ಕಾಲಿದಾಸನು ರಸಜ್ಞನೂ ಅನುಭಾವಿಯೂ ಲೋಕಾನುಭವಸಂಪನ್ನನೂ ಶಿವಭಕ್ತನೂ ಪ್ರತಿಭಾಶಾಲಿಯೂ ಆದ ಮಹಾಕವಿ ಎಂಬುದು ಸೂರ್ಯ ಪ್ರಕಾಶದಷ್ಟು ಸ್ಪಷ್ಟವಾಗಿ ತಿಳಿಯುವಂತಿದೆ.

ಕಾಳಿದಾಸನ ಕಾವ್ಯಗಳ ಸ್ವಾರಸ್ಯವನ್ನು ಭಾರತೀಯರಿಗಿಂತ ಪಾಶ್ಚಾತ್ಯ ವಿದ್ವಾಂಸರು ಬಹಳವಾಗಿ ಕೊಂಡಾಡಿರುತ್ತಾರೆ. ಜರ್ಮನಿಯ ಮಹಾ ವಿದ್ವಾಂಸನಾದ ಗಯಟೆಯು "ಸ್ವರ್ಗ ಮರ್ತ್ಯಗಳ ಮಧುರ ಬಾಂಧವ್ಯವನ್ನು ಒಂದೆಡೆ ನೋಡಬೇಕಾದರೆ ಕಾಲಿದಾಸನ ಶಾಕುಂತಲ ನಾಟಕದಲ್ಲಿ ಮಾತ್ರ" ಎಂದು ಹೇಳುತ್ತಾನೆ.

"ಕಾವ್ಯೇಷು ನಾಟಕಂ ರಮ್ಯಂ ತೇಷು ರಮ್ಯಾ ಶಕುಂತಲಾ" ಎಂಬ ಭಾರತೀಯ ವಿದ್ವಾಂಸರ ಸಿದ್ಧಾಂತವು ಮಾನ್ಯ ಗಯಟೆಯ ಮಾತಿಗೆ ಬೆಂಬಲವಾಗಿದೆ. ಇಂಗ್ಲೆಂಡಿನ ಕೆಲವು ಪ್ರಸಿದ್ಧ ವಿದ್ವಾಂಸರು ಷೇಕ್ಸ್‌ಪಿಯರನ 'ಟೆಂಪೆಸ್ಟ್' ನಾಟಕವು ಕಾಲಿದಾಸನ ಶಾಕುಂತಲಕ್ಕೆ ಸಮ ಎನ್ನುತ್ತಾರೆ. ಈ ಎಲ್ಲ ಮಾತುಗಳು ಐರೋಪ್ಯ ವಿಬುಧರು ಕಾಲಿದಾಸನ ಕಾವ್ಯಗಳ ಅಮೃತಪಾನವನ್ನು ಮಾಡಿ ನಲಿದಿರುವರೆಂಬುದಕ್ಕೆ ನಿದರ್ಶನವಾಗಿವೆ. ಇಂದು ಕಾಲಿದಾಸನ ಕಾವ್ಯಗಳು ವಿಶ್ವದ ವಿದ್ವಾಂಸರೆಲ್ಲರಿಗೂ ಪರಿಚಿತವೆನಿಸಿವೆ.

ಕಾಲಿದಾಸನ ಕಾಲ, ದೇಶ, ಮತ ಮೊದಲಾದುವುಗಳನ್ನು ಚರ್ಚಿಸುವುದಾಗಲಿ, ಕಾವ್ಯ ಮತ್ತು ನಾಟಕಗಳ ಕರ್ತೃ ಕಾಲಿದಾಸನು ಒಬ್ಬನೋ, ಭಿನ್ನರೋ ಎಂಬುದನ್ನು ಚರ್ಚಿಸುವುದಾಗಲಿ, ಕವಿಯು ಮಗಧದೇಶದವನೋ, ಕಾಶ್ಮೀರದವನೋ, ವಿಕ್ರಮಾದಿತ್ಯನ ಉಜ್ಜಯಿನಿಯವನೋ, ಗುಪ್ತರ ರಾಜಾಸ್ಥಾನದಲ್ಲಿ ಪರಿಶೋಭಿಸಿದವನೋ, ಧಾರಾನಗರದ ಭೋಜರಾಜನ ಆಸ್ಥಾನ ಕವಿಯೋ, ಅಲ್ಲವೋ ಎಂಬಿವೇ ಮೊದಲಾದ ವಾದಗ್ರಸ್ತ ವಿಷಯುಗಳನ್ನು ಬರೆಯತೊಡಗುವುದು ಈ ಲೇಖನದ ಮುಖ್ಯೋದ್ದೇಶವಲ್ಲ.

ಕಾಲಿದಾಸನಿಗೆ ಕರ್ಣಾಟಕದ ಪರಿಚಯವಿರಬಹುದೆ ? ಕವಿಗೂ ಕನ್ನಡನಾಡಿಗೂ ಇರುವ ಸಂಬಂಧವೇನು ? ಕಾಲಿದಾಸನ ಗ್ರಂಥಗಳು ಕನ್ನಡಿಗರ ಮೇಲೆ ಉಂಟುಮಾಡಿರುವ ಪರಿಣಾಮವೇನು ? ಈ ಹೆಸರಿನಲ್ಲಿ ಕನ್ನಡಿಗರಲ್ಲಿ ಯಾರಾದರೂ ಆಗಿಹೋಗಿದ್ದಾರೆಯೋ ? ಕಾಳಿದಾಸನ

ಗ್ರಂಥಗಳು ಎಲ್ಲೆಲ್ಲಿ ಯಾರುಯಾರಿಂದ ಕನ್ನಡಕ್ಕೆ ಪರಿವರ್ತಿತವಾಗಿವೆ? ಕಾಳಿದಾಸನ ಬಗೆಗೆ ಕನ್ನಡಿಗರ ಕರ್ತವ್ಯವೇನು ? ಎಂಬಿಷ್ಟು ಸಂಗತಿಗಳನ್ನು ಮಾತ್ರ ವಿವರಿಸುವುದು ಈ ಲೇಖನದ ಮುಖ್ಯೋದ್ದೇಶವಾಗಿದೆ.

ಭಕ್ತಿಭಂಡಾರಿ ಬಸವಣ್ಣನವರು ತಮ್ಮ ವಚನಗಳಲ್ಲಿ ಕೆಲವೆಡೆ ಕಾಳಿದಾಸನ ಹೆಸರನ್ನು ಸ್ಮರಿಸಿದ್ದಾರೆ.

ಕಾಳಿದಾಸಂಗೆ ಕಣ್ಣನಿತ್ತೆ, ಓಹಿಲಯ್ಯನ ನಿಜಪುರಕೊಯ್ದೆ,
ನಂಬಿ ಕರೆದೊಡೋ ಎಂದೆ, ತೆಲುಗುಬೊಮ್ಮಯ್ಯಂಗೆ ಒಲಿದೆ ದೇವಾ,
ಕೂಡಲಸಂಗಮದೇವಾ ಎನ್ನನೇಕೊಲ್ಲೆಯಯ್ಯಾ ?

(ಬ. ವ. ದ್ವಿ. ಮುದ್ರಣ. ಪುಟ ೭೭)

ಎನಗಾರು ಇಲ್ಲ ಎನನಾರು ಇಲ್ಲ ಎಂಬರು,
ಬಾಣನವ ನಾನು, ಮಯೂರನವ ನಾನು, ಕಾಳಿದಾಸನವ ನಾನು,
ಹಿರಿಯಯ್ಯ ಚಿಕ್ಕಯ್ಯ, ಚೆನ್ನಯ್ಯ ಎತ್ತಿಮುದ್ದಾಡಿದನೆನ್ನ
ಕೂಡಲಸಂಗಯ್ಯ

[ಪುಟ, ೫೨]

ಮೇಲಿನ ಎರಡು ವಚನಗಳಲ್ಲಿ ಕಾಳಿದಾಸನ ಹೆಸರು ಬಂದಿದೆಯಷ್ಟೆ ? ಈ ಕಾಳಿದಾಸನು ಯಾರೆಂಬುದನ್ನು 'ಬಸವೇಶ್ವರ ಷಟ್ಸ್ಥಲ ವಚನದ ಕಥಾ ಸಾರ' ಎಂಬ ಗ್ರಂಥವನ್ನು ಬರೆದ ಕವಿಯು ಈ ಮುಂದಿನಂತೆ ಹೇಳುತ್ತಾನೆ. "ಧಾರಾಪುರದಲ್ಲಿ ಭೋಜರಾಜನಿಹನು. ಅವನಿಗೆ ಪದ್ಮಾವತಿ ಎಂಬ ಮಗಳು. ಇವಳ ತಂಗಿ ನೇತ್ರಾವತಿ ವರರುಚಿಯನ್ನು ವಾದದಲ್ಲಿ ಸೋಲಿಸಿದಳು. ವರರುಚಿಯು ನೇತ್ರಾವತಿಯ ಮೇಲಿನ ದ್ವೇಷದಿಂದ ಒಬ್ಬ ಹೆಡ್ಡ ಕುರುಬನನ್ನು ತಂದು ರಾಜಪುತ್ರಿಗೆ ಮದುವೆ ಮಾಡಿದನು. ಅರಸು ಮಗಳು ಕಾಳಿಕಾದೇವಿಯ ಬಳಿಗೆ ಹೋಗಿ ಆ ದಡ್ಡಗಂಡನಿಗೆ ವರವನ್ನು ಕೊಡಿಸಿದಳು. ಆ ಕುರುಬ ಕಾಳಿದಾಸನಾದನು. ಆ ಶಿವಭಕ್ತ ಕಾಳಿದಾಸ ಒಂದು ದಿನ ತನ್ನ ಕಣ್ಣನ್ನು ತೆಗೆದು ಹರಿವಾಣದಲ್ಲಿಟ್ಟು ಶಿವನಿಗೆ ಆರತಿಯ ಬೆಳಗಿದನು. ಶಿವ ಮೆಚ್ಚಿ ಮರಳಿ ಅವನಿಗೆ ಕಣ್ಣು ಕೊಟ್ಟನು. ಮತ್ತು

ಕೇಳಿ ಕೇಳಿದವರಿಗೆ ಕಣ್ಣನ್ನು ಕೊಡುವ ಅನುಗ್ರಹವನ್ನು ಅವನಿಗೆ ಕೊಟ್ಟನು."

ಬಸವಣ್ಣನವರು– 'ಕಾಳಿದಾಸಂಗೆ ಕಣ್ಣನಿತ್ತೆ' ಎಂದು ಹೇಳಿದ ವಚನ ಈ ಕಥೆಗೆ ಸಂಬಂಧ ಪಟ್ಟದ್ದಿರಬಹುದು. ಮಹಾಕವಿ ಕಾಳಿದಾಸನಿಗೂ ಈ ಕಥೆಯಲ್ಲಿ ಅಭಿವರ್ಣಿತನಾದ ಕಾಳಿದಾಸನಿಗೂ ಸಂಬಂಧವಿಲ್ಲವೆಂದು ತೋರುತ್ತದೆ. ಪ್ರೌಢರಾಯನ ಕಾವ್ಯದಲ್ಲಿ (ಸಂಧಿ ೨) ಈ ಕುರುಬ ಕಾಳಿದಾಸನ ಕಥೆ ಅಭಿವರ್ಣಿತ ವಾಗಿದೆ. ಕಾಳಿಯಿಂದ ವರವನ್ನು ಪಡೆದು ಕೊಂಡದು, ಶಿವನಿಗೆ, ಕಣ್ಣನ್ನು ಕಿತ್ತು ಹರಿವಾಣದಲ್ಲಿಟ್ಟು ಬೆಳಗಿದುದು ಇವುಗಳೇ ಆ ಭಕ್ತ ಕಾಳಿದಾನ ಹಿರಿಮೆ ಎಂದು ಕಾಣುತ್ತದೆ. ಈ ಕಥೆ ನಿಜವಿರಲಿ ಸುಳ್ಳಿರಲಿ ಆ ಕಥೆಗೆ ಮೂಲನಾದ ಶಿವಭಕ್ತ ಕಾಳಿದಾಸ ನ್ಬೊಬ್ಬನಿರಬಹುದೇ ಎಂಬ ಸಂದೇಹ ಉಂಟಾಗುವುದು ಸಹಜವಾಗಿದೆ. ಆ ಶಿವನಿಂದ ಕಣ್ಣನ್ನು ಪಡೆದ ಕಾಳಿದಾಸನು ಪವಾಡಪುರುಷನೆನಿಸಿದ್ದಾನೆ ವೀರಶೈವ ಪುರಾಣಗಳಲ್ಲಿ.

ಶಿವಶರಣನಾದ ಮಡಿವಳ ಮಾಚಯ್ಯನ ಜನ್ಮಸ್ಥಳವಾದ 'ಹಿಪ್ಪರಗಿ' ಎಂಬ ಊರಿನಲ್ಲಿ 'ಕಾಳಿದಾಸನ ಗವಿ'ಎಂಬ ಒಂದು ಸ್ಥಳವಿದೆ. ಅಲ್ಲಿ ಒಬ್ಬ ಶಿವಶರಣ ಕಾಳಿದಾಸ ಇದ್ದನೆಂದು ಜನರು ಹೇಳುತ್ತಾರೆ. ಸುಪ್ರಸಿದ್ಧನಾದ ಮಹಾಕವಿ ಕಾಳಿದಾಸನ ಹೆಸರನ್ನು ಉಳ್ಳ, ಶಿವಶರಣ ಕಾಳಿದಾಸನು ಈ ಪ್ರದೇಶದಲ್ಲಿ ಆಗಿ ಹೋಗಿರ ಬಹುದೇ ಎಂದು ಊಹಿಸಲು ಈ ಗವಿಯು ಕಾರಣವಾಗಿದೆ. ಕವಿಗುರು ಕಾಳಿದಾಸನು ಶಿವಭಕ್ತನಾದುದರಿಂದ ಅವನನ್ನೂ ಈ ಶರಣಕಾಳಿದಾಸನನ್ನೂ ನಾಮಸಾದೃಶ್ಯದಿಂದ ಕೆಲವು ಲಿಂಗವಂತ ಕವಿಗಳು ಈ ಶರಣ ಕಾಳಿದಾಸನೇ ಆ ಮಹಾಕವಿ ಕಾಳಿದಾಸನೆಂದು ನಂಬಿರ ಬಹುದೇ ಎಂದು ತರ್ಕಿಸಲು ಅವಕಾಶವಿದೆ. ಬಸವಣ್ಣನವರು ಬಾಣ, ಮಯೂರರ ಹೆಸರಿನ ಸಂಗಡ 'ಕಾಳಿದಾಸನವ ನಾನು' ಎಂದು ಹೇಳಿದುದು ಈ ಶರಣ ಕವಿಕಾಳಿದಾಸನನ್ನು ಕುರಿತುದಾಗಿರಬೇಕು.

ರಘುವಂಶಕಾವ್ಯದಲ್ಲಿ ಲಂಕೆಯಿಂದ ಅಯೋಧ್ಯೆಗೆ ವಿಮಾನದಲ್ಲಿ ಹಿಂತಿರುಗಿದ ಶ್ರೀರಾಮಚಂದ್ರನು, ರಾಮಸೇತುವಿನಿಂದ ಪಂಚವಟಿ ವರೆಗಿನ

ತನ್ನ ಚರಿತ್ರೆಗೆ ಸಂಬಂಧಪಟ್ಟ ಸ್ಥಳಗಳನ್ನು ವಿಮಾನಸ್ಥಳಾದ ಸೀತಾದೇವಿಗೆ ತೋರಿಸುತ್ತಾ ಬರುತ್ತಾನೆ. ಪಂಪಾಸರೋವರ, ಗೋದಾವರೀ ಮೊದಲಾದುವುಗಳನ್ನು ಕುರಿತು ರಾಮಚಂದ್ರನು ಸೀತಾದೇವಿಗೆ ವಿವರಿಸಿದನೆಂದು ಕಾಳಿದಾಸನು ಹೇಳುತ್ತಾನೆ. ರಾಮಾಯಣವನ್ನು ರಘುವಂಶದ ಹೆಸರಿನಲ್ಲಿ ಬರೆದ ಆ ಮಹಾಕವಿಯು ಮಹರ್ಷಿ ವಾಲ್ಮೀಕಿಯಿಂದ ಹೆಚ್ಚು ವಿಷಯಗಳನ್ನು ಸಂಗ್ರಹಿಸಿದನೆಂದು ಭಾವಿಸಿದರೂ, ರಾಮಚರಿತೆಗೆ ನಿಕಟ ಸಂಬಂಧವುಳ್ಳ ಪಂಪಾಕ್ಷೇತ್ರವನ್ನು ಕಾಳಿದಾಸನು ಒಮ್ಮೆಯಾದರೂ ಕಣ್ಣಾರ ಕಂಡಿರಬೇಕೆಂದು ನಾವು ಉಹಿಸಬಹುದಾಗಿದೆ. ಕಾಳಿದಾಸನ ಗ್ರಂಥಗಳಲ್ಲಿ ಅವನ ದೇಶಾಟನದ ಅನುಭವವು ಅಪಾರವಾದುದೆಂಬದನ್ನು ನಾವು ಸುಲಭವಾಗಿ ಊಹಿಸಬಹುದಾಗಿದೆ. ಆದುದರಿಂದ ರಘುವಂಶವನ್ನು ಬರೆದ ಕವಿಯು ಕರ್ಣಾಟಕದ ಗೋದಾವರಿಯಲ್ಲಿಯೂ ಪಂಪಾಸರೋವರದಲ್ಲಿಯೂ ಸ್ನಾನ ಮಾಡಿ ಪುನೀತನಾಗಿ, ಪಂಪಾಕ್ಷೇತ್ರ, ಕಿಷ್ಕಿಂಧ ಮೊದಲಾದವುಗಳನ್ನು ಕಣ್ಣಾರಕಂಡು ತನ್ನ ಕಾವ್ಯನಿರ್ಮಾಣಕ್ಕೆ ಸ್ಫೂರ್ತಿಯನ್ನು ಪಡೆದಿರಬೇಕು. ಆದುದರಿಂದ ಕಾಳಿದಾಸನು ಬಹು ಮಟ್ಟಿಗೂ ಕರ್ಣಾಟಕದ ಪರಿಚಯವುಳ್ಳವನಾಗಿರಬೇಕು ಎಂದು ನಾವು ತರ್ಕಿಸುವೆವು.

ಬಿಜಾಪುರ ಜಿಲ್ಲಾ ಐಹೊಳೆಯಲ್ಲಿ ಏಳನೇ ಶತಕದ ರವಿಕೀರ್ತಿಯ ಶಾಸನದಲ್ಲಿ ಕಾಳಿದಾಸನ ಹೆಸರು ಬಂದಿದೆ. ಇತಿಹಾಸ ಸಂಶೋಧಕರಿಗೆ ಇದು ಬಹು ಮುಖ್ಯವೆನಿಸಿದೆ.

ಇನ್ನು ಮುಂದೆ ಕಾಳಿದಾಸನ ಕಾವ್ಯಗಳು ಕನ್ನಡ ಕವಿಗಳಮೇಲೆ ಎಂತಹ ಪರಿಣಾಮವನ್ನುಂಟುಮಾಡಿವೆ.? ಆ ಮಹಾಕವಿಯನ್ನು ಕನ್ನಡ ಕಬ್ಬಿಗರು ಹೇಗೆ ಬಣ್ಣಿಸಿದ್ದಾರೆ? ಆ ಕವಿ ಗುರುವಿಗೆ ಎಂತಹ ಕಾಣಿಕೆಯನ್ನು ಕನ್ನಡಿಗರು ಒಪ್ಪಿಸಿದ್ದಾರೆ ಎಂಬುದನ್ನು ತಿಳಿದು ಕೊಳ್ಳೋಣ.

ಕನ್ನಡಜಾಣ ಹಂಪೆಯ ಹರೀಶ್ವರನು ಬರೆದ ಗಿರಿಜಕಲ್ಯಾಣ ಮಹಾಕಾವ್ಯದಲ್ಲಿ ಕಾಳಿದಾಸನ ಕುಮಾರಸಂಭವದಪರಿಣಾಮವನ್ನು ನಾವು ಅಷ್ಟಿಷ್ಟು ಕಾಣಬಹುದು. ಅದು ಕಾರಣವೇ ಹರಿಹರನು "ಕಾಳಿದಾಸನ ರಸವೃತ್ತಿ" ತನ್ನ ಕಾವ್ಯದಲ್ಲಿ ಇರಲಿ ಎಂದು ಗಿರಿಜಾ ಕಲ್ಯಾಣದಲ್ಲಿ ಹೇಳಿಕೊಂಡಿದ್ದಾನೆ.

ಅಲ್ಲದೆ 'ಕಾಳಿದಾಸ ರಗಳೆ' ಬರೆದಿದ್ದಾನೆ ಹರಿಹರ. ಕವಿ ರಾಘವಾಂಕನು "ಕಾಳಿದಾಸನ..............ಪದವ ನೆನೆದು ಹರಿಶ್ಚಂದ್ರ ಕಾವ್ಯವನ್ನು ಬರೆದಿದ್ದಾನೆ. ಬೊಮ್ಮರಸನು "ಕವಿತಾಕಲಾನಿವಾಸನ ಕಾಳಿದಾಸನ" (ರೇವಣ ಸಿದ್ಧಾ ಪುರಾಣ) ಎಂದೂ, ಕವಿಚಕ್ರವರ್ತಿ ಸುರಂಗನು "ವಾಗ್ವಲ್ಲಭ ಕಾಳಿದಾಸನ ರಸಂ ನೆಲಸಿರ್ಕೆ ಮದೀಯಕಾವ್ಯದೊಳ್" (ತ್ರಿಷಷ್ಟಿ ಪುರಾತನ ವಿಲಾಸಂ) ಎಂದೂ, ಶಿವಾತ್ಮಗಣೇಶ ಪುರಾಣ ಕರ್ತೃವು "ಕವಿಶ್ರೇಣಿಮಣಿ ಕಾಳಿದಾಸಂ" ಎಂದೂ ಸ್ತೋತ್ರ ಮಾಡಿದ್ದಾರೆ. ಚತುರ್ಮುಖ ಬೊಮ್ಮರಸನು "ಕಾಳಿದಾಸಾದಿ ಕವಿಗಳ ಮಹಾನುತಿಗೊಲಿದ ಶಿವಂ" (ಸೌಂದರ ಪುರಾಣಂ) ಎಂಬುದಾಗಿಯೂ, ಗುಬ್ಬಿ ಮಲ್ಲಣಾರ್ಯನು 'ಪರಮ ಸುಖ ವಾಸನಂ ವರ ಕಾಳಿದಾಸನಂ' (ಭಾವ ಚಿಂತಾರತ್ನ) ಎಂಬುದಾಗಿಯೂ, ಮರಿತೋಂಟದಾರ್ಯನು "ನವರಸಾವೇಶನಂ ಕವಿಕಾಳಿದಾಸನಂ" (ಸಿದ್ಧೇಶ್ವರ ಪುರಾಣಂ) ಎಂಬುದಾಗಿಯೂ, ವಿರೂಪಾಕ್ಷ ಪಂಡಿತನು 'ಸದ್ವರ ಕಾಳಿದಾಸ' (ಚೆನ್ನಬಸವ ಪುರಾಣ) ಎಂಬುದಾಗಿಯೂ ಮಹಾಕವಿ ಷಡಕ್ಷರ ದೇವನು "ಕಾಳಿದಾಸ ಮುಖ್ಯ ಸತ್ಕವೀಂದ್ರರ ಜಸಂ" (ರಾಜಶೇಖರ ವಿಳಾಸ) ಎಂಬುದಾಗಿಯೂ, ಮಹಾಕವಿ ರುದ್ರಭಟ್ಟನು "ಕಾಳಿದಾಸಂಗೆ ದಾಸರೆನಿಪರ್ ಕವಿಗಳ್" ಎಂದೂ, (ಜಗನ್ನಾಥ ವಿಜಯ) ದುರ್ಗಸಿಂಹನು 'ಉನ್ನತಿಯನೇಂಪೊಗಳ್ವೆಂ ಕವಿಕಾಳಿದಾಸನಾ' (ಪಂಚತಂತ್ರ) ಎಂದೂ ಈ ಕವಿಶ್ರೇಷ್ಠನನ್ನು ಶ್ಲಾಘಿಸಿದ್ದಾರೆ. ಕವಿಚಕ್ರವರ್ತಿ ರನ್ನನು ತನ್ನ ಗದಾಯುದ್ಧದಲ್ಲಿ "ಪದ್ಯರಚನೆಯೊಳ್ ಕಾಳಿದಾಸನುಂ" ಎಂದು ಸ್ಮರಿಸಿ ಈ ಕವಿಯು ತನಗೆ ಅಭಿವಂದ್ಯನೆಂದು ಒಪ್ಪಿಕೊಂಡಿದ್ದಾನೆ. ಆಧುನಿಕ ಕವಿಗಳಾದ ಮಹಾವಿದ್ವಾನ್ ವೇ|| ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳು "ಕಾಳಿದಾಸನ ನುಡಿಯು ಕೋಲುಜೇನಿನ ಗುಡಿಯು (ಕನ್ನಡ ಮೇಘದೂತ) ಎಂದು ಹೇಳಿರುತ್ತಾರೆ. ಈ ಮೇಲೆ ಕಂಡ ಸುಪ್ರಸಿದ್ಧ ಕನ್ನಡ ಕವಿಗಳೆಲ್ಲರೂ ಕಾಳಿದಾಸನ ಪ್ರತಿಭೆಗೆ ತಲೆಬಾಗಿರುವರೆಂಬುದಕ್ಕೆ ಇದುವರೆಗೆ ನಾವು ಉದಹರಿಸಿದ ಒಕ್ಕಣೆಗಳು ನಿದರ್ಶನವಾಗಿವೆ.

ಸುಪ್ರಸಿದ್ಧರಾದ ಕೆಲವು ಜೈನಕವಿಗಳು ಕಾಳಿದಾಸನನ್ನು ಸ್ಪರ್ಧಿಸಿರುವರೆಂಬುದು ಕೂಡ ಇಲ್ಲಿ ಗಮನಾರ್ಹವಾಗಿದೆ. 'ತನಗಿನ್ನಾರ್ ಸರಿ

ನಾಗವರ್ಮ ಕೃತಿಗಂ ಕಾಳಿದಾಸಂಬರಂ 'ಕಾಳಿದಾಸನುಮನೇಳಿಸಿತೀ ಕವಿ ರಾಜಹಂಸನಾ' (ಛಂದೋಂಬುಧಿ) ಎಂಬ ನಾಗವರ್ಮ ಕವಿಯ ಗರ್ಜನೆಯು ಕನ್ನಡಿಗರನ್ನು ಎಚ್ಚರಿಸುವಂತಿದೆ. ಕವಿಚಕ್ರವರ್ತಿ ಪೊನ್ನನು ತನ್ನ ಶಾಂತಿ ಪುರಾಣದ ಪೀಠಿಕೆಯಲ್ಲಿ "ಸಕ್ಕದದೊಳ್ ಮುನ್ನುಳ್ಳ ಕಾಳಿದಾಸಂಗಂ ನಾಲ್ವಡಿ" ಎಂದು ತನ್ನ ಕವಿತ್ವದ ಹಿರಿಮೆಯನ್ನು ಹೇಳಿಕೊಂಡಿದ್ದಾನೆ. ನಾಗವರ್ಮ ಮತ್ತು ಕವಿಪೊನ್ನರು ಕನ್ನಡ ಕವಿಗಳಿಗೆ ಸಹಜವಾದ ಆತ್ಮ ವಿಶ್ವಾಸದ ಕಿಚ್ಚಿನಿಂದ ಹೀಗೆ ಕಾಳಿದಾಸನ ಹೆಸರನ್ನು ಕುರಿತು ಕೆಣಕಿದ್ದಾರೆಂದು ನಾವು ತಿಳಿಯಬಹುದು. ಮುಖ್ಯವಾಗಿ ವಚನಕಾರರಿಂದ ಹಿಡಿದು ಮಹಾಕವಿಗಳ ವರೆಗಿನ ಎಲ್ಲ ಸಾಹಿತಿಗಳ ಮೇಲೂ ಕಾಳಿದಾಸನ ಪ್ರಭಾವ ಮುದ್ರೆಯು ಚೆನ್ನಾಗಿ ಬಿದ್ದಿದೆಯೆಂದು ತೋರುತ್ತದೆ. ಜೈನ ಬ್ರಾಹ್ಮಣ ಕವಿಗಳಿಗಿಂತ ವೀರಶೈವ ಕವಿಗಳು ತಮ್ಮ ಕಾವ್ಯದಲ್ಲಿ ಹೆಚ್ಚಾಗಿ ಇವನನ್ನು ಸ್ಮರಿಸಿರುವುದು ಅವನು ಮಹಾಕವಿಯೇ ಅಲ್ಲದೆ ಶಿವಭಕ್ತನೆಂಬ ಕಾರಣ ದಿಂದಲೂ ಆಗಿರಬಹುದು.

ಕಾಳಿದಾಸನ ಮಹಾಕಾವ್ಯಗಳಾದ ಕುಮಾರ ಸಂಭವ, ರಘುವಂಶ, ಮೇಘದೂತ, ಅಭಿಜ್ಞಾನ ಶಾಕುಂತಲ, ಮಾಲವಿಕಾಗ್ನಿಮಿತ್ರ, ವಿಕ್ರ ಮೋರ್ವಶೀಯ ಮತ್ತು ಋತುಸಂಹಾರ ಎಂಬ ಏಳು ಗ್ರಂಥಗಳು ಕನ್ನಡಕ್ಕೆ ಯಾರುಯಾರಿಂದ ಭಾಷಾಂತರವಾಗಿರುವುವೆಂಬುದೂ, ಸಂಸ್ಕೃತವನ್ನು ಅರಿಯದ ಕನ್ನಡಿಗರಿಗೆ ಅವು ಎಷ್ಟು ಮಟ್ಟಿಗೆ ಬಳಕೆಗೆ ಬಂದಿವೆಯೆಂಬುದೂ ಬಹು ಮುಖ್ಯವಾದ ಸಂಗತಿಯಾಗಿದೆ.

೧೯ನೇ ಶತಮಾನದ ಮಹಾಕವಿಯಾದ ೧. ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳು (ಸುಮಾರು ೬೨ ವರ್ಷಗಳ ಹಿಂದೆ) ಅಭಿಜ್ಞಾನ ಶಾಕುಂತಲ, ವಿಕ್ರಮೋರ್ವಶೀಯ ಎಂಬ ಎರಡು ಕಾಳಿದಾಸನ ನಾಟಕ ಗಳನ್ನು ಕನ್ನಡಕ್ಕೆ ಭಾಷಾಂತರಮಾಡಿ ಉಪಕಾರಮಾಡಿದ್ದಾರೆ. ಅವರ ಕರ್ಣಾಟಕ ಶಾಕುಂತಲವು ಸರ್ವವಿಷಯದಲ್ಲಿಯೂ ಅತ್ಯುತ್ಕೃಷ್ಟ ಭಾಷಾಂ ತರವೆಂದು ವಿದ್ವಾಂಸರಿಂದ ಭಾವಿಸಲ್ಪಟ್ಟಿದೆ. ಈ ಶಾಕುಂತಲ ನಾಟಕವು ಕನ್ನಡಿಗರೆಲ್ಲರಿಗೆ ಪರಿಚಿತವಾಗಿದೆ. ಅವರ ಪುತ್ರರಾದ ಕೈ॥ ಮಹಾದೇವ

ಶಾಸ್ತ್ರಿಗಳು 'ಕರ್ಣಾಟಕ ರಘುವಂಶ ಕಾವ್ಯ' ಎಂಬ ಹೆಸರಿನಿಂದ ಚಂಪೂ ರೂಪದಲ್ಲಿ ರಘುವಂಶದ ಪ್ರಥಮ ಸರ್ಗವನ್ನು ಮಾತ್ರ ಭಾಷಾಂತರ ಮಾಡಿದ್ದಾರೆ.

೨. ಬೆಳಗಾವಿ ಜಿಲ್ಲಾ ಅಥಣಿಯಲ್ಲಿದ್ದ ಕೈ॥ ಮಲ್ಲಿಕಾರ್ಜುನಪ್ಪ ಶಿವಲಿಂಗಪ್ಪ ರೈನಾಪೂರ್ ಬಿ.ಎ, ರವರು ಕನ್ನಡ ಮೇಘದೂತವನ್ನು ಕ್ರಿ. ಶ. ೧೯೧೦ರಲ್ಲಿಯೂ, ಅಭಿಜ್ಞಾನ ಶಾಕುಂತಲವನ್ನು ೧೯೩೩ ರಲ್ಲಿಯೂ ಕನ್ನಡದಲ್ಲಿ ಭಾಷಾಂತರಿಸಿ ಪ್ರಕಟಿಸಿರುತ್ತಾರೆ. ಮೇಘದೂತವು ವಾರ್ಧಕ ಷಟ್ಪದಿಯಲ್ಲಿದೆ. ಶಾಕುಂತಲದ ಶ್ಲೋಕಗಳು ಮೂಲ ಶ್ಲೋಕದ ಛಂದಸ್ಸಿನಲ್ಲಿಯೇ ಕನ್ನಡದಲ್ಲಿ ಭಾಷಾಂತರಿಸಲ್ಪಟ್ಟಿವೆ. ಇದೊಂದು ಇವರ ವೈಶಿಷ್ಟ್ಯ ವೆನ್ನಬಹುದು.

೩. ಕನ್ನಡ ಶಾಕುಂತಲ ನಾಟಕ ಎಂಬ ಹೆಸರಿನಿಂದ ಸ್ವರ್ಗವಾಸಿ ಚುರಮುರಿ ಶೇಷಗಿರಿರಾಯರು ಶಾಕುಂತಲವನ್ನು ಕನ್ನಡಕ್ಕೆ ಭಾಷಾಂತರ ಮಾಡಿರುತ್ತಾರೆ. ಅವರು ಕ್ರಿ. ಶ. ೧೮೭೦ರಲ್ಲಿ ಈ ಭಾಷಾಂತರವನ್ನು ಮುಗಿಸಿದರೆಂದು ತಿಳಿದುಬಂದಿದೆ. ಈ ಗ್ರಂಥವು ಉತ್ತರ ಕರ್ಣಾಟಕದಲ್ಲಿ ಹೆಚ್ಚು ಜನಪ್ರಿಯವಾಯಿತೆಂದು ಹೇಳುತ್ತಾರೆ.

೪. ಬಳ್ಳಾರಿಯ ನಿವಾಸಿಗಳಾದ ಆಸ್ಥಾನ ವಿದ್ವಾನ್ ವೈ. ನಾಗೇಶ ಶಾಸ್ತ್ರಿಗಳು ರಘುವಂಶಮಹಾಕಾವ್ಯವನ್ನು ವಾರ್ಧಕಷಟ್ಪದಿ ರೂಪದಲ್ಲಿಯೂ ಕುಮಾರ ಸಂಭವದ ೮ ಸರ್ಗಗಳನ್ನು ಚಂಪೂರೂಪದಲ್ಲಿಯೂ ಕನ್ನಡಕ್ಕೆ ಭಾಷಾಂತರಿಸಿದ್ದಾರೆ.

೫. ಮೈಸೂರಿನ ಪ್ರಭುವರ್ಯರಾಗಿದ್ದ ಕರ್ಣಾಟಕ ಭೋಜರಾಜ ಮುಮ್ಮಡಿ ಕೃಷ್ಣರಾಜ ಒಡೆಯರು 'ಶಾಕುಂತಲ ನಾಟಕ ನವೀನ ಟೀಕೆ' ಎಂಬ ಹೆಸರಿನಿಂದ ಅಭಿಜ್ಞಾನ ಶಾಕುಂತಲವನ್ನು ಕನ್ನಡದಲ್ಲಿ ಗದ್ಯರೂಪ ದಲ್ಲಿ ಬರೆದಿದ್ದಾರೆ. ಇದು ಕನ್ನಡವನ್ನು ಬಲ್ಲ ಸಾಮಾನ್ಯವಾಚಕರೂ ಶಾಕುಂತಲದ ರಸಾಸ್ವಾದನವನ್ನು ಮಾಡಲು ತುಂಬಾ ಉಪಯುಕ್ತ ವಾಗಿದೆ. ಇದು ಮೈಸೂರು ಕಾವ್ಯಕಲಾಧಿಯಲ್ಲಿ ಬಹಳ ಹಿಂದೆ ಪ್ರಕಟ ವಾಗಿದೆ.

೬. ಮೈಸೂರು ಆಸ್ಥಾನದ ವಿದ್ವಾಂಸರಾಗಿದ್ದ ಕೈ॥ ಕವಿತಿಲಕ ಅಯ್ಯಾಶಾಸ್ತ್ರಿಗಳು, ವಿಕ್ರಮೋರ್ವಶೀಯ ನಾಟಕವನ್ನು ಉತ್ತಮ ರೀತಿಯಿಂದ ಕನ್ನಡಕ್ಕೆ ಭಾಷಾಂತರ ಮಾಡಿ ಉಪಕಾರ ಮಾಡಿದ್ದಾರೆ. ೧೯೧೧ ರಲ್ಲಿ ಇದು ಮೈಸೂರಿನಲ್ಲಿ ಪ್ರಕಟವಾಗಿದೆ.

೭. ಬಿಜಾಪುರ ಸಿದ್ಧೇಶ್ವರ ಹೈಸ್ಕೂಲಿನ ಕನ್ನಡ ಪಂಡಿತರಾದ ಕೈ॥ ಬಸವರಾಜ ಶಾಸ್ತ್ರಿಗಳು 'ಕನ್ನಡ ರಘುವಂಶ ರಹಸ್ಯ' 'ಕನ್ನಡ ಕುಮಾರ ಸಂಭವ ಸಾರ' ಎಂಬರಡು ಗ್ರಂಥಗಳನ್ನು ಬರೆದಿದ್ದಾರೆ. ಇವನ್ನು ಕನ್ನಡವನ್ನು ಬಲ್ಲ ಹೆಣ್ಣುಮಕ್ಕಳೂ, ಸಣ್ಣಮಕ್ಕಳೂ ಸುಲಭವಾಗಿ ಓದಿ ರಘುವಂಶ ಮತ್ತು ಕುಮಾರ ಸಂಭವಗಳ ಸ್ವಾರಸ್ಯವನ್ನು ಅರಿಯ ಬಹುದಾಗಿದೆ.

೮. ಕೈ॥ ದೊಡ್ಡಬೆಲೆ ನಾರಾಯಣ ಶಾಸ್ತ್ರಿಗಳು ರಘುವಂಶವನ್ನು 'ರಘು ಕುಲಚರಿತಂ' ಎಂಬ ಹೆಸರಿನಲ್ಲಿ ಕನ್ನಡಕ್ಕೆ ಸಂಪೂರ್ಣವಾಗಿ ಭಾಷಾಂ ತರಿಸಿದ್ದಾರೆ. ಪಂಡಿತ ಶ್ರೀ ಕೆ. ಆರ್. ನರಸಿಂಹಯ್ಯನವರು 'ಕುಮಾರೋ ದಯಂ' ಎಂಬ ಹೆಸರಿದಿಂದ ಕನ್ನಡಕ್ಕೆ ಕುಮಾರ ಸಂಭವವನ್ನು ಭಾಷಾಂರ ಮಾಡಿದ್ದಾರೆ.

೯. ಮೈಸೂರಿನ ಕೈ॥ ಬಿ. ಕೃಷ್ಣಪ್ಪ ಎಂ. ಎ., ರವರು 'ಅಭಿಜ್ಞಾನ ಶಾಕುಂತಲ ನಾಟಕ' ಎಂಬ ಕನ್ನಡದ ಅನುವಾದವನ್ನೂ, ಶ್ರೀ ಬೆಳ್ಳಾವೆ ನರಹರಿ ಶಾಸ್ತ್ರಿಗಳು 'ಕರ್ಣಾಟಕ ಶಾಕುಂತಲ ನಾಟಕಂ' ಎಂಬುದನ್ನೂ ಶ್ರೀ ನಾರಾಯಣ ಗುರುನಾಥ ಕರಗುದರಿ ಧಾರವಾಡ ಇವರು ಮಾಳವಿಕಾಗ್ನಿ ಮಿತ್ರ ನಾಟಕವನ್ನೂ' ಶ್ರೀ ಥೊಂಡೋ ನರಸಿಂಹ ಮುಳಬಾಗಿಲ್ ಧಾರವಾಡ ಮತ್ತು ಶ್ರೀ ಸಾಗ್ಗೆರೆ ಶ್ರೀ ಕಂಠಶಾಸ್ತ್ರಿಗಳು, ಕೆ. ಎಂ ಎಸ್. ಸುಬ್ರಮಣ್ಯ ಶಾಸ್ತ್ರಿಗಳು ಮೈಸೂರು, ಅದೇ ಮಾಳವಿಕಾಗ್ನಿ ಮಿತ್ರವನ್ನೂ ಕನ್ನಡಕ್ಕೆ ನಾಟಕರೂಪವಾಗಿ ಭಾಷಾಂತರಿಸಿದ್ದಾರೆ.

೧೦. ಶ್ರೀ ಕುಕ್ಕೆ ಸುಬ್ರಮಣ್ಯ ಶಾಸ್ತ್ರಿಗಳು ಕನ್ನಡ ಮೇಘಸಂದೇಶ ವನ್ನೂ, ಶ್ರೀ ಎಸ್. ರಾಮಚಂದ್ರರಾವ್ ಎಂ. ಎ., ರವರು 'ಕಾಳಿದಾಸನ ಕಾವ್ಯಗಳು' ಎಂಬ ಗ್ರಂಥವನ್ನೂ ಶ್ರೀ ಪ್ರೊ॥ ಸಿ. ಕೆ. ವೆಂಕಟರಾಮಯ್ಯ

ಎಂ. ಎ., ಎಲ್. ಎಲ್. ಬಿ. ರವರು 'ಕಾಳಿದಾಸನು ಶೃಂಗಾರರಸವನ್ನು ಚಿತ್ರಿಸುವ ಬಗೆ'ಎಂಬ ಗ್ರಂಥವನ್ನೂ ಕನ್ನಡದಲ್ಲಿ ಬರೆದು ಪ್ರಕಟಿಸಿರುತ್ತಾರೆ. ಬೆಂಗಳೂರಿನ ಶ್ರೀ ಕೆ. ಶ್ರೀನಿವಾಸ ಶರ್ಮರು ಉಪಯೋಗವಾಗುವಂತೆ ಮೇಘದೂತ ಕಾವ್ಯದ ಪ್ರತಿಪದಾರ್ಥಗಳನ್ನು ಬರೆದು ವಿದ್ಯಾರ್ಥಿಗಳಿಗೆ ನೆರವಾಗಿದ್ದಾರೆ.

ಇತ್ತೀಚಿಗೆ ಕವಿ ಬೇಂದ್ರೆ, ಶ್ರೀ ಎಸ್. ವಿ. ಪರಮೇಶ್ವರ ಭಟ್ಟರು ಕಾಳಿದಾಸನ ಕೃತಿಗಳನ್ನು ಅನುವಾದಿಸಿದ್ದಾರೆ. ಪ್ರೊ|| ಎಸ್. ವಿ. ರಂಗಣ್ಣನವರು 'ಶಾಕುಂತಲ ನಾಟಕ ವಿಮರ್ಶೆ' ಬರೆದಿದ್ದಾರೆ.

೧೧. ರವೀಂದ್ರನಾಥ ಠಾಕೂರ್ ಮಹಾಕವಿಯು ಕುಮಾರಸಂಭವ ಮತ್ತು ಶಾಕುಂತಲದ ಮೇಲೆ ಬರೆದ ವಿಮರ್ಶೆಯನ್ನು ಕೈ|| ಟಿ. ಎಸ್. ವೆಂಕಣ್ಣಯ್ಯನವರು ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟಿಸಿರುತ್ತಾರೆ. ರಘುವಂಶ ಕಾವ್ಯದ ಕನ್ನಡಗದ್ಯಾನುವಾದವು (ಶಂಕರಕವಿಯಿಂದ)ಶರಣಸಾಹಿತ್ಯ ಮಾಸಪತ್ರಿಕೆಯಲ್ಲಿ ಈ ಗಾಗಲೇ ಪ್ರಕಟವಾಗಿದೆ. ಹಲವು ಮಂದಿ ಆಧುನಿಕ ಕನ್ನಡ ಸಾಹಿತಿಗಳು ಕಾಳಿದಾಸನ ಗ್ರಂಥಗಳ ಭಾಷಾಂತರವನ್ನೂ, ಆ ಕಾವ್ಯಗಳನ್ನು ಕುರಿತಾದ ಲೇಖನಗಳನ್ನೂ ಬರೆಯುತ್ತಿದ್ದಾರೆ. ಸ್ವರ್ಗವಾಸಿ ಎಸ್. ಜಿ. ನರಸಿಂಹಾಚಾರ್ಯರು ರಘುವಂಶದ ಕೆಲಕೆಲವು ಭಾಗಗಳನ್ನು 'ಅಜನೃಪ ಚರಿತೆ,' ಮತ್ತು 'ದಿಲೀಪ ಚರಿತೆ' ಎಂಬ ಹೆಸಸಿನಿಂದ ಭಾಷಾಂತರಿಸಿದ್ದಾರೆ. ಕನ್ನಡಿಗರಿಗೆ ಇಷ್ಟೆಲ್ಲಾ ವಿಧಾನಗಳಿಂದ ಕಾಳಿದಾಸನ ಕಾವ್ಯಗಳ ಪರಿಚಯವಾಗಿದೆ.

ಸುಮಾರು ೨೦೦೦ ವರ್ಷಗಳಷ್ಟು ಪ್ರಾಚೀನನಾದ, ಅಖಿಲ ಭಾರತ ಹಾಗೂ ವಿಶ್ವದ ಕೀರ್ತಿಯನ್ನು ಗಳಿಸಿದ ಕಾಳಿದಾಸನ ಗ್ರಂಥಗಳು, ೧೯ ನೆಯ ಶತಮಾನದ ಉತ್ತರಾರ್ಧದವರೆಗೆ ಕನ್ನಡದಲ್ಲಿ ಭಾಷಾಂತರವಾಗದಿರುವುದು ಆಶ್ಚರ್ಯದ ಸಂಗತಿಯಾಗಿದೆ. ನೆರೆನಾಡಾದ ತೆಲುಗು ದೇಶದಲ್ಲಿ ಕ್ರಿ. ಶ. ೧೨ನೇ ಶತಮಾನದಲ್ಲಿಯೇ 'ನನ್ನಚೋಳ'ಎಂಬ ಕವಿಯಿಂದ ಕುಮಾರಸಂಭವ ಮಹಾಕಾವ್ಯವು ತೆಲುಗಿಗೆ ಭಾಷಾಂತರವಾಗಿರುವುದು ನಾವು ನೆನಪಿಟ್ಟು ಕೊಳ್ಳುವ ಸಂಗತಿ. ಕನ್ನಡಿಗರು ಇಷ್ಟೊಂದು ತಡವಾಗಿ ಕಾಳಿದಾಸನ

ಕಾವ್ಯಗಳನ್ನು ಕನ್ನಡಕ್ಕೆ ಪರಿವರ್ತಿಸಲು ಆಲಸ್ಯಮಾಡಿದರೇಕೆ ಎಂಬುದು ಅಚ್ಚರಿಪಡತಕ್ಕ ಸಂಗತಿ. ಕನ್ನಡದಲ್ಲಿ ಕಾಳಿದಾಸನನ್ನು ಕುರಿತಾದ ಒಂದು 'ಪ್ರಶಸ್ತಿ ಗ್ರಂಥ' ಅತ್ಯವಶ್ಯ. ಕನ್ನಡಿಗರು ವರುಷಕ್ಕೊಮ್ಮೆ ಕಾಳಿದಾಸನ ಜಯಂತಿಯನ್ನು ಆಚರಿಸಿ ಆ ಮಹಾಕವಿಯ ಬಗೆಗೆ ತಮ್ಮ ಭಕ್ತಿಭಾವ ವನ್ನು ತೋರಿಸುವುದು ಅವಶ್ಯ. ಕಾಳಿದಾಸನ ಕಾವ್ಯಗಳನ್ನು ಓದಿ, ಕೇಳಿ ಕನ್ನಡ ಜನರ ಮನಸ್ಸು ರಸಸ್ಫೂರ್ತಿಯನ್ನು ಪಡೆಯುವುದು ಅವಶ್ಯ. ಕನ್ನಡ ಸಾಹಿತ್ಯ ಪರಿಷತ್ತಿನವರು ವರ್ಷಕ್ಕೊಮ್ಮೆ ಕಾಳಿದಾಸ ಜಯಂತಿ ಯನ್ನು ನಾಡಿನಲ್ಲೆಲ್ಲಾ ಆಚರಿಸುತ್ತಿರುವುದು ಶ್ಲಾಘ್ಯವಾಗಿದೆ.

ಕನ್ನಡಿಗರು ಕಾಳಿದಾಸನ ಕಾವ್ಯಗಳನ್ನು ಅಭ್ಯಾಸಮಾಡುವುದು, ಅವನ ಉನ್ನತಭಾವಗಳನ್ನು ಅಳವಡಿಸಿಕೊಳ್ಳುವುದು, ಅವನ ತತ್ವ ಜ್ಞಾನವನ್ನು ಅರ್ಥಮಾಡಿಕೊಳ್ಳುವುದು, ಅವನ ರಸಿಕತೆಯಿಂದ ತಮ್ಮ ಜೀವನವನ್ನು ಸುಧಾರಿಸಿಕೊಳ್ಳುವುದು ಅತ್ಯಂತ ಫಲಪ್ರದವಾದ ಕಾರ್ಯ ವಾಗಿದೆ.

# ಕವನ ಕಲೆ

ಕಲಾಭಿವೃದ್ಧಿಯು ಜನಜೀವನದ ಪ್ರಗತಿಯ ಕುರುಹು. ಆದುದರಿಂದಲೇ ನಾಗರಿಕತೆಯುಳ್ಳ ಪ್ರತಿಯೊಂದು ಜನಾಂಗವೂ ತನ್ನ ಕಲೆಯ ಉನ್ನತಿಗೆ ಸಾಹಸ ಪಡುತ್ತಿರುವುದು.

ಕವಿತ್ವಶಕ್ತಿಯು ಕಲೆಯೋ ಶಾಸ್ತ್ರವೋ ಎಂದು ಕೆಲವರು ಅನುಮಾನಿಸುವುದುಂಟು. ಹೃದಯಾಹ್ಲಾದಕತ್ವಕ್ಕಿಂತಲೂ ಬುದ್ಧಿಶಕ್ತಿಗೆ ಪ್ರಾಮುಖ್ಯತೆಯನ್ನೀಯುವುದು ಶಾಸ್ತ್ರವು, ಬೌದ್ಧಿಕಾಭಿವೃದ್ಧಿಗಿಂತಲೂ ಚಿತ್ತಾಹ್ಲಾದಕತ್ವಕ್ಕೆ ಪ್ರಾಮುಖ್ಯತೆಯನ್ನೀವುದು ಕಲೆಯು ಎಂಬದು ವಿಶ್ವಸನೀಯವಾದರೆ ಕವಿತೆಯು ಕಲೆಯವರ್ಗಕ್ಕೇ ಸೇರುವುದು.

ಪ್ರಾಚೀನ ಕವಿಗಳು ಕವಿತ್ವವನ್ನು ಕಲೆಯೆಂದೇ ಕರೆದಿರುವರು. ಬೊಮ್ಮರಸನು ತನ್ನ ರೇವಣಸಿದ್ಧಪುರಾಣದಲ್ಲಿ ಪೂರ್ವ ಕವಿಗಳನ್ನು ಸ್ಮರಿಸುವಾಗ "ಕವಿತಾಕಲಾ ನಿವಾಸನ ಕಾಲಿದಾಸನ" (೧ನೇ ಸಂಧಿ. ೨೦ನೇ ಪದ್ಯ) ಎಂದೂ, ಕಮಲಭವನು ತನ್ನ ಶಾಂತೀಶ್ವರ ಪುರಾಣದಲ್ಲಿ 'ಕಮಳಭವನ ಕವಿತಾರಸಂ' (ಅ. ೧ ಪ. ೫೯) ಎಂದೂ ಹೇಳಿರುವರು.

ರಸಾವಿರ್ಭಾವವು ಕಲೆಯಲ್ಲಿಯೇ ಹೊರತು ಶಾಸ್ತ್ರದಲ್ಲಿಲ್ಲ. ಆದುದರಿಂದಲೇ ಶಾಸ್ತ್ರವು ನೀರಸವೆಂದೂ, ಕಲೆಯು ರಸಮಯವೆಂದೂ ಹೇಳುವುದು. ಕವನದಂತೆಯೇ ಶಿಲ್ಪ, ಚಿತ್ರ, ಸಂಗೀತ, ನೃತ್ಯ ಎಂಬಿವುಗಳನ್ನೂ ಅಭಿಜ್ಞರು ಕಲಾವರ್ಗದಲ್ಲಿಯೇ ಗಣಿಸುವರು.

ಕಲೆಗಳಲ್ಲೆಲ್ಲಾ ಕವನ ಕಲೆಗೆ ಅಗ್ರಸ್ಥಾನವನ್ನು ಪೂರ್ವಕಾಲದಿಂದಲೂ ಕೊಟ್ಟುಕೊಂಡು ಬಂದಿರುವರು. ಕೆಲವು ಕವಿಗಳು ಇದನ್ನು ಬಾಯಿಬಿಟ್ಟು ಸ್ಪಷ್ಟವಾಗಿಯೂ ಹೇಳಿಬಿಟ್ಟಿರುವರು. ಸೋಮೇಶ್ವರ ಶತಕಕಾರನಾದ ಕವಿಸೋಮನು 'ಕವಿಯೇ ಸರ್ವರೊಳುತ್ತಮಂ,' ಕವಿಯಾಸ್ಥಾನಕೆ ಭೂಷಣಂ' 'ಕವಿಯೇ ರಾಜರ ಕಣ್ಣೆಲ್ಲೈ' ಎಂದು ಮೊದಲಾಗಿ ಕವಿಯ ಹೆಚ್ಚುಗಾರಿಕೆಯನ್ನು ಹೊಗಳಿರುವನು. ಷಡಕ್ಷರ ದೇವನು ಕವಿಯ

ಪ್ರಾಶಸ್ತ್ಯಕ್ಕೆ ಒಂದು ಉತ್ತಮವಾದ ದೃಷ್ಟಾಂತವನ್ನು ಕೊಟ್ಟಿರುವನು. ಅದೇನೆಂದರೆ—

ವೃ॥ ಭುವನದೆ ಭೋಜರಾಜನ ಮಹಾಸಭೆಯೊಳ್ ಬಹುಶಾಸ್ತ್ರಕೋವಿದರ್
ಸವಿಸಲೆ ಪೊಣ್ಮೆಪಾಡುವವರೇನಿರರೇ ತೆಗೆ ಕಾಲಿದಾಸ ॥

ವಿವಿಧ ಸತ್ಕವೀಂದ್ರರ ಜಸಂ ಬಿಡದಿನ್ನು ಮಿರುತ್ತೆ ತೋರ್ಪವೋಲ್।
ಅವರಜಸಂ ವಿರಾಜಿಪುದೆ ಸತ್ಕವಿಯೊಳ್ ಸರಿವರ್ಪನಾವನೋ ।

(ರಾಜಶೇಖರ ವಿಲಾಸ, ಅ. ೧ ಪ. ೨೮)

ಈ ಪದ್ಯದಲ್ಲಿ ಸತ್ಕವಿಯಲ್ಲಿ ಸರಿದೂಗುವವನಿಲ್ಲವಾದುದರಿಂದ ಕಲಾವಿದರಲ್ಲಿ ಕವಿಯೇ ಅಗ್ರಗಣ್ಯನೆಂಬುದು ಭಾಸವಾಗುವುದು. ಕವನವು ಕಲಾವರ್ಗಕ್ಕೆ ಸೇರಿದುದೆಂದೂ ಕಲೆಗಳಲ್ಲಿ ಅಗ್ರಗಣ್ಯವಾದುದೆಂದೂ ಹೃದಯಾಹ್ಲಾದಕತ್ವವೇ ಕಲೆಯ ಮುಖ್ಯೋದ್ದೇಶವೆಂದೂ ತಿಳಿದ ಮೇಲೆ ನಾವು ಕವನಕಲೆಯನ್ನು ಸಂಪಾದಿಸುವುದು ಹೇಗೆ? ಎಂಬ ಪ್ರಶ್ನೆಯನ್ನು ಹಾಕಿಕೊಳ್ಳಬೇಕಾಗುವುದು.

ಕವನ ಕಲೆಯು ಕಲಿತರೆ ಬರುವುದೆಂದು ಕೆಲವರೂ, ಕಲಿಸಿದರೂ ಬರಲಾರದೆಂದು ಕೆಲವರೂ, ಬಂದರೂ ಅಪರಿಪಕ್ವವಾಗುವುದೆಂದು ಕೆಲವರೂ ಅಭಿಪ್ರಾಯ ಪಡುವರು.

ಮಹಾಕವಿ ಕೇಶಿರಾಜನು ಶಬ್ದಮಣಿದರ್ಪಣದಲ್ಲಿ 'ದೇಶಾಟನಮುಂ ಪಂಡಿತ ಭಾಷಣಮುಂ, ಕಾವ್ಯಪರಿಚಯಮುಂ ಕವಿತೆ ಕಾರಣಂ' ಎಂದು ಹೇಳಿರುವನು. ಒಂದು ವೇಳೆ ಕೇಶಿರಾಜನ ಮಾತನ್ನು ನಿಜವೆಂದು ಒಪ್ಪಿಕೊಳ್ಳುವುದಾದರೆ ನಮ್ಮ ಲೋಕಾನುಭವವು ಇದಕ್ಕೆ ವಿರುದ್ಧವಾಗಿ ಸಾಕ್ಷಿ ಹೇಳುತ್ತಿರುವುದು.

ಎಷ್ಟೋ ಮಂದಿ ಘನಪಂಡಿತರು ದೇಶಾಟನವನ್ನೂ ಮಾಡಿ, ಪಂಡಿತ ಭಾಷಣವನ್ನೂ ಕೇಳಿ, ಬಹುಶ್ರುತರೂ ಆಗಿರುವರು. ಒಂದು ವೇಳೆ ಸರಸ್ವತಿಯೇ ಮುಂದೆ ಬಂದುನಿಂತರೂ ಧೈರ್ಯದಿಂದ ಅವರು ವಾದಿಸುವರು. ಸಾವಿರಾರು ಶ್ಲೋಕಗಳನ್ನು ಕಂಠಪಾಠ ಮಾಡಿಕೊಂಡು ನೀರು ಕುಡಿದ

ಹಾಗೆ ಶರಾಗವಾಗಿ ಹೇಳಿಬಿಡುವರು. ಇಷ್ಟಾದರೂ ಇವರು ಹಗಲೆಲ್ಲಾ 'ತಿಣಕಿ'ದರೂ ಸರಸ್ವತಿಯ 'ಗೋಣ್ಮುರಿದರೂ' ಒಂದೂ ಸುಂದರ ಪದ್ಯ ವನ್ನು ಬರೆಯಲಾರರು. ಇಂತಹ ಪಂಡಿತೋತ್ತಮರನ್ನು ನಾವು ಇಂದಿಗೂ ನೂರಾರು ಮಂದಿಯನ್ನು ನೋಡಬಹುದು. ನಾವು ನೋಡುವು ದೇನು? ಕವನ ಶಕ್ತಿಯಿಲ್ಲದ ಪಂಡಿತರನೇಕರು ಕವಿತ್ವಕ್ಕೂ ಪಾಂಡಿತ್ಯಕ್ಕೂ ಏನೂ ಸಂಬಂಧವಿಲ್ಲವೆಂದೂ ಕವಿತ್ವವು ಸಂಸ್ಕಾರಜನ್ಯ ವಾದುದೆಂದೂ ಬಾಯಿಬಿಟ್ಟು ಸ್ಪಷ್ಟವಾಗಿ ಹೇಳುತ್ತಿರುವರು.

ಹೀಗೆಂದ ಮೇಲೆ, ಕೇಶಿರಾಜನ ಮಾತಿಗೆ ಅರ್ಥವೇನು? ಮನುಷ್ಯನಿಗೆ ಅಸಾಧ್ಯವಾದ ವಿಷಯವುಂಟೆ? 'ಅಭ್ಯಾಸಾನುಸಾರಿಣೀವಿದ್ಯಾ' ಎಂದು ಗೀತೆಯು ಹೇಳುವುದಿಲ್ಲವೆ? ಎಂಬಿವೇ ಮೊದಲಾದ ಪೂರ್ವಪಕ್ಷಗಳು ನಮ್ಮ ಮುಂದೆ ಬಂದು ನಿಲ್ಲುವವು.

ಮೇಲೆ ಕಂಡ ಪ್ರಶ್ನೆಗಳಿಗೆ ನಮ್ಮ ಕವಿಗಳಲ್ಲಿ ಕೆಲವರು ಉತ್ತರವನ್ನು ಹೇಳಿರುವರು. ಕೇಶಿರಾಜನು ಹೇಳಿರುವುದು ಕವಿತೆಗೆ ಸಹಾಯ ಕಾರಣ ಗಳೇ ಹೊರತು ಮುಖ್ಯಕಾರಣವಲ್ಲ. ಕವಿತೆಯನ್ನು ಅಭ್ಯಾಸಮಾಡಲೂ ಬಹುದು. ಎಷ್ಟೋ ಜನರು ಮಾಡಿಯೂ ಇರುವರು. ಆದರೂ ಹೀಗೆ ಪ್ರಯತ್ನ ಪೂರ್ವಕವಾಗಿ ಕಲಿತ ಕವಿತೆಯು ಸ್ವಭಾವಜನ್ಯವಾದ ಕವಿತೆ ಯಷ್ಟು ಸುಂದರವಾಗಿರದೆ ಕರಟುಮೊರಟಾಗುವುದೆಂದೂ, ಇದನ್ನು 'ರಸವತ್ಕ ವಿತೆ' ಎಂದು ಹೇಳಲಿಕ್ಕಾಗುವುದಿಲ್ಲವೆಂದೂ ಕೆಲವರು ಅಭಿಪ್ರಾಯಪಡು ವರು. ಈ ಅರ್ಥದಲ್ಲಿ ಕರ್ಣಾಟಕ ಸಾಹಿತ್ಯದಲ್ಲಿ ವಿಖ್ಯಾತನಾದ ನಯ ಸೇನನು ತನ್ನ 'ಧರ್ಮಾಮೃತಂ'ಎಂಬ ಕಾವ್ಯದಲ್ಲಿ

ಕಂದ ॥ ಮಳೆಯಿಲ್ಲದೆ ಪೊಯ್ನೀರಿಂ।
ಬೆಳೆಗುಮೆ ಧರೆ ಮರುಗಿ ಕುದಿದು ಶಾಸ್ತ್ರದ ಬಲದಿಂ॥
ದಳಿಪಿಂ ಪೇಳ್ವೊಡಮದು ಕೋ।
ಮಳಮಕ್ಕುಮೆ ಸಹಜಮಿಲ್ಲದಾತನ ಕಬ್ಬಂ ॥

(ಅ. ೧. ಪ. ೪೯)

ಎಂಬುದಾಗಿ ಹೇಳುವನು. ಮಳೆಯಿಲ್ಲದೆ ಹುಯ್ಯುವ ನೀರಿನಿಂದ ಬೆಳೆಯನ್ನು ಬೆಳೆಯುವುದು ಹೇಗೆ ಅಸಾಧ್ಯವೋ, ಒಂದು ವೇಳೆ ಬೆಳೆದರೂ ಅದು ಹೇಗೆ ಅಪರಿಪಕ್ವವೋ ಹಾಗೆಯೇ ಸ್ವಾಭಾವಿಕವಾದ ಕವನಕಲೆ ಯಿಲ್ಲದೆ ಶಾಸ್ತ್ರಬಲದಿಂದ ಹೇಳುವ ಕವಿತೆಯು 'ಕೋಮಳ'ವಾಗುವುದಿಲ್ಲ ವೆಂದೂ ಮಹಾಕವಿ ನಯಸೇನನು ಅಭಿಪ್ರಾಯ ಪಟ್ಟಿರುವನು.

ಯಾವುದಾದರೊಂದು ವಿಷಯುವನ್ನು ಕೂಲಂಕಷವಾಗಿ ಚರ್ಚಿಸು ವಾಗ ಆ ವಿಷಯುದಲ್ಲಿ ಅನುಭವಿಗಳಾದವರ ಮಾತಿಗೆ ಹೆಚ್ಚಿಗೆ ಪ್ರಾಮುಖ್ಯತೆ ಕೊಡುವುದು ಲೋಕನೀತಿಯಷ್ಟೇ. ಕವಿತ್ವದಲ್ಲಿ ಸ್ವಾಭಾವಿಕ ಶಕ್ತಿ ಸಂಪನ್ನ ನಾದ ನಯಸೇನನು ಈ ವಿಷಯುವನ್ನು ಚೆನ್ನಾಗಿ ಮಥನಮಾಡಿಯೇ ಹೇಳಿರುವನು.

ಒಂದು ವೇಳೆ ಯಾವನಾದರೊಬ್ಬ ಪಂಡಿತನು ಸಹಜ ಕವಿತಾಶಕ್ತಿ ಯಿಲ್ಲದೆ ಗ್ರಂಥವನ್ನು ಬರೆವುದಾದರೆ ಅವನ ಕೃತಿಯು ಅಸಮಂಜಸವೂ ಅಸಹ್ಯವೂ ಆಗುವುದೆಂಬುದನ್ನು ಮುಂದಿನ ಪದ್ಯದಲ್ಲಿ ನಯಸೇನನು ಇನ್ನೂ ಚೆನ್ನಾಗಿ ಹೇಳಿರುವನು

ಕಂದ ॥ ಉಪ್ಪಿಲ್ಲದೆ ಕೇಳೊಕ್ಕಳ ।
ತುಪ್ಪವನೆರೆದುಣ್ಬೆನೆಂಬೊಡುಂಬುಣಿಸೇಂ ಸ್ವಾ ॥
ದಪ್ಪುದೆ ಸಹಜಂ ತನಗಿನಿ॥
ಸಪ್ಪೊಡಮಿಲ್ಲದನ ಕವಿತೆ ರುಚಿವಡೆದಪುದೇ ॥

(ಧರ್ಮಾಮೃತ, ಅ. ೧ ಪ ೫೦)

ಊಟಕ್ಕೆ 'ಉಪ್ಪು' ಹಾಕದೆ ಬೇಕಾದಷ್ಟು ತುಪ್ಪವನ್ನು ಸುರಿದರೂ ಅದು ಹೇಗೆ ಊಟಮಾಡುವವರಿಗೆ ರುಚಿಸಲಾರದೋ ಹಾಗೆಯೇ ಸಂಸ್ಕಾರ ವಿಲ್ಲದೆ ಪಾಂಡಿತ್ಯ ಬಲದಿಂದ ಹೇಳುವ ಕಾವ್ಯವು ರಸಿಕರಿಗೆ ಮಾನ್ಯವಾಗ ಲಾರದು ಎಂದು ಈ ಕವಿಯು ತಾತ್ಪರ್ಯವಾಗಿದೆ.

ಇದುವರೆಗೂ ನಾವು ಹೇಳಿದ ನಯಸೇನನ ಅಭಿಪ್ರಾಯುಗಳಿಂದ ಕೇಶಿರಾಜನು ಕವಿತ್ವಕ್ಕೆ ಹೇಳಿದ ಕಾರಣಗಳು ಸಹಾಯಕಾರಣಗಳೆಂದೂ ಕವಿತೆಗೆ ಮುಖ್ಯ ಕಾರಣವು ಸಂಸ್ಕಾರವೆಂದೂ ಒಪ್ಪಿಕೊಳ್ಳಬೇಕಾಗುವುದು,

"ನಾನೃಷಿಃ ಕುರುತೇ ಕಾವ್ಯಂ" ಎಂಬ ಸನಾತನ ನುಡಿಯೊಂದನ್ನು ನಮ್ಮ ಜನರು ಕೇಳಿರಬಹುದು. ಇದರಲ್ಲಿ ಋಷಿಯು ಅಂಶವಿಲ್ಲದವನು ಕಾವ್ಯವನ್ನು ಬರೆಯಲಾರನೆಂಬ ಅರ್ಥವು ಅಂತರ್ಭೂತವಾಗಿರುವುದು. ಈ ಅರ್ಥವನ್ನು ತಿಳಿದೇ ನಯಸೇನನು ಸಂಸ್ಕಾರವಿಲ್ಲದವನ ಕವಿತೆಯು ಬಂಧುರವಾದುದಲ್ಲವೆಂದು ಹೇಳಿರುವುದು. ಒಬ್ಬನು ಕವಿತ್ವವನ್ನು ಬರೆಯುತ್ತಿರುವುದನ್ನು ನೋಡಿ ಈರ್ಷೆಯಿಂದ ತಾನೂ ಕವಿಯೆನಿಸಿಕೊಳ್ಳಬೇಕೆಂದು ಹೋಗುವ ಚಪಲರನ್ನು ನೇಮಿಚಂದ್ರನು 'ಬಯಕೆಗವಿಗಳ್' ಎಂದು ಅಪಹಾಸ್ಯಮಾಡಿರುವನು.

ಕೇಶಿರಾಜನು ಹೇಳಿದಂತೆ ದೇಶಾಟನವೂ, ಪಂಡಿತಭಾಷಣವೂ, ತರ್ಕಶಾಸ್ತ್ರ ಕಾವ್ಯಪರಿಚಯವೂ ಇಲ್ಲದೆಯೇ ಕೆಲವರಿಗೆ ಕವನ ಶಕ್ತಿಯು ಬಂದುದನ್ನು ನಾವು ಸಾಹಿತ್ಯದಲ್ಲಿ ನೋಡಬಹುದು. ಆದಿಕವಿಯೆನಿಸಿದ ವಾಲ್ಮೀಕಿಗೆ ದೇಶಾಟನವಾಗಲಿ, ಪಂಡಿತಭಾಷಣವಾಗಲಿ, ಅಥವಾ ಕಾವ್ಯ ಪರಿಚಯವೇ ಆಗಲಿ ಆಗಿದ್ದಂತೆ ಅವನ ಚರಿತೆಯಲ್ಲಿ ತಿಳಿದುಬರುವುದಿಲ್ಲ. ಹೀಗೆಯೇ ನಮ್ಮ ಕನ್ನಡ ಕವಿಗಳಲ್ಲಿ ಕೆಲವರಿಗೆ ಕವಿತೆಯು ನಿರಾಯಾಸವಾಗಿ ಅನಿರೀಕ್ಷಿತವಾಗಿ ಪ್ರಾಪ್ತವಾದುದನ್ನು ನಾವು ಈ ಸಮಯದಲ್ಲಿ ವಿಚಾರಿಸಬಹುದು. ಮಹಾಕವಿಯಾದ ಷಡಕ್ಷರದೇವನಿಗೆ ಹನ್ನೊಂದನೆಯ ವರ್ಷದ ಬಾಲ್ಯದಲ್ಲಿಯೇ ಕವನವು ಪ್ರಾಪ್ತವಾಯಿತೆಂದೂ, ಅಭಿನವ ಕಾಲಿದಾಸ ಬಸವಪ್ಪ ಶಾಸ್ತ್ರಿಗೆ ಹದಿನೆಂಟನೆಯ ವಯಸ್ಸಿನಲ್ಲಿಯೇ ಉಭಯ ಭಾಷೆಗಳಲ್ಲಿಯೂ ಉತ್ತಮವಾದ ಕವಿತಾಶಕ್ತಿಯು ಪ್ರಾಪ್ತವಾಗಿತ್ತೆಂದೂ ಈ ಮುಂದಣ ಪದ್ಯಗಳಿಂದ ತಿಳಿದು ಬರುವುದು.

ಕಂದ ॥ ನೆರೆದೇಕಾದಶವರ್ಷದ ।
ಹರೆಯದೊಳಭವಪ್ರಸಾದ ಬಲದಿಂ ಕವಿತಾ॥

ತರುಣಿ ಷಡಕ್ಷರ ದೇವನ ।
ನೆರವಿಲ್ಲದೆ ವರಿಯಿಸಿರ್ದಳರಿಪೆನೆ ವಿಬುಧರ್ ॥

(ಶಬರಶಂಕರ ವಿಳಾಸ, ಅ. ೫ ಷ. ೬೦)

ಪದಿನೆಂಟು ವಯಸ್ಸಿನೊಳೊದ ।
ವಿದ ಕವಿತಾಶಕ್ತಿಯಿಂದೆ ಬುಧನಿವಹಕ್ಕಂ ॥

ಮುದವೊಗೆಯೆ ಕೃಷ್ಣರಾಯಾ ।
ಭ್ಯುದಯಮೆಸಿಪ್ಪೊಂದು ಕೃತಿಯ ನಿರದಾಗಿಸಿದಂ ॥

(ಕರ್ಣಾಟಕ ಶಾಕುಂತಲ ನಾಟಕ, ಪೀಠಿಕೆ)

ಮೇಲೆಕಂಡ ಪದ್ಯಗಳೆರಡರಲ್ಲಿ ಕವಿತೆಯು ಸಂಸ್ಕಾರ ಜನ್ಯವಾದುದೆಂಬುದು ಸ್ಪಷ್ಟವಾಗುವುದಿಲ್ಲವೆ ?

ಇದುವರೆಗಿನ ವಿವೇಚನೆಯಿಂದ ಕವಿತೆಯು. ಸ್ವಭಾವ ಜನ್ಯವಾದುದೆಂದೂ, ಕವನಕಲೆಯಿಲ್ಲದೆ ಶಾಸ್ತ್ರಬಲದಿಂದ ಬರೆಯಲಿಕ್ಕೆ ಹೋಗುವವರು ಬಯ್ಕೆಗವಿಗಳಾಗುವರೆಂದೂ ನಾವು ತಿಳಿದಂತಾಯಿತು. ಇನ್ನು ಕವಿತೆಯು ಕಲಿತರೆ ಬರುವದಿಲ್ಲವೇಕೆ ? ಎಂಬ ಪ್ರಶ್ನೆಯನ್ನು ಕುರಿತು ವಿಚಾರ ಮಾಡೋಣ.

ಕಾವ್ಯಕಲಾವಿಶಾರದನೆನಿಸಿದ ಷಡಕ್ಷರದೇವನು ಕವಿತೆಯು ಕಲಿಸಿದರೆ ಖಂಡಿತವಾಗಿಯೂ ಬರುವುದಿಲ್ಲವೆಂದೂ ಅದು ಕವಿ ಯಾದವನಿಗೆ ನಿಸರ್ಗವಾದ ಗುಣವೆಂದೂ ಮುಕ್ತಕಂಠದಿಂದ ಹೇಳಿರುವನು

ಕಂದ॥ ಆರಾರೇರರ್ ಶಾಸ್ತ್ರ ।
ಶ್ರೀ ರೋಹಣ ಗಿರಿಯನಲ್ಲಿ ನವಕವಿತಾ ಚಿಂ ।
ತಾ ರತ್ನಂ ದೊರೆಗುವೆ ಮಾ ।
ರಾರಿಯ ಕೃಪೆಯಿಲ್ಲದಂಗೆ ಧರಣೀತಳದೊಳ್ ॥ ೨೯ ॥

ಕಲಿಸಿದೊಡೇಂ ಬರ್ಕುಮೆ ಸ ।
ಲ್ಲಲ್ಲಿತ ಕವಿತ್ವಂ ನಿಸರ್ಗಸುಭಗಂ ರಮಣೀ ॥
ವಿಲಸಿತ ರತಿರಸ ರಸಿಕತೆ ।
ತಲೆದೋರ್ಪುದು ತಾನೆ ಕಲಿಸಲೇಂಬಂದಪುದೇ ?॥ ೩೦ ॥

(ರಾಜಶೇಖರ ವಿಳಾಸ, ಅ. ೧)

ಷಡಕ್ಷರ ದೇವನ ಅಭಿಪ್ರಾಯದಂತೆ ಶಾಸ್ತ್ರ ಶ್ರೀರೋಹಣ ಪರ್ವತದಲ್ಲಿ ಕವಿತಾನಾಮಕ ಚಿಂತಾರತ್ನವು ಮಾರಾರಿಯ ಕೃಪೆಯಿಲ್ಲದಂಗೆ ಲಭಿಸಲಾರದೆಂದೂ, ಅದು ನಿಸರ್ಗವಾದುದೆಂದೂ, ಅದು 'ರಮಣೀವಿಲಸಿತ ರತಿರಸ ರಸಿಕತೆಯು' ಹಾಗೆ ಇನ್ನೊಬ್ಬರು ಹೇಳಿಕೊಡದಿದ್ದರೂ! ತಾನಾಗಿಯೇ ತಲೆದೋರ್ವುದೆಂದೂ ನಿರ್ಣಯವಾಯಿತು.

ಕವನಕಲೆಯು ಹಲವು ಜನ್ಮಗಳ ಪುಣ್ಯಪರಿಪಾಲಕದಿಂದಲ್ಲದೆ ಸುಮ್ಮನೆ ಲಭಿಸಲಾರದೆಂದು "ಉದ್ಯತ್ಕವಿತಾಲತಾರ್ಜಿತಯಶಃ ಪುಷ್ಪೋದಯ"ನಾದ ಷಡಕ್ಷರನು ಮತ್ತೊಂದು ಸಂದರ್ಭದಲ್ಲಿ ಹೇಳಿರುವನು.

ವೃ॥ ಬಹುತರ ಜನ್ಮಕೋಟಿಗಳೊಳಾರ್ಜಿಸಿದುತ್ತಮಪುಣ್ಯ
ದೇಳ್ಗೆಯಿಂ ।
ಮಹಿಯೊಳಿ ಸತ್ಕವಿತ್ವದಿವಿಷನ್ಮಣಿ ಸಾಗ್ರ್ಗಿಮದೀ
ಗುಮದ್ಭುತಾ :
ವಹ ಸುಖಮಂ ಲಸತ್ಕವಿಗೆ ಸಾರ್ಜುಗುಮುಜ್ವಳ
ಕೀರ್ತಿಯಂ ಸದಾ ।
ಮಹಿತಪದಾರ್ಥಮಂಕುಡುಗುಮಿಾಶ್ವರನೊಲ್ಮೆಯನುಂಟು
ಮಾಡುಗುಂ ॥

(ಶಬರಶಂಕರ ವಿಳಾಸ, ಅ. ೫ ಪ. ೬೧)

ಕವಿತೆಯು ಹೀಗೆ ಸುದುರ್ಲಭವಾದುದರಿಂದಲೇ ಲೋಕವು ಕವಿಗಳನ್ನು ಬಹುವಾಗಿ ಗೌರವಿಸುವದು. "ಕವಿತ್ವವಿಲ್ಲದನ ಜಾಣ್ಮೆ" "ತನುಭವನಿಲ್ಲದ ಭಾಗ್ಯ"ದಂತೆ ಮೆರೆಯಲಾರದೆಂದು ಷಡಕ್ಷರನೇ ಮತ್ತೊಂದು ಸಮಯದಲ್ಲಿ ಹೇಳಿರುವನು.

ಕವಿತಾಂಗನೆಯು ಎಲ್ಲರನ್ನೂ ಪ್ರೀತಿಸುವುದಿಲ್ಲ. ಅವಳಿಗೆ ವಿಶಾಲ ಮನಸ್ಕರೂ, ಉದಾತ್ತಭಾವವುಳ್ಳವರೂ ಸಹೃದಯರೂ ಸಮಚಿತ್ತರೂ ರಸಿಕರೂ ಅತ್ಯಂತ ಪ್ರಿಯತಮರೆನಿಸುವರು. ಸುಮಕೋಮಲೆಯಾದ

ಕವಿತಾ ತರುಣಿಯು ತನ್ನ ವರವರಣಮಾಲಿಕೆಯನ್ನು ಸರ್ವವಿಧದಲ್ಲಿಯೂ ಯೋಗ್ಯನಾದವನನ್ನೇ ಹುಡುಕಿ ಹಾಕುವಳು. ಈ ವಿಷಯದಲ್ಲಿ ಹರಿಹರ ದೇವನು ಹೇಳಿರುವುದೇನಂದರೆ

ಕಂದ ॥ ಕ್ಷುದ್ರಂಗೆ ಸಕಲ ಸುಜನೋ ।
ಪದ್ರವರೂಪಂಗೆ ಪರರ ಕಾವ್ಯಾರ್ಥಮುಮಂ ॥
ಛಿದ್ರಿಸುವಂಗತಿ ಶಬ್ದದ ।
ರಿದ್ರಂಗಕ್ಕುಮೆ ನವೀನ ಕಾವ್ಯಾರಂಭಂ ॥

(ಗಿರಿಜಾಕಲ್ಯಾಣ, ಅ. ೧ ಪ. ೨೬)

ಇದರಿಂದ ಕವಿಯು ಎಂತಹ ಪರಿಶುದ್ಧ ಚರಿತ್ರನಾಗಿರಬೇಕೆಂಬುದ ಭಾಸವಾಗುವುದು. ಕವಿಯು ಪ್ರಕೃತಿಯ ರಹಸ್ಯಗಳನ್ನೂ, ಸೌಂದರ ಸೌಕುಮಾರ್ಯಗಳನ್ನೂ ಅರಿತವನಾಗಿ, ಪರರ ಸುಖದುಃಖಗಳನ್ನು ತನ್ನವೆಂದು ತಿಳಿವಷ್ಟು ಸುಹೃದಯನಾಗಿ ಇರುವುದಾದರೆ ಮಾತ್ರ ಅವನ ಕವನಲಹರಿ ಯಲ್ಲಿ ಮಾಧುರ್ಯವಿರುವದು. ಹಾಗಿಲ್ಲದೆ, ಹರಿಹರನು ಹೇಳಿದಂತೆ ಕ್ಷುದ್ರ ಗುಣಗಳಿಗೆ ತನ್ನ ಹೃದಯದಲ್ಲಿ ಅವಕಾಶ ಕೊಟ್ಟದಾದರೆ ಅವನು ಕವಿ ತಾಂಗನೆಯ ಪ್ರೇಮಕ್ಕೆ ಪಾತ್ರನಾಗುವ ಭಾಗ್ಯವನ್ನು ಕಳೆದುಕೊಳ್ಳುವನು.

ಕವಿತೆಗೆ ಸಂಸ್ಕಾರವು ಪ್ರಬಲ ಕಾರಣವಾದುದರಿಂದ ಕವಿಯಾದವನು ಕಾವ್ಯಗಳನ್ನು ಓದುವ ಗೋಜಿಗೇ ಹೋಗಬಾರದೆಂದು ನಾವು ಭಾವಿಸಬಾರದು. ಸಂಸ್ಕಾರಿಯಾದ ಕವಿಯು ಕೇಶಿರಾಜನು ಹೇಳಿದಂತೆ, ದೇಶಾಟನ, ಪಂಡಿತ ಭಾಷಣ, ಕಾವ್ಯ ಪರಿಚಯ ಇವುಗಳನ್ನು ಮಾಡಿಕೊಳ್ಳುವದಾದರೆ ಅವನ ಕವಿತ್ವಕ್ಕೆ ಕಾಂತಿಬರುವುದು. ಕವನಶಕ್ತಿಯನ್ನು ಅವನು ಸಂಪಾದಿಸ ಬೇಕಿಲ್ಲವಾದರೂ ಕವನಶಕ್ತಿಯನ್ನು ಉಪಯೋಗಿಸಿಕೊಳ್ಳಲಿಕ್ಕೆ ಬೇಕಾ ಗುವ ವಿಷಯಗಳನ್ನು ಸರ್ವಥಾ ಪ್ರಯತ್ನ ಪೂರ್ವಕ ಸಂಪಾದಿಸಲೇ ಬೇಕು. ಕಾಲಿದಾಸ, ಭವಭೂತಿ, ಪಂಪ, ಷಡಕ್ಷರ ಮೊದಲಾದವರು ಸಂಸ್ಕಾರಿಗಳಾದರೂ ಮಹಾ ಪಂಡಿತರಲ್ಲವೆಂದಲ್ಲ. ಅವರು ಪಂಡಿತ ಕವಿಗಳು ಹಾಗೂ ಪ್ರಾಸಾದಿಕಕವಿಗಳು ಎನಿಸಿಕೊಂಡಿರುವರು.

ಸಂಸ್ಕಾರಿಯಾಗಿ ಪಾಂಡಿತ್ಯವಿಲ್ಲದೆ ಬರೆದ ಕೆಲವು ಕವಿಗಳನ್ನು ನಾವು ನೋಡಬಹುದು. ಇಂತಹವರಾದರೂ ವಿದ್ವನ್ಮಾನ್ಯರಾಗಲಾರರು. ಆದುದರಿಂದ ಸಂಸ್ಕಾರಿಯಾದವನು ತನ್ನ ಸಂಸ್ಕಾರವನ್ನು ಸಾಫಲ್ಯ ಮಾಡಿಕೊಳ್ಳಲು ತಕ್ಕಷ್ಟು ಪಾಂಡಿತ್ಯವನ್ನೂ ಸಂಪಾದಿಸಿ ಪಂಡಿತ ಕವಿಯಾದರೆ ಅವನಿಂದ ಸಾಹಿತ್ಯಕ್ಕೂ ರಸಿಕ ವರ್ಗಗೂ ಮಹೋಪಕಾರವಾಗುವದು. A

ಸ್ವಭಾವ ಕವಿಯಾದವನು ಮಾತ್ಸರ್ಯದಿಂದಾಗಲಿ ಮತ್ತಾವುದರಿಂದಾಗಲಿ ಕಾವ್ಯಗಳನ್ನು ಬರೆಯಲಿಕ್ಕೆ ಹೋಗುವುದಿಲ್ಲ. ಅವನಿಗೆ ಅದೊಂದು ಕರ್ತವ್ಯಕರ್ಮ. ಅವನು ಸಮ್ಮನಿದ್ದರೂ ಅವನ ಹೃದಯಾಂತರ್ಗತವಾದ ಆ ಶಕ್ತಿಯು ಊಟೆಗಳಿಂದ ನೀರು ಉಕ್ಕಿಬರುವಂತೆ ತಾನಾಗಿಯೇ ಹೊರಕ್ಕೆ ಬರುವದು. ಆ ಕವನ ಚಪಲತೆಯನ್ನು ಕಳದುಕೊಂಡ ಹೊರತು ಕವಿಗೆ ನೆಮ್ಮದಿಯಾಗುವುದಿಲ್ಲ. ಆದುದರಿಂದಲೇ ಅವನು ತನಗೆ ಚಪಲ ಹುಟ್ಟಿದಾಗಲೆಲ್ಲ ಹಿಂದು ಮುಂದು ನೋಡದೆ ಯಾರನ್ನೂ ಕೇಳದೆ ತನ್ನ ಲಹರಿಯನ್ನು ಹೊರಗೆಡುಹುವನು. ಹೀಗೆ ಕವಿಗಾದ ಚಾಪಲ್ಯವೇ ಲೋಕೋಪಕಾರಕಗಳಾದ ಕಾವ್ಯರೂಪವನ್ನು ಹೊಂದುವುದು. ಈ ಸಂದರ್ಭವನ್ನು ನಾವು ಕಾಲಿದಾಸನಲ್ಲಿ ವಿಚಾರಿಸಬಹುದು. ಸಂಸ್ಕಾರ ಕವಿಗಳಲ್ಲಿ ಅಗ್ರಗಣ್ಯನಾದ ಕಾಲಿದಾಸನು.

> ರಘೂಣಾಮನ್ವಯಂ ವಕ್ಷ್ಯೇ ತನುವಾಗ್ವಿಭವೋಪಿಸ್ರ್ |
> ತದ್ಗುಣೈಃ ಕರ್ಣಮಾಗತ್ಯ ಚಾಪಲಾಯ ಪ್ರಚೋದಿತಃ ||
>
> (ರಘುವಂಶೇ, ಪ್ರ. ಸ. ೩)

ಎಂಬ ಶ್ಲೋಕದಲ್ಲಿ ಸ್ಪಷ್ಟವಾಗಿ ಹೇಳಿರುವನು. ಕಾಲಿದಾಸನು ರಘುವಂಶವನ್ನು ಬರೆದುದು ರಾಜರ ಪ್ರೋತ್ಸಾಹದಿಂದಲ್ಲ. ತನ್ನಲ್ಲಿದ್ದ

---

A ವಿದ್ವತ್‌ಕವಯಃ ಕವಯಃ ಕೇವಲ ಕವಯಸ್ತು ಕೇವಲಂ ಕಪಯಃ।
ಕುಲಜಾ ಜಾಯಾ ಜಾಯಾ ಕೇವಲ ಜಾಯತು ಕೇವಲಂ ಮಾಯಾ॥

ಸಹಜ ಚಾಪಲ್ಯದಿಂದ; ಅವನು ಮೊದಲು ತೃಪ್ತಿಗೊಳಿಸಬೇಕಾದುದು ತನ್ನ ರಾಜರನ್ನಲ್ಲ. ತನ್ನ ಚಾಪಲ್ಯಕ್ಕೆ ಮೂಲಭೂತವಾದ ಮನೋದೇವತೆಯನ್ನು. ಕಾಲಿದಾಸನು ಈ ರೀತಿ ಕವನಪ್ರಪಂಚದಲ್ಲಿ ರಾಜಮಾರ್ಗವನ್ನು ಹಿಡಿದುದರಿಂದಲೇ ಅವನಿಗೆ ಎಲ್ಲಕಾಲದಲ್ಲಿಯೂ ಎಲ್ಲ ಜನರಿಂದಲೂ ಏಕ ಪ್ರಕಾರವಾದ ಮಾನ್ಯತೆಯು ದೊರೆತಿರುವುದು.

ಕವಿಗೆ ನೈಸರ್ಗಿಕವಾದ ಚಾಪಲ್ಯವು ದೈವಭಕ್ತಿಯಲ್ಲಿ ಬೆರೆತರೆ ಆಗ ಕವಿಯು ಪರವಶನಾಗಿ ಬಿಡುವನು. ಅಂತಹ ಸಂದರ್ಭದಲ್ಲಿ ಕವಿಯು ತಾನು ಬರೆಯುವ ಕರಣಿಕನೆಂದೂ, ತನ್ನ ಕೃತಿಯ ಮಾನಾಪಮಾನ, ಲಾಭಾಲಾಭಗಳಿಗೆ ಅವನೇ ಹೊಣೆಗಾರನೆಂದೂ ಭಾವಿಸುವನು. ಈ ರಹಸ್ಯವನ್ನು ನಾವು, ಲಕ್ಷ್ಮೀಶ, ವಿರೂಪಾಕ್ಷ ಪಂಡಿತ, ಚಾಮರಸ ಮುಂತಾದ ಕವಿಗಳ ಮಾತಿನಿಂದ ತಿಳಿದುಕೊಳ್ಳಬಹುದು.

ಇಂತಹ ಪಾರವಶ್ಯವು ಪ್ರಾಪ್ತವಾದಾಗ ಕವಿಯ ಮುಖದಿಂದ ಹೊರಸೂಸಿದ ಕವನ ಲಹರಿಯು ಪ್ರಾಸಾದಿಕ ವಾಣಿಯೆನಿಸಿಕೊಳ್ಳುವುದು. ವೇದದ ಮಂತ್ರಗಳೂ ಶಿವಶರಣರ ವಚನಗಳೂ ಭಾಗವತರ ಹಾಡುಗಳೂ ಇಂತಹ ಸಮಯದಲ್ಲಿಯೇ ಹೊರಬಿದ್ದವುಗಳು

ಭಾ ॥ ದೇಗುಲವೆ ಮಾತಾಡುವಂದದೊ ।
ಳಾಗಿರದೆಯೊಳಗಿರ್ದು ನುಡಿದರೆ ।
ಲೋಗರಿಗೆ ಪ್ರತಿಶಬ್ಧದಿಂದಾ ಪರಿಯನೆನ್ನೊಳಗೆ ॥
ಲಾಗನಿಂದಲಿ ಗುರುಗೋಗೇಶ್ವರ ।
ನಾಗಳೆನ್ನಂ ನುಡಿಸಿದೊಡೆ ನುಡಿ ।
ದಾಗುಮಾಡಿಯೆ ಪೇಳ್ದೆನೀ ಪ್ರಭುಲಿಂಗಲೀಲೆಯಲಿ ॥

(ಪ್ರಭುಲಿಂಗಲೀಲೆ, ಗತಿ ೧, ಪ ೯)

ವಾ ॥ ಗುಡಿಯೆ ಮಾತಾಡುವಂದದೊಳೋರ್ವ ನೊಳಗಿರ್ದು ।
ನುಡಿದರನ್ಯರ ಕಿವಿಗೆ ಪ್ರತಿಶಬ್ದದಿಂದಾಗ ।

ಲೊಡನೆ ತಾಂ ಕೇಳಬಂದಂತೆನ್ನ ಹೃತ್ಕಮಲ ಕರ್ಣಿಕಾಮಧ್ಯದಲ್ಲಿ ||
ಎಡಬಿಡದೊಲಾವಗಮಿರ್ಪ ಪಂಪಾಕ್ಷೇತ್ರ |
ದೊಡೆಯಂ ವಿರೂಪಾಕ್ಷನೇ ಪೇಳಿಸಿದೊಡೆ ಸವಿ |
ನುಡಿಗಳಿಂದೀಚೆನ್ನಬಸವಪುರಾಣಮಂ ಪೇಳ್ದೆ ನಧಿಕೋತ್ಸವದೊಳು ||
(ಚೆನ್ನಬಸವಪುರಾಣ (ಪೀಠಿಕಾ ಸಂಧಿ.) ಪ. ೩೦)

ವಾ || ಜಾಣರಂ ತಲೆದೂಗಿಸದೆ ನುಡಿದೊಡಾಪದ |
ಕ್ಕೊಣೆಯಂ ಬಹುದೆಂದು ಸರಸೋಕ್ತಿಯಿಂದೆ ಗೀ |
ರ್ವಾಣಪುರನಿಲಯಲಕ್ಷ್ಮೀವರಂ ತಾನೆ ಸಂಗೀತ ಸುಕಲಾನಿಪುಣನು ||
ವೀಣೆಯಿಂ ಗಾನವಂ ನುಡಿಸುವಂದದೊಳೆನ್ನ |
ವಾಣಿಯಿಂ ಕವಿತೆಯಂ ಪೇಳಿಸಿದನೆಂದರಿದು |
ಕೇಣಮಂ ತೊರೆದು ಪುರುಡಿಸುವರಂಜರೆದು ಕಿವಿದೆರೆದು ಕೇಳ್ವುದು
ಸುಜನರು ||
(ಕರ್ಣಾಟಕ ಜೈಮಿನಿಭಾರತ, ಮೊ. ಸಂ. ಷ. ೮)

ಮೇಲಿನ ಪದ್ಯಗಳನ್ನು ಓದಿದರೆ ನಿಸರ್ಗ ಕವಿತಾವೇಶವು ತನ್ನ ಪರಮಾವಧಿಸ್ಥಾನದಲ್ಲಿ ಹೇಗೆ ಪರಿಣಮಿಸುವುದೆಂಬುದು ಗೋಚರ ವಾಗುವುದು.

ಸುದುರ್ಲಭವಾದ ಕವಿತಾಶಕ್ತಿಯನ್ನು ಸಂಸ್ಕಾರ ಜೀವಿಯಾದ ಕವಿಯು ಪಡೆಯುವನು. ಅದನ್ನು ಪ್ರಯತ್ನಪೂರ್ವಕವಾಗಿ ಪಳಗಿಸಿ ಕೊಂಡು ಅರಿತ ನುರಿತ ಕವಿಯಾಗುವನು. ಇಷ್ಟುಮಾತ್ರಕ್ಕೇ ಕವಿಯ ಜವಾಬ್ದಾರಿಯು ಮುಗಿದುಬಿಡಲಿಲ್ಲ. ಅಮೌಲ್ಯವಾದ ಪದಾರ್ಥ ವೊಂದನ್ನು ಆರ್ಜಿಸಿದವನು ಅದನ್ನು ರಕ್ಷಿಸುವುದೆಂತು ? ಅದನ್ನು ಉಪ ಯೋಗಿಸುವ ಕ್ರಮವಾವುದು ? ಆದನ್ನು ಹೇಗೆ ಉಪಯೋಗಿಸುವುದರಿಂದ ತನ್ನ ಕರ್ತವ್ಯವು ಸಾರ್ಥಕವಾಗಿ ತನಗೆ ಇಹಪರಗಳಲ್ಲಿ ಸುಖಶಾಂತಿಗಳು ನೆಲಸುವುವು ? ಎಂಬುದನ್ನು ವಿಚಾರಿಸಿ ಕೆಲಸಮಾಡುವುದು ಯುಕ್ತ ವಾದುದಾಗಿದೆ.

ಅಮೌಲ್ಯವೂ ಅತುಲಫಲಪ್ರದವೂ ಆದ ಕವಿತಾಶಕ್ತಿಯನ್ನು ಕವಿಯಾದವನು ದುರುಪಯೋಗಮಾಡಿಕೊಳ್ಳಬಾರದು. ಈ ಅರ್ಥವನ್ನೇ ಮಹಾಕವಿ ಷಡಕ್ಷರ ದೇವನು

ಕಂದ॥ ರಸೆಯೊಳ್ ರಸವತ್ಕವಿತೆಯ ।
ನುಸರಲ್ಪಡೆದಸಮನಯನನಂ ಪೊಗಳದೆ ಮಾ ॥
ನಿಸರಂ ಸುರರಂ ಪೊಗಳ್ವುದು ।
ಕಸವರವಂ ಕಳೆದು ಕಸವ ನಾಂತವೊಲಕ್ಕುಂ ॥

(ರಾಜಶೇಖರ ವಿಲಾಸ, ಪ್ರ. ಪ. ೨೧)

ಎಂಬುದಾಗಿ ಹೇಳಿ, ಯಾವನಾದರೆ ಹಾಗೆ ತನ್ನ ಕವನಕಲೆಯನ್ನು ಸಾರ್ಥಕಪಡಿಸಿಕೊಳ್ಳುವುದಿಲ್ಲವೋ ಅವನು ಪಂಡಿತರಲ್ಲಿ ಗಣನೀಯ ನಲ್ಲವೆಂಬುದನ್ನು

ಕಂದ॥ ವರ್ಣತತಿ ಮಾತೃ ಜನಕರ ।
ಪರ್ಣಾ ಪರಮೇಶರೆಂಬ ನಿಗಮೋಕ್ತಿಯನಾ ॥
ಕರ್ಣಿಸಿ ತನ್ನುತಿ ಗೆಯ್ಯದ ।
ದುರ್ಣರ ಕೃತಿಕರನೆ ಲಬ್ಧವರ್ಣವಕಾರಂ ॥

(ರಾ. ವಿ. ಪ್ರ. ಅ. ಪ. ೨೦)

ಎಂಬ ಪದ್ಯದಲ್ಲಿ ಹೇಳಿರುವನು. ಇದೇ ಅರ್ಥವನ್ನು ಹರಿಹರದೇವ, ಸೋಮ ರಾಜ, ಸುರಂಗಕವಿ ಪ್ರಭೃತಿಗಳೂ ಬಹಳ ಚೆನ್ನಾಗಿ ಹೇಳಿರುವರು.

ಕಂದ॥ ಕವಿತಾಪ್ರೌಢಿ ತನಗೆ ಸಂ ।
ಭವಿಸೆ ಶಿವಸ್ತವದೆ ಮುಕ್ತಿವಡೆಯದಜಸ್ರಂ ॥
ಭವಿಜನಮಂ ಕೀರ್ತಿಸುವಾ ।
ಕವಿತೆಯು ದುಷ್ಕರ್ಮವಲ್ಲೆ ವಸುಧಾತಳದೊಳ್ ॥

(ಉದ್ಭಟಕಾವ್ಯ, ಪ್ರ. ಅ. ಪ. ೨೭)

ವೃ ॥ ನೆಗಳ್ವ ಸುವರ್ಣಶೈಲಮಿರೆ ಪುಲ್ಗಿರಿಯಂ, ಹರಿಚಂದನದ್ರುಮಂ ।
ಸೊಗಸಿರೆ ಶಾಲ್ಮಲೀವಿಟಪಿಯಂ, ಮೃಗರಾಜನಿರಲ್ವರಾಹನಂ ॥
ಪೊಗಳುವುದಲ್ಲೆನುತ್ತೆ ಮನುಜಸ್ತುತಿಯಂ ನೆರೆ ಬಿಟ್ಟು ಲೀಲೆಯಿಂ ।
ಜಗಮರಿಯಲ್ ಸುರಂಗಕವಿ ನಾಲಗೆಯಂ ಗಿರಿಶಂಗೆ ಮಾರಿದಂ ॥

(ತ್ರಿಷಷ್ಟಿ ಪುರಾತನವಿಳಾಸ, ಪ್ರ. ಅ. ಪ. ೨೯)

ವೃ ॥ ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರಮೇಲೆ ಪದ್ಯಮಂ ।
ತನತನಗಿಂದ್ರ ಚಂದ್ರ ರವಿ ಕರ್ಣ ದಧೀಚಿ ಬಲೀಂದ್ರರೆಂದು ತಾ ॥
ನನವರತಂ ಪೊಗಳ್ದು ಕೆಡಬೇಡಲೆ ಮಾನವ ನೀನಡೆರ್ನಿಶಂ ।
ನೆನೆ ಪೊಗಳರ್ಚಿಸೆಮ್ಮಕಡು ಸೊಂಪಿನ ಪೆಂಪಿನ ಹಂಪೆಯಾಳ್ದನಂ ॥

(ಪಂಪಾಶತಕ. ಪ. ೮೨)

ಮೇಲೆ ಕಂಡ ಪದ್ಯಗಳನ್ನು ಬರೆದಿರುವ ಮಹಾಕವಿಗಳ ಅಭಿಮತದಂತೆ ಕವಿತೆಯನ್ನು ಸದ್ವಿನಿಯೋಗಪಡಿಸುವುದು ಕವಿಯ ಮುಖ್ಯವಾದ ಕರ್ತವ್ಯವೆಂಬುದು ನಮಗೆ ಚೆನ್ನಾಗಿ ತಿಳಿದುಬರುವದು.

ಯಾವನಾದರೆ ಸುದುರ್ಲಭವಾದ ಕವಿತೆಯನ್ನು ಅಸದ್ವಿನಿಯೋಗ ಮಾಡುವನೋ ಅವನು ತನ್ನ ಕವಿತೆಯನ್ನು ನಿರರ್ಥಕಮಾಡಿಕೊಳ್ಳುವನು. ಇದೇ ವಿಷಯುವನ್ನು ಷಡಕ್ಷರಕವಿಯು ತನ್ನ ಸಂಸ್ಕೃತ ಕವಿಕರ್ಣರಸಾಯನ ಮಹಾ ಕಾವ್ಯದಲ್ಲಿ

ಶ್ಲೋ ॥ ಸುದುರ್ಲಭಂ ಪ್ರಾಪ್ಯಕವಿತ್ವರತ್ನಂ ।
ತದಪ್ಯುಮೇಶಾಯ ಸಮರ್ಪಣೀಯಂ ॥
ಅನ್ಯಾರ್ಪಿತಂ ತದ್ಧಿ ಭವತ್ಯವಶ್ಯಂ ।
ನಿರರ್ಥಕಂ ಸ್ಯಾದಿತಿ ಮೇ ಮನೀಷಾ ॥

(ಕವಿಕರ್ಣರಸಾಯನೇ, ಪ್ರ. ಅ. ಶ್ಲೋ. ೫೯)

ಎಂಬುದಾಗಿ ಬರೆದಿರುವನು. ಪರಮೇಶ್ವರ ಕೃಪಾದತ್ತವಾದ ಕವಿತ್ವವೆಂಬ ಚಿಂತಾರತ್ನವನ್ನು ವಿವೇಕಿಯಾದ ಕವಿಯು ಶಿವನ ಪಾದ

ಕ್ಕಾಗಲಿ, ಅಥವಾ ಭಕ್ತರಾದ ಸಜ್ಜನರ ನಾಮಸ್ಮರಣೆಗಾಗಲಿ ಉಪ ಯೋಗಿಸುವುದು ಔಚಿತ್ಯವಲ್ಲವೆ ?

ಕವನಕಲೆಯು ಕಲೆಗಳಲ್ಲಿ ಉತ್ತಮವಾದುದೆಂದೂ, ಇದು ಪ್ರಯತ್ನ ಸಾಧ್ಯವಾಗುವದಕ್ಕಿಂತ ಸಂಸ್ಕಾರಲಭ್ಯವಾದುದೆಂದೂ, ಸಂಸ್ಕಾರ ರಹಿತವಾದ ಪಾಂಡಿತ್ಯವು ಕವಿತ್ವವನ್ನು ಉಂಟುಮಾಡಲಾರದೆಂದೂ, ಆದುದರಿಂದಲೇ ಕವಿಯು ತನ್ನ ಸಂಸ್ಕಾರವನ್ನು ಪಳಗಿಸಿಕೊಂಡು ಶಿವ ಕೃಪಾದತ್ತವಾದ ರಸವತ್ಕವಿತೆಯನ್ನು ಸದ್ವಿನಿಯೋಗಪಡಿಸಬೇಕೆಂದೂ ಈ ವಿವೇಚನೆಯಿಂದ ನಾವು ತಿಳಿಯಬೇಕು.

ಜನಜೀವನದ ಪ್ರಗತಿಗೆ ಎಲ್ಲ ಕಲೆಗಳೂ ಅತ್ಯಾವಶ್ಯಕ. ಆದರ ಲ್ಲಿಯೂ ಕವನ ಕಲೆಯು ಅತ್ಯಂತ ಮುಖ್ಯವಾದುದೆಂಬುದು ವಿಚಾರ ಣೀಯ ಎಂಬೀ ಸಂಗತಿಗಳನ್ನು ನಮ್ಮ ದೇಶಬಾಂಧವರು ಮರೆಯ ಲಾಗದು. ಅಂತಹ ದೈವಾಂಶೀಭೂತವಾದ ಕವನಶಕ್ತಿಪಡೆದವರನ್ನು ಉಪೇಕ್ಷಿಸಲಾಗದು.

"ತೀರ್ಥಗಳಲ್ಲಿ ಗಂಗೆ, ಕ್ಷೇತ್ರಗಳಲ್ಲಿ ಕಾಶಿ, ರತ್ನಗಳಲ್ಲಿ ವಜ್ರ, ವೃಕ್ಷಗಗಳಲ್ಲಿ ಗಂಧ, ದೇವತೆಗಳಲ್ಲಿ ಶಿವ, ಪರ್ವತಗಳಲ್ಲಿ ಹಿಮಾಲಯ, ಋಷಿಗಳಲ್ಲಿ ವ್ಯಾಸ, ಮಾನವರಲ್ಲಿ ಗಾಂಧಿ ಅಧಿಕರೆನಿಸಿದಂತೆ ಸಾಹಿತಿಗಳಲ್ಲಿ ಸತ್ಕವಿಯು ಶ್ರೇಷ್ಠನೆನಿಸುವನು. 'ಕವಿಯು ತಿರುಗಾಡುವ ಬ್ರಹ್ಮಾಂಡ' ಎಂಬ ವಿಶ್ವಕವಿ ಠಾಕೂರರ ಉಕ್ತಿ ಸ್ಮರಣಾರ್ಹವಾಗಿದೆ.

# ಕವಿಯೂ ಜನಾಂಗವೂ

ಕವಿ, ಕಬ್ಬಿಗ, 'ಶಬ್ದಶಿಲ್ಪಿ ಇತ್ಯಾದಿಗಳು ಪರ್ಯಾಯಪದಗಳು. ಕವನಕಲೆಯುಳ್ಳವನನ್ನು ಕವಿ ಎಂದು ಕರೆಯುವರು. ಕವಿಯು ಜನಾಂಗದ ಪ್ರತಿನಿಧಿ. ಸಮಾಜದ ನಡೆನುಡಿಗಳೂ, ಸ್ಥಿತಿಗತಿಗಳೂ, ರೀತಿ ನೀತಿಗಳೂ ಕವಿಯ ಅನುಭವ ಮುಖದಿಂದ ಹೊರಹೊಮ್ಮುವುವು. ಆದುದರಿಂದ, ನಾಗರಿಕರು, ಕಲಾಭಿಮಾನಿಗಳು ಎನಿಸಿದವರೆಲ್ಲರೂ ಕವಿಲೋಕ ವನ್ನು ಗೌರವಿಸುವರು. ಕಬ್ಬಿಗ ಅಥವಾ ಕವಿ ಎಂದರೆ ಯಾರು? ಅವನ ಸಾಮರ್ಥ್ಯವೇನು! ಅವನ ಅಂತರಂಗದ ರಹಸ್ಯವೇನು ? ಸಮಾಜ ದಲ್ಲಿ ಅವನ ಸ್ಥಾನವಾವುದು ? ಅವನ ಗುಣಶೀಲಗಳಾವುವು ? ಎಂಬಿವೇ ಮೊದಲಾದ ವಿಷಯಗಳನ್ನು ಚರ್ಚಿಸುವುದೇ ಈ ಲೇಖನದ ಮುಖ್ಯೋ ದ್ದೇಶವು.

ಕವಿಯು ಮನುಷ್ಯಕೋಟಿಗೆ ಸೇರಿದವನಾದರೂ ಅವನನ್ನು ಸಾಮಾನ್ಯರಂತೆ ಗಣಿಸಲಾಗದು. ಕವಿತೆಯೆಂಬ ಚಿಂತಾರತ್ನವನ್ನೂ ಪ್ರತಿಭೆಯೆಂಬ ಕಲ್ಪವೃಕ್ಷವನ್ನೂ ಲೋಕರಹಿತವೆಂಬ ಕಾಮಧೇನುವನ್ನೂ ಹೊಂದಿ, ಆನಂದಮಯವಾದ ಸಾಹಿತ್ಯ ಸಾಮ್ರಾಜ್ಯವೆಂಬ ಸ್ವರ್ಗಲೋಕ ದಲ್ಲಿ ಶುಚಿ ಎಂಬ ಶಚಿಯಿಂದ ಸಮಲಂಕೃತನಾಗಿ ಸದುದ್ದೇಶವೆಂಬ ಅಮರಾವತಿಯಲ್ಲಿ ಕವೀಂದ್ರನೆಂಬ ದೇವೇಂದ್ರನು ಸ್ವಚ್ಛಂದವಾಗಿ ರಾಜ್ಯಭಾರಮಾಡುತ್ತಿರುವನು. ವಿಬುಧರೆಂಬ ದೇವತೆಗಳು ಅವನ ಪ್ರಜಾವರ್ಗದವರಾಗಿರು. ಕವಿತೆಯೆಂಬ ಪಾರಿಜಾತತರುವು ಅವನ (ಕವಿಯ) ಖ್ಯಾತಿಯನ್ನೂ ಸುರಸಸೌರಭವನ್ನೂ ಮೌನದಿಂದ ಸಾರುವುದು. ದೇವೇಂದ್ರನಿಗೆ ವಜ್ರಾಯುಧವು ಪ್ರತಿಯೊಂದು ಕಾರ್ಯದಲ್ಲಿಯೂ ಸಹಾಯವಾದಂತೆ, ಕವೀಂದ್ರನಿಗೆ ಅವನ ಕೈಲೇಖಣಿಯು ಅಪ್ರತಿಹತ ವಾಗಿದ್ದು ತನ್ನ ಸ್ವಾಮಿಯ ಅಭೀಷ್ಟವನ್ನು ಸಲ್ಲಿಸುವುದು. ಆದುದರಿಂದಲೇ ಅಮರನಾದ ಕವಿಯು ಅಮರರ ರಾಜನನ್ನು ಹೋಲುತ್ತಾ ಭೂಲೋಕದ ದೇವೇಂದ್ರನೆಂಬಂತಿರುವನು. ಇದು ನಿಮಿತ್ತವೇ ಹಿಂದಿನಿಂದ ಇಂದಿನ

ವರೆಗೂ ಕವೀಂದ್ರರಿಗೆ ಪ್ರತಿಯೊಂದು ಜನಾಂಗವೂ ಪೂಜ್ಯಸ್ಥಾನವನ್ನೇ ಕೊಟ್ಟಿರುವುದು ಹಾಗೂ ಕೊಡುತ್ತಿರುವುದು.

ಕವಿಯು ಸಾಹಿತ್ಯ ರಾಜ್ಯದಲ್ಲಿ ಸುಖವಾಗಿ ಬಾಳಲು ಅವನಿಗೆ ಕೆಲವು ಅನುಕೂಲಗಳೂ ಉತ್ತಮವಾದ ಸನ್ನಿವೇಶಗಳೂ ಬೇಕು. ಕವಿಯು ನಿರರ್ಗಳವಾಗಿ ತಾನು ತನ್ನ ಕಾರ್ಯವನ್ನು ಸಾಗಿಸಲು ಅವನಿಗೆ ದಾರಿದ್ರ್ಯಬಾಧೆ ಇರಬಾರದು. ನಾನಾದುಃಖಗಳಿಗೆ ತೌರುಮನೆಯೆನಿಸಿದ ಬಡತನವು ಕವಿಗೆ ಗಂಟುಬಿದ್ದರೆ ಅವನ ಚೈತನ್ಯವನ್ನೇ ನುಂಗಿಬಿಡುವುದು. ಕಾಳ್ಗಿಚ್ಚಿಗೆ ಸಿಕ್ಕಿದ ಮೃದು ಲತೆಯು ಜೀವಿಸುವುದು ಹೇಗೆ ಕಷ್ಟವೋ ದಾರಿದ್ರ್ಯಾಗ್ನಿಗೆ ಸಿಕ್ಕಿದ ಕವಿಯ ಹೃದ್ಗತ ಕವಿತಾಲತೆಯೂ ಹಾಗೆಯೇ ಬಾಡಿ ಹೋಗುವುದು.

ಬಡತನ, ದುಃಖ, ವಿಯೋಗ, ರೋಗ ಮೊದಲಾದುವು ಕವಿಗೆ ಹೊಸಹೊಸ ಅನುಭವವನ್ನು ಕೊಡುವುದು ನಿಜ. ಆದರೆ ನಾನಾ ಕಾರ್ಪಣ್ಯಗಳಿಗೀಡಾದ ಕವಿಯ ಕವನಕುಸುಮವು ತನ್ನ ಸಹಜ ಸೌಂದರ್ಯ ಮಾಧುರ್ಯಗಳನ್ನೂ ಸೌಭಾಗ್ಯ ಸೌಕುಮಾರ್ಯಗಳನ್ನೂ ಹಾಳುಮಾಡಿಕೊಳ್ಳುವುದು ಅಷ್ಟೇ ನಿಜ; ಆದುದರಿಂದಲೇ ಕವಿಯೊಬ್ಬನು ವಿದ್ಯಾಭಿಮಾನಿಯಾದ ಭೋಜರಾಜನನ್ನು ಕುರಿತು

"ವ್ಯಸನಿ ಇವ ವಿದ್ಯಾಕ್ಷೀಯತೇ ಪಂಕಜ ಶ್ರೀಃ"

ಎಂದು ಹೇಳಿರುವುದು. ವ್ಯಸನಿಯ ವಿದ್ಯೆಯು ಕ್ಷೀಣಿಸುವಂತೆಯೇ ದರಿದ್ರ ಕವಿಯ ಕವನಶಕ್ತಿಯೂ ಕುಂದುವುದು ಎಂಬುದು ಅನುಭವಸಿದ್ಧ.

ಕವಿಗೆ ಅನ್ನ ಬಟ್ಟೆಗಳ ಕೊರತೆ ಇರಬಾರದು. ಅವನ ಮನಸ್ಸು ಅನುಪಮವಾದ ಚಿಂತೆಗಳಿಗೆ ಈಡಾಗಬಾರದು. ಕವಿಯು ತನ್ನ ಅಮೌಲ್ಯವಾದ ಜೀವನವನ್ನೂ ಅಲಭ್ಯವಾದ ಶಕ್ತಿವಿಶೇಷವನ್ನೂ ಸಾಮಾನ್ಯ ಕಾರ್ಯಗಳಿಗೆ ಉಪಯೋಗಿಸುವುದಾದರೆ, ಅವನ ಜನಾಂಗಕ್ಕೆ ಅದು ಅಪರಿಮಿತ ನಷ್ಟ. ಕವಿಶಕ್ತಿಯನ್ನು ಸಾಮಾನ್ಯಕಾರ್ಯಗಳಿಗೆ ಉಪಯೋಗಿ

ಸುವುದರಿಂದ ಚಿನ್ನದ ಸವರ್ಣಗಳನ್ನು ಕೊಟ್ಟು ಮಾರುಕಟ್ಟೆಯಿಂದ ನಾಲ್ಕು ಸೊಪ್ಪಿನ ಕಂತೆ ತಂದಂತಾಗುತ್ತದೆ.

ಯಾವನ ದೆಸೆಯಿಂದ ಜನಜೀವನವು ಸುಧಾರಿಸಬೇಕೋ, ಯಾರ ಶಕ್ತಿಯಿಂದ ಜನಾಂಗದಲ್ಲಿ ರಸಿಕತೆಯೂ ಅಭಿಜ್ಞತೆಯೂ ಸುಖಾನು ಭವವೂ ಬೆಳೆಯಬೇಕೋ ಅಂತಹ ಕವಿಯನ್ನು ವಿವೇಕವುಳ್ಳ ಜನಾಂಗವು ಕಡೆಗಣಿಸಬಾರದು. ಕವಿಗೆ ತಕ್ಕಷ್ಟು ಸಂತೋಷವೂ ಶಾಂತಿಯೂ ಲಭಿಸದ ಹೊರತು, ಅವನ ಅಂತರಂಗದಿಂದ ಮೃದುಮಧುರವೂ ನವರಸ ಮಯವೂ ಆವೇಶಯುಕ್ತವೂ ಆದ ಕವನಲಹರಿಯು ಪ್ರವಹಿಸುವುದಿಲ್ಲ. ಕವಿಮುಖಚಂದ್ರನಿಂದ ಆನಂದದಾಯಕ ಬೆಳುದಿಂಗಳು ಪ್ರಕಾಶಿಸು ವುದಿಲ್ಲ. ರಸಿಕ ಚಕೋರಗಳನ್ನೂ ಸಹೃದಯ ಕುಮುದಗಳನ್ನೂ ಆನಂದ ಗೊಳಿಸುವುದಿಲ್ಲ.

ಕೋಗಿಲೆಯು ವಂಸತಕಾಲದಲ್ಲಿ ಹಾಡುವುದು. ಗಿಣಿಯು ಸಂತೋಷವಾದಾಗ ಮಾತನಾಡುವುದು. ದುಂಬಿಯು ನವಕುಸುಮಗಳ ಬಂಡನ್ನು ಕಂಡು ಝೇಂಕರಿಸುವುದು. ಹಂಸವು ಮಾನಸಸರೋವರವನ್ನು ಕಂಡು ಆನಂದಿಸುವುದು. ಚಕೋರವು ಬೆಳುದಿಂಗಳನ್ನು ಕಂಡು ಕುಣಿ ದಾಡುವುದು ಹೇಗೆ ಸ್ವಾಭಾವಿಕವೋ ಹಾಗೆಯೇ ಕವಿಯು ತೃಪ್ತನಾದಾಗ ಅವನ ಅಮರಶಕ್ತಿಯು ಹೊರಹೊಮ್ಮುವುದಾದರೂ ನಿಸರ್ಗವಾದುದು. ಸಹಜವಾದುದು. ಸತ್ಯವಾದುದು.

ಪೂರ್ವಕಾಲದಿಂದಲೂ ಭಾರತದ ಜನಾಂಗವು ಕವಿಗೆ ಉತ್ತಮ ಸ್ಥಾನವನ್ನೇ ನಿರ್ಧರಿಸಿರುವುದು. ನಮ್ಮ ಜನಾಂಗಕ್ಕೆ ಪರಮ ಪೂಜ್ಯರೆನಿಸಿ ಸಿದ, ವ್ಯಾಸ, ವಾಲ್ಮೀಕಿ ಮೊದಲಾದವರು ಋಷಿಕವಿಗಳೇ ಆಗಿರುವರು. ಪುರಾಣ ಯುಗದಲ್ಲಿ ಋಷಿಕವಿಗಳು ಭಗವಂತನ ಅಂಶೀಭೂತರೆಂದು ಜನರು ಭಾವಿಸಿದ್ದರು. 'ನಾನ್ ಋಷಿಃ ಕುರುತೇ ಕಾವ್ಯಂ' ಎಂಬ ವಾಕ್ಯವು ಪ್ರಸಿದ್ಧವಾಗಿಯೇ ಇದೆ.

ಇತಿಹಾಸಕಾಲದಲ್ಲಿಯೂ ನಮ್ಮ ಭಾರತ ಭೂಮಿಯಲ್ಲಿ ಕವಿಗಳು ಉತ್ತಮ ಸ್ಥಾನಾಪನ್ನರಾಗಿಯೇ ಇದ್ದರು. ಚಂದ್ರಗುಪ್ತಮೌರ್ಯನು ಕವಿಯೂ ಮಹಾ ಯೋಗಿಯೂ ನೀತಿನಿಪುಣನೂ ಆದ ಕೌಟಿಲ್ಯನನ್ನು ತನ್ನ ಪರಮ ಗುರುವಾಗಿ ಮಹಾಮಂತ್ರಿಯಾಗಿ ಅಂಗೀಕರಿಸಿದನು. ಶ್ರೀ ಹರ್ಷನು ಮಹಾಕವಿ ಬಾಣಭಟ್ಟನನ್ನು ತನ್ನ ಸರ್ವಸ್ವವಾಗಿ ಭಾವಿಸಿ ಅವನಿಗೆ ತನ್ನ ಆಸ್ಥಾನದ ಅಗ್ರಪೀಠವನ್ನು ಮೀಸಲಾಗಿಟ್ಟನು. ಜಗದ್ವಿಖ್ಯಾತನಾದ ಭೋಜರಾಜನು ಮಹಾಕವಿಗಳನ್ನು ಬಹಳವಾಗಿ ಮನ್ನಿಸಿ ಈ ಲೋಕದಲ್ಲಿ ಮತ್ತಾರಿಗೂ ಇಲ್ಲದ ಸಾಹಿತ್ಯ ಸಾಮ್ರಾಜ್ಯ ಸಾಮ್ರಾಟ ಪದವಿಯನ್ನು ಹೊಂದಿದನು. ಭಾರತೀಯ ಸಂಸ್ಕೃತ ಸಾಹಿತ್ಯವನ್ನು ವಿವರ್ಧಿಸಿದನು.

ಹೀಗೆಯೇ ನಮ್ಮ ದೇಶದ ರಾಜರೂ ಸಾರ್ವಭೌಮರೂ ಪೂರ್ವ ದಿಂದಲೂ ಕವಿಗಳಿಗೆ ಆಶ್ರಯವನ್ನು ಕೊಡುತ್ತಲೇ ಬರುವರು. "ನಿರಾಶ್ರಯಾ ನಶೋಭಂತೇ ಪಂಡಿತಾ ವನಿತಾ ಲತಾಃ" ಎಂಬ ಈ ಹಳೆಯ ಮಾತು ಎಲ್ಲಾ ಜನಾಂಗಕ್ಕಿಂತಲೂ ಮೊದಲು ನಮ್ಮ ದೇಶೀಯರಿಗೇ ತಿಳಿದಂತೆ ತೋರುವುದು.

ನಿಗ್ರಹಾನುಗ್ರಹ ಸಮರ್ಥನಾದ ಮಹಾಕವಿಯು ಕಾವ್ಯನಿರ್ಮಾಣ ದಲ್ಲಿ ಪ್ರವೀಣನೆಂದು ಮಾತ್ರ ಹಿಂದಿನವರು ಭಾವಿಸಿದಂತೆ ಕಾಣುವುದಿಲ್ಲ. ಕವಿಯು ರಾಜ್ಯಭಾರಮಾಡಲಿಕ್ಕೂ, ರಾಜಪದವಿಗೂ ಅರ್ಹನೆಂಬುದನ್ನು ನಮ್ಮ ಕನ್ನಡ ದೇಶದಲ್ಲಿ ಆಗಿಹೋದ ಮಹಾಪುರುಷರ ಚರಿತ್ರೆಗಳಿಂದ ತಿಳಿಯಬಹುದು. ಮೈಸೂರು ಸಂಸ್ಥಾನವನ್ನು ಆಳಿದ ಮಹಾರಾಜರು ಗಳಲ್ಲಿ ಅತ್ಯಂತ ವಿಖ್ಯಾತರಾದ ಶ್ರೀ ಚಿಕ್ಕದೇವರಾಜರು, ಮಹಾಕವಿ ತಿರುಮ ಲಾರ್ಯನನ್ನು ತಮ್ಮ ಮಂತ್ರಿಯಾಗಿ ಸ್ವೀಕರಿಸಿದ್ದರು. ಕೆಳದಿ ಸಂಸ್ಥಾನದಲ್ಲಿ ರಾಜ್ಯವಾಳಿದವರಲ್ಲಿ ಅತ್ಯಂತ ಪ್ರಬಲನಾದ ಕರ್ನಾಟಕ ಭೋಜ ಬಸವ ರಾಜನು ಮಹಾವಿದ್ವಾಂಸರನ್ನೂ ಕವಿಗಳನ್ನೂ ತನ್ನ ಅಮಾತ್ಯ ರನ್ನಾಗಿ ಸ್ವೀಕರಿಸಿದ್ದನು. ಬೇಲೂರಿನಲ್ಲಿದ್ದ ನರಸಿಂಹ ಬಲ್ಲಾಳನು ಮಹಾಕವಿ ಪದ್ಮರಸನನ್ನು ತನ್ನ ಮಂತ್ರಿಯನ್ನಾಗಿ ನೇಮಿಸಿಕೊಂಡಿದ್ದನು.

ವಿದ್ಯಾಭಿಮಾನಿಯಾದ ಆ ರಾಜನೇ ದ್ವಾರಸಮುದ್ರದಲ್ಲಿ ಮಹಾಕವಿ ಹರಿಹರ ದೇವನನ್ನು ತನ್ನ ಆಸ್ಥಾನದಲ್ಲಿ ಕರಣಿಕರ ಕುಲತಿಲಕನನ್ನಾಗಿ ನೇಮಿಸಿದ್ದನು. ಚಿಕ್ಕದೇವರಾಜರು ಚಿಕ್ಕುಪಾಧ್ಯಾಯ, ಸಿಂಗಳಾಚಾರ್ಯ ಮೊದಲಾದವರಿಗೆ ಸಹಾಯಕರಾಗಿ ಅವರಿಗೆ ತಾವೇ ಪೋಷಕರಾಗಿದ್ದರು. ಕೆಳದಿಯ ವೆಂಕಟಪ್ಪನಾಯಕನು ತಿರುಮಲಭಟ್ಟ ಮೊದಲಾದ ಸುಕವಿಗಳಿಗೆ ಆಶ್ರಯವನ್ನಿತ್ತನು. ಕೆಳದಿಯ ಬಸವಪ್ಪನಾಯಕನು ಮರಿತೋಂಟದಾರ್ಯ, ಮೌನಪ್ಪ ಪಂಡಿತರನ್ನು ಪೋಷಿಸಿದನು, ಷಡಕ್ಷರ ಮಂತ್ರಿ, ನಿರ್ವಾಣ ಮಂತ್ರಿಗಳನ್ನು ಸಚಿವರನ್ನಾಗಿಮಾಡಿಕೊಂಡಿದ್ದನು. ಒಟ್ಟಿನಲ್ಲಿ ಹೇಳುವುದಾದರೆ, ಪುರಾಣಯುಗದಿಂದ ಇಲ್ಲಿಯವರೆವಿಗೂ ಕವಿಲೋಕವನ್ನು ಹಿಂದೂಜನಾಂಗವು {ಬಹಳವಾಗಿ ಗೌರವಿಸಿರುವುದು ಕಂಡುಬಂದಿದೆ. ಪುಲಿಗೆರೆಯ ಸೋಮಕವಿಯು "ಕವಿಯೇ ರಾಜನ ಕಣ್ಣಲ್ತೆ" ಎಂದು ತನ್ನ ಶತಕದಲ್ಲಿ ಹೇಳಿರುವನು. ಅದನ್ನು "ಕವಿಯೇ ಲೋಕದ ಕಣ್ಣಲ್ತೆ" ಎಂದು ಬದಲಾಯಿಸಿದರೆ ಆ ಮಾತಿಗೆ ಇನ್ನೂ ಗೌರವ ಹೆಚ್ಚಾಗುತ್ತದೆ. ಕವಿಯು ಜನಾಂಗದಲ್ಲಿ ಗಣನೀಯನಾದುದರಿಂದಲೇ ಅವನನ್ನು "ಕವಿಯೇ ಸರ್ವರೊಳುತ್ತಮಂ" ಎಂದು ಕೂಡ ಪೂರ್ವ ಕವಿಗಳು ಹೊಗಳಿರುವರು. ಚೆನ್ನಾಗಿ ವಿಚಾರಮಾಡಿ ನೋಡಿದರೆ, ನಮಗೆ ಮೇಲಿನ ಸೋಮಕವಿಯ ವಾಕ್ಯಗಳು ಯಥಾರ್ಥವಾದವುಗಳೆಂದು ತೋರುವುವು. ಆದಿಕವಿಯಾದ ವಾಲ್ಮೀಕಿಯೂ, ಭಗವಾನ್ ಬಾದರಾಯಣನೂ, ಮುನಿಶ್ರೇಷ್ಠರಾದ ಶುಕ ಪರಾಶರ ಗೌತಮಾದಿಗಳೂ ಕವಿಗಳಾಗಿರದಿದ್ದರೆ, ನಮ್ಮ ಭಾರತ ಜನಾಂಗದ ಸ್ಥಿತಿಯೇನಾಗುತ್ತಿತ್ತು ? ಆ ಮಹಾತ್ಮರು ರಾಮಾಯಣ, ಮಹಾಭಾರತ, ಭಾಗವತಾದಿ ಇತಿಹಾಸಗಳನ್ನೂ ಪುರಾಣಗಳನ್ನೂ ಸ್ಮೃತಿಗಳನ್ನೂ ಬರೆದಿಡದಿದ್ದರೆ, ಇಂದು ನಮ್ಮ ಜನಾಂಗಕ್ಕಿರುವ ಹಿರಿಮೆಯೂ, ಮನುಷ್ಯತ್ವವೂ ಎಲ್ಲಿಂದ ಬರುತ್ತಿದ್ದವು ? ಶ್ರೀ ರಾಮ, ಕೃಷ್ಣ, ಯುಧಿಷ್ಠಿರ, ಕಲಿಪಾರ್ಥ, ನಳ, ಹರಿಶ್ಚಂದ, ಪುರೂರವ, ದುಷ್ಯಂತ, ಭರತಾದಿ ಪ್ರಾಚೀನ ಜೀವರತ್ನಗಳು ನಮ್ಮ ಸ್ಮೃತಿಪಥದಲ್ಲಿರುತ್ತಿದ್ದುವೆ ? ಇಂತಹ ಮಹಾಪುರುಷರ ಚರಿತ್ರೆಯ ಪರಿಚಯವು ನಮಗೆ ಆ ಋಷಿಕವಿಗಳ ಮುಖದಿಂದಲ್ಲವೇ ಆದುದು ? ಅಧ್ದ

ರಿಂದಲೇ ನಾವು ಕವಿಸೋಮನ ನುಡಿಯನ್ನು "ಕವಿಯೇ ಲೋಕದ ಕಣ್ಣೆಲೈ" ಎಂದು ತಿದ್ದಿ ಬರೆದುದು.

ಕವಿಗಳಲ್ಲಿ 'ವಾಗ್ವಶ್ಯ'ರೆಂದೂ 'ವಶ್ಯವಾಕ್ಕು'ಗಳೆಂದೂ ಎರಡು ಬಗೆಯುಂಟು. ಯಾವನು ಮಾತುಗಳಿಗೆ ಅಧೀನನೋ ಅಂತಹವನು ವಾಗ್ವಶ್ಯನು. ಯಾವನ ಅಧೀನದಲ್ಲಿ ಮಾತುಗಳಿವೆಯೋ ಅಂದರೆ ಯಾವನಿಗೆ ಶಬ್ದಾರ್ಥಗಳೂ, ಸಾಹಿತ್ಯವೂ ವಿಧೇಯ:ವಾಗಿವೆಯೋ ಅವನು ವಶ್ಯವಾಕ್ಕೆಂದು ಗಣಿಸಲ್ಪಡುವನು. ವಾಗ್ವಶ್ಯನನ್ನು ಪಾಮರ ಕವಿಯೆಂದೂ, ವಶ್ಯವಾಕ್ಕನ್ನು ಮಹಾಕವಿಯೆಂದೂ ಕಲಾವಿದರು ಹೇಳುವರು.

ವಾಗ್ವಶ್ಯನಾದ ಸಾಮಾನ್ಯ ಕವಿಯು ಮಹಾಕಾವ್ಯವನ್ನು ಬರೆಯಲು ಎಷ್ಟುಮಾತ್ರಕ್ಕೂ ಸಮರ್ಥನಾಗಲಾರನು. ಒಂದು ವೇಳೆ ಪ್ರಯತ್ನಿಸಿದರೂ ಅವನ ಕೃತಿಯು ಸತ್ಕಾವ್ಯವೆನಿಸದು. ಇಂತಹ ಅಸಮರ್ಥ ಕವಿಯನ್ನು ಮಹಾಕವಿ ಷಡಕ್ಷರ ದೇವನು

ವೃತ್ತ ॥ ಬರೆಬರೆದಂತದಂ ತೊಡೆದು ತೊಟ್ಟನೆ ಸಿಟ್ಟಿಸಿ ಮೆಲ್ಲನೊಂದುಮಂ।
ಸರಸ ಪದಾರ್ಥಮಂ ತಡಕಿ ಕಾಣದೆ ಕಳ್ದು ಪರೋಕ್ತಯುಕ್ತಿಯಂ॥
ವಿರಚಿಸುತಂತುಮಿಂತುಮಳಿಗಬ್ಬಮನಾಗಿಸಿ ಕೇಳಿಸುತ್ತೆ ಕಾ ।
ಲುರಿಚರ ತೋರ್ಪ ದುಷ್ಕವಿ ಮಹಾಕವಿ ಮಧ್ಯ
ದೊಳೊಪ್ಪಲಾರ್ಪನೇ ॥

ರಾಜಶೇಖರ ವಿಲಾಸ (ಆ. ೧, ಪ. ೨೫).

ಎಂಬುದಾಗಿಯೂ, ಮಹಾಕವಿ ನೇಮಿಚಂದ್ರನು

ಕಂದ ॥ ಅಸ್ತವ್ಯಸ್ತಂ ಪದಮು ।
ಪ್ರಸ್ತುತಮತಿ ವಿಹಿತಮರ್ಥಮೆನೆ ದುಷ್ಕೃತಿಯಂ ॥
ವಿಸ್ತಾರಿಸಿ ಸಲೆ ಸುಜನ ಶಿ ।
ರಸ್ತೋದಮನೇಕೆ ಮಸಗಿ ಮಾಳ್ಪರೊ ಕೆಲಬರ್ ॥

ಮಿಗೆ ಪದಮಿಡಲರಿಯದ ನಾ ।
ಲಗೆ ಕೆಳವರ್ ಸಲೆ ಸದರ್ಥಮಂ ಕಾಣದ ಪೋ ॥
ಬಗೆ ಗುರುಡರ್ ಬಗೆ ವೊಡೆ ಕ ।
ಬ್ಬಿಗರಕ್ಕುಮೆ ಓದುಗೇಳತಕ್ಕರಗಿವುಡರ್ ॥

[ಲೀಲಾವತಿ ಪೀಠಿಕೆ.]

ಎಂಬ ರೀತಿಯಿಂದಲೂ ಹಂಗಿಸಿರುವರು. ಯಾವನಾದರೆ ಸಂಸ್ಕಾರ ಜನ್ಯವಾದ ಕವಿತಾವೇಶವುಳ್ಳವನಾಗಿರುವುದಿಲ್ಲವೋ ಅಥವಾ ಇದ್ದರೂ ತಕ್ಕಷ್ಟು ವ್ಯುತ್ಪನ್ನನಾಗಿರುವುದಿಲ್ಲವೋ ಅವನು ಕಾವ್ಯಮಾರ್ಗದಲ್ಲಿ ಹೀಗೆ ಅಪಹಾಸ್ಯಕ್ಕೆ ಗುರಿಯಾಗಿ ವಾಗ್ವಶ್ಯನಾದ ಸಾಮಾನ್ಯ ಕವಿಯೆಂದು ಕರೆಯಲ್ಪಡುವನು. ವಶ್ಯವಾಕ್ಕೆನಿಸಿದ ಮಹಾ ಕವಿಯು ಹೀಗೆಂದಿಗೂ ಕಾವ್ಯದಲ್ಲಿ ಎಡವಲಾರನು. 'ಆನೆಯು ನಡು ಬಡವೇ' ಎಂದು ಕೇಶಿರಾಜನು ಕೇಳಿರುವನು?

ವಶ್ಯವಾಕ್ಕೆನಿಸಿದ ಮಹಾಕವಿಯು ಕಾವ್ಯವನ್ನು ಬರೆಯಲಿಕ್ಕೆ ತೊಡಗಿದರೆ ಪದಗಳೂ ಭಾವಗಳೂ ಅಲಂಕಾರಗಳೂ ತಾವಾಗಿಯೇ ಒಂದರಮೇಲೊಂದು ಬಂದು ಕವಿಯು ನಮ್ಮನ್ನು ಕರೆದರೆ ಸಾಕೆಂದು ವಿಧೇಯವಾಗಿ ಅವನ ಪ್ರತಿಭೆಯ ಮುಂದೆ ಕೈಮುಗಿದು ನಿಂತಿರುವುವು. ಇಂತಹ ಕಬ್ಬಿಗನ ಕೃತಿಯು "ಮನೋಭವನಲರಂಬಿನಂತೆ" ಹೃದಯಂಗಮವಾಗಿರುವುದು. ಹಾಗೂ ನವರಸ ರಸಾಯನವೆನಿಸುವುದು.

ಮಹಾಕವಿ ನಿರ್ಮಿತ ಕಾವ್ಯಗಳು—

ವೃ ॥ ಪ್ರಿಯವಚದಂತೆ ಪುಣ್ಯತತಿಯಂತೆ ಸುಧಾರಕನಂತೆ ಕೂರ್ತ ಮು ।
ಗ್ಧೆಯ ಕೆಡುನೇಹದಂತಮೃತದಂತೆ ವಸಂತಕನಂತೆ ಪುಷ್ಪಮಾ
ಲೆಯ ಪೊಸಗಂಪಿನಂತೆ ಮಲಯಾನಿಲನಂತೆ ಮರಾಳನಂತೆ.... ।
—————————————— ॥ ಯೂ

[ಗಿರಿಜಾಕಲ್ಯಾಣ]

ವೃ ॥ ಜೇಂಗೊಡದಂತೆ ಝೇಂಕರಿಪ ತುಂಬಿಗಳಿಂಚರದಂತೆ ಪೆಂಪನಾ।
ಳ್ದಿಂಗಡಲಂತೆ ಪಣ್ತೆಸೆವ ಮಾಮರನಂತೆಳೆಗಾಳಿಯಂತೆ ಬೆ ॥
ಳ್ದಿಂಗಳ ಸೊಂಪಿನಂತೆ ಸುಸಿಲಾಸೆಯನಲ್ಲಳ ನೋಟದಂತೆ....।
___________________________________ ॥ ಯೂ

ವೃ ॥ ಎಳೆಗಿಳಿವೆಂಡಿರಂತೆ ಮಿಳಿರ್ದಾಡುವ ತುಂಬಿಯ ಬಂಬಲದಂತೆ ಕೆಂ ।
ದಳಿರ್ಗಳ ತೊಂಗಲಂತೆ ನಡೆನೋಡುವ ಪೆಂಡಿರನೋಟದಂತೆ ಪೂ ॥
ಗಳ ಪೊಸಗಂಪಿನೊಳ್ ಪೊರೆದು ತೀಡುವ ತೆಂಬಲರಂತೆ ತೋರ್ಪ ತಿಂ।
ಗಳಸಿರಿಯಂತೆ_____________________ ॥ ಯೂ

[ಕಬ್ಬಿಗರ ಕಾವ]

ಮನೋಹರವಾಗಿರುವವು.

ಬಿಲ್ಲುಹಿಡಿದವರೆಲ್ಲರೂ ಬೇಟೆಗಾರರಾಗದಂತೆಯೇ ಲೇಖಣಿ ಹಿಡಿದವರೆಲ್ಲರೂ ಕವಿಗಳಾಗಲಾರರು. ಸಾಹಿತ್ಯ ಪ್ರಪಂಚದಲ್ಲಿ ಮಹಾಕವಿಯು ಸಮುದ್ರದಂತೆಯೂ, ಸಾಮಾನ್ಯಕವಿಗಳು ಕೆರೆಕುಂಟೆಗಳಂತೆಯೂ ತೋರುವರು.

ಸಹೃದಯನಾದ ಸುಕವಿಯು ನಿರ್ಮಾತ್ಸರ್ಯಮತಿಯಾಗಿಯೂ, ಸುಜನನಾಗಿಯೂ ಇರುವನು. ಉದಾರಿಯಾದ ಧನಿಕನಂತೆಯೇ ನಿರ್ಮತ್ಸರ ಮತಿಯಾದ ಕವಿಯೂ ಲೋಕದಲ್ಲಿ ಅಪೂರ್ವನಾಗಿರುವನು. ಇದನ್ನೇ ಮಹಾಕವಿ ರತ್ನನು

ಕಂದ॥ ಶ್ರೀಯುತನೊಳುದಾರತೆ ವಾ ।
ಕ್ಶ್ರೀಯುತನೊಳಮತ್ಸರತ್ವ ಮಾಗದುದಾರಂ ॥
ಶ್ರೀಯುತನಮತ್ಸರಂ ವಾ ।
ಕ್ಶ್ರೀಯುತನಾದೊಡೆ ಕೃತಾರ್ಥರಾಗರೆ ಕವಿಗಳ್ ॥

[ಗದಾಯುದ್ಧ ಪೀಠಿಕೆ]

ಎಂದು ಹೇಳಿರುವನು.

ಕವಿಯು ಸದಾಚಾರಿಯೂ, ದೈವಭಕ್ತನೂ, ಕ್ರಿಯಾಸಿದ್ಧಿಯುಳ್ಳವನೂ ಆಗಿದ್ದರೆ; ಅವನ ಕವನದಲ್ಲಿ ಚೈತನ್ಯವಿರುವುದು. ಆ ಕವಿಗೂ ಒಂದು ವಿಧವಾದ ಆತ್ಮವಿಶ್ವಾಸವಿರುವುದು. ತನ್ನಲ್ಲಿಯೇ ತನಗೆ ನಂಬಿಕೆಯುಳ್ಳ ರಾಘವಾಂಕ ಪಂಡಿತನು ತನ್ನ ಹರಿಶ್ಚಂದ್ರ ಪುರಾಣದಲ್ಲಿ ಹೇಳಿರುವುದನ್ನು ನೋಡಿರಿ.

ವಾ॥ ಷ॥ ಪರರೊಡವೆಯಂ ಕೊಂಡು ಕೃತಿಯ ಪೇಳದ ಭಾಷೆ ।
ಪರರ ಕಾವ್ಯಾರ್ಥಂಗಳಂ ಛಿದ್ರಿಸದ ಭಾಷೆ ।
ಪರದೈವವ ನುತಿಸದಿರ್ಪ ಭಾಷೆಯು ತನ್ನ ಮನದೊಳಗೆ
ಹಿಡಿದಿರ್ಪನು ॥
ಪರರ ನಿಂದಿಸಿ ತನ್ನ ಹೊಗಳಿಕೊಳ್ಳದ ಭಾಷೆ ।
ಪರರವಧುವಂ ಕಂಡು ಮನವೆಳಸದಿಹ ಭಾಷೆ ।
ಪರರ ವಸ್ತುವ ತೃಣಕೆ ಸರಿಯೆಂಬ ಭಾಷೆಯಿದು ರಾಘವಾಂಕಗೆ
ಸಂದುದು.

[ಹರಿಶ್ಚಂದ್ರ ಕಾವ್ಯ, ಸ್ಥಳ ೧, ಪ. ೧೬]

ಮಹಾಕವಿ ರಾಘವಾಂಕ ಪಂಡಿತನು ಇಂತಹ ನಿರ್ಮಲ ಮೂರ್ತಿಯಾದುದರಿಂದಲೇ ಅವನ ವಾಣಿಯು ಆಹ್ಲಾದಜನಕವಾದುದೂ ಪುನೀತವಾದುದೂ ಎನಿಸಿದೆ. ಸೌರಭದಿಂದ ಪುಷ್ಪದ ಯೋಗ್ಯತೆಯು ತಿಳಿಯುವಂತೆ ವಾಣಿಯಿಂದ ವಕ್ತೃವಿನ ಶಕ್ತಿಯು ಕಂಡುಹಿಡಿಯಲ್ಪಡುವುದು.

'ರವಿ ಕಾಣದುದನ್ನು ಕವಿ ಕಂಡ' ಎಂಬ ಸಾಮತಿಯೊಂದು ಪ್ರಚಾರದಲ್ಲಿರುವುದಷ್ಟೆ ? ಈ ಮಾತು ಕವಿಯ ಹಿರಿಯತನವನ್ನೇ ಸೂಚಿಸತಕ್ಕುದಾಗಿರುವುದು. ಕವಿಯು ಶಬ್ದಗಳಿಂದಲೂ, ಉದಾತ್ತ ಭಾವಗಳಿಂದಲೂ ಸುಂದರ ಚಿತ್ರವನ್ನು ಕಾವ್ಯಪಾಠಕರ ಚಿತ್ತಭಿತ್ತಿಯ ಮೇಲೆ ಚಿತ್ರಿಸುವನು. ಇದು ಸಾಮಾನ್ಯವಾದ ಸಾಹಸವಲ್ಲ. ಚಿತ್ರಗಾರನು ಭೌತಿಕವಾದ ಪದಾರ್ಥಗಳಲ್ಲಿ ಸುಂದರವಾದ ಚಿತ್ರಗಳನ್ನು ರೇಖೆಗಳಿಂದಲೂ, ಬಣ್ಣಗಳಿಂದಲೂ ಬರೆದು ನಮ್ಮ ಕಣ್ಣೆದುರಿಗೆ ಇಡುವನು.

ಕವಿಯು ಭೌತಿಕಸಾಧನವಿಲ್ಲದೆಯೇ ತನ್ನ ಮಂಜುಳ ಶಬ್ದಸಾಮರ್ಥ್ಯ ದಿಂದಲೇ ದಿವ್ಯಭವ್ಯ ಹೃದಯಂಗಮ ಶಬ್ದಚಿತ್ರಗಳನ್ನು ಬರೆದು ನಮ್ಮ ಆತ್ಮನ ಮುಂದಿಡುವನು.

ಜಾಣನಾದ ಕವಿಯನ್ನು ಒಬ್ಬ ಶಿಲ್ಪಿಗೆ ಹೋಲಿಸಬಹುದು. ಶಿಲ್ಪಿಯು ಕಲ್ಲು, ಮಣ್ಣು, ಮರ, ಲೋಹಾದಿಗಳಿಂದ ಒಂದು ಭವ್ಯವಾದ ಸೌಧವನ್ನು ನಿರ್ಮಿಸುವನು. ಕವಿಯು, ಶಬ್ದ, ಅರ್ಥ, ರಸ, ಭಾವ, ಅಲಂ ಕಾರ ಮೊದಲಾದುವುಗಳಿಂದ ಮಹಾಕಾವ್ಯ ನಾಮಕ ಮಂದಿರವನ್ನು ನಿರ್ಮಿಸುವನು. ಶಿಲ್ಪಿಯ ಕೃತಿಯಾದ ಪ್ರಾಸಾದವು ನೇತ್ರಾನಂದದಾಯ ಕವು. ಕವಿಯ ಕಾವ್ಯವು ಆತ್ಮಾನಂದದಾಯಕವು. ಶಿಲ್ಪಿಯ ಕಾರ್ಯವು ಬಹುಕಾಲ ಜೀವಿಸತಕ್ಕುದಲ್ಲ. ಕವಿಯ ಕಾವ್ಯ ಮಂದಿರವು ವಿರಾಡ್ರೂಪ ವನ್ನು ಹೊಂದಿ ವಿಶ್ವವನ್ನೆಲ್ಲಾ ವ್ಯಾಪಿಸತಕ್ಕದು. ವಿಷಯವು ಹೀಗಿರುವುದ ರಿಂದಲೇ ಸಮಾಜವು ಶಿಲ್ಪಿ, ಚಿತ್ರಗಾರ ಮೊದಲಾದ ಇತರ ಕಲಾವಿದರಿ ಗಿಂತಲೂ ಕವಿಗೆ ಆನಂದರಾಜ್ಯದ ಅಗ್ರಪೀಠವನ್ನಿತ್ತಿರುವುದು.

ಆಗ್ರಾ ಪಟ್ಟಣದಲ್ಲಿ 'ತಾಜ್ ಮಹಲ್' ಮಂದಿರವನ್ನೂ, ಬಿಜಾ ಪುರದಲ್ಲಿ ಗೋಳಗುಮ್ಮಟವನ್ನೂ ಹಳೇಬೀಡು, ಬೇಲೂರು, ಸೋಮನಾಥ ಪುರಗಳಲ್ಲಿಯ ಸುಂದರ ದೇವಾಲಯಗಳನ್ನೂ, ಎಲ್ಲೋರ,ಅಜಂತದಲ್ಲಿನ ಚಿತ್ರ ಶಿಲ್ಪಗೆಲಸಗಳನ್ನೂ ನಿರ್ಮಿಸಿದ ಶಿಲ್ಪಿಗಳನ್ನು ನಾವು ಸಾಮಾನ್ಯರೆಂದು ಭಾವಿಸುವಂತಿಲ್ಲ. ಆದರೂ ಶಾಕುಂತಲ, ಕಾದಂಬರಿ, ಜೈಮಿನಿಭಾರತ, ಉತ್ತರ ರಾಮಚರಿತೆ, ಪಂಪಭಾರತ, ಗಿರಿಜಾ ಕಲ್ಯಾಣ, ರಾಜಶೇಖರ ವಿಳಾಸ ಮೊದಲಾದ ಕಾವ್ಯಕರ್ತೃಗಳಾದ, ಕಾಳಿದಾಸ, ಬಾಣ, ಲಕ್ಷ್ಮೀಶ, ಭವಭೂತಿ, ಆದಿಪಂಪ, ಹರಿಹರ, ಷಡಕ್ಷರದೇವ ಮೊದಲಾದ ಕಾವ್ಯ ಕಲಾವಿದರನ್ನು ನಾವು ಆ ಶಿಲ್ಪಿಗಳಿಗಿಂತಲೂ ಹಿರಿದಾಗಿ ಭಾವಿಸುತ್ತೇವೆ. ಏಕೆ ?

ಕವಿಗಳು ಎಂತಹ ಮಾಹಾತ್ಮ್ಯವುಳ್ಳವರೆಂಬುದನ್ನೂ ಅವರ ಅಘಟ ನಾಘಟನ ಶಕ್ತಿ ಎಂತಹುದೆಂಬುದನ್ನೂ ನೇಮಿಚಂದ್ರನ ಮುಂದಿನ ಪದ ಗಳಿಂದ ನಾವು ತಿಳಿಯಬಹುದು.

ವೃ॥ ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ, ವಾಮನ ಕ್ರಮಂ ।
ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ, ಹರನಂ ನರನಿಕ್ಕಿ ಗಂಟಲಂ॥
ಮೆಟ್ಟುಗೆ ಮೆಟ್ಟದಿರ್ಕೆ, ಕವಿಗಳ್, ಕೃತಿಬಂಧದೊಳಲ್ತೆ ಕಟ್ಟದರ್ ।
ಮುಟ್ಟದರಿಕ್ಕಿ ಮೆಟ್ಟದರಿದೇ ನಳವಗ್ಗಳಮೋ ಕವೀಂದ್ರರಾ? ॥೧೧॥

ಕಿವಿಯಿಂ ದೀಂಟಿಸುವರ್ ಸಮಸ್ತರಸಮಂ ತೋರ್ಪರ್ ಸರೋಜಾತಮಂ।
ಯುವತೀ ಪ್ರೌಢ ಲತಾಗ್ರದೊಳ್ ಕುಮುದ ಮೊಂದೊಂದಲ್ಲಿಯಾ ಬಾಲಪ॥
ಲ್ಲವವಂ ಪುಟ್ಟಿಪರಾರ‍್ಯ ಮೋಹನಮುಮಂ ಮಾಳ್ಪೀ ಚಮತ್ಕಾರಮಂ ।
ಕವಿಗಳ್ ಬಲ್ಲವೊಲನ್ಯರೆತ್ತರಿವರಂತಾ ಬ್ರಹ್ಮನುಂ ಬಲ್ಲನೇ ? ॥೧೨॥

ಮರನೀಗುಂ ಮಣಿಯೀಗುವೊಂದು ಪಶುವೀಗುಂಕೇಳಿ
ಮೆಂದೋಳಿಯೊಳ್।
ಪುರುಡಂ ಪುಟ್ಟಿಸಿ ಕಾಷ್ಟಮಂ ಕೊನರಿಪರ್ ಕಲ್ಲಲ್ಲಿ ನಾರೆತ್ತುವರ್॥
ಮರುಳಂ ಪೋಪರುಗಳಾಗಿಪರ್ ಕಿವಿಗಳೊಳ್ ಪೀಯೂಷಮಂ
ಪಿಂಡಲು ।
ರ್ವತೆಯೊಳ್ ಸಂಚ ಕವಿಪ್ರವೇಕರೆ ವಲಂ ಬಲ್ಲರ್ ಪೆರರ್ ಬಲ್ಲರೇ ॥
॥ ೧೩ ॥

[ಲೀಲಾವತಿ, ಅ. ೧.]

ಮೇಲಿನ ಪದ್ಯಗಳಲ್ಲಿ ಕವಿಗಳ ಸಾಮರ್ಥ್ಯವನ್ನು ನೇಮಿಚಂದ್ರನು ಬಹುಮನೋಹರವಾಗಿ ಹೇಳಿರುವನು. ಸೋಮಕವಿಯು ಹೇಳಿದ "ಕವಿಯೇ ಸರ್ವರೊಳುತ್ತಮಂ" ಎಂಬ ಮಾತು ನೇಮಿಚಂದ್ರನ ಈ ಪದ್ಯಗಳನ್ನು ಓದಿದವರಿಗೆ ಅತಿಶಯೋಕ್ತಿ ಎಂದು ತೋರುವುದಿಲ್ಲ.

ಕವಿಗೆ ಸಾಮರ್ಥ್ಯದಂತೆಯೇ ಗಾಂಭೀರ್ಯವೂ ಕರ್ತವ್ಯನಿಷ್ಠೆಯೂ ಮುಖ್ಯವಾದ ಗುಣಗಳು. ಇವು ಕವಿಯಲ್ಲಿ ಅವಶ್ಯವಾಗಿಯೂ ಇರುವ ಗುಣಗಳೆಂಬುದನ್ನು ಮಹಾಕವಿ ಹರಿಹರನ ಮಾತಿನಿಂದ ತಿಳಿಯಬಹುದು. ಅದೇನೆಂದರೆ;—

ವೃ ॥ ತನಗೆ ಕವಿತ್ವವಿಲ್ಲ ಪರರಂ ಪಳಿದಲ್ಲದೆನಿಲ್ಲ ನಾತನೊಳ್ ।
ಮುನಿವುದನೀತಿ ಪಂದಿಡುರುಕೆಂದೊಡೆ ತಾಂ ಡುರುಕೆಂಬುದೇ ಮಹಾ॥
ವನಕರಿಯಂ ವಿದಾರಿಸುವ ಸಿಂಹಸುದಂತಿರೆ ದೋಷಿಯಪ್ಪದು ।
ರ್ಜನರ ಕಟೋಕ್ತಿಗಂಜದೆ ಲಸತ್ಕೃತಿಯಂ ಸಲೆಸೂಳ್ಕೆ ಸಜ್ಜನರ್
॥೨೯॥

[ಗಿರಿಜಾ ಕಲ್ಯಾಣ, ಪ್ರ. ಆ. ಪ.]

ಮಹಾಕವಿಯಾದವನಲ್ಲಿರಬೇಕಾದ ಸ್ವಭಾವವನ್ನು ಕನ್ನಡಜಾಣ ಕುಮಾರ ವ್ಯಾಸನು ಮುಂದೆ ನಿರೂಪಿಸುವ ಪದ್ಯದಲ್ಲಿ ವ್ಯಾಜಾಂತರದಿಂದ ಹೇಳಿರುವನು

ಭಾ ॥ ಷ ॥ ಹಲಗೆ ಬಳಪವ ಪಿಡಿಯದೊಂದ ।
ಗ್ಗಳಿಕೆ ಪದವಿಟ್ಟಳುಪದೊಂದ ।
ಗ್ಗಳಿಕೆ ಪರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ ॥
ಬಳಸಿ ಬರೆಯಲು ಕಂಠಪತ್ರದ ।
ಉಲುಹು ಗೆಡದಗ್ಗಳಿಕೆ ಯೆಂಬೀ ।
ಬಲುಹು ಗದುಗಿನ ವೀರನಾರಾಯಣನ ಕಿಂಕರಗೆ ॥

[ಕನ್ನಡ ಭಾರತ, ಪೀಠಿಕೆ.]

ಈ ಪದ್ಯದಲ್ಲಿ ನಿರೂಪಿತವಾಗಿರುವ ಗುಣಗಳು ಎಲ್ಲ ಮಹಾಕವಿಗಳಲ್ಲಿಯೂ ಇರಬೇಕಾದವುಗಳೇ ಆಗಿರುವುವು.

ಕವಿಯು ತನ್ನ ಕಾವ್ಯವನ್ನು ವಿಖ್ಯಾತವನ್ನಾಗಿ ಮಾಡಬೇಕಾದರೆ, ಉತ್ತಮವಾದ ಕಥಾವಸ್ತು, ಮನೋಹರವಾದ ವರ್ಣನೆಗಳು, ಹೃದಯಂಗಮವಾದ ಸಂವಾದಗಳು, ಎಂದೂ ಕೇಳದ ಯುಕ್ತಿರಾಶಿಗಳು, ಸುಶ್ರಾವ್ಯವಾದ ಶೈಲಿ, ವಿಪುಲವಾದ ಶಬ್ದಾರ್ಥಗಳು ಮತ್ತು ರಸಭಾವಗಳು ಎಂಬೀಕಾವ್ಯ ಸಾಮಗ್ರಿಗಳನ್ನು ಸಂಗ್ರಹಿಸಿರಬೇಕಾಗುವುದು.

ಕವಿಗೆ ಅತ್ಯಂತ ಆಪ್ತರಾದ ರಸಿಕರು ಸುಲಲಿತವಾದ ಶೈಲಿಯುಳ್ಳ ಕಾವ್ಯವನ್ನು ಬಹಳವಾಗಿ ಪ್ರೀತಿಸುವರಾದುದರಿಂದ ಕಬ್ಬಿಗನು ಅವರ ಇಷ್ಟದಂತೆ ನಡೆಯಬೇಕಾಗುವುದು. ಇಕ್ಕೇರಿಯ ಸುಕವಿ ತಿರುಮಲಭಟ್ಟನು ಹೇಳುವಂತೆ—

ವಾ॥ ಷ॥ ಒಳಗಮೃತದಂತೆ ರಸತಿರುಳಿರ್ದೊಡಂ ಶುಕಾ ।
ವಳಿ ಹೊರಗೆ ಬಿರುಸಾದ ಕರಟವುಂ ಸಿಂಪೆಯುಂ ।
ಬಳಸಿರ್ದ ತೆಂಗಾಯ ಮುಟ್ಟಲೊಲ್ಲದೆ ಮಿಕ್ಕಫಲತತಿಯ
ನರಸುವಂತೆ ॥

ವಿಳಸದರ್ಥಗಳಿರ್ದೊಡಂ ಕಠಿಣವಾದ ಕೃತಿ ।
ಗಳ ನೊಲ್ಲರತಿರಸಿಕರದರಿಂದ ಮೃದುಪದಂ ।
ಗಳನಿಟ್ಟು ರುಜುಮಾರ್ಗದಿಂ ಸಕಲರರಿವಂತೆ ವಿರಚಿಸುವೆನೀ
ಕೃತಿಯನು ॥೧೬॥

[ಕರ್ಣಾಟಕ ಶಿವಗೀತೆ, ಪೀ. ಸಂ]

ಕಠಿಣವಾದ ಕಾವ್ಯಗಳು ರಸಿಕಮಾನ್ಯವಾದುವುಗಳಲ್ಲವಾದುದ ರಿಂದಲೇ ಮಹಾಕವಿ ಹರಿಹರ ದೇವನು

ಕಂ॥ ಓದಿದೊಡೆ ಕಲ್ಲಮಾಲೆಯ ।
ನಾದಂ ಕಬ್ಬೊಣ್ಣಕಡಲೆ ವಾದಿಸೆ ರಸಮಂ ।
ಸೋದಿಸೆಯುರ್ಕಿನ ಪುಡಿಯೆನಿ ॥
ಪಾದುಷ್ಕವಿತೆಗಳ ನೆಣಿಸಲೇಕೀಕೃತಿಯೊಳ್ ॥೩೬॥

[ಗಿರಿಜಾ ಕಲ್ಯಾಣ, ಪೀಠಿಕೆ]

ಎಂಬುದಾಗಿ ಹೇಳಿ ಕಠಿಣ ಕಾವ್ಯಗಳನ್ನು ಹೀಯಾಳಿಸಿರುವನು.

ಕವಿಯ ಮುಖ್ಯೋದ್ದೇಶವು ಜನಾಂಗವನ್ನು ಹುರಿದುಂಬಿಸುವುದು, ರಸಿಕರನ್ನು ಆನಂದಗೊಳಿಸುವುದು, ಸಮಾಜವನ್ನು ಸುಸಂಪನ್ನವನ್ನಾಗಿ ಮಾಡುವದು. ರಸಿಕರು ತನ್ನ ಕಾವ್ಯದಿಂದ ಆನಂದಪಟ್ಟರೆಂದರೆ ಕವಿಗೆ ಬಹಳ ಸಡಗರ. ಆತನು ತನ್ನ ಶ್ರಮವು ಸಫಲವಾಯಿತೆಂದು ಭಾವಿಸು ವನು. ಈ ಮಾತನ್ನು ನಾವು ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಯ

ಕಂ ॥ ಅರಸರ್ಕುಡುವ ಕಾರ್ತ ।
ಸ್ವರದ ಕಂಕಣ ಮಿರ್ಕೆ ಸರಸರಾಸ್ವಾದಿಸಿ ಕಾ ।
ವ್ಯರಸವ ಸೂಸುವ ಸುಖಭಾ ॥
ಸ್ಪದಾಶ್ರು ಕಂ ಕಣನೆ ಕವಿಗೆ ಕಂಕಣಮಲ್ತೇ ॥೨೨॥

[ದಮಯಂತೀಸ್ವಯಂವರಂ, ಪೀಠಿಕೆ]

ಎಂಬೀ ಪದ್ಯದಿಂದ ತಿಳಿಯಬಹುದು.

ಕವಿಯ ವಿಚಾರವನ್ನು ಕುರಿತ ಈ ಲೇಖನದಲ್ಲಿ ನಾವು ಕವಿಗೆ ಅತ್ಯಂತ ಪ್ರಿಯತಮರಾದ ರಸಿಕರನ್ನು ಮರೆಯಲಾಗದು. ಒಹುಃಪಾತಿ ನಿಂದೇನು ? ರಸಿಕರಿಲ್ಲದಿದ್ದರೆ ಕವಿಯು ಬೆಳಕಿಗೆ ಬರಲಾರನು. ಅವನ ಶಕ್ತಿಯು ಲೋಕಕ್ಕೆ ತಿಳಿಯಲಾರದು. ಆದುದರಿಂದ ಸಾಹಿತ್ಯರಾಜ್ಯದಲ್ಲಿ ಕವಿ, ಪಂಡಿತರಂತೆಯೇ ರಸಿಕರು ಅತ್ಯಂತ ಮುಖ್ಯರು. ಮತ್ತೊಬ್ಬನ ಮಾತಿನಲ್ಲಾಗಲಿ ಕೃತಿಯಲ್ಲಾಗಲಿ ಇಂಬಕಃದಾದ ರಸಭಾವಗಳನ್ನು ಅರಿತು ಆನಂದಿಸುವ ಶಕ್ತಿಯುಳ್ಳವನನ್ನು ರಸಿಕನೆಂದು ಹೇಳಬಹುದು.

ರಸಿಕನು ಕೆಲವುವೇಳೆ ಕವಿಗೆ ಸಮಾನವಾದ ಭಾವವುಳ್ಳವನಾಗಿದ್ದರೆ, ಅಂದರೆ ಕವಿಯ ಹೃದ್ಗತಾಭಿಪ್ರಾಯವನ್ನೂ, ಇಂಗಿತವನ್ನೂ ತಿಳಿಯುವಷ್ಟು ಚತುರನಾದರೆ, ಆಗ ಅವನು ಸಹೃದಯನೆಂದು ಸಂಬೋಧಿಸಲ್ಪಡುವನು. ಸುಹೃದಯನೂ, ಸಹೃದಯನೂ ಆದ ರಸಿಕನು ಕವಿಗೆ ಬಹಳ ಪ್ರಿಯತಮನು. "ಕವಿಯ ಯೋಗ್ಯತಾನಿರ್ಣಯಕ್ಕೆ ಅಂತಹರು ಅರ್ಹರು'' ಎಂದು ಕವಿಕುಲಗುರುವಾದ ಕಾಳಿದಾಸನು ಹೇಳಿರುವನು

ಆಪರಿತೋಷಾದ್ವಿದುಷಾಂ ನ ಸಾಧುಮನ್ಯೇ ಪ್ರಯೋಗವಿಜ್ಞಾನಮ್ ।
ಬಲವದಪಿ ಶಿಕ್ಷಿತಾನಾಂ ಆತ್ಮನ್ಯಪ್ರತ್ಯಯಂ ಚೇತಃ ॥

[ಶಾಕುಂತಲ ನಾಟಕಮ್]

ಮಹಾಕಾವ್ಯಗಳಲ್ಲಿ ರಸಾಸ್ವಾದನ ಮಾಡತಕ್ಕ ಶಕ್ತಿಯು ಎಲ್ಲರಿಗೂ ಬರುವುದಿಲ್ಲ. ಅದಕ್ಕೆ ರಸಿಕನೇ ತಕ್ಕವನು ಎಂದು ಷಡಕ್ಷರಕವಿಯು ಮುಂದಿನ ಪದ್ಯದಲ್ಲಿ ಹೇಳಿರುವನು.

ಕಂದ ॥ ರಸವತ್ಕಾವ್ಯದ ರಸಮಂ ।
ರಸಿಕರ್ಕಳ್ ಬಲ್ಲತೆರದಿನರಿವರೆ ಗಾಂಪರ್? ॥
ಪೊಸಜೊನ್ನದೊಳನಿದರಿವುವೆ ।
ಮಿಸುಪ ಚಕೋರಂಗಳಂತಿರುಳಿಟ ಖಗಂಗಳ್ ॥೩೪॥

[ಶಬರಶಂಕರ ವಿಳಾಸ, ಪೀಠಿಕೆ]

ಮಹಾಕವಿಯ ಕಾವ್ಯದಲ್ಲಿ ನ್ಯೂನತೆಯೇ ಇಲ್ಲವೆಂದೂ ಅದನ್ನು ವಾಚಕನು ಹೇಳಲೇಕೂಡದೆಂದೂ ನಾವು ತಿಳಿಯಬಾರದು. ಮಹಾಕವಿಯೂ ಮನುಜನಾದುದರಿಂದ ಅವನ ಕೃತಿಯಲ್ಲಿ ನ್ಯೂನತೆ ಇರುವುದು ಸ್ವಾಭಾವಿಕವಾದುದು. ಏಕೆಂದರೆ 'ನಡೆದುದೆ ಮಾರ್ಗಂ' ಇದ್ದರೂ ಮಹಾಕವಿಯ ಕುಂದು ಅಷ್ಟುಗಣನೀಯವಾದುದಾಗಿರುವುದಿಲ್ಲ.

ಶ್ರೀ ಬಸವಪ್ಪ ಶಾಸ್ತ್ರಿಗಳು ಹೇಳುವಂತೆ ಪ್ರತಿಯೊಂದು ಕಾವ್ಯದಲ್ಲಿಯೂ

ಇರ್ದಪುದೇಂ ನಿರ್ಗುಣಮುಂ ।
ನಿರ್ದೋಷಮು ಮೆನಿಪ ವಸ್ತುಲೋಕದೊಳದರಿಂ ॥
ಪೊರ್ದುವುದು ಗುಣವನೊಲವಿಂ ।
ತಿರ್ದುವುದಿರೆ ದೋಷ ಮಮಲ ಮತಿಗಳ್ ಕೃತಿಯೊಳ್ ॥

[ದಮಯಂತೀ ಸ್ವಯಂವರಂ, ಪೀಠಿಕೆ]

ಗುಣದೋಷಗಳೆರಡೂ ಇರುವುವು. ಸುಗುಣಿಯಾದವನು

ದೂರೀಕರಿಸುತೆ ದೋಷವ ।
ಸಾರಜ್ಞಂಗ್ರಹಿಪನೊಲ್ದುಗುಣಮಂ ಕೃತಿಯೊಳ್ ॥
ನೀರಂ ಬೇರ್ಪಡಿಸುತ್ತಂ ।
ಕ್ಷೀರಮನಾರಾಜಹಂಸನಾಸ್ವಾದಿಪ ವೊಲ್ ॥

[ದ. ಸ್ವ. ಪೀ. ಪ. ೨೪]

ಹಂಸವು ನೀರನ್ನಳಿದು ಕ್ಷೀರವನ್ನು ಸ್ವೀಕರಿಸುವಂತೆ ಕಾವ್ಯದಲ್ಲಿ ಗುಣವನ್ನು ಮಾತ್ರ ಗ್ರಹಿಸಬೇಕಾಗಿರುವುದು. ಬಲ್ಲವರಲ್ಲಿಯೂ ಬಹಳ ವಿಧಗಳುಂಟು. ಸುಕವಿ ತಿರುಮಲಭಟ್ಟನು ಹೇಳುವಂತೆ

ವಾ॥ ಷ॥ ಕಂಡಸಕ್ಕರೆಯ ಬಾಯೊಳಿಕ್ಕಲದ ।
ನುಂಡು ಸವಿಯರಿಯದರು ಕೆಲರು, ಕೆಲರರಿತೊಡಂ,।
ಕೊಂಡಾಡರು ಅಕಟಕೇಣದಿ ಕೆಲರಿದುಪ್ಪೆಂದು ಮಂಡೆಯಂಕೊಡಹುತಿಹರು॥
ಮಂಡಲದೊಳಿಂತಪ್ಪ ವನುಜರುಂಟು ಎನಗವರ
ಕೊಂಡೇನು.........................................

................................................ಕರ್ಣಾಟಕ ಶಿವಗೀತೆ, ಪೀಠಿಕೆ

ಸಕ್ಕರೆಯ ರುಚಿಯನರಿಯದವರೂ, ಅರಿತರೂ ಹೇಳುವಷ್ಟು ಔದಾರ್ಯವಿಲ್ಲದವರೂ, ಸಕ್ಕರೆಯನ್ನು ಉಪ್ಪೆಂದು ಸಾಧಿಸುವಷ್ಟು ದೌರ್ಜನ್ಯವುಳ್ಳವರೂ ಲೋಕದಲ್ಲಿರುವರು. ಇಂತಹವರಿಂದ ಕವಿಲೋಕಕ್ಕೆ ಯಾವ ಫಲವೂ ಆಗುವುದಿಲ್ಲ. ಆದುದರಿಂದಲೇ ತಿರುಮಲಭಟ್ಟನು "ಅವರ ಕೊಂಡೇನು'' ಎಂದು ತಿರಸ್ಕಾರ ಬುದ್ಧಿಯಿಂದ ಗುಣಗ್ರಾಹಿಗಳಲ್ಲದವರನ್ನು ಕಡೆಗಣಿಸಿರುವನು.

ಗುಣವಂತರಾದ ರಸಿಕರಿಲ್ಲದ ಸ್ಥಳದಲ್ಲಿ ಕವಿಗಳಿಗೆ ಪ್ರಾಶಸ್ತ್ಯವು ದೊರೆಯುವುದಿಲ್ಲ. ಆದುದರಿಂದಲೇ ಕವಿಗಳು ರಸಿಕರನ್ನು ಬಹುವಾಗಿ ಪ್ರೀತಿಸುವುದು. ವಿದ್ಯಾಭಿಮಾನಿಯಾದ ಭೋಜರಾಜನಮುಂದೆ ರಸಿಕಶಿಖಾಮಣಿಯಾದ ಸುಕವಿಯೊಬ್ಬನು "ಗುಣಿನ ಇವ ವಿದೇಶೇ ದೈನ್ಯಮಾಯಾಂತಿ ಭೃಂಗಾಃ" ಎಂದು ಹೇಳಿರುವುದು ಯುಕ್ತವಾಗಿಯೇ ಇದೆ. ಪುಷ್ಪಗಳಿಲ್ಲದ ಪ್ರದೇಶದಲ್ಲಿ ದುಂಬಿಗಳಿಗೆ ಹೇಗೆ ಕೆಲಸವಿಲ್ಲವೋ ಹಾಗೆಯೇ ರಸಿಕರಿಲ್ಲದ ಸ್ಥಳದಲ್ಲಿ ಕವಿಗೂ ಆಶ್ರಯವಿಲ್ಲವಾಗುವುದು. ಈ ಅರ್ಥದಲ್ಲಿ ಕವಿ ರಾಘವಾಂಕನು ಹೇಳಿರುವುದನ್ನು ಕೇಳೋಣ

ವಾ॥ಷ॥ಕವಿಯಧಿಕನಿರ್ದೊಡೇಂ ಕೇಳ್ವರಿಲ್ಲದೊಡೆ, ಗಾ।
ನವಿನೋದಿ ಇರ್ದೊಡೇಂ ಜಾಣರಿಲ್ಲದೊಡೆ, ಜಾ।
ತಿ ವಿದಗ್ಧೆಯಿರ್ದೊಡೇಂ ರಸಿಕರಿಲ್ಲದೊಡೆ, ಪೊಸಪೂಮಾಲೆಯಿ
ದ್ದೊಡೇನು ॥

ತವೆಮುಡಿವರಿಲ್ಲದೊಡೆ ನಾನಾಕಳಾಪ್ರೌಢ।
ನಿವಹವಿರ್ದೇನು ಅಧಿಕ ದಾತಾರರಿಲ್ಲದೊಡಿಂ।
ತಿವನೈದೆ ಬಲ್ಲವರಪೂರ್ವಮೇಣಾಳ್ದೊಡವ ದೇವನಲ್ಲದೆ ಮನುಜನೇ
॥ ೨೫ ॥

ರಾಘವಾಂಕನು ರಸಿಕರನ್ನೂ, ಗುಣಗ್ರಾಹಿಗಳನ್ನೂ ದೈವಾಂಶವುಳ್ಳವರೆಂದೇ ಕರೆದಿರುವನು. ಕಲಾವಿದರಾದ ಕವಿಗಳು ರಸಿಕರನ್ನು ಜಾಣ, ಪ್ರೌಢ, ವಿಬುಧ ಎಂಬ ಅಭಿಧಾನಗಳಿಂದ ಕರೆದಿರುವರು.

ಅಂತಹ ಪ್ರೌಢರು ಒಪ್ಪಬೇಕಾದರೆ ಕವಿಯು ತನ್ನ ಕೃತಿಯನ್ನು ರಸವತ್ತಾಗಿಯೇ ನಿರ್ಮಿಸಬೇಕು. ಈ ವಿಷಯದಲ್ಲಿ ಹರಿಹರನು

ಕಂದ॥ ಕೇಳಲೊಡಂ ಕಿವಿ ಸವಿಯೊಳ ।
ಗಾಳದೊಡಂ ತನ್ಮನಂ ಮುಳುಂಗಲೊಡಂ ಸಾ ॥
ಖ್ಯಾಳಂಬಿ ಯೆನಿಪ್ಪಚಿತ್ತಂ ।
ಲೀಲೆಯೊಳವಗಾಹಮಿರದೊಡದು ಸತ್ಕೃತಿಯೇ ॥

[ಗಿರಿಜಾ ಕಲ್ಯಾಣ, ಪೀಠಿಕೆ]

ರಾಜಕವಿ ನೃಪತುಂಗನು—

ನುಡಿಯಂ ಚಂದದಳೊಂದಿರೆ ।
ತೊಡರ್ಚಲರಿವಾತನಾತನಿಂದಂ ಜಾಣಂ ॥
ತಡೆಯದೆ ಮಹಾರ್ಥ್ವಕೃತಿಗಳ ।
ನೊಡರಿಸ ಸಲಾರ್ಪಾತನೆಲ್ಲರಿಂದಂ ಬಲ್ಲಂ ॥

ಮಾತರಿವರ್ ಕೆಲಬರ್ಜಗ ।
ತೀತಲಗತ ಮನುಜರೊಳಗೆ ಮಾತರಿವವರೊಳ್ ॥
ನೀತಿವಿದಮರಳ ಕವಿತಾ ।
ನೀತಿಯುತರ್ಕೆಲರೆ ಪರಮ ಕವಿವೃಷಭರ್ಕಳ್ ॥
ಪಾಪಮಿದು ಪುಣ್ಯಮಿದು ಹಿತ ।
ರೂಪಮಿದಹಿತ ಪ್ರಕಾರಮಿದು ದುಃ ॥
ಖೋ ಪಾತ್ತಮಿದೆಂ ದರಿಪುಗು ।
ಮಾ ಪರಮ ಕವಿಪ್ರವರರಾ ಕಾವ್ಯಂಗಳ್ ॥

ಎಂದು ಹೇಳಿದ್ದಾನೆ.

[ಕವಿರಾಜ ಮಾರ್ಗ]

ಮೇಲಿನ ಮೂರು ಪದ್ಯಗಳಲ್ಲಿಯೂ ನೃಪತುಂಗನು ಜಾಣರ ಹಾಗೂ ಕವಿಗಳ ವಿಷಯವನ್ನು ಬಹು ಪ್ರೌಢವಾಗಿ ಹೇಳಿರುವನು. ಇಂತಹ ಕಾವ್ಯಗಳನ್ನು ಓದುವುದರಿಂದ ಜನರಿಗೆ, ಪಾಪ, ಪುಣ್ಯ, ಸುಖ, ದುಃಖಗಳ ಜ್ಞಾನವಾಗುವುದೆಂದು ಬಹಳ ಚೆನ್ನಾಗಿ ಹೇಳಿರುವನು.

ಮಹಾಕವಿ ನಿರ್ಮಿತವಾದ ಸತ್ಕಾವ್ಯಗಳನ್ನು ಓದುವುದರಿಂದ ಪಾಠ ಕರಿಗೆ ಬಹಳ ಪ್ರಯೋಜನವುಂಟು. ಕಾವ್ಯಗಳು ಹೃದಯಂಗಮವಾದ ರೀತಿಯಿಂದ ಲೋಕಾನುಭವವನ್ನೂ ಪ್ರಕೃತಿಯ ಮರ್ಮವನ್ನೂ ಪಾಪಪುಣ್ಯ ಭೇದಗಳನ್ನೂ ಮಾನವನ ಲೋಕಯಾತ್ರೆಗೆ ಅವಶ್ಯವಾದ ಲೋಕ ನೀತಿಗಳನ್ನೂ ಹೇಳಿ ವಾಚಕರ ಮನಸ್ಸನ್ನೂ ಬುದ್ಧಿಯನ್ನೂ ಸಂಸ್ಕ ರಿಸಲು ಸಹಾಯವಾಗುವುವು.

ಶ್ರುತಿ ಸ್ಮೃತಿಗಳು ಪುರಾಣಗಳು ಈ ವಿಷಯವನ್ನು ಲೋಕಕ್ಕೆ ಬೋಧೆ ಮಾಡುವುವು. ಆದರೆ, ವೇದವು ಗುರೂಕ್ತಿ ಯೆಂತಲೂ, ಪುರಾಣವು ಮಿತ್ರೋಕ್ತಿ ಎಂತಲೂ, ಇರುವುದರಿಂದ ಸುಂದರ ಸುಕು ಮಾರಿಯ ಸ್ನಿಗ್ಧಮಧುರ ವಾಕ್ಯಗಳಂತೆ ಆಪ್ಯಾಯಮಾನವಾಗಿರುವ ಸತ್ಕಾವ್ಯಗಳು ಲೋಕಕ್ಕೆ ಕಾಂತಾಸಮ್ಮಿತದಂತೆ ಅಪೇಕ್ಷಣೀಯವಾಗು ವುದು ಅಸ್ವಾಭಾವಿಕವಲ್ಲ.

ಕಾಳಿದಾಸಾದಿ ರಸಿಕಕವಿಗಳೂ ಋಷಿಕವಿಗಳೂ ಪುರಾಣೇತಿಹಾಸ ಗಳ ಕತೆಗಳನ್ನೇ ತೆಗೆದುಕೊಂಡು, ಅವಕ್ಕೆ ನವಚೈತನ್ಯವನ್ನು ಕೊಟ್ಟು, ಆ ಕಥೆಗಳನ್ನೇ ಸತ್ಕಾವ್ಯಗಳನ್ನಾಗಿ ಮಾಡಿರುವರು. ಚೆನ್ನಾಗಿ ವಿಚಾರಿಸಿ ದರೆ ಈ ಪ್ರಪಂಚದಲ್ಲಿ ತ್ರಿವಿಧಾನಂದಗಳಿರುವುವು. ಅವುಗಳನ್ನು (೧) ಬ್ರಹ್ಮಾನಂದ (೨) ಕಾವ್ಯಾನಂದ (೩) ಕಾಂತಾನಂದ ಎಂಬುದಾಗಿ ಜ್ಞಾನಿಗಳು ಹೇಳಿರುವರು. ಇವುಗಳಲ್ಲಿ ಮೊದಲನೆ ಯದು ಅತ್ಯಂತ ಮಹತ್ವವಾದುದಾದರೂ ದುರ್ಲಭವಾದುದು. ಎರಡನೆ ಯದು ಜನರೆಲ್ಲರಿಗೂ ಸಾಧ್ಯವಾದುದಾಗಿದೆ. ಅದನ್ನು ಸಾಧ್ಯಮಾಡಿ ಕೊಂಡು ಸುಖಿಸಿದ ಅದೃಷ್ಟವಂತರು ಬಹಳವಾಗಿಲ್ಲದಿದ್ದರೂ ವಿರಳವಾಗಿ ರುವರು. ಮೂರನೆಯದು ಸ್ವಲ್ಪ ಹೆಚ್ಚು ಕಡಿಮೆಯಾಗಿ ಜನರ ಅನು ಭವಕ್ಕೆ ಗೋಚರವಾಗುವುದು.

ಆದುದರಿಂದ ಬ್ರಹ್ಮಾನಂದಕ್ಕೆ ಎರಡನೆಯದಾದ ಅಥವಾ ಪ್ರಪಂಚದ ಸುಖಾನಂದದಲ್ಲಿ ಉತ್ತಮವಾದ ಕಾವ್ಯಾನಂದವನ್ನು ಪ್ರತಿಯೊಬ್ಬ

ನಾಗರಿಕನೂ ಘೊಂದಲಿಚ್ಛಿಸಿ ಮಹಾಕವಿಗಳ ಉದ್ದೇಶವನ್ನು ಸಾರ್ಥಕ ಪಡಿಸಲಿ. ಸಾಧ್ಯವಾದರೆ ಗಮಕಿಗಳ ನೆರವು ಪಡೆಯಲಿ.

ಪ್ರಕೃತಿ ಸೌಂದರ್ಯಕ್ಕಿಂತಲೂ ಕಾವ್ಯಸೌಂದರ್ಯವು ಮಿಗಿಲಾದುದು. ಈ ವಿಚಿತ್ರ ಸೃಷ್ಟಿಯನ್ನು ರಸಿಕರಿರಲಿ ಬ್ರಹ್ಮದೇವನಾದರೂ ಕೊಂಡಾಡ ಬೇಕಾಗುವುದು. ಪ್ರಕೃತಿಯಲ್ಲಿ ನಾವು ಕಾಣುವ ಸೂರ್ಯೋದಯ-ಚಂದ್ರೋದಯಗಳೂ, ಅಸ್ತಮಯಗಳೂ, ನಕ್ಷತ್ರಗಳೂ, ಆಕಾಶವೂ ಮೇಘಮಾಲೆಯೂ, ಮಂದಮಾರುತನೂ, ಮೃಗಪಕ್ಷಿ ವೃಂದವೂ ನಮಗೆ ಕಾವ್ಯದಲ್ಲಿ ಇನ್ನೂ ಹೆಚ್ಚು ಸುಂದರವಾಗಿಯೂ ಆಶ್ಚರ್ಯಕರವಾಗಿಯೂ ವಿನೂತವಾಗಿಯೂ ಇರುವುವು.

ಹುಲಿ, ಸಿಂಹ, ಸರ್ಪ, ಅಗ್ನಿ ಮುಂತಾದ ಭಯಪ್ರದ ವಿಷಯಗಳೂ, ಯುದ್ಧ, ಕ್ಷಾಮ, ಜಲಪ್ರಳಯ ಮುಂತಾದ ಅದ್ಭುತ ವಿಷಯಗಳೂ ಕಾವ್ಯಗಳಲ್ಲಿ ನಮಗೆ ಹೊಸ ಬಗೆಯಾಗಿ ಕಂಡು, ತಮ್ಮ ಸಹಜ ಗುಣ ದೊಡನೆ ಆನಂದಾಶ್ಚರ್ಯಗಳನ್ನುಂಟುಮಾಡುವುವು ಜರೆ, ಮರಣ, ದುಃಖ ಮೊದಲಾದ ಅಪ್ರಿಯವಿಷಯಗಳನ್ನೂ ಕಾವ್ಯದಲ್ಲಿ ನಾವು ಸಂತೋಷ ವಾಗಿ ಓದಬಹುದು. ಆದುದರಿಂದಲೇ ನಾವು ಕವಿಗಳನ್ನು ಅಘಟ ನಾಘಟನಶಕ್ತರೆಂದು ಹೊಗಳುವುದು. ನವೀನಸೃಷ್ಟಿ ವೈಚಿತ್ರ್ಯವುಳ್ಳ ಕವೀಂದ್ರನನ್ನೂ ನೇಮಿಚಂದ್ರನು: "ಈ ಚಮತ್ಕಾರಮಂ ಕವಿಗಳ್ ಬಲ್ಲವೊಲನ್ಯರೆತ್ತರಿವರಂತಾ ಬ್ರಹ್ಮನುಂ ಬಲ್ಲನೇ" ಎಂದು ಹೇಳಿರುವುದು ಸಮಂಜಸ ವಾಗಿರುವುದು.

ಪೂರ್ವದಿಂದಲೂ ನಮ್ಮ ರಾಜಮಹಾರಾಜರೂ ಶ್ರೀಮಂತರೂ ಕವಿಗಳನ್ನು ಸಂರಕ್ಷಿಸಿಕೊಂಡು ಬಂದಿರುವರೆಂಬುದು ಸರ್ವಶ್ರುತವಾಗಿದೆ.

ಭಾರತವು ಸ್ವತಂತ್ರವಾದಮೇಲೆ ನಮ್ಮ ನಾಡಿನ ಕವಿಗಳಿಗೆ ರಾಷ್ಟ್ರ ಸರ್ಕಾರ, ರಾಜ್ಯಸರ್ಕಾರ, ಅಕ್ಯಾಡಮಿ, ಸಾಹಿತ್ಯ ಪರಿಷತ್ತುಗಳು ಬಗೆಬಗೆ ಯಿಂದ ಗೌರವ ಸೀಡುತ್ತಿವೆ. ವಿಶ್ವಕವಿ ಠಾಕೂರರ ಶತಮಾನೋತ್ಸವವು ಸಮಗ್ರ ಭಾರತದಲ್ಲಿ ನಡೆಯುತ್ತಿದೆ. ದೇಶೀಯರ ಸ್ವಾತಂತ್ರ್ಯ ಪ್ರೇಮವು, ಸ್ವಭಾಷೆ, ಸ್ವಸಂಸ್ಕೃತಿಗಳ ಕಡೆಗೆ ತಿರುಗಿರುವುದಕ್ಕೆ ಇದು ಸಾಕ್ಷಿಯಾಗಿದೆ.

# ' ಕೀರ್ತನಕಾರರೂ ಜನಜೀವನವೂ '

ಈ ಲೇಖನದ ಮೊದಲು ' ಕೀರ್ತನ ' ಶಬ್ದದ ಪರಿಚಯವು ಅವಶ್ಯವಾಗಿದೆ. ನವವಿಧ ಭಕ್ತಿಗಳಲ್ಲಿ ''ಕೀರ್ತನಂ'' ಎಂಬ ಒಂದು ಶಬ್ದವಿದೆ. ಇದಕ್ಕೂ ನಾವು ಹೇಳ ಹೊರಟ "ಕೀರ್ತನ" ಶಬ್ದಕ್ಕೂ ಸ್ವಲ್ಪ ವ್ಯತ್ಯಾಸವಿದೆ.

''ಶ್ರವಣಂ ಕೀರ್ತನಂ ಶಂಭೋ ಸ್ಮರಣಂ ಪಾದಸೇವನಂ । ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ'' ಎಂಬ ಈ ಶ್ಲೋಕದಲ್ಲಿ ಕಾಣುವ ಕೀರ್ತನ ಶಬ್ದವು ಭಕ್ತನು ಪರಮಾತ್ಮನ ಗುಣವರ್ಣನವನ್ನು ಹಾಡುತ್ತಾ ಆನಂದಸಾಗರದಲ್ಲಿ ತೇಲಿಮುಣುಗುವುದು ಎಂಬರ್ಥದಲ್ಲಿ ಉಪಯೋಗಿಸಲ್ಪಡುವುದು. ಆದರೆ ನಾವು ಉಪಯೋಗಿಸುವ ಕೀರ್ತನ ಶಬ್ದವು ಇದಕ್ಕಿಂತಲೂ ಹೆಚ್ಚು ವ್ಯಾಪ್ತಿಯುಳ್ಳದಾಗಿರುವುದು.

ಯಾವನಾದರೂ ಒಬ್ಬ ಭಕ್ತನು ಸಾಧು ತುಕಾರಾಮನಂತೆ ಅಥವಾ ಶ್ರೀ ಷಡಕ್ಷರ ಯೋಗಿಯಂತೆ ಪರಮೇಶ್ವರನಲ್ಲಿ ತನಗಿರುವ ನಿಸರ್ಗ ಪ್ರೇಮದಿಂದ ಹೊರಸೂಸಿದ ಪ್ರಾಸಾದಿಕ ವಾಣಿಯಿಂದ ಹಾಡುತ್ತಾ ತನ್ನಷ್ಟಕ್ಕೆ ತಾನೇ ಕುಣಿದಾಡಬಹುದು. ಅಂತಹ ವ್ಯಕ್ತಿಗಳನ್ನು ಕೀರ್ತನಕಾರರೆಂದು ಸಂಬೋಧಿಸದೆ ಯೋಗಿಗಳೆಂದಾಗಲಿ ಸಾಧುಗಳೆಂದಾಗಲಿ ಕರೆಯಬಹುದು. ಇವರು ಜಗತ್ತಿನ ಸ್ಥಿತಿಗತಿಗಳನ್ನು ಮೀರಿರುವ ಅತಿವರ್ಣಾಶ್ರಮಿಗಳಾಗಿರುವ ಆರೂಢರು.

ಈಗ ನಾವು ಹೇಳ ಹೊರಟ ಕೀರ್ತನಕಾರರು ಇಂತಹವರಿಂದ ಸ್ವಲ್ಪ ಮಟ್ಟಿಗೆ ಭಿನ್ನರಾದವರು. ಯಾವಾತನು ತನ್ನ ಹೃದಯದಲ್ಲಿ ಹೊರಹೊರಟ ರಾಗಾನಂದವನ್ನು ತಾನೊಬ್ಬನೇ ಅನುಭವಿಸದೆ ತನ್ನ ಸಹೋದರ ವರ್ಗಕ್ಕೂ ಹಂಚಬೇಕೆಂಬ ಔತ್ಸುಕ್ಯದಿಂದ ಹೊರಟು ನಿಜವಾಗಿಯೂ ತನ್ನ ಹೆಸರನ್ನು ಅನ್ವರ್ಥಮಾಡಿಕೊಳ್ಳುವ ನಡೆನುಡಿಗಳುಳ್ಳವನಾಗಿ ವರ್ತಿಸುವನೋ ಅವನು ಈಗ ನಮ್ಮ ಲೇಖನಕ್ಕೆ ವಿಷಯನಾದ ನಿಜವಾದ ಜನಸೇವಕ ' ಕೀರ್ತನ ಕಾರ 'ನಾಗುವನು.

ಕೀರ್ತನವು ನವವಿಧ ಭಕ್ತಿಗಳಲ್ಲಿ ದ್ವಿತೀಯ ಸ್ಥಾನವನ್ನು ಹೊಂದಿರುವುದು. ಪ್ರಥಮ ತರಗತಿಯಾದ ಶ್ರವಣದಲ್ಲಿ ಉತ್ತೀರ್ಣನಾದವನು ದ್ವಿತೀಯ ಸ್ಥಾನವಾದಕೀರ್ತನಕ್ಕೆ ಅರ್ಹನಾಗುವನು. ಯಾವನಾದರೆ ಮೊದಲು ಭಕ್ತಿಯಿಂದ ಶ್ರವಣಮಾಡಲಾರನೋ ಅವನು ಕೀರ್ತನ ಭಕ್ತಿಗೆ ಅರ್ಹನಾಗಲಾರನು. ದ್ವಿತೀಯ ಸ್ಥಾನವಾದ ಕೀರ್ತನ ತರಗತಿಯಲ್ಲಿ ತೇರ್ಗಡೆಯಾಗಿ ಯೋಗ್ಯತಾ ಪತ್ರವನ್ನು ಪಡೆದಾತನೇ ಅಥವಾ ಉಪದೇಶಕ್ಕೆ ಅರ್ಹನಾದವನೇ ನಿಜವಾದ ಕೀರ್ತನಕಾರನು. ಕೀರ್ತನ ಭಕ್ತನು ತನಗಾದ ಅನುಭವವನ್ನು ಶ್ರವಣಭಕ್ತರ ಮೇಲೆ ಪರಿಣಾಮವಾಗುವಂತೆ ಉಪದೇಶಿಸಲು ಮಾಡಿದ ಸಂಕಲ್ಪದ ಪರಿಣಾಮವೇ ಕೀರ್ತನಕಾರ್ಯವು. ಕಥಾ ಕಾಲಕ್ಷೇಪವು.

ಯಾವ ಕೀರ್ತನಕಾರನು ಅಥವಾ ಭಾಗವತನು ತಾನು ಹೇಳುವ ಕಥೆಯ ಮಧ್ಯೆ ಮಧ್ಯೆ ಸರ್ವೇಶ್ವರನ ಪವಿತ್ರ ಗುಣಗಳನ್ನು ಪ್ರೇಮದಿಂದ ಹಾಡಿ ತನ್ನ ನೇತ್ರಗಳಿಂದ ಆನಂದ ಬಾಷ್ಪಗಳನ್ನು ಸುರಿಸಿ ಶ್ರೋತೃವರ್ಗದ ಕಣ್ಣುಗಳಿಂದಲೂ ಆನಂದೋದಕವನ್ನು ಕರೆಸಲಾರನೋ ಅವನು ನಿಜವಾದ ಕೀರ್ತನ ಭಕ್ತನೆಂದು ಹೇಳಲಾಗುವುದಿಲ್ಲ. ಇದು ಮಾಡಬೇಕೆಂದು ಮಾಡಿದರೆ ಬರದು. ದೈವಭಕ್ತಿಯು ಅವನ ನಿಸರ್ಗಗುಣವಾಗಿರಬೇಕು. ಅವನಲ್ಲಿ ನಿರ್ಮಲಾಂತಃಕರಣವೂ ನಿಷ್ಕಾಮ ಬುದ್ಧಿಯೂ ಇರಬೇಕು. ಚಂದ್ರನಿಗೆ ಚಂದ್ರಕಾಂತ ಕರಗುವಂತೆ ಅವನ ಮನಸ್ಸಿನ ದೇವರಿಗೂ ಎರಗಬೇಕು.

"ಕೀರ್ತನಕಾರ" ಎಂಬ ಮಾತು ಮಹಾರಾಷ್ಟ್ರ ದೇಶದಲ್ಲಿ ಹೆಚ್ಚು ಬಳಕೆಯಲ್ಲಿರುವುದು. ಇತ್ತೀಚಿಗೆ ಕನ್ನಡ ನಾಡಿನಲ್ಲಿಯೂ ಈ ಹೆಸರು ರೂಢಿಗೆ ಬಂದಿತು. ನಮ್ಮ ದೇಶದಲ್ಲಿ ಇಂತಹ ಧರ್ಮ ಬೋಧಕರನ್ನು ಹರಿದಾಸರು, ಭಾಗವತರು, ಕೀರ್ತನ ಶಾಸ್ತ್ರಿಗಳು ಎಂದು ಕರೆಯುವ ವಾಡಿಕೆ ಇದೆ. ಈ ಕಲೆಯಲ್ಲಿ ಪರಿಣತರಾದವರು ಕೀರ್ತನ ಪ್ರವೀಣ, ಕೀರ್ತನ ಕೇಸರಿ, ಕೀರ್ತನಾಚಾರ್ಯ ಎನಿಸಿಕೊಳ್ಳುವರು.

ಮೊದಮೊದಲು ನಮ್ಮ ದೇಶದ ಧರ್ಮಬೋಧಕರು ಪುರಾಣಶ್ರವಣ, ಉಪನ್ಯಾಸ ಮೊದಲಾದ ರೀತಿಗಳಿಂದ ಜನತೆಗೆ ತತ್ವೋಪದೇಶ ಮಾಡು

ತ್ತಿದ್ದರೂ ಈಗಿನಂತೆ ತಾಳಮೇಳಗಳಿಂದ ಒಡಗೂಡಿಕೊಂಡು ಬೋಧಿಸು ತ್ತಿದ್ದಂತೆ ತೋರುವುದಿಲ್ಲ. ಈ ವಿಧದ ಏರ್ಪಾಟು ಇತ್ತೀಚಿನದು. ಕನ್ನಡ ನಾಡಿನಲ್ಲಿ ಕೀರ್ತನಗಳನ್ನು ಪ್ರಾರಂಭಿಸಿದವರು "ದಾಸಕೂಟ ದವರು." ಇವರು ಧರ್ಮ ಪ್ರಚಾರದ ಉದ್ದೇಶಕ್ಕಾಗಿಯೇ ಇದನ್ನು ಪ್ರಾರಂಭಿಸಿದರು. ಆದರೂ ಅದು ಪರ್ಯವಸಾನದಲ್ಲಿ ಬೇರೊಂದು ತೆರ ನಾಯಿತು. ಈ ದಾಸಕೂಟದ ಬೋಧಕರು ಶ್ರೀ ವಿಷ್ಣುವಿನ ದಶಾವ ತಾರದ ಕಥೆಗಳನ್ನೂ, ಸಾಧುಸಂತರ ಕಥೆಗಳನ್ನೂ ಜನರಂಜನೆಯಾಗು ವಂತೆ ಹೇಳಲು ಪ್ರಾರಂಭಿಸಿದರು. ಆದುದರಿಂದಲೇ 'ಕೀರ್ತನ' ಎಂದರೆ " ಹರಿಕಥೆ " ಎಂದು ಸಾಮಾನ್ಯವಾಗಿ ಜನ ಭಾವಿಸುವರು. ಹರಿದಾಸರಿಂದ ಹರಿಕಥೆಗಳು ಪ್ರಾರಂಭವಾದಂತೆಯೇ ಶಿವಭೃತ್ಯರಿಂದ ಶಿವಕಥೆಗಳೂ ಪಾರಂಭವಾದುವು. ಇತ್ತೀಚೆಗೆ ಜಿನಕಥೆಗಳೂ ಕ್ರಿಸ್ತನಕಥೆಗಳೂ ಇತಿಹಾಸಕಥೆಗಳೂ ನಮ್ಮ ಕಿವಿಗೆ ಅಲ್ಲಲ್ಲಿ ಬೀಳಹತ್ತಿವೆ.

ಪ್ರಪಂಚದಲ್ಲಿರುವ ಜನರೆಲ್ಲರೂ ಬಹು ಶ್ರುತರಾಗಿರುವುದಿಲ್ಲ. ಎಲ್ಲರೂ ಶಾಸ್ತ್ರಜ್ಞರಾಗಿರುವುದು ಅಸಂಭವ. ಎಲ್ಲರಿಗೂ ಒಂದೇ ವಿಧವಾದ ಅನು ಕೂಲಗಳೂ ಸಮಯಸನ್ನಿವೇಶಗಳೂ ದೊರೆಯಲಾರವು. ಆದುದರಿಂದ ಬಲಿಷ್ಠರು ದುರ್ಬಲರಿಗೂ ಬಲ್ಲಿದರಾದ ಧನಿಕರು ಬಡವರಿಗೂ ಸಹಾಯ ಮಾಡುವಂತೆ, ಪಂಡಿತರಃದವರು ತಮ್ಮ ಪಾಂಡಿತ್ಯವನ್ನು ಪಾಮರರಿಗೆ ಹಂಚಬೇಕಾಗುವುದು. ಇದೇ ನಿಜವಾದ ಜನಸೇವೆ ಜನತಾನಾಮಕ ದೇವರ ಸೇವೆ ಎಂದು ತಿಳಿಯಬೇಕು.

ಲೋಕೋಪಕಾರಿಗಳಾದ ಮಹರ್ಷಿಗಳೂ ಲೋಕಹಿತಾಕಾಂಕ್ಷಿಗಳಾದ ಕವಿಗಳೂ ತಮ್ಮ ಅಪಾರವಾದ ಅನುಭವವನ್ನು, ಪುರಾಣ, ಇತಿಹಾಸ, ಕಾವ್ಯ, ನಾಟಕ ಮೊದಲಾದ ರೂಪದಲ್ಲಿ ಬರೆದಿಟ್ಟಿರುವರು. ಆ ಮಹಾ ತ್ಮರು ಹೀಗೆ ಬರೆದುದು ತಮ್ಮ ಮುಂದಿನ ಪೀಳಿಗೆಯವರ ಮೇಲ್ಮೆಗಾಗಿಯೇ. ಹೀಗಿದ್ದರೂ ಆ ಗ್ರಂಥ ಪ್ರಣೇತೃಗಳು ತಮ್ಮ ಗ್ರಂಥಗಳನ್ನು ಯಾವಾಗಲೂ ಎಲ್ಲರಿಗೂ ಪ್ರತ್ಯಕ್ಷವಾಗಿ ಬೋಧಿಸಲು ಸಾಧ್ಯವಿಲ್ಲವಷ್ಟೆ.

ಶಾಸ್ತ್ರಜ್ಞಾನವೂ ಕಲಾಭಿಜ್ಞತೆಯೂ ರಸಿಕತೆಯೂ ಜನಜೀವನದ ಜೀವಾಳವನ್ನು ಬಲಪಡಿಸುವುವು. ಪುರಾಣೇತಿಹಾಸವನ್ನು ತಿಳಿದ ಹೊರತು ಜನರಿಗೆ ಮನೋವೈಶಾಲ್ಯವೂ ಚಿತ್ತಶಾಂತಿಯೂ ಧರ್ಮದ ಹಾಗೂ ನೀತಿಯ ತಿಳಿವಳಿಕೆಯೂ ಆಗಲಾರದು. ಜನರು ಎದುವರೆಗೆ ಈ ತರದ ಸುಧಾರಣೆ ಯನ್ನು ಹೊಂದುವುದಿಲ್ಲವೋ ಅದುವರೆಗೆ ಆ ಜನರು ಸುಧಾರಿಸಲಾರರು. ಅವರ ಲೋಕಯಾತ್ರೆಯು ಸುಗಮವಾಗಲಾರದು. ಸುಪಥದಲ್ಲಿ ಸಾಗಲಾರದು.

ವಿದ್ವಾಂಸರ ವಿದ್ಯೆಯನ್ನೂ, ನೀತಿವಂತರ ನೀತಿಯನ್ನೂ, ರಸಿಕರ ರಸಿಕತೆಯನ್ನೂ ಜನಸಾಮಾನ್ಯಕ್ಕೆ ಹಂಚಲು ಮಧ್ಯಸ್ಥರು ಬೇಕಾಗುತ್ತದೆ. ಏಕೆಂದರೆ, ಎಲ್ಲರೂ ಎಲ್ಲವನ್ನೂ ಓದಿಯೇ ತಿಳಿಯುವಷ್ಟು ಕಷ್ಟಸಾಧ್ಯ. ಈ ಮಧ್ಯಸ್ಥರು ಪುರಾಣ, ಇತಿಹಾಸ ಶಾಸ್ತ್ರ ಮೊದಲಾದುವು ಗಳನ್ನೆಲ್ಲಾ ಗುರುಮುಖದಿಂದ ಕಲಿತು, ತಮ್ಮ ಅನುಭವಕ್ಕೆ ತಂದುಕೊಂಡು ಅದನ್ನು ಜನಜೀವನಕ್ಕೆ ಹಂಚಿದರೆ ಜನತೆಗೆ ಅದರಿಂದ ಎಷ್ಟೋ ಮೇಲ್ಮೆ ಯಾಗುವುದು. ಪಂಡಿತರ ಪಾಂಡಿತ್ಯವನ್ನ ಕವಿಗಳ ಕವನಲಹರಿಯನ್ನೂ ಜನರಿಗೆ ಹಂಚುವ ಮಧ್ಯಸ್ಥರನ್ನೇ ಸಾಮಾನ್ಯವಾಗಿ ಧರ್ಮ ಬೋಧಕರು, ಪುರಾಣಿಕರು, ಉಪನ್ಯಾಸಕರು, ಕೀರ್ತನಕಾರರು ಎಂದು ಕರೆಯಬಹುದು.

ಒಬ್ಬರ ಅನುಭವವನ್ನು ಇನ್ನೊಬ್ಬರಿಗೆ ಹೇಳುವುದೇ ಮನುಷ್ಯರಲ್ಲಿ ರುವ ಒಂದು ಮಹತ್ವವಾದ ಶಕ್ತಿಯು. ಪ್ರಾಣಿಕೋಟಿಗಳಲ್ಲಿ ಈ ಶಕ್ತಿ ಯಿಲ್ಲದುದರಿಂದಲೇ ಜಗದಾದಿಯಿಂದಲೂ ಅವು ಒಂದೇ ರೀತಿಯಲ್ಲಿವೆ. ಮನುಷ್ಯರು ಒಬ್ಬರ ಅನುಭವವನ್ನು ಮತ್ತೊಬ್ಬರಿಗೆ ಹೇಳುವ ಸ್ವಭಾವ ದವರಾದುದರಿಂದ ದಿನೇ ದಿನೇ ಉರ್ಜಿತಾವಸ್ಥೆಗೆ ಬರುತ್ತಿರುವರು. ಅಂದ ಮೇಲೆ ಬೋಧನೆಯು ಜನಾಂಗಕ್ಕೆ ಬಹು ಮುಖ್ಯವಾದ ಸಹಾಯವು. ದೇಶಮಧ್ಯೆ ಚಳುವಳಿ ಹುಟ್ಟಿದಾಗ ಹಲವು ಮಂದಿ ಸಾಧು ಸಂತರು ಹುಟ್ಟಿ ಧರ್ಮೋಪದೇಶ ಮಾಡಿದುದರಿಂದ ಜಗತ್ತಿಗೆ ಮೇಲ್ಮೆಯಾದ ದೃಷ್ಟಾಂತಗಳು ಇತಿಹಾಸದಲ್ಲಿ ಸಾವಿರಾರು ಸಿಕ್ಕುತ್ತವೆ. ಸಮರ್ಥ

ರಾಮದಾಸರು, ಭಕ್ತಕಬೀರರು, ಪುರಂದರದಾಸರು, ನಿಜಗುಣದ ಶಿವ ಯೋಗಿಗಳು, ಸಾಧು ತುಕಾರಾಮರು ಈ ವಿಷಯಕ್ಕೆ ನಿದರ್ಶನರಾಗಿದ್ದಾರೆ.

ಸಾಮಾನ್ಯವಾಗಿ ಧರ್ಮೋಪದೇಶಕರನ್ನು ಪುರಾಣಿಕರು, ಉಪನ್ಯಾಸ ಕರು, ಕೀರ್ತನಕಾರರು ಎಂದು ಮೂರುಭಾಗಮಾಡಬಹುದು. ಇವರೆಲ್ಲರ ವಿಷಯವನ್ನೂ ಪ್ರಕೃತದಲ್ಲಿ ಸ್ವಲ್ಪಸ್ವಲ್ಪ ಚರ್ಚಿಸಿ ಮುಖ್ಯವಾಗಿ ಕೀರ್ತನ ಕಾರರ ವಿಷಯವನ್ನು ಈ ಲೇಖನದಲ್ಲಿ ಮುಂದುವರಿಸುವೆವು.

ಪುರಾಣ ಶ್ರವಣ—ಪುರಾಣ ಶ್ರವಣವು ಅತಿ ಪುರಾತನ ಕಾಲ ದಿಂದಲೂ ನಮ್ಮಲ್ಲಿ ನಡೆದುಬಂದಿದೆ. ಮಹರ್ಷಿಗಳಲ್ಲಿಯೂ ಪುರಾಣ ಶ್ರವಣದ ಪದ್ಧತಿಯಿದ್ದಿತು. ಸೂತ, ಜೈಮಿನಿ ಮೊದಲಾದ ಋಷಿಗಳು ಒಳ್ಳೆಯ ಪೌರಾಣಿಕರಾಗಿದ್ದರು. ಮಹಾಭಾರತದಲ್ಲಿ ಸೂತ ನಿಗೆ "ಪರಮ ಪೌರಾಣಿಕ ಶಿರೋಮಣಿ" ಎಂಬ ಬಿರುದು ಕೊಡಲ್ಪಟ್ಟಿದೆ. ಪರಮ ಧಾರ್ಮಿಕನಾದ ಯುಧಿಷ್ಠರನು ಶ್ರೀ ಮಾರ್ಕಂಡೇಯ ಮಹರ್ಷಿಯಿಂದ ನಳಚರಿತ್ರೆಯನ್ನು ಕೇಳಿ ಕೃತಾರ್ಥ ನಾದಂತೆಯೂ ಜನಮೇಜಯನು ಶ್ರೀ ಜೈಮಿನಿ ಋಷಿವರ್ಯನ ಮುಖೇನ ಮಹಾಭಾರತವನ್ನು ಕೇಳಿದಂತೆಯೂ ತಿಳಿದು ಬಂದಿರುವುದು. ಆಂದ ಮೇಲೆ ಪುರಾಣ ಶ್ರವಣವು ನಮ್ಮ ದೇಶಕ್ಕೆ ಅತಿ ಪ್ರಾಚೀನವಾದುದೆಂದು ಒಪ್ಪಲು ಹಿಂದು ಮುಂದು ನೋಡಬೇಕಾಗಿಲ್ಲ.

ಪುರಾಣ ಶ್ರವಣವು ಅಂದಿನಿಂದ ಸ್ವಲ್ಪ ಹೆಚ್ಚುಕಡಿಮೆ ನಡೆದು ಬರುತ್ತಲೇ ಇದೆ. ಪುರಾಣ ಶ್ರವಣದಿಂದ ಮನಸ್ಸು ವಿಶಾಲವಾಗಿ ಸಂಸ್ಕ ರಿಸಲ್ಪಡುವುದು. ಹಲವು ಧರ್ಮಸೂಕ್ಷ್ಮಗಳು ಗೊತ್ತಾಗುವುವು. ಶ್ರೋತೃವಿಗೆ ಗತವೈಭವದ ಸ್ಮರಣೆಯಾಗುವುದು. ಜೀವನದಲ್ಲಿ ಹೊಸ ಹುರುಪು ಬರುವುದು. ಶ್ರೀ ಸಮರ್ಥ ರಾಮದಾಸ ಸ್ವಾಮಿಗಳ ಮುಖ ದಿಂದ ಪುರಾಣ ಶ್ರವಣಕೇಳಿ, ಶಿವಾಜಿ ಮಹಾರಾಜನು ಪುರಾಣ ಪುರುಷ ರಂತೆಯೇ ವರ್ತಿಸಿ ಹಿಂದೂರಾಜ್ಯವನ್ನು ಸಂಸ್ಥಾಪಿಸಿದನು. ಹಿಂದೂ ಧರ್ಮವನ್ನು ಉಳಿಸಿದನು. ಶಿವಾಜಿ ಮಹಾರಾಜನು ತಾನು ಪುರಾಣಗಳ ಮಹಾ ಪುರುಷರಂತಿರಲು ಸಂಕಲ್ಪಿಸಿ ಹಾಗೆಯೇ ಜೀವಿಸಿ ಚರಿತ್ರೆಯಲ್ಲಿ

ಹೊಗಳಲ್ಪಟ್ಟನು. ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯ ಜೀವನದ ಮೇಲೂ ಪುರಾಣ ಶ್ರವಣಾದಿಗಳು ಉತ್ತಮ ಪರಿಣಾಮವನ್ನುಂಟು ಮಾಡಿವೆ. ಕೀಟಭೃಂಗನ್ಯಾಯದಂತೆ ಕೇಳುವವರು ಹೇಳುವವರಂತೆ ಉತ್ತಮರಾಗುವ ಸಂಭವವುಂಟು. ಪುರಾಣಶ್ರವಣದಿಂದ ವೈರಾಗ್ಯವು ಹುಟ್ಟುವುದು ಉಂಟು. ಇಂತಹ ವೈರಾಗ್ಯಕ್ಕೆ "ಪುರಾಣ ವೈರಾಗ್ಯ"ಎಂದು ಹೆಸರು. ಇದು ನಿಜವಾದ ವೈರಾಗ್ಯವಲ್ಲದಿದ್ದರೂ ವೈರಾಗ್ಯದವಾಸನೆ ಯನ್ನಾದರೂ ತೋರಿಸುವುದು. ಮಾನವನ ಅಭಾವ ವೈರಾಗ್ಯಕ್ಕಿಂತ ಪುರಾಣ ವೈರಾಗ್ಯವು ಎಷ್ಟೋ ಸಾವಿರಪಾಲು ಮೇಲು.

ಮಹರ್ಷಿಗಳ ಕಾಲದಿಂದಲೂ ನಡೆದು ಬಂದ ಶ್ರವಣಪದ್ಧತಿಯು ಇತ್ತೀಚಿಗೆ ಕರ್ಮ ಧರ್ಮ ಸಂಯೋಗದಿಂದ ಹೀನಸ್ಥಿತಿಗೆ ಬರುತ್ತಿರುವುದು. ಇದಕ್ಕೆ ನಮ್ಮಲ್ಲಿ ಸ್ವದೇಶಾಭಿಮಾನ ಸ್ವಭಾಷಾಭಿಗಳು ಕಡಿಮೆಯಾದುದೇ ಕಾರಣ. ಈಗಿನ ಪಶ್ಚಿಮ ಸಮುದ್ರದ ಮೇಲೆ ಬಿಸಿಬಂದ ನವನಾಗರೀ ಕತೆಯು ಪ್ರಚಂಡವಾದ ಭಾರತೀಯರ ಮನಸ್ಸಿನಲ್ಲಿದ್ದ ಪುರಾಣಶ್ರವಣ ಕಲೆಯನ್ನು ಹಾರಿಸಲು ಬಹು ಸಹಾಯಕರವಾಗಿರುವುದು. ಸುದೈವದಿಂದ ಮಹಾತ್ಮ ಗಾಂಧಿಯವರ ಉಪದೇಶವು ನಮ್ಮ ಜನರನ್ನು ಸಕಾಲದಲ್ಲಿ ಎಚ್ಚರಿಸದಿದ್ದರೆ ಇಷ್ಟು ಹೊತ್ತಿಗೆ ಇನ್ನೂ ಹದಗೆಡುತಿತ್ತು ದೇಶದ ಸ್ಥಿತಿ.

ಇಂತಹ ಪವಿತ್ರವಾದ ಕಲೆಯು ಕ್ರಮೇಣ ದುರ್ಬಾವಸ್ಥೆಗೆ ಬಂದದು. ವ್ಯಸನಕರವೇ.ಆದರೂ ಮೇಘಮಾಲೆಯ ಮಧ್ಯೆಕಂಗೊಳಿಸುವ ನಕ್ಷತ್ರಗಳಂತೆ ಕೆಲವು ಮಂದಿಯಾದರೂ ಗೋಚರಿಸುವರು. ಮಹಾ ಕವಿ ಗುಬ್ಬಿ ಮಲ್ಲ ಣಾರ್ಯನು ಒಳ್ಳೆಯ ಪೌರಾಣಿಕನಾಗಿದ್ದನಂತೆ. ಆದುದರಿಂದಲೇ ತನ್ನ ಭಾವಚಿಂತಾರತ್ನಕಾವ್ಯದಲ್ಲಿ "ಬಸವ ಪೌರಾಣದುರು ಮಲ್ಲಣಾರ್ಯ" ಎಂದು ತನ್ನನ್ನು ವಿಶೇಷಿಸಿಕೊಂಡಿರುವನು. ೧೯ನೆಯ ಶತಕದಲ್ಲಿ ಮೈಸೂರು ಮಹಾ ರಾಜರವರ ಆಸ್ಥಾನ ಕವಿಗಳಾಗಿದ್ದ ಅಭಿನವ ಕಾಲಿದಾಸ ಕೈ॥ ಬಸವಪ್ಪಶಾಸ್ತ್ರಿ ಗಳು ಸುಪ್ರಸಿದ್ಧ ಪುರಾಣಿಕರಾಗಿದ್ದರು. ಕನ್ನಡ ಭಾರತ ರಾಜಶೇಖರ ವಿಳಾಸ ಮೊದಲಾದ ಉತ್ಕೃಷ್ಟ ಕಾವ್ಯಗಳನ್ನು ಅವರಂತೆ ರಸವತ್ತಾಗಿ ಓದುತ್ತಿದ್ದವರು ಅಪೂರ್ವವೆಂದು ಅದನ್ನು ಕಿವಿಯಿಂದ ಕೇಳಿದವರು ಹೇಳು

ವರು. ಇವರು ಪುರಾಣವನ್ನು ಓದುತ್ತಿದ್ದಾಗ ಹುಲ್ಲು ತಿನ್ನುತ್ತಿದ್ದ ದನಗಳೂ ಏಕಾಗ್ರಚಿತ್ತದಿಂದ ಹುಲ್ಲುತಿನ್ನುವದನ್ನು ಬಿಟ್ಟು ಪುರಾಣವನ್ನು ಕೇಳುತ್ತಿದ್ದುವಂತೆ! ಶಾಸ್ತ್ರಿಗಳಂತಹವರ ಜೀವನ ಸ್ತುತ್ಯ, ಕೈಲಾಸ ವಾಸಿಗಳಾದ ದಾವಣಗೆರೆಯ ಉಭಯಕವಿ ಚಂದ್ರಶೇಖರಶಾಸ್ತ್ರಿಗಳು ಉತ್ತಮ ಪೌರಾಣಿಕರಾಗಿದ್ದುದು ನಮ್ಮ ಗೋಚರಕ್ಕೆ ಬಂದಿರುವುದು. ಇಷ್ಟು ಮಾತ್ರಕ್ಕೆ ಎದೆಯುಬ್ಬಿಸಬೇಕಾದುದಿಲ್ಲ. ಸರಾಸರಿಯ ಮೇಲೆ ಈಗಿನ ಪುರಾಣಿಕರ ಸಂಖ್ಯೆ ಬಹು ಕಡಿಮೆ. ಶ್ರೇಷ್ಠವಾದ ಈ ಕಲೆ ಯನ್ನು ಅಭಿವೃದ್ಧಿ ಪಡಿಸುವದು ದೇಶೀಯರಕರ್ತವ್ಯವಲ್ಲವೆ ?

ಇನ್ನು ಉಪನ್ಯಾಸಕರನ್ನು ಕುರಿತು ನಾಲ್ಕು ಮಾತುಗಳನ್ನು ಆಡಿ ನಮ್ಮ ಮುಖ್ಯ ಲೇಖನದ ವಿಷಯಕ್ಕೆ ಗಮನ ಕೊಡೋಣ. ಉಪನ್ಯಾಸಕರು ಧರ್ಮಬೋಧಕರಲ್ಲಿ ಒಂದು ವರ್ಗಕ್ಕೆ ಸೇರಿದವರು. ಅಶೋಕ ಚಕ್ರ ವರ್ತಿಯು ಬೌದ್ಧಮತಪ್ರಚಾರಕ್ಕೆ ಇಂತಹ ಹಲವುಂದಿ ಉಪದೇಶಕ ರಾದ ಬೌದ್ಧಭಿಕ್ಷುಗಳನ್ನು ಏರ್ಪಡಿಸಿ ತದ್ವಾರಾ ಮತ ಪ್ರಚಾರ ಮಾಡಿಸಿದನೆಂದು ಹಿಂದಣ ಚರಿತ್ರೆಯು ಹೇಳುವುದು. ಶ್ರೀ ಬಸವೇಶ್ವರನು ೧,೯೬,೦೦೦ ಜಂಗಮರೆಂಬ ಉಪನ್ಯಾಸಕರನ್ನು ಸಿದ್ಧಮಾಡಿ ತದ್ವಾರ ಕರ್ಣಾಟಕದಲ್ಲಿ ವೀರಶೈವ ಮತಪ್ರಚಾರವೇ ಅಲ್ಲದೆ ದೇಶ ಸುಧಾರಣೆ ಗಾಗಿಯೂ ಪ್ರಯತ್ನಿಸಿದನು. ಜನಸೇವೆಗೆ ಹೆಣಗಾಡುವ ಉಪನ್ಯಾಸಕರು ನಮ್ಮಲ್ಲಿ ಹಲಕೆಲವರುಂಟು. ಮೇಲೆಕಂಡ ಪೌರಾಣಿಕರು, ಉಪ ನ್ಯಾಸಕರು ಇವರಿಬ್ಬರಿಗೂ ಮಧ್ಯದವರನ್ನು ಈಗ ಕೀರ್ತನಕಾರರೆನ್ನ ಬಹುದು. ಈ ಕೀರ್ತನಕಾರರು ಪುರಾಣಿಕರಂತೆ ಪುರಾತನ ವಿಷಯ ಗಳನ್ನೂ ಉಪನ್ಯಾಸಕರಂತೆ ನವೀನ ವಿಷಯಗಳನ್ನೂ ಹೇಳುವ ಮಧ್ಯ ಮಾರ್ಗಗಾಮಿಗಳು, ಸಂಗೀತ|ಸಾಹಿತ್ಯ ಸಮನ್ವಯಾಚಾರ್ಯರು.

ಪುರಾಣವು ವೃದ್ಧೋಪದೇಶವು, ಭಾಷಣವು ಮಿತ್ರೋಪದೇಶವು. ರಂಜಕರಾದ ಜನರಿಗೆ ಇವೆರಡೂಮಾರ್ಗಗಳು ರುಚಿಸಲಾರವು. ಆದುದ

ರಿಂದ ಇಂತಹವರು ವಿಲಾಸ ವಿಭ್ರಮ ಬೆಡಗು ಬಿನ್ನಾಣಗಳಿಂದಕೂಡಿದ ಯೋಗ್ಯಳಾದ ತರುಣಿಯ ಮಂದಸ್ಮಿತಮುಖಾರವಿಂದದಿಂದ ಹೊರಸೂಸುವ ವಿನೋದ ವಿವೇಕಯುಕ್ತವಾದ ಸರಸಾಲಾಪಕ್ಕೆ ಮೆಯ್ಯೊಡ್ಡುವ ರಸಿಕ ಶಿರೋಮಣಿಗಳಂತೆ, ಸಂಗೀತಸಾಹಿತ್ಯಾದಿಗಳಿಂದ ಮನರಂಜಿತವಾದ ರೀತಿಯಲ್ಲಿ ತಾಳಮೇಳಗಳ ಹಾವಳಿಯಲ್ಲಿ ಮೃದುಮಧುರ ಪದಪುಂಜ ರಂಜಿತ ಸರಸ ಭಾಷಾಶೈಲಿಯಲ್ಲಿ ಮನೋಹರವಾದ ವಿಷಯಗಳನ್ನೂ ಚಿತ್ರವಿಚಿತ್ರವಾದ ಚಾಟೋಕ್ತಿಗಳನ್ನೂ ಚಿತ್ತಾಕರ್ಷಕ ಉಪಕಥೆಗಳನ್ನೂ ಹೇಳುಪ ರಸಿಕ ಕೀರ್ತನ ಕಾರರನ್ನು ಬಯಸಿ ಈ ಬಗೆಯ ಬೋಧನೆಗೆ ಬಾಯಿಬಿಡುವರು. ಈ ಕಾಲಕ್ಕೆ ತಕ್ಕಹಾಗೆ ಇದು ಯುಕ್ತವಾದುದೇ ಆಗಿದೆ.

ಪೂರ್ವದಲ್ಲಿ ಸಂಸ್ಕೃತ ಭಾಷೆಗಿದ್ದ ಗೌರವವನ್ನು ಈಗ ಹಿಂದಿ ಪಡೆದುಕೊಂಡಂತೆ, ಹಿಂದೆ ಪುರಾಣಶ್ರವಣಕ್ಕಿದ್ದ ಸ್ಥಾನವನ್ನು ಈಗ ಕೀರ್ತನವು ಪಡೆದುಕೊಂಡಿದೆ. ಕಾಲಧರ್ಮವು ವ್ಯತ್ಯಸ್ತವಾದಂತೆಯೇ ಪರಿಸ್ಥಿತಿಯೂ ಭಿನ್ನವಾಗುವುದು ಸ್ವಭಾವವೇ ಆಗಿದೆ.

ಪೌರಾಣಿಕನು ಒಂದು ತಿಂಗಳೆಲ್ಲಾ ಹೇಳುವ ಕಥೆಯ ಸಾರಾಂಶವನ್ನು ಚತುರನಾದ ಕೀರ್ತನಕಾರನು ಒಂದುಘಂಟೆಯಲ್ಲಿ ಹೇಳಿ ಬಿಡಬಲ್ಲನು. ಪುರಾತನ ಮತ್ತು ನವೀನ ಎರಡೂ ವಿಷಯಗಳನ್ನು ಒಳಗೊಂಡು, ವೀಣಾ ಮೃದಂಗಾದಿ ವಾದ್ಯ ವಿಶೇಷಗಳಿಂದ ಕೂಡಿ, ಉತ್ತಮ ಕಥಾ ಸಂವಿಧಾನದಿಂದಲೂ ಉದಾತ್ತ ರಸಭಾವಗಳಿಂದಲೂ ಹೃದಯಂಗಮ ಅಭಿನಯದಿಂದಲೂ ಮೇರೆ ಮೀರದ ಹಾಸ್ಯರಸದಿಂದಲೂ ದೈವಭಕ್ತಿಪೂರಿತವಾದ ವಾಗ್ಲಹರಿಯಿಂದಲೂ ಕೂಡಿ ರಾರಾಜಿಸುವ ಬೋಧನೆಯನ್ನು ನಾಗರಿಕರೂ ವಿಶಾಲ ಮನಸ್ಕರೂ ವಿಲಾಸಪ್ರಿಯರೂ ಆದ ಆಧುನಿಕರು ಅಪೇಕ್ಷಿಸುವುದು ಅನುಚಿತವಲ್ಲ. ಈ ಕಾರಣದಿಂದ ಈ ತೆರೆದ ಬೋಧನೆಯ ವಿಷಯಕ್ಕೆ ಗಮನಕೊಡುವುದು ಈಗ ನಮ್ಮ ಕರ್ತವ್ಯವಾಗಿದೆ.

ಇನ್ನು ಕೀರ್ತನದ ವಿಷಯವನ್ನು ನಿಲ್ಲಿಸಿ ಕೀರ್ತನಕಾರರ ವಿಷಯವಾಗಿ ವಿಚಾರಮಾಡೋಣ. ಏಕೆಂದರೆ, ಹೇಳುವ ವಿಷಯಕ್ಕಿಂತಲೂ

ಮೊದಲು ಹೇಳುವವನು ಅವಲೋಕನೀಯನಾಗಿರುವನು. ಬೋಧಕನ ಯೋಗ್ಯತೆಯ ಮೇಲೆಯೇ ಬೋಧನೆಗೆ ಬೆಲೆಬರುವುದು.

ಕಥಿಕನ (ಕೀರ್ತನಕಾರನ) ವಿದ್ಯಾಸಾಮರ್ಥ್ಯವು ಬಹು ಮುಖ್ಯ ವಾದುದು. ನಮ್ಮ ದೇಶದಲ್ಲಿ ಕೀರ್ತನಕಾರನಾಗುವವನು ದೇಶಭಾಷೆ ಮತ್ತು ದೇವಭಾಷೆ (ಸಂಸ್ಕೃತ) ಇವುಗಳನ್ನಾದರೂ ಚೆನ್ನಾಗಿ ಕಲಿತವನಾಗಿ ರಬೇಕು. ಈ ಎರಡು ಭಾಷೆಗಳಲ್ಲಿರುವ ಉತ್ತಮ ಗ್ರಂಥಗಳನ್ನೆಲ್ಲಾ ತಿಳಿದವನಾಗಿರಬೇಕು. ಈಗಿನ ಕಾಲಕ್ಕೆ ವಿಶ್ವಭಾಷೆಯಾದ ಇಂಗ್ಲಿಷ್ ಬಂದಿದ್ದರೆ ಮೇಲು. ಇನ್ನು ಮೇಲೆ ರಾಷ್ಟ್ರಭಾಷೆಯಾದ ಹಿಂದಿಯನ್ನೂ ಅಭ್ಯಸಿಸಬೇಕಾಗುವುದು. ಇನ್ನೂ ಹಲವು ಭಾಷೆಗಳಲ್ಲಿ ಪಾಂಡಿತ್ಯ ವಿದ್ದರೂ ಉತ್ತಮ. ಕಥಿಕನು ತನ್ನ ದೇಶಭಾಷೆಯಲ್ಲಿ ಧಾರಾಳವಾಗಿಯೂ ಗಂಭೀರವಾಗಿಯೂ ಮಾತನಾಡುವ ಶಕ್ತಿಯನ್ನು ಸಂಪಾದಿಸಬೇಕು. ರಾಮಾಯಣ, ಮಹಾಭಾರತ, ಭಾಗವತಾದಿ ಗ್ರಂಥಗಳನ್ನು ಕರತಲಾಮಲ ಕವಾಗಿ ಓದಿರಬೇಕು. ದೇಶದ ಚರಿತ್ರೆ, ಭೂಗೋಳ ಇತ್ಯಾದಿಯನ್ನೆಲ್ಲಾ ತಿಳಿದುಕೊಳ್ಳದಿದ್ದರೆ ಯತ್ನವಿಲ್ಲ. ಸಮೀಚೀನವಾದ ದಾಸರಹಾಡು ಗಳನ್ನೂ, ಶರಣರ ವಚನಗಳನ್ನೂ ಕಂಠಪಾಠಮಾಡಿಕೊಂಡಿರಬೇಕು. ಧರ್ಮಶಾಸ್ತ್ರ, ನೀತಿಶಾಸ್ತ್ರಗಳಲ್ಲಿನ ಮುಖ್ಯ ಮುಖ್ಯ ಶ್ಲೋಕಗಳನ್ನು ಮುಖೋದ್ಗತವಾಗಿಟ್ಟುಕೊಂಡು ಸಮಯ ಬಂದಾಗ ಹಿಂದುಮುಂದು ನೋಡದೆ ಒದಗಿಸುವವನಾಗಿರಬೇಕು. ವೇದಾಂತ, ರಾಜನೀತಿ, ವೈದ್ಯ ಮೊದಲಾದ ವಿಷಯಗಳಲ್ಲಿಯೂ ಅನುಭವಮಾಡಿಕೊಂಡು ಸಮಯ ಬಂದಾಗ ಕಥೆಯಲ್ಲಿ ಸೇರಿಸಿ ಹೇಳುತ್ತಿರಬೇಕು. ಇದರಿಂದ ಶ್ರೋತೃಗಳಿಗೆ ತುಂಬಾ ಲಾಭವುಂಟು.

ಓದಿದುದನ್ನು ಮರೆಯದೆ ಇರುವ ಜ್ಞಾಪಕಶಕ್ತಿಯೂ, ತನ್ನ ಅನು ಭವವನ್ನು ಮತ್ತೊಬ್ಬರಿಗೆ ಸ್ಪಷ್ಟವಾಗಿ ತಿಳಿಸುವ ಬೋಧನ ಶಕ್ತಿಯೂ, ಇದಕ್ಕೆ ಸಹಾಯವಾದ ಅಭಿನಯ ಶಕ್ತಿಯೂ ಕಥಿಕನ ಶಕ್ತಿತ್ರಯಗಳು. ಇವೆಲ್ಲಕ್ಕಿಂತ ಮುಖ್ಯವಾದುವು ಸಮಯಸ್ಫೂರ್ತಿ ಮತ್ತು ಕವನಶಕ್ತಿ. ಯಾವುದಾದರೊಂದು ವಿಷಯವು ಕಣ್ಣಿಗೆ ಬಿದ್ದೊಡನೆಯೇ ಅವನ್ನು ಪರಿ

ಸ್ಥಿತಿಗೆ ಹೋಲಿಸಿ ಹೇಳುವ ಶಕ್ತಿಗೆ ಸಮಯ ಸ್ಫೂರ್ತಿಯೆನ್ನುವರು. ಯಾವುದಾದರೊಂದು ವಿಷಯವನ್ನು ನೆನೆಸಿಕೊಂಡ ಕೂಡಲೇ ಅದರ ಮೇಲೆ ಕವನವನ್ನು ಹೇಳುವ ಶಕ್ತಿಗೆ ಆಶುಕವಿತ್ವವೆನ್ನುವರು. ಈ ಎರಡು ಗುಣಗಳೂ ಕಥಿಕನಿಗೆ ಬಹು ಮುಖ್ಯ. ಇವು ಕಲಿತರೆ ಬರುವುದಿಲ್ಲ. ನೈಸರ್ಗಿಕ ಸಮಯ ಸ್ಫೂರ್ತಿಯೂ, ಕವನಶಕ್ತಿಯೂ ಕಥಿಕನ ಎರಡು ಕಣ್ಣುಗಳಾಗಿವೆ. ಇವಿಲ್ಲದವನು ದಕ್ಷನಾದ ಕಥಿಕನಾಗಲಾರನು. ಒಟ್ಟಿನಲ್ಲಿ ಕಥಿಕನು ಬಹುಶ್ರುತನೂ ಸಮರ್ಥನೂ ಧೈರ್ಯಸ್ಥೈರ್ಯಾದಿಗಳುಳ್ಳವನೂ ಆಗಿ ಒಟ್ಟನಲ್ಲಿ ಸಾತ್ವಿಕಪುರುಷನಾಗಿರಬೇಕು.

ಕೀರ್ತನದಲ್ಲಿ ಭಕ್ತಿರಸವೂ, ಶಾಂತಿರಸವೂ, ಸಮಯವರಿತು ವೀರರಸವೂ ಬರುತ್ತಿರಬೇಕು. ಹಾಸ್ಯವು ಮೇರೆಮೀರಬಾರದು. ಈಗಿನ ಬಹುಮಂದಿ ಕೀರ್ತನಕಾರರು ಹಾಸ್ಯದಲ್ಲಿ ಮೇರೆಮೀರುತ್ತಿರುವರು. ಅಶ್ಲೀಲವಾದ ಮಾತುಗಳಿಂದ ಹಾಸ್ಯವನ್ನು ಪ್ರಚೋದಿಸುವರು. ಜನರನ್ನು ನಗಿಸುವುದೇ ಮುಖ್ಯೋದ್ದೇಶವಲ್ಲ. ಹೀಗೆ ತಿಳಿಯುವುದಾದರೆ ಇದು ಅವಜ್ಞತೆಯ ಫಲ. ಶೃಂಗಾರ, ರೌದ್ರ, ಕರುಣ ಈ ರಸಗಳ ಮಧ್ಯೆ ಹಾಸ್ಯವು ತಲೆಹಾಕಿದರೆ ಆಗುವ ಅಭಾಸವು ಅಸಹ್ಯಕರವಾಗಿರುವುದು. ಮೇರೆಮೀರಿದ ಹಾಸ್ಯಕ್ಕೆ ಮನೆಹಾಕುವ ಕಥಿಕನು ತನ್ನ ಗೌರವವನ್ನು ಕಳೆದುಕೊಳ್ಳುವನು. ಯಾವಾಗ ಕಥಿಕನಲ್ಲಿ ಶ್ರೋತೃಗಳಿಗೆ ಗೌರವವಿಲ್ಲದಾಗುವುದೋ ಆಗ ಅವನ ಕೀರ್ತಿಯು ಪರಿಪೂರ್ಣ ಫಲಪ್ರದವಾಗಲಾರದು.

ಕಥೆಯು ಮಹಾಪುರುಷನ ವಿಷಯವಾದುದಾಗಿಯಾಗಲಿ, ವೀರಪುರುಷನ ವಿಷಯವಾಗಲಿ, ಪತಿವ್ರತೆಯರ ವಿಷಯವಾದುದಾಗಿಯಾಗಲಿ ಆಗಿರಬೇಕು. ಸಾಧು ಸತ್ಪುರುಷರ ಚರಿತ್ರೆಗಳು ಉತ್ತಮ ಫಲಪ್ರದಗಳು. ಕಥೆಯಲ್ಲಿ ನಾಯಕನೂ ಸಂವಿಧಾನವೂ ದುರ್ಬಲವಾಗಿದ್ದರೆ ಆ ಕಥೆಯು ಕಳೆಗಟ್ಟಲಾರದೆಂಬುದು ಅನುಭವದಿಂದ ಹೇಳುವಮಾತು. ಕವಿಗಳಾದರೂ ಉತ್ತಮಕಥಾ ನಾಯಕರನ್ನು ಆಶ್ರಯಿಸಿರುವುದಾದರೂ ಇದಕ್ಕೇ ಎಂದು ಕಾಣುವುದು.

ಉಪೋದ್ಘಾತ, ಕಥಾಸಂವಿಧಾನ, ಉಪಕಥೆಗಳ ನಿರೂಪ, ಉಪಸಂಹಾರ, ವಿಷಯ ಪ್ರತಿಪಾದನ, ಸರಳವಾದ ಭಾಷಾಶೈಲಿ, ಯುಕ್ತವಾದ ಅಭಿನಯ, ಅರ್ಹವಾದ ಹಾಡುಗಾರಿಕೆ ಇವೆಲ್ಲಾ ಕಥೆಯ ಮುಖ್ಯಾಂಶಗಳು. ಉಪೋದ್ಘಾತವು ಕಥೆಯ ವಿಷಯವನ್ನೇ ತಿಳಿಸುವಂತಿರಬೇಕು. ಉಪಸಂಹಾರವು ಉಪೋದ್ಘಾತವನ್ನೂ ಕಥೆಯ ತತ್ವವನ್ನೂ ಸ್ಮರಣೆಗೆ ತರುವಂತಿರಬೇಕು. ಅಲ್ಲದೆ ಇದರಲ್ಲಿ ಕಥಾಸಾರಾಂಶವೂ ತಿಳಿಯಬೇಕಾದ ಮುಖ್ಯ ನೀತಿಗಳೂ ಎದ್ದು ಕಾಣುತ್ತಿರಬೇಕು.

ಕಥಿಕನು ಸರಲವಾದ ಮತ್ತು ಶುದ್ಧವಾದ ಭಾಷೆಯಲ್ಲಿ ಹೇಳುವವನಾಗಬೇಕು. ಕೆಲವರು ತಮಗೆ ಪರಿಚಯವಿಲ್ಲದಿದ್ದರೂ ಬೇರೆ ಬೇರೆ ಭಾಷೆಗಳನ್ನು ತುಣುಕುಮಿಣುಕಾಗಿ ಕೆಲವರು ಪ್ರಯೋಗಿಸುವರು. ಕೀರ್ತನಕಾರರಲ್ಲಿ ಬಹು ಜನರು ಈ ತೆರದ ದುರಭ್ಯಾಸಕ್ಕೆ ತುತ್ತಾಗಿರುವರು. ಇದು ಪ್ರಬಲವಾದ ದುರ್ಗುಣ. ಇದರಿಂದ ಅವರ ಸ್ವಭಾಷಾಜ್ಞಾನಶೂನ್ಯತೆಯೂ ಒಟ್ಟಿಗೆ ಗೊತ್ತಾಗುವುದಲ್ಲದೆ ಬೇರೆಯಿಲ್ಲ. ಬೇರೆ ಭಾಷೆಗಳನ್ನು ಉಪಯೋಗಿಸಲೇಬೇಡವೆಂದು ನಮ್ಮ ಅಭಿಮತವಲ್ಲ. ಅವಶ್ಯ ತೋರಿದರೆ ಮಿತವರಿತು ಹೇಳಿಬಿಡಬಹುದು. ಅಂದರೆ ಅದನ್ನೇ ಒಂದು ಸುಗ್ಗಿ ಮಾಡಿಕೊಳ್ಳಬಾರದು. ದೇಶಭಾಷೆಯನ್ನೇ ಉಪಯೋಗಿಸುವುದರಲ್ಲಿ ಕೇಳುವವರು ಹೇಳುವವರು ಈರ್ವರಿಗೂ ಸುಖವುಂಟು. ಉಪಕಥೆಗಳನ್ನು ಅನುಚಿತವಾಗಿ ಹೇಳಬಾರದು. ಅವಶ್ಯ ತೋರಿದರೆ ಸಂಬಂಧಪಟ್ಟ ವಿಷಯಗಳನ್ನು ಒಳಗೊಂಡುದನ್ನು ಮಾತ್ರ ಹೇಳಬೇಕು. ಬಹು ಮಂದಿ ಈ ವಿಷಯದಲ್ಲಿ ಮುಗ್ಗರಿಸುವರು. ಇಲ್ಲಿ ಔಚಿತ್ಯ ಜ್ಞಾನ ಮುಖ್ಯ.

ಸಂಗೀತದಲ್ಲಿ ಕಥಿಕನು ವಿಶಾರದನಾಗಬೇಕೇ ಇಲ್ಲವೇ ಎಂಬುದೊಂದು ಪ್ರಶ್ನೆ. ಸಂಗೀತದಲ್ಲಿ ಪಂಡಿತನಾಗಿದ್ದರೆ ಬಲು ಮೇಲು. ಉತ್ತಮವಾದ ಸಾಹಿತ್ಯಕ್ಕೆ ಮಧುರವಾದ ಸಂಗೀತವು ಸೇರಿದರೆ ಚಿನ್ನಕ್ಕೆ ಸೌರಭವು ಬೆರತಂತೆ ಮಹತ್ವವೇ ಸರಿ. ಹಾಗೆ ಸೇರುವುದೇ ಕಷ್ಟ. ಎಲ್ಲ ಶಾಸ್ತ್ರಗಳಲ್ಲಿಯೂ ಒಂದು ವ್ಯಕ್ತಿಯು ಅದ್ಭುತ ಶಕ್ತಿಯನ್ನು ಸಂಪಾದಿಸುವುದು

ಅಪರೂಪ. ಆದರೂ ತಕ್ಕಷ್ಟಾದರೂ ಸಂಗೀತದ ಜ್ಞಾನವಿರಲೇಬೇಕು. ಸಂಗೀತದಲ್ಲಿ ಪರಿಪೂರ್ಣ ಪಾಂಡಿತ್ಯವಿಲ್ಲವೆಂದು ಹೆದರಬೇಕಾದುದೂ ಇಲ್ಲ. ಮುಖ್ಯವಾಗಿ ದಾಸರ ಹಾಡುಗಳು, ಶರಣರ ವಚನಗಳು ಇವನ್ನು ಜನರ ಮನಸ್ಸಿನ ಮೇಲೆ ಬಿಂಬಿಸುವಂತೆ ಹೇಳಿದರೆ ಸಾಕು. ಕೀರ್ತನದ ಮುಖ್ಯೋದ್ದೇಶವು ಸಂಗೀತ ರಸದಲ್ಲಿ ಜನರನ್ನು ತೇಲಾಡಿಸುವುದಕ್ಕಿಂತ ಜನತೆಗೆ ಧರ್ಮ ನೀತಿಯನ್ನು ಬೋಧಿಸುವುದೇ ಆಗಿರುವುದು. ಕಥಿಕನು ಸಂಗೀತಕ್ಕಿಂತ ಸಾಹಿತ್ಯದಲ್ಲಿ ಬಲ್ಲಿದನಾಗಬೇಕೆಂದು ನಿಶ್ಚಿತವಾದವು.

ಕೀರ್ತನಕಾರನು ಆಡುವ ಪ್ರತಿಯೊಂದು ಮಾತೂ ಮಹತ್ವವಾದುದಾಗಿರಬೇಕು. ಪ್ರಪಂಚದಲ್ಲಿ ಎಲ್ಲ ಕೆಲಸಕ್ಕಿಂತಲೂ ಮಾತಿನ ಮನೆಯನ್ನು ಕಟ್ಟುವುದು ಕಷ್ಟದ ಕೆಲಸ. ತಾನು ಆಡುವ ಪ್ರತಿಯೊಂದು ಮಾತೂ ಯೋಚನೆಯಿಂದಲೂ ಪೂರ್ವಸಿದ್ಧತೆಯಿಂದಲೂ ಕೂಡಿರಬೇಕು. ಏಕೆಂದರೆ, ವಾಸನೆಯಿಂದ ಹೂವಿನ ಯೋಗ್ಯತೆಯನ್ನು ನಿರ್ಣಯಿಸುವಂತೆ ಮಾತಿನಿಂದ ಪಂಡಿತನ ಯೋಗ್ಯತೆಯು ಗೊತ್ತುಮಾಡಲ್ಪಡುವುದು. "ಮಾತು ಆಡಿದರೆ ಹೋಯಿತು ಮುತ್ತು ಒಡೆದರೆ ಹೋಯಿತು," ಎಂಬ ನಾಣ್ಣುಡಿಯು ನಮ್ಮ ಅವಗಾಹನೆಗೆ ತಕ್ಕುದು. ಒಂದೊಂದು ಸಮಯದಲ್ಲಿ ಆಡಿದ ಮಾತು ಎಷ್ಟೋ ಕಷ್ಟ-ನಷ್ಟಗಳಿಗೆ ಗುರಿಮಾಡುವುದು. ಸವಾರನು ಕಡಿವಾಣವನ್ನು ಭದ್ರವಾಗಿ ಹಾಕಿ ಕುದುರೆಯನ್ನು ಹಿಡಿಯುವಂತೆ ಕಥೆಯಲ್ಲಿ ನಾಲಗೆಯನ್ನು ಬಿಗಿಹಿಡಿದು ಮಾತಾಡಬೇಕಾಗುವುದು. ಕೀರ್ತನವನ್ನು ಕೇಳಲಿಕ್ಕೆ ಬಗೆಬಗೆಯ ಜನರು ಬಂದು ಕೂಡ್ರುವರು. ಸಾಮಾನ್ಯವಾಗಿ ಅವರೆಲ್ಲರಿಗೂ ಸಂತಸವಾಗುವಂತಹ ಮಾತನ್ನೇ ಆಡಬೇಕು. ಹೀಗಾದರೂ ಆ ಮಾತು ನೀತಿಗೂ ಧರ್ಮಕ್ಕೂ ಬೇರೆಯಾಗಿರದೆ ಸರ್ವಸಮ್ಮತವಾಗಿರಬೇಕು. ಎಲ್ಲರನ್ನೂ ಒಪ್ಪಿಸುವ ಹಾಗೆ ಮಾತಾಡುವವನಿಗೆ ಬಲು ಜಾಣ್ಮೆಬೇಕು. ಕಥಿಕನು ಇದು ನನ್ನ ಆಸ್ತಿಯೆಂಬುದನ್ನೂ ಇದೇ ಜನಜೀವನದ ಸುಖ ದುಃಖಕ್ಕೆ ಕಾರಣೀಭೂತವಾದುದೆಂಬುದನ್ನೂ ಮರೆಯ ಕೂಡದು. ಕಥೆಯಲ್ಲಿ ಪೂರ್ವಸಿದ್ಧತೆಯೆಂಬುದು ಮುಖ್ಯ. ಹೀಗಲ್ಲದೆ ಭಾಷಣ ವೇದಿಕೆಯ ಮೇಲೆ

ನಿಂತು ಬಾಯಿಗೆ ಬಂದಂತೆ ಹರಟೆ ಹೊಡೆದು, ರಸಿಕರಿಗೂ, ಅಭಿಜ್ಞರಿಗೂ ಅಸಹ್ಯವನ್ನುಂಟುಮಾಡುವುದು ಯುಕ್ತವಾದುದಲ್ಲ.

ಕಥಿಕನ ಧ್ಯೇಯವು ಬಹು ಪವಿತ್ರವಾದುದಾಗಿರಬೇಕು. ಈತನು ಒಳ್ಳೆಯ ಸ್ವದೇಶಾಭಿಮಾನಿಯೂ, ಸ್ವಾಭಾಷಾಭಿಮಾನಿಯೂ ಆಗಿರಬೇಕು. ಧನಾರ್ಜನೆಯೊಂದೇ ಮುಖ್ಯವೆಂದು ಭಾವಿಸಬಾರದು. ಏಕೆಂದರೆ, ಧರ್ಮ ಬೋಧಕನು ನುಡಿಗಿಂತ ನಡೆಗೇ ಬಹು ಗಮನಕೊಟ್ಟಿರಬೇಕು. ಯಾವನು ಕೀರ್ತನವು ಧನಾರ್ಜನೆಯ ಕಸುಬೆಂದಾಗಲಿ, ಕೀರ್ತಿಯನ್ನೂ ಗೌರವ ವನ್ನೂ ಆರ್ಜಿಸುವ ಮಾರ್ಗವೆಂದಾಗಲಿ ಭಾವಿಸುವನೋ ಅವನು ಶ್ರೀ ರೋಹಣ ಪರ್ವತಕ್ಕೆ ಹೋಗಿ ಅಲ್ಲಿ ಕಗ್ಗಲ್ಲಿಗೆ ಕೈಚಾಚಿದ ಮರುಳು ಮಾನವನಂತೆ ಅಪಹಾಸ್ಯಕ್ಕೆ ಗುರಿಯಾಗುವನು. ಇಷ್ಟೇ ಅಲ್ಲ, ಕರ್ತವ್ಯ ಶೂನ್ಯನೆಂಬ ಬಿರುದಿಗೆ ಕೂಡ ಪಾತ್ರನಾಗುವನು.

ಬಹುಮಟ್ಟಿಗೆ ಧರ್ಮಬೋಧಕರು ಸಕಾಮಕರ್ಮಿಗಳಾಗಿ ಕಾಣುವರು. ಸಕಾಮ ಭಕ್ತಿಗಿಂತಲೂ ನಿಷ್ಕಾಮ ಭಕ್ತಿಯು ಬಹು ಉತ್ತಮವಾದುದೆಂಬ ಮಾತನ್ನು ಪ್ರತಿಯೊಬ್ಬರೂ ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಗೀತೆಯು ನಿಷ್ಕಾಮ ಕರ್ಮವನ್ನು ಒತ್ತಿ ಹೇಳಿದೆ. ಅರ್ಜುನನು ನಿಷ್ಕಾಮಕರ್ಮಿ ಯಾದಾಗಲೇ ಅವನಿಗೆ ಶಾಂತಿ ದೊರೆಯಿತು. ಕರ್ತವ್ಯನಿರ್ವಹಣೆ ಯಾಯಿತು. ಗೀತಾಮೃತಪಾನವಾಯಿತು.

ಇವೆಲ್ಲಕ್ಕಿಂತಲೂ ಕಥಿಕನ ನಡತೆಯು ಬಹು ಮುಖ್ಯವಾದುದು. ಧರ್ಮ ಬೋಧನೆಯಲ್ಲಿರುವ ಒಂದು ಕಷ್ಟವೆಂದರೆ ನುಡಿದಂತೆ ನಡೆಯುವುದೇ. ಯಾವ ಬೋಧಕನು ತಾನು ಹೇಳುವುದನ್ನು ಆಚರಿಸುವುದಿಲ್ಲವೋ ಅವನು ಉಪದೇಶಕ್ಕೆ ಅರ್ಹನಲ್ಲ. ತನ್ನ ನಡೆಯಲ್ಲಿಲ್ಲದ ವಿಷಯವನ್ನು ಹೇಳುವುದಕ್ಕೆ ಹೋದಾಗ ಬೋಧಕನ ಮುಖವು ವಿವರ್ಣವಾಗುವುದು. ಮಾತುಗಳು ತೊದಲಿಸುವುವು. ಬಾಯಿ ಒಣಗುವುದು. ಮನಸ್ಸು ಚೆಲ್ಲಾಡುವುದು. ಆತ್ಮನು ಭೀಗುಟ್ಟುವನು. ಇದಲ್ಲದೆ ಇವನ ದುರ್ವ್ವರ್ತನವನ್ನು ಕಂಡವರಿದ್ದರೆ

ವಿಧವೆಯ ಶೃಂಗಾರದಂತೆ ಅನುಚಿತವಾದ ಇವನ ಪ್ರಸಂಗವನ್ನು ಕೇಳಿ ಕೇಕೆ ಹಾಕಿ ನಗುವರು. ಸಮಾಜದಲ್ಲಿ ಅವಹೇಳನವಾಗುವುದು.

ನಡೆಯಲಿಲ್ಲದುದನ್ನು ನುಡಿಯಲ್ಲಿ ಬಡಬಡಿಸ ಹೋಗುವುದು ಒಂದು ತೆರದ ಆತ್ಮವಂಚನೆ, ದೇಶದ್ರೋಹ, ಧರ್ಮದ್ರೋಹ, ದೈವದ್ರೋಹ. ಇನ್ನೂ ವಿಚಾರಿಸಿದರೆ ಎಷ್ಟೋ ದ್ರೋಹರಾಶಿಗಳು ಇವನ ತಲೆಯ ಮೇಲೆ ಕೂಡುತ್ತವೆ. ಈ ಜವಾಬುದಾರಿಯನ್ನರಿತು, ಬೋಧಕನು ತನ್ನ ನಡೆ ನುಡಿಯನ್ನು ಸುಧಾರಿಸಿ ಏಕ ಮುಖವುಳ್ಳ ರೀತಿಯನ್ನು ಮಾಡಿಕೊಳ್ಳ ಬೇಕು. ತಾನು ಕರ್ಮಯೋಗಿಯಾಗಬೇಕು.

ಗಿಲ್ಲಿಗ್ಗಿ:

ಕೀರ್ತನಕಾರನು ಶುಚಿರ್ಭೂತನೂ ವಿನಮ್ರನೂ ಧಾರ್ಮಿಕನೂ ಡಂಭ ರಹಿತನೂ ಸದಾಚಾರಪ್ರಿಯನೂ ನಿಷ್ಕಲ್ಮಷಚಿತ್ತನೂ ಸಾತ್ವಿಕವಾದ ಆಹಾರ ಪಾನೀಯಂಗಳುಳ್ಳವನೂ ದುಶ್ಚಟಗಳಿಲ್ಲದವನೂ ಉದಾರಿಯೂ ಸರ್ವ ಸಮತ್ವ ಬುದ್ಧಿಯುಳ್ಳವನೂ ಆತ್ಮಾವಲಂಬನ, ಆತ್ಮಸಂಯಮನಗಳುಳ್ಳ ವನೂ, ಗೌರವಯುಕ್ತನೂ, ಸುಜನಪ್ರಿಯನೂ ಪ್ರಿಯವಾಕ್ಕುಳ್ಳವನೂ ಮಂಜುಲವಾದ ಶಾರೀರಸೌಖ್ಯವುಳ್ಳವನೂ ಆತ್ಮಜ್ಞಾನಿಯೂ ಆಗಿರಬೇಕು. ಇಂತಹ ಸುಗುಣಗಳು ಯಾವಾತನಲ್ಲಿ ಮನೆ ಮಾಡಿಕೊಂಡಿರುವುದಿಲ್ಲವೋ ಅಂತಹವನು ಧರ್ಮ ಬೋಧಕನಾಗುವನೆಂತು ?

ಬೋಧಕನಾದವನು ಗ್ರಂಥಾವಲೋಕನ, ದೇಶಾಟನ, ಪಂಡಿತ ಭಾಷಣ ಇತ್ಯಾದಿಗಳಿಂದ ಸಂಪಾದಿಸಿದ ಅನುಭವವನ್ನು ತನ್ನ ಸ್ವಕೀಯವಾದ ಅನುಭವದ ಜೊತೆಗೆ ಬೆರಸಿ ಶ್ರೋತೃಗಳಿಗೆ ನಿರ್ಭಯದಿಂದ ಹೇಳುವವ ನಾಗಬೇಕು. ನ್ಯಾಯ ವಿಷಯವನ್ನು ಹೇಳುವಾಗ ಯಾವನು ಹಿಂದು ಮುಂದು ನೋಡುವುದಿಲ್ಲವೋ ಅವನೇ ನಿಜವಾದ ಧರ್ಮ ಬೋಧಕನು. ಜನರಂಜನೆಯನ್ನೇ ತನ್ನ ಧ್ಯೇಯವೆಂದು ಎಂದಿಗೂ ಇಟ್ಟುಕೊಳ್ಳಬಾರದು. ಉದಾತ್ತತತ್ವಗಳನ್ನೂ ಅವುಗಳ ನ್ಯೂನಾತಿರಿಕ್ತಗಳನ್ನೂ ನಿರ್ಭಯವಾಗಿ ಹೇಳುವಷ್ಟು ಕೆಚ್ಚೆದೆಯ ಕಟ್ಟಾಳಾಗಬೇಕು. ನಿರ್ದಾಕ್ಷಿಣ್ಯವಾದ ನಿಜ

ಬೋಧೆಯು ಒಂದಿಲ್ಲೊಂದುಕಾಲಕ್ಕಾದರೂ ಬೋಧ್ಯರಿಗೆ ಹಿತವನ್ನುಂಟು ಮಾಡುವುದು. ಯಾವನು ತಾನು ಹೇಳುವುದನ್ನು ತನ್ನ ಕೃತಿಯಲ್ಲಿ ಆಚರಿಸುವನೋ ಅವನಿಗೆ ಮಾತನಾಡುವಾಗ ಧೈರ್ಯ ಬಹಳ. ಆದಿಲ್ಲ ದವನು ವಿರಾಟರಾಜನ ಮಗ ಯುದ್ಧಕ್ಕೆ ಹೋದಂತೆ ಅಪಹಾಸ್ಯಕ್ಕೆ ಗುರಿ ಯಾಗುವರು. ಯಾವ ಬೋಧಕನು ತಾನು ಹೇಳುವುದನ್ನು ನಡೆಸುವುದಕ್ಕೆ ಶಕ್ತಿಯುಳ್ಳವನಾಗಿರುವುದಿಲ್ಲವೋ ಅಂತಹವನು ತನ್ನ ವೃತ್ತಿಗೆ ಶರಣು ಹೊಡೆದು ವಿಮುಖನಾಗುವುದು ಮೇಲು. ಮಹಾತ್ಮಗಾಂಧಿಯವರೇ ಮೊದಲಾದವರು ಲೋಕಪೂಜ್ಯರಾದುದು ನಡೆನುಡಿಯೊಂದಾದುದರಿಂದಲೇ.

ಮಹರ್ಷಿಗಳ ಧರ್ಮಸೂತ್ರಗಳನ್ನೂ ಕವಿಗಳ ಕವನವನ್ನೂ ಉದಾರಿಗಳ ಔದಾರ್ಯವನ್ನೂ ಜನಸಮೂಹದ ಮುಂದಿಡುವವರೆಂದರೆ ಬಹು ಮಟ್ಟಿಗೆ ಕೀರ್ತನಕಾರರೇ. ಪತ್ರಿಕಾಕರ್ತರಿಗೂ ಧರ್ಮಬೋಧಕರಿಗೂ ಬಹು ಸಂಬಂಧವಿರಬೇಕು. ಕೀರ್ತನಕಾರರು ಪತ್ರಿಕಾಪ್ರಚಾರ, ಗ್ರಂಥ ಪ್ರಚಾರಗಳಿಗೆ ಬಹು ಗಮನಕೊಡಬೇಕು. ಇದಲ್ಲದೆ ಇತಿಹಾಸ ಶೋಧನೆ, ಪುರಾತನ ಕಾವ್ಯಗಳನ್ನು ಹುಡುಕಿ ಪ್ರಚಾರಮಾಡುವುದು, ಪತ್ರಿಕೆಗಳಿಗೆ ಲೇಖನಗಳನ್ನೂ ಚಂದಾದಾರರನ್ನೂ ಒದಗಿಸಿಕೊಡುವುದು ಇತ್ಯಾದಿ ದೇಶೋಪಕಾರಕ ರಚನಾತ್ಮಕ ಕೆಲಸಗಳಿಗೆ ಸಹಾಯವಾಗುವುದು ಆವಶ್ಯಕ.

ಪರಿಸ್ಥಿತಿಯ ಜ್ಞಾನವೂ ಆಚರಣೆಯೂ ಬೋಧಕನಿಗೆ ಬಹು ಮುಖ್ಯ ವಾದುದರಿಂದ ಈಗಿನ ಕಾಲಕ್ಕೆ ಅವಶ್ಯಕಗಳಾದ ಖಾದಿಪ್ರಸರಣ, ಗೋರಕ್ಷಣ, ದೇಶಭಾಷಾಭಿವೃದ್ಧಿ, ಸಮಾಜದ ಏಕೀಕರಣ, ಪ್ರೌಢವಿವಾಹ ಪುರಸ್ಕರಣ, ಬಾಲ್ಯವಿವಾಹ ನಿರಾಕರಣ, ಅಸ್ಪೃಶ್ಯತಾ ನಿವಾರಣ ಮೊದಲಾದ ಮಹತ್ವದ ವಿಷಯಗಳ ಮೇಲೆ ಸಮಯವರಿತು ಕೀರ್ತನದಲ್ಲಿ ಮಧ್ಯೆ ಮಧ್ಯೆ ಮಾತ ನಾಡಬೇಕು. ಬರೇ ಫುರಾಣವನ್ನು ಮಾತ್ರ ಹೇಳುವ ಕಥಿಕನು ಕೃತಾರ್ಥನಾಗಲಾರನು. ಅವನಿಂದ ದೇಶಕ್ಕೆ ಹೆಚ್ಚು ಲಾಭವಾಗಲಾರದು.

ಮುಖ್ಯವಾಗಿ ಧರ್ಮಬೋಧಕರೂ, ಪತ್ರಿಕಾಕರ್ತ್ತರೂ ಈಗ ಏಕ ಮುಖವಾಗಿ ಕೆಲಸಮಾಡಬೇಕು. ಪರಸ್ಪರ ಸಹಾಯಕರಾಗಿರಬೇಕು. ಏಕೆಂದರೆ, ಇವರೀರ್ವರೇ ಜನಾಂಗದ ಎರಡು ಕಣ್ಣುಗಳಂತಿರುವರು. ನಮ್ಮ ಕರ್ಣಾಟಕದಲ್ಲ ಬೇಗ ಇಂತಹ ಸ್ಥಿತಿಯು ಒದಗಲೆಂದು ದಯಾಘನನಾದ ಸರ್ವೇಶ್ವರನನ್ನು ಪ್ರಾರ್ಥಿಸುವುದು ನಮ್ಮ ಕರ್ತವ್ಯವಾಗಿದೆ.

ಇನ್ನು ಸಾರಾಂಶ ರೂಪದಿಂದ ಕೆಲ ವಿಷಯುಗಳನ್ನು ಹೇಳಿ ಈ ಲೇಖನವನ್ನು ವಿರಮಿಸಲಾಗುವುದು.

೧. ಕೀರ್ತನದಲ್ಲಿ ಕಥಾವಸ್ತುವು ಉತ್ತಮವಾದುದಾಗಿರಬೇಕು. ಭಕ್ತಿರಸ, ಕರುಣರಸ, ವೀರರಸಗಳು ಮುಖ್ಯವಾಗಿಯೂ, ಇತರ ರಸಗಳು ಗೌಣವಾಗಿಯೂ ಇರಬೇಕು. ಭಕ್ತಿರಸವು ಕಥೆಯ ಜೀವಾಳವಾಗಿರ ಬೇಕೆಂದು ಅನುಭವಿಗಳು ಹೇಳುವರು. ಹಾಸ್ಯರಸ, ಶೃಂಗಾರರಸಗಳು ಮೇರೆಯನ್ನು ಉಲ್ಲಂಘಿಸಬಾರದು.

೨. ಉಪೋದ್ಘಾತ, ಕಥಾಸಂವಿಧಾನ, ಉಪಸಂಹಾರ, ಉಪಕಥೆಗಳ ಜೋಡಣೆ, ವಿಷಯ ಪ್ರತಿಪಾದನೆ, ಭಾಷಾಶೈಲಿ, ಅಭಿನಯ ಇವುಗಳೆಲ್ಲಾ ಒಂದಕ್ಕೊಂದು ಸಂಬಂಧವಾಗಿರಬೇಕು. ಬಹುಮಟ್ಟಿಗೆ ಕಥಿಕನ ಶಕ್ತಿಯು ಇದರ ಮೇಲೆಯೇ ಗೊತ್ತುಮಾಡಲ್ಪಡುವುದು.

೩. ವೇದಾಂತ ವಿಷಯ, ರಾಜಕೀಯ ವಿಷಯ, ಸಾಂಸಾರಿಕ ವಿಷಯ ಇತ್ಯಾದಿ ಬಗೆಬಗೆಯ ಸಂಗತಿಗಳ ಮೇಲೆ ಸಮಯ ಸನ್ನಿವೇಶ ಗಳನ್ನರಿತು ಮಾಡಿದ ಉಪದೇಶವು ಕಥೆಯ ಕಾಂತಿಯನ್ನು ಹೆಚ್ಚಿಸುವುದು. ಇವೆಲ್ಲವೂ ಸಮಯ ಸ್ಫೂರ್ತಿಗೂ ಪರಿಸ್ಥಿತಿಗೂ ಭಿನ್ನಿಸಬಾರದು.

೪. ಶಾರೀರಸಂಪತ್ತು ಈಶ್ವರದತ್ತವಾದರೂ ಕೂಡಿದಮಟ್ಟಿಗೂ ಹಾಡಿಕೆಯು ಸುಶ್ರಾವ್ಯವಾಗಿಯೂ ಅರ್ಥಗರ್ಭಿತವಾಗಿಯೂ ಇರಬೇಕು. ಹಲವರು ಕೀರ್ತನಕಾರರು ನಾಟಕದವರನ್ನು ಅನುಕರಿಸಲು ಹೋಗುತ್ತಾರೆ.

ಇದು ಸಾಧುವಲ್ಲ. ನಾಟಕದ ರೀತಿಯೇ ಬೇರೆ. ಕೀರ್ತನದ ವಿಧಾನವೇ ಬೇರೆ. ನಾಟಕ ಮನರಂಜನ, ಕೀರ್ತನ ಭವಭಂಜನ.

೫. ಕಥಿಕನ ವೇಷವು ಸೌಮ್ಯವೂ ಗಂಭೀರವೂ ಆದುದಾಗಿರಬೇಕು. ನಾಟಕದಲ್ಲಿ ಪಾತ್ರವನ್ನು ವಹಿಸುವವರಂತೆ ವರ್ತಿಸುವುದು ತಮ್ಮ ಧ್ಯೇಯಕ್ಕೆ ಭಿನ್ನವಾದುದು. ವೇಷ, ಭಾಷೆ ಇವೆರಡೂ ಮನುಷ್ಯನ ಯೋಗ್ಯತೆಯನ್ನು ಜನರಿಗೆ ತೋರಿಸತಕ್ಕ ಹೆಗ್ಗುರುತುಗಳು.

೬. ಕಥೆಯು ಎರಡು ಗಂಟೆಯಲ್ಲಿ ಮುಗಿಯಬೇಕೆಂದು ಮನಶ್ಶಾಸ್ತ್ರಜ್ಞರು ಹೇಳುವರು. ಇದು ದೊಡ್ಡ ದೊಡ್ಡ ಊರುಗಳಲ್ಲಿ ಮಾತ್ರ. ಹೊರತು ಬೇರೆಯಲ್ಲ. ಹಳ್ಳಿಗಾಡುಗಳಲ್ಲಿ ಹೇಳುವ ಕೀರ್ತನ ಬಹುಮಟ್ಟಿಗೆ ಇದಕ್ಕಿಂತಲೂ ಸ್ವಲ್ಪ ಹೆಚ್ಚು ಕಾಲ ಬೇಕಾಗುವುದು. ಇದು ನಮ್ಮ ಅನುಭವಕ್ಕೂ ಸಮ್ಮತವಾಗಿದೆ. ಒಟ್ಟಿನಲ್ಲಿ ಈ ಕಾಲವು ಸಮಯವರಿತು ಹೆಚ್ಚು ಕಡಿಮೆ ಮಾಡುವ ಪ್ರಸಂಗ ಬರುತ್ತದೆ.

೭, ಒಟ್ಟಿನಲ್ಲಿ ಕೀರ್ತನಕಾರನು ಸ್ವದೇಶಾಭಿಮಾನ, ಸ್ವಾಭಿಮಾನ, ಭಾಷಾಭಿಮಾನಗಳಿಗೆ ಎಡೆಗೊಡಬೇಕು. ಸಾಧ್ಯವಾದ ಮಟ್ಟಿಗೂ ನಮ್ಮವರು ಕನ್ನಡ ಸಂಸ್ಕೃತಗಳನ್ನೇ ಉಪಯೋಗಿಸಬೇಕು. ಉಳಿದ ಭಾಷೆಗಳನು ಮಿತವರಿತು ಅವಶ್ಯಕತೆ ತೋರಿದರೆ ಹೇಳಬಹುದು.

೮. ಒಟ್ಟಿನಲ್ಲಿ ಕಥೆಯು ಸರ್ವಲಕ್ಷಣಲಕ್ಷಿತವಾಗಿ, ಸರ್ವಾಂಗ ಸುಂದರನಾಗಿ, ಸರ್ವೇಶ್ವರನ ಕೃಪೆಗೆ ಪಾತ್ರವಾಗಿರಬೇಕು. ಕಥೆಯು ಉತ್ತಮವಾಗಿರುವಂತೆ ಕಥಿಕನು ಬಹುಮಟ್ಟಿಗೂ ಪ್ರಯತ್ನಿಸಬೇಕು.

ಮೇಲೆ ಕಂಡ ಗುಣಗಳು ಕೀರ್ತನದಲ್ಲಿಯೂ ಕೀರ್ತನಕಾರನಲ್ಲಿಯೂ, ಇರಬೇಕೆಂದ ಮೇಲೆ ಇತರರ ವಿಷಯವನ್ನು ಹೇಳುವುದುಳಿದಿರುತ್ತದೆ. ಇಂತಹ ಸಮರ್ಥರಾದ ಬೋಧಕರು ನಮ್ಮ ದೇಶದಲ್ಲಿ ಹೆಚ್ಚಾಗಿಲ್ಲದಿದ್ದರೆ

ವಿರಳವಾಗಿಯಾದರೂ ಇದ್ದೇ ಇರುವರು. ಹೇಳುವವರಿದ್ದ ಮಾತ್ರಕ್ಕೇ ಸಾಲದು. ಕೇಳುವವರೂ ಇರಲೇಬೇಕಾಗುವುದು. ಏಕೆಂದರೆ ಒಂದೂರಿನಲ್ಲಿ ಹೂಮಾರುವವರೂ, ಬಳೆಗಳನ್ನು ತೊಡಿಸುವವರೂ ಇದ್ದ ಮಾತ್ರಕ್ಕೇ ಫಲ ವೇನು? ಅದನ್ನು ಮುಡಿಯಲಿಕ್ಕೆ, ತೊಡಲಿಕ್ಕೆ ಮುತ್ತೈದೆಯರು ಬೇಕಲ್ಲವೇ? ಹಾಗೆಯೇ ಧರ್ಮಬುದ್ಧಿಯುಳ್ಳ ಶ್ರೋತೃಗಳೂ, ರಸಿಕರೂ ಅತ್ಯವಶ್ಯ. ಗುಣಗ್ರಾಹಿಗಳು ಇಲ್ಲದ ಸ್ಥಳಗಳಲ್ಲಿ ಗುಣಿಗೆ ಬೆಲೆಯಿಲ್ಲ. ಆದುದರಿಂದ ನಮ್ಮ ದೇಶೀಯರು ಇಂತಹ ಉತ್ತಮ ಬೋಧಕರಿಗೆ ಆಶ್ರಯವನ್ನು ಕೊಡುವುದು ಆವಶ್ಯಕ. ''ನಿರಾಶ್ರಯಾ ನಶೋಭಂತೇ ಪಂಡಿತಾಃ'' ಎಂಬ ವಾಕ್ಯವಾದರೂ ಇದನ್ನೇ ಪ್ರತಿಪಾದಿಸುವುದು. ಆದುದರಿಂದ ಮಹಾರಾಷ್ಟ್ರ ದೇಶೀಯರಂತೆ ನಮ್ಮ ಕನ್ನಡಿಗರಿಗೂ ಇಂತಹ ಧರ್ಮಪ್ರಚಾರಕರಿಗೆ ಆಶ್ರಯಕೊಟ್ಟು ತದ್ವಾರಾ ದೇಶೋನ್ನತಿಗೆ ಸಹಾಯರಾಗಲೆಂದೂ ಶ್ರೀ ಶಂಕರನು ಇಂತಹ ಸ್ಥಿತಿಯನ್ನು ದಯೆಪಾಲಿಸ ಬೇಕೆಂದೂ ಹಾರೈಸೋಣ.

ಕಂದ॥ ಜಯಮಕ್ಕೆ ಭಾರತಾಂಬೆಗೆ ।
ಜಯಮಕ್ಕೆಮ ಎಮ್ಮ ದೇಶಭಕ್ತರ್ಗೆಲ್ಲಂ ॥
ಜಯಮಕ್ಕೆ ಚಾಮರಾಜಗೆ ।
ಜಯಮಾಗುಗೆ ಸಜ್ಜನಾಳಿಗನಿಶಂ ಧರೆಯೊಳ್ ॥

# ರಾಮಾಯಣವೂ ಭರತಭಕ್ತಿ ಕಾವ್ಯವೂ

ರಾಮಾಯಣ, ಮಹಾಭಾರತಗಳು ಭರತಖಂಡದ ಪ್ರಾಚೀನ ಕಾಲದ ಪ್ರಖ್ಯಾತ ಇತಿಹಾಸ ಕಾವ್ಯಗಳು. ಇವುಗಳಲ್ಲಿ ಪ್ರತಿಪಾದಿತವಾದ ತತ್ವಗಳು ಎಲ್ಲ ದೇಶಗಳಲ್ಲಿಯೂ ಎಲ್ಲ ಕಾಲಗಳಲ್ಲಿಯೂ ಅನುಸರಣೀಯವಾದ ವಿಷಯಗಳು. ರವೀಂದ್ರನಾಥ ಠಾಗೂರರು ರಾಮಾಯಣ-ಮಹಾಭಾರತ ಗಳನ್ನು ಕುರಿತು ''ರಾಮಾಯಣ-ಮಹಾಭಾರತಗಳು, ಗಂಗಾ ಹಿಮಾಲಯ ಗಳಂತೆ ಸಮಗ್ರ ಭರತಖಂಡದವುಗಳು. ಪ್ರಾಚೀನ ಗ್ರೀಸ್‌ದೇಶಕ್ಕೆ ಹೋಮರ್ ಕವಿಯ ''ಇಲಿಯಟ್''ಹೇಗೋ ನಮ್ಮ ದೇಶಕ್ಕೆ ರಾಮಾಯಣ ಮಹಾಭಾರತಗಳು ಹಾಗೆ. ಶತಮಾನದ ಮೇಲೆ ಶತಮಾನವು ಕಳೆದು ಹೋಗಿದ್ದರೂ, ಈ ಮಹಾ ಗ್ರಂಥಗಳ ಪ್ರವಾಹವು ನಮ್ಮ ದೇಶದಲ್ಲಿ ಇನ್ನೂ ಶುಷ್ಕವಾಗಿಲ್ಲ. ಜನರು ಈಗಲೂ, ನಿತ್ಯವೂ, ಗ್ರಾಮ ಗ್ರಾಮಗಳಲ್ಲಿಯೂ ಇವನ್ನು ಓದುತ್ತಾ ಇದ್ದಾರೆ. ಅಂಗಡಿಗಳಿಂದ ಹಿಡಿದು ಅರಮನೆಯವರೆಗೂ ಅವಕ್ಕೆ ಸಮಾನವಾದ ಆದರವು ದೊರೆಯುತ್ತಿದೆ. ಈ ಮಹಾಕಾವ್ಯಗಳು ನಮ್ಮ ದೇಶದ ಇತಿಹಾಸವೂ ಆಗಿವೆ. ಮಿಕ್ಕ ಇತಿಹಾಸಗಳು ಕಾಲಕಾಲಕ್ಕೆ ಎಷ್ಟೋ ವ್ಯತ್ಯಸ್ತವಾಗುತ್ತವೆ. ಆದರೆ ಈ ಇತಿಹಾಸಕ್ಕೆ ಬದಲಾವಣೆ ಯೆಂಬುದೇ ಇಲ್ಲ. ಭರತಖಂಡದ ಸರ್ವಸ್ವವೂ, ಈ ಎರಡು ದೊಡ್ಡ ಕಾವ್ಯಗಳ ಸೌಧಗಳಲ್ಲಿ ಸಿಂಹಾಸನದ ಮೇಲೆ ಚಿರಕಾಲ ವಿರಾಜಿಸುತ್ತಿದೆ. ವಾಲ್ಮೀಕಿಯ ದೃಷ್ಟಿಯಿಂದ ರಾಮನು ಅವತಾರ ಪುರುಷನಲ್ಲ, ಮನುಷ್ಯನೇ ಆಗಿದ್ದನೆಂಬುದನ್ನು ಪಂಡಿತರು ಪರೀಕ್ಷಿಸಿ ತಿಳಿದುಕೊಳ್ಳಬಹುದು. ರಾಮಾಯಣದಲ್ಲಿ ದೇವರು ತನ್ನ ದೇವತ್ವವನ್ನು ಕುಗ್ಗಿಸಿಕೊಂಡು ಮನುಷ್ಯತ್ವಕ್ಕೆ ಇಳಿದಿಲ್ಲ. ವಾಲ್ಮೀಕಿಯು ಮಹಾಕಾವ್ಯವನ್ನು ರಚನೆ ಮಾಡಿದ್ದು, ಮನುಷ್ಯನ ಉಚ್ಚತಮ ಆದರ್ಶವನ್ನು ಸ್ಥಾಪಿಸುವುದಕ್ಕಾಗಿಯೇ' ಜೀವನನ್ನು ದೇವನನ್ನು ಮಾಡುವುದಕ್ಕಾಗಿಯೇ. ಆ ಆದರ್ಶ ಚರಿತ್ರೆವರ್ಣನೆ

ಯನ್ನೇ ಭಾರತೀಯರು ಅಂದಿನಿಂದ ಇಂದಿನವರೆಗೆ ಅತ್ಯಂತ ಉತ್ಸಾಹದಿಂದ ಓದುತ್ತಾ ಬಂದಿದ್ದಾರೆ.''

ರಾಮಾಯಣ–ಮಹಾಭಾರತಗಳನ್ನು ಮನವಿಟ್ಟು ಓದಿದ ಜನ ವಿಶ್ವ ಕವಿ ಠಾಗೂರರ ಮೇಲೆ ಕಂಡ ಮಾತುಗಳನ್ನು ಮನಸಾರ ಒಪ್ಪಿಕೊಳ್ಳುವುದ ರಲ್ಲಿ ಸಂಶಯವಿಲ್ಲ. ಇನ್ನು ಮಹಾಕವಿಯಾದ ಕಾಳಿದಾಸನು ''ಶ್ರೀರಾಮನ ವಂಶ''ವನ್ನು ಕುರಿತು ಎಂತಹ ಗಂಭೀರವಾದ ಮಾತುಗಳನ್ನು ಹೇಳಿದ್ದಾ ನೆಂಬುದನ್ನು ರಘುವಂಶದಲ್ಲಿ ನಾವು ಓದಬಹುದು.

ಸೋಹಮಾಜನ್ಮಶುದ್ಧಾನಾಂ ಆಫಲೋದಯ ಕರ್ಮಣಾಂ।
ಆಸಮುದ್ರಕ್ಷಿತೀಶಾನಾಂ ಆನಾಕ ರಥವರ್ತ್ಮನಾಂ॥
ಯಥಾವಿಧಿ ಹುತಾಗ್ನೀನಾಂ ಯಥಾಕಾಮಾರ್ಚಿತಾರ್ಥಿನಾಂ।
ಯಥಾಪರಾಧ ದಂಡಾನಾಂ ಯಥಾಕಾಲ ಪ್ರಬೋಧಿನಾಂ ।
ತ್ಯಾಗಾಯ ಸಂಭೃತಾರ್ಥಾನಾಂ ಸತ್ಯಾಯ ಮಿತಭಾಷಿಣಾಂ ।
ಯಶಸೇ ವಿಜಿಗೀಷೂಣಾಂ ಪ್ರಜಾಯೈ ಗೃಹಮೇಧಿನಾಂ ॥
ಶೈಶವೇಭ್ಯಸ್ತವಿದ್ಯಾನಾಂ ಯೌವನೇ ವಿಷಯೈಷಿಣಾಂ ।
ವಾರ್ಧಕೇ ಮುನಿವೃತ್ತೀನಾಂ ಯೋಗೇನಾಂತೇ ತನುತ್ಯಜಾಂ ॥

(ರಘುವಂಶ, ಪ್ರ. ಸರ್ಗ)

ಅಂದರೆ ಶ್ರೀ ರಾಮಚಂದ್ರನ ವಂಶೀಯರು ಎನಿಸಿದ ರಘುರಾಜರು ''ಆಜನ್ಮಶುದ್ಧರು, ಆಫಲೋದಯಕರ್ಮರು, ಆ ಸಮುದ್ರಕ್ಷಿತೀಶರು, ಸ್ವರ್ಗದವರೆಗೆ ರಥವನ್ನು ನಡೆಸಬಲ್ಲರು, ಯಥಾವಿಧಿ ಅಗ್ನಿಯನ್ನು ಅರ್ಚಿ ಸುವವರು, ಬೇಡಿದವರ ಅಭೀಷ್ಟವನ್ನು ನೀಡತಕ್ಕವರು, ಅಪರಾಧಕ್ಕೆ ತಕ್ಕಂತೆ ಶಿಕ್ಷಿಸತಕ್ಕವರು, ಪ್ರಜೆಗಳನ್ನು ಮಕ್ಕಳಂತೆ ಕಾಪಾಡತಕ್ಕವರು, ಅವರ ಧನಾರ್ಜನೆಯು ಸತ್ಪಾತ್ರ ವಿನಿಯೋಗಕ್ಕೆ, ಅವರ ಮಿತೋಕ್ತಿಯು ಕೇವಲ ಸತ್ಯಕ್ಕೆ. ಅವರ ಪತ್ನೀಪರಿಗ್ರಹಣವು ಸತ್ಸಂತಾನಕ್ಕೆ, ರಘುವಂಶದ ರಾಜರು, ಬಾಲ್ಯದಲ್ಲಿ ವಿದ್ಯೆ, ಯೌವನದಲ್ಲಿ ಭೋಗ, ಮುಪ್ಪಿನಲ್ಲಿ ಮುನಿ ವೃತ್ತಿ, ಅಂತ್ಯದಲ್ಲಿ ಸದ್ಗತಿ ಇವುಗಳನ್ನು ಬಯಸುತಕ್ಕವರು'' ಎಂದು

ಹೇಳಿರುವನು. ಕವಿಕುಲಗುರುವು ಹೇಳಿರುವ ಈ ಮಹತ್ವದ ಮಾತುಗಳು ಶ್ರೀರಾಮಚಂದ್ರನ ವಂಶದ ಹಿರಿಮೆ ಮತ್ತು ಗರಿಮೆಗಳನ್ನು ಚೆನ್ನಾಗಿ ನಿರೂಪಿಸಿವೆ. ಇಂತಹ ಉತ್ಕೃಷ್ಟವಾದ ವಂಶದಲ್ಲಿ, ರಘು, ಅಜ, ದಿಲೀಪ, ದಶರಥ ಮೊದಲಾದ ದೇವವರ್ಗದ ಮಹಾಪುರುಷರ ಪರಂಪರೆಯಲ್ಲಿ ಶ್ರೀರಾಮಚಂದ್ರನು ಅವತರಿಸಿರುವನೆಂಬ ವಿಷಯವನ್ನು ನಾವು ಸದಾ ಸ್ಮರಣೆಯಲ್ಲಿಟ್ಟಿರಬೇಕು. ರಾಮಾಯಣವನ್ನು ಅರ್ಥಮಾಡಿಕೊಳ್ಳಲಿಕ್ಕೆ ಮೊದಲು ಈ ವಿಚಾರಗಳ ಅರಿವು ಅಗತ್ಯ.

ರಾಮಾಯಣವನ್ನು ಬರೆದ ವಾಲ್ಮೀಕಿ ಮಹರ್ಷಿಯು ಕಥಾ ನಾಯಕನಾದ ಶ್ರೀರಾಮಚಂದ್ರನನ್ನು ಕುರಿತು

ಸ ತು ನಿತ್ಯಂ ಪ್ರಶಾಂತಾತ್ಮಾ ಮೃದುಪೂರ್ವಂ ಚ ಭಾಷತೇ।
ಉಚ್ಯಮಾನೋಪಿ ಪುರುಷಂ ನೋತ್ತರಂ ಪ್ರತಿಪದ್ಯತೇ॥

ಕಥಂಚಿದುಪಕಾರೇಣ ಕೃತೇನೈಕೇನ ತುಷ್ಯತಿ।
ನ ಸ್ಮರತ್ಯಪಕಾರಾಣಾಂ ಶತಮಪ್ಯಾತ್ಮವತ್ತಯಾ॥

ದೀನಾನುಕಂಪೀ ಧರ್ಮಜ್ಞೋ ನಿತ್ಯಂಪ್ರಗ್ರಹವಾನ್ ಶುಚಿಃ।
ಕುಲೋಚಿತ ಮತಿಃ ಕ್ಷಾತ್ರಂ ಧರ್ಮಂಸ್ವಂ ಬಹುಮನ್ಯತೇ॥

ಕಲ್ಯಾಣಾಭಿಜನಃ ಸಾಧುರದೀನಃ ಸತ್ಯವಾಗ್ರುಜುಃ॥
ವೃದ್ಧೈರಭಿವಿನೀತಶ್ಚ ದ್ವಿಜೈಃ ಧರ್ಮಾರ್ಥದರ್ಶಿಭಿಃ।

ಧರ್ಮಾರ್ಥಕಾಮ ತತ್ವಜ್ಞಃ ಸ್ಮೃತಿಮಾನ್ ಪ್ರತಿಭಾನವಾನ್ ।
ಲೌಕಿಕೇ ಸಮಯಾಚಾರೇ ಕೃತಕಲ್ಪೋ ವಿಶಾರದಃ॥

ದೃಢಭಕ್ತಿಃ ಸ್ಥಿರಪ್ರಜ್ಞೋ ನಾಸದ್ಗ್ರಾಹೀ ನ ದುರ್ವಚಾಃ।
ನಿಸ್ತಂದ್ರಿರಪ್ರಮತ್ತಶ್ಚ ಸ್ವದೋಷ ಪರದೋಷವಿತ್॥

ಶಾಸ್ತ್ರಜ್ಞಶ್ಚ ಕೃತಜ್ಞಶ್ಚ ಪುರುಶಾಂತರ ಕೋವಿದಃ।
ಯಃ ಪ್ರಗ್ರಹಾನುಗ್ರಹಯೋಃ ಯಥಾನ್ಯಾಯಂ ವಿಚಕ್ಷಣಃ॥

ಸತ್ಸಂಗ್ರಹ ಪ್ರಗ್ರಹಣೇ ಸ್ಥಾನವಿನ್ನಿಗ್ರಹಸ್ಯಚ।
ಆಯಕರ್ಮಣ್ಯುಪಾಯಜ್ಞಃ ಸಂದೃಷ್ಟವ್ಯಯಕರ್ಮವಿತ್॥
ಶ್ರೈಷ್ಠ್ಯಂಶಾಸ್ತ್ರಸಮೂಹೇಷು ಪ್ರಾಪ್ತ್ಯೋವ್ಯಾ ಮಿಶ್ರಕೇಷುಚ।
ಅರ್ಥಧರ್ಮೌಚ ಸಂಗೃಹ್ಯಸುಖತಂತ್ರೋ ನ ಚಾಲಸಃ॥
ಅನಸೂಯೋ ಜಿತಕ್ರೋಧೋ ನದೃಪ್ತೋನ ಚ ಮತ್ಸರೀ।
ನ ಚಾವಮಂತಾ ಭೂತಾನಾಂ ನ ಚ ಕಾಲವಶಾನುಗಃ॥

ಅಂದರೆ ಶ್ರೀ ರಾಮನು ಶಾಂತಸ್ವಭಾವಿ, ಮೃದುಭಾಷಿ, ಉಪಕಾರವನ್ನು ಸ್ಮರಿಸುವವನು, ಅಪಕಾರವನ್ನು ಮರೆಯುವವನು, ಧರ್ಮವನ್ನು ತಿಳಿದವನು, ದೀನರಲ್ಲಿ ಸಹಾನುಭೂತಿಯುಳ್ಳವನು, ಶುಭಗುಣಗಳಿಗೆ ಆಕಾರನು, ವಂಶಗೌರವವನ್ನು ಕಾಪಾಡುವವನು, ಧರ್ಮಾರ್ಥಗಳನ್ನು ಬಲ್ಲವನು, ಜ್ಞಾನವೃದ್ಧ, ವಯೋವೃದ್ಧರಿಂದ ನಡೆವಳಿಕೆಯನ್ನು ಕಲಿತವನು, ಪ್ರತಿಭಾಸಂಪನ್ನನು, ಲೋಕಾನುಭವಿಯು, ಸತ್ಯಭಾಷಿಯು, ಧೀರನು, ಸರಳನು, ನಿಶ್ಚಲವಾದ ಭಕ್ತಿ, ಸ್ಥಿರವಾದ ವಿವೇಕವುಳ್ಳವನು. ಕೆಟ್ಟದ್ದನ್ನು ಒಪ್ಪದವನು, ಕಾರ್ಯಾಸಕ್ತನು, ಆಲಸ್ಯರಹಿತನು, ಶಾಸ್ತ್ರನಿಪುಣನು, ಇಂಗಿತಜ್ಞನು, ನಿಗ್ರಹಾನುಗ್ರಹಸಮರ್ಥನು, ವಿದ್ವತ್ಸಭೆಯಲ್ಲಿ ಮಾನ್ಯನು, ಕೋಪತಾಪಗಳಿಲ್ಲದವನು, ಪ್ರಶಾಂತನು, ವಿನಯಶೀಲನು, ಯಾರನ್ನೂ ಅಪಮಾನಗೊಳಿಸದವನು" ಎಂದು ಮೊದಲಾಗಿ ಆ ರಘುರಾಮನ ಸದ್ಗುಣ ಸಂಪತ್ತನ್ನು ಕುರಿತು ಬಣ್ಣಿಸಿರುವನು.

(ಅಯೋಧ್ಯಾಕಾಂಡ, ವಾಲ್ಮೀಕಿ ರಾಮಾಯಣಮ್)

ಆದಿಕವಿಯ ಈ ಮೇಲೆ ಕಂಡ ಮಾತುಗಳು ರಾಮಾಯಣದ ಕಥಾ ನಾಯಕನಾದ ಶ್ರೀರಾಮನ ಸುಂದರ ಚಿತ್ರವನ್ನು ನಮ್ಮ ಕಣ್ಣಿಗೆ ಕಟ್ಟಿದಂತೆ ಮನದಟ್ಟುಮಾಡಿವೆ. ರಾಮಾಯಣ ಮಹಾಕಾವ್ಯವು ಭಾರತೀಯರಿಗೆ ಒಂದು ದೃಷ್ಟಿಯಿಂದ ಧರ್ಮಗ್ರಂಥ, ಮತ್ತೊಂದು ದೃಷ್ಟಿಯಿಂದ ದರ್ಶನ ಗ್ರಂಥ, ಮಗದೊಂದು ದೃಷ್ಟಿಯಿಂದ ಸಾಹಿತ್ಯ ಸರ್ವಸ್ವ, ಇನ್ನೊಂದು ದೃಷ್ಟಿಯಿಂದ ನೀತಿ ಬೋಧೆಯ ಮಹಾಗ್ರಂಥ. ಈ ಮಹಾಕಾವ್ಯವು ಗಂಗೆ

ಯಂತೆ ನಿರ್ಮಲವಾಗಿಯೂ, ಕಾವೇರಿಯಂತೆ ಉಪಯುಕ್ತವಾಗಿಯೂ, ತುಂಗಭದ್ರೆಯಂತೆ ಹಿತಕರವಾಗಿಯೂ ಭಾರತೀಯರನ್ನು ಉದ್ಧಾರ ಮಾಡುತ್ತಿದೆ. ಪವಿತ್ರವಾದ ಈ ರಾಮಾಯಣವು ಜಾತಿ, ಮತ, ಪಂಥಗಳ ಮೇರೆಯನ್ನು ಮೀರಿ–ಭಗವದ್ಗೀತೆಯಂತೆ–ಸರ್ವಮತೀಯರಿಗೂ ಪ್ರಿಯತಮವೆನಿಸಿದೆ. ಶ್ರೀರಾಮನ ಪಿತೃಭಕ್ತಿ, ದಶರಥನ ಪುತ್ರಪ್ರೇಮ, ಸೀತೆಯ ಪಾತಿವ್ರತ್ಯ, ಲಕ್ಷ್ಮಣಾದಿಗಳ ಸೋದರ ಪ್ರೇಮ, ಭರತನ ಸತ್ಯನಿಷ್ಠೆ, ಸುಗ್ರೀವನ ಸ್ನೇಹಪರತೆ, ವಶಿಷ್ಟ. ವಿಶ್ವಾಮಿತ್ರರ ಶಿಷ್ಯ ವಾತ್ಸಲ್ಯ, ವಿಭೀಷಣನ ವಿನಯ ಶೀಲತೆ, ಮಾರುತಿಯ ಸ್ವಾಮಿನಿಷ್ಠೆ ಮತ್ತು ಅಸಮ ಸಾಹಸ ಇತ್ಯಾದಿ ಸದ್ಗುಣ ಸಂಪತ್ತು ಯಾವಕಾಲಕ್ಕೆ ಯಾವ ದೇಶಕ್ಕೆ ಯಾವ ಸಮಾಜಕ್ಕೆ ತಾನೆ ಬೇಡವಾದಾವು?

ತುಳಸೀದಾಸ, ಕಬೀರದಾಸ, ಸಮರ್ಥ ರಾಮದಾಸ, ಪುರಂದರದಾಸ, ತ್ಯಾಗರಾಜ ಮುಂತಾದವರು ಕೃತಾರ್ಥರಾದುದು ರಾಮಾಯಣದಿಂದ, ಶಿವಾಜಿ ಮಹಾರಾಜನು ಆದರ್ಶಪುರುಷನಾದುದು ರಾಮಾಯಣ ಕಥಾ ಶ್ರವಣದಿಂದ, ರಾಷ್ಟ್ರಪಿತ ಗಾಂಧೀಜಿ ಲೋಕೈಕಮಾನ್ಯನಾದುದು ರಾಮಾಯಣ ಕಥಾಶ್ರವಣದಿಂದ. ಶ್ರೀರಾಮಾನುಜಾಚಾರ್ಯರು ಸಾಕ್ಷಾತ್ಕಾರವನ್ನು ಪಡೆದುದು ರಾಮಾಯಣಾಧ್ಯಯನ ಬಲದಿಂದ. ಇತ್ಯಾದಿ ವಿಷಯಗಳನ್ನು ನಾವು ದೇಶದ ಚರಿತ್ರೆಯಲ್ಲಿ ಓದಿದಾಗ, ರಾಮಾಯಣವು ಭಾರತೀಯ ಜನಜೀವನದಲ್ಲಿ ಎಂತಹ ಮಹತ್ವದ ಸ್ಥಾನವನ್ನು ಪಡೆದಿದೆ ಯೆಂಬುದನ್ನು ನಾವು ಸುಲಭವಾಗಿ ಅರಿಯಬಹುದು. ರಾಮಾಯಣವು ಆದಿ ಕಾವ್ಯವೆಂದು ಈ ದೇಶದಲ್ಲಿ ಪ್ರಖ್ಯಾತಿಯನ್ನು ಪಡೆದಿದೆ. ರಾಮನಾಮವು ತಾರಕ ಮಂತ್ರವೆಂದು ಮುಮುಕ್ಷುಗಳಿಂದ ಭಾವಿಸಲ್ಪಟ್ಟಿದೆ. ಶ್ರೀರಾಮನು ಭಗವಂತನ ಅವತಾರವೆಂದು ನಮ್ಮ ದೇಶದ ಜನ ಭಾವಿಸಿದ್ದಾರೆ. ತುಳಸೀದಾಸನು ಹಿಂದಿಯಲ್ಲಿ ಬರೆದಿರುವ ರಾಮಾಯಣಕ್ಕೆ "ರಾಮಚರಿತ ಮಾನಸ" ಎಂಬ ಹೆಸರಿಟ್ಟು 'ರಾಮಾಯಣವು ಹಿಮಾಲಯದ ಮಾನಸ ಸರೋವರದಂತೆ ತನ್ನಲ್ಲಿ ಮುಳುಗಿದವರ ಸಕಲ ಪಾಪಗಳನ್ನೂ ಕಳೆದು ಮೋಕ್ಷವನ್ನು ಕೊಡ ತಕ್ಕುದು' ಎಂಬ ವಿಶಾಲವಾದ ಮತ್ತು ಗಂಭೀರವಾದ ಅರ್ಥವನ್ನು

ಹೇಳಿರುತ್ತಾನೆ. ಅಧ್ಯಾತ್ಮ ರಾಮಾಯಣದಲ್ಲಿ "ರಮಂತೇ ಯೋಗಿನೋಯತ್ರ ಇತಿ ರಾಮಃ" ಎಂಬ ನಿಗೂಢವಾದ ಅರ್ಥವು ರಾಮ ಶಬ್ದದ ಪರಮ ತಾತ್ಪರ್ಯವೆನಿಸಿದೆ.

ಕನ್ನಡ ಸಾಹಿತ್ಯದಲ್ಲಿ ಸುಮಾರು ಒಂದು ಸಾವಿರವರ್ಷಗಳಿಂದ ರಾಮಾಯಣವು ನಮ್ಮ ಜನರ ಬಳಕೆಯಲ್ಲಿತ್ತೆಂದು ಹೇಳಬಹುದು. ಕ್ರಿಸ್ತಶಕ ೯೫೦ ರಲ್ಲಿದ್ದ ಕವಿಚಕ್ರವರ್ತಿ ಪೊನ್ನನು "ಭುವನೈಕ ರಾಮಾಭ್ಯುದಯ" ಎಂಬ ಕಾವ್ಯವನ್ನೂ, ಕ್ರಿಸ್ತಶಕ ೧೧೦೦ರಲ್ಲಿದ್ದ ಮಹಾಕವಿ ನಾಗಚಂದ್ರನು ''ರಾಮ ಚಂದ್ರ ಚರಿತಪುರಾಣ ಅಥವಾ ಪಂಪರಾಮಾಯಣ'' ಎಂಬ ಗ್ರಂಥವನ್ನೂ ಬರೆದಿದ್ದಾರೆ. ಕುಮಾರ ವಾಲ್ಮೀಕಿ ಬಿರುದಾಂಕಿತ ತೊರವೆಯ ನರಹರಿ ಕವಿಯು (ಕ್ರಿ. ಶ. ೧೫೦೦ ರಲ್ಲಿ) ವಾಲ್ಮೀಕಿ ರಾಮಾಯಣವನ್ನು ಸಂಗ್ರಹಿಸಿ ''ತೊರವೆ ರಾಮಾಯಣ" ಎಂಬ ಗ್ರಂಥವನ್ನು ಬರೆದಿದ್ದಾನೆ. ಈ ಗ್ರಂಥಗಳೇ ಅಲ್ಲದೆ ಕನ್ನಡದಲ್ಲಿ'' ಕುಮುದೇಂದು ರಾಮಾಯಣ, ಪರಶುರಾಮ ರಾಮಾಯಣ, ಅದ್ಭುತರಾಮಾಯಣ, ಶ್ರೀರಾಮಪಟ್ಟಾಭಿಷೇಕ, ಆನಂದ ರಾಮಾಯಣ, ರಾಮಾಶ್ವಮೇಧ, ಅದ್ವೈತ ರಾಮಾಯಣ, ರಾಮಾಯಣ ಸಂಗ್ರಹ, ರಾಮಾಯಣ ದರ್ಶನ, ಜನಪ್ರಿಯ ರಾಮಾಯಣ, ಸಂಗ್ರಹ ರಾಮಾಯಣ, ನವನೀತ ರಾಮಾಯಣ, ಶೇಷ ರಾಮಾಯಣ, ಉತ್ತರ ರಾಮಾಯಣ ಮೊದಲಾದ ಮಹತ್ವದ ಗ್ರಂಥಗಳೂ ಉಂಟು. ಸಂಸ್ಕೃತ ಸಾಹಿತ್ಯದಲ್ಲಿ ಪ್ರಖ್ಯಾತವೆನಿಸಿರುವ ವಾಶಿಷ್ಠ ರಾಮಾಯಣ, ಅಧ್ಯಾತ್ಮ ರಾಮಾಯಣ, ರಾಮಾಯಣ ಚಂಪು, ಉತ್ತರ ರಾಮಚರಿತೆ, ರಘುವಂಶ ಮೊದಲಾದವು ಕನ್ನಡಕ್ಕೆ ಭಾಷಾಂತರವೆನಿಸಿ ನಮ್ಮ ಜನರಿಗೆ ಸುಪರಿಚಿತ ವೆನಿಸಿವೆ. ಇತ್ತೀಚೆಗೆ ತುಲಸೀದಾಸ ರಾಮಾಯಣವು ಕೂಡ ಕನ್ನಡಕ್ಕೆ ಪರಿವರ್ತಿಸಲ್ಪಟ್ಟು ನಮ್ಮ ಜನರ ಮನವನ್ನು ಸೆಳೆದಿದೆ.

ರಾಮಾಯಣವು ತನ್ನ ವಿಶ್ವಮೋಹಕವಾದ ಗುಣದಿಂದ ಭಾರತದ ಎಲ್ಲ ಮತೀಯರನ್ನೂ ಆಕರ್ಷಿಸಿದೆ. ವಿಮಲಸೂರಿ, ಪೊನ್ನ, ಗುಣಭದ್ರ, ಚಾವುಂಡರಾಯ, ಅಭಿನವಪಂಪ, ಕುಮುದೇಂದು, ಹೇಮಚಂದ್ರ

ಮೊದಲಾದ ಜೈನಕವಿಗಳು ರಾಮಾಯಣವನ್ನು ಜಿನಧರ್ಮಕ್ಕೆ ಅನುಗುಣ ವಾಗಿ ರಚಿಸಿರುತ್ತಾರೆ. ಕ್ರಿಸ್ತಶಕ ೧೬೫೦ರಲ್ಲಿ ಕರ್ಣಾಟಕದಲ್ಲಿ ಜೀವಿಸಿದ್ದ ನಿಜಗುಣಾರ್ಯನೆಂಬ ವೀರಶೈವ ಕವಿಯು ಅದ್ವೈತ ರಾಮಾಯಣವನ್ನು ಬರೆದಿರುತ್ತಾನೆ. ಬೌದ್ಧರೂ ಕೂಡ ರಾಮಾಯಣವನ್ನು ತಮ್ಮ ಧರ್ಮಕ್ಕೆ ಅನುಗುಣವಾಗಿ ರಚಿಸಿರುತ್ತಾರೆ. ಬೌದ್ಧರ ಜಾತಕ ಕಥೆಗಳಲ್ಲಿ "ದಶರಥ ಜಾತಕ'' ಎಂಬ ಕಥೆಯೊಂದಿದೆ. ಜೈನರ ರಾಮಾಯಣಗಳಲ್ಲಿ ವಿಮಲ ಸೂರಿಯ 'ಪಉಮ ಚರಿಯ' ಎಂಬ ಪ್ರಾಕೃತ ಗ್ರಂಥವು ಅತ್ಯಂತ ಪ್ರಾಚೀನ ವಾದುದೆಂದು ವಿದ್ವಾಂಸರು ಹೇಳಿರುತ್ತಾರೆ. ಅನೇಕ ಸನ್ನಿವೇಶಗಳಲ್ಲಿ ವಿಮಲಸೂರಿಯ ರಾಮಾಯಣವು ವಾಲ್ಮೀಕಿ ರಾಮಾಯಣಕ್ಕಿಂತ ಹೆಚ್ಚು ರಮಣೀಯವಾಗಿದೆ. ರಾವಣಾದಿಗಳ ಚರಿತ್ರೆಯ ಮೇಲೆಯೂ ಚೆನ್ನಾಗಿ ಬೆಳಕು ಚೆಲ್ಲುತ್ತದೆ. ಐತಿಹಾಸಿಕಾಂಶಗಳಿಂದ ಕೂಡಿದೆ.

ವಾಲ್ಮೀಕಿ ರಾಮಾಯಣವು ಒಟ್ಟು ಏಳು ಕಾಂಡಗಳಲ್ಲಿ ೨೪,೦೦೦ ಶ್ಲೋಕಗಳನ್ನುಳ್ಳ ಮಹಾಕಾವ್ಯವೆನಿಸಿದೆ. ರಾಮಾಯಣದಲ್ಲಿ ಕರುಣರಸ ಮತ್ತು ವೀರರಸಗಳು ಅನುಕ್ರಮವಾಗಿ ಪ್ರಾಮುಖ್ಯತೆಯನ್ನು ಪಡೆದಿವೆ. ಈ ಮಹಾಕಾವ್ಯದ ಏಳು ಕಾಂಡಗಳಲ್ಲಿ ಆರು ಕಾಂಡಗಳನ್ನು ಪೂರ್ವ ರಾಮಾ ಯಣವೆಂದೂ, ಏಳನೆಯದನ್ನು ಉತ್ತರ ರಾಮಾಯಣವೆಂದೂ ಕರೆಯುವ ವಾಡಿಕೆಯಿದೆ. ಈ ಏಳು ಕಾಂಡಗಳಲ್ಲಿ ಕಿಷ್ಕಿಂಧಾಕಾಂಡವು ಕೇವಲ ಕರ್ಣಾಟಕ ದಲ್ಲಿ ನಡೆದ ಕಥೆ ಎಂಬುದನ್ನು ಜನರು ನೆನಪಿನಲ್ಲಿಡಬೇಕು. ವಾಲ್ಮೀಕಿಯು, ವಾಲಿ, ಅಂಗದ, ಸುಗ್ರೀವ, ಆಂಜನೇಯ, ನಳ, ನೀಲ, ತಾರೆ, ರುಮೆ ಮೊದಲಾದವರನ್ನು ಆಲಂಕಾರಿಕ ಭಾಷೆಯಲ್ಲಿ ವಾನರರೆಂದು ಸಂಬೋಧಿ ಸಿರುವುದನ್ನು ಕಾಲಕ್ರಮದಲ್ಲಿ ಜನರು ಆ ಮಹಾ ವೀರಜನರು ಕಪಿಗಳೆಂದು ಕರೆಯಲು ಮೊದಲು ಮಾಡಿದುದು ನಿಜವಾಗಿಯೂ ಇತಿಹಾಸದಲ್ಲಿ ಆಶ್ಚರ್ಯಕರವಾದ ಘಟನೆಯೇ ಸರಿ. ಶ್ರೀ ರಾಮನ ಸಂಗಡ ಸಮಾನ ಗೌರವದ ಗೆಳೆತನವನ್ನು ಹೊಂದಿದ ಸುಗ್ರೀವನನ್ನೂ, ಸಕಲಶಾಸ್ತ್ರಪಂಡಿತನೂ, ರಾಜ ನೀತಿ ವಿಶಾರದನೂ, ಮಹಾವೀರನೂ, ಜಿತೇಂದ್ರಿಯನೂ, ಎನಿಸಿ ಶ್ರೀರಾಮ ಚಂದ್ರನಿಂದ ಆ ಲಿಂಗನವನ್ನು ಪಡೆದು ಮುಂದಿನ ಬ್ರಹ್ಮನೆನಿಸಿರುವ ಆಂಜ

ನೇಯನನ್ನೂ, ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದ ನಳ, ನೀಲಾದಿ ಶಿಲ್ಪ ಕಲಾ ವಿಶಾರದನನ್ನೂ, ನಾಗರಿಕ ಸ್ತ್ರೀಯರೆನಿಸಿದ ತಾರಾ ರುಮಾ ಇತ್ಯಾದಿ ಮಾನ್ಯ ಮಹಿಳೆಯರನ್ನೂ ವನ್ಯ ಪ್ರಾಣಿಗಳೆನಿಸುವ "ಕಪಿಗಳು" ಎಂದು ಕರೆಯುವುದು ನ್ಯಾಯವೇ? ಔಚಿತ್ಯವೇ? ಎಂಬುದನ್ನು ರಾಮಾಯಣವ ನ್ನೋದುವವರೆಲ್ಲರೂ ಯೋಚಿಸಬೇಕಾದ ಕಾಲ ಬಂದಿದೆ.

ನಮ್ಮೆಲ್ಲರ ಸುದೈವದಿಂದ ವಿಮಲಸೂರಿ ಮೊದಲಾದ ವಿವೇಕಿಗಳಾದ ಜೈನಕವಿಗಳು 'ಪಉಮ ಚರಿಯ' ಇತ್ಯಾದಿ ಗ್ರಂಥದಲ್ಲಿ ಸುಗ್ರೀವ, ಹನುಮಂತಾದಿಗಳು ಕಪಿಧ್ವಜರು, ವಾನರ ನಾಮಕ ಕುಲದವರು ಎಂದು ಮೊದಲಾಗಿ ನಿರೂಪಿಸಿ ನಮಗೆ ಮಾರ್ಗದರ್ಶನ ಮಾಡಿರುತ್ತಾರೆ. ಮಹಾ ನಾಗರಿಕರಾದ ರಾಮ ಲಕ್ಷ್ಮಣರು ಶಾಖಾಮೃಗಗಳ ಸಂಗಡ ಸ್ನೇಹವನ್ನು ಮಾಡಿಕೊಳ್ಳುವುದೂ, ಆ ಕಪಿಗಳೊಡನೆ ಲಂಕೆಯ ಮೇಲೆ ದಂಡೆತ್ತಿ ಹೋದರೆಂಬುದೂ, ಅಜೇಯರಾದ ರಾವಣಾದಿಗಳನ್ನು ಜಯಿಸಿದರೆಂಬುದೂ ವಿವೇಕಿಗಳ ಆಲೋಚನೆಗೆ ಸಹ ದೂರವಾದುದಲ್ಲವೆ?

ರಾಮಾಯಣದ ಸುಗ್ರೀವನು ಕರ್ಣಾಟಕದ ಪ್ರಖ್ಯಾತನಾದ ರಾಜ, ಹನುಮಂತನು ರಾಜನೀತಿ ವಿಶಾರದನಾದ ಮಹಾಮಂತ್ರಿ, ನಳ ನೀಲಾದಿಗಳು ವಿಖ್ಯಾತ ಕಲಾಭಿಜ್ಞರು. ರುಮೆ, ತಾರೆಯರು ನಾಗರಿಕ ಸ್ತ್ರೀಯರು, ಇದಕ್ಕೆ ನಿದರ್ಶನ ವಾಲ್ಮೀಕಿ ರಾಮಾಯಣದಲ್ಲಿಯೇ ಇದೆ. ಪಂಪಾಕ್ಷೇತ್ರದಲ್ಲಿ ಶ್ರೀ ರಾಮ ಲಕ್ಷ್ಮಣರನ್ನು ಮೊದಲುಬಾರಿ ಕಂಡು ಹನುಮಂತನು ಶ್ರೀ ರಾಮನನ್ನು ವಿನಯದಿಂದ ಮಾತನಾಡಿಸುತ್ತಾನೆ. ಆತನ ವಾಕ್ ಪ್ರೌಢಿಮೆಗೆ ಮೆಚ್ಚಿ ರಘುರಾಮನು ಲಕ್ಷ್ಮಣನನ್ನು ಕುರಿತು

ನೂನಂ ವ್ಯಾಕರಣಂ ಕೃತ್ಸ್ನಮನೇನ ಬಹುಧಾಶ್ರುತಂ।
ಬಹು ವ್ಯಾಹರತಾನೇನ ನ ಕಿಂಚಿದಪಶಬ್ದಿತಂ॥
ಅವಿಸ್ತರಮ್ ಅಸಂದಿಗ್ಧಮ್ ಅವಿಲಂಬಿತಂ ಅದ್ಭುತಂ।
ಉರಃಸ್ಥಂ ಕಂಠಗಂ ವಾಕ್ಯಂ ವರ್ತತೇ ಮಧ್ಯಮೇ ಸ್ವರೇ॥

ಸಂಸ್ಕಾರ ಕ್ರಮಸಂಪನ್ನಾಮ್ ಅದ್ರುತಾಮ್ ಅವಿಲಂಬಿತಾಮ್ ॥
ಉಚ್ಚಾರಯತಿ ಕಲ್ಯಾಣೀಂ ವಾಚಂ ಹೃದಯಹಾರಿಣೀಂ॥

"ಆತನು ವ್ಯಾಕರಣವೆಲ್ಲವನ್ನೂ ಚೆನ್ನಾಗಿ ಸಾಧಿಸಿದ್ದಾನೆ. ಇಷ್ಟು ಮಾತನಾಡಿದರೂ ಅದರಲ್ಲಿ ಅಪಶಬ್ದ ಒಂದೂ ಇಲ್ಲ. ಮಾತು ಬಹಳ ಉದ್ದವಿಲ್ಲ. ಅದರಲ್ಲಿ ಸಂದೇಹಕ್ಕೆವಕಾಶವಿಲ್ಲ. ಅತಿ ಸಾವಕಾಶವಿಲ್ಲ, ಅತಿ ವೇಗವಿಲ್ಲ, ಧ್ವನಿ ಅತಿಗಟ್ಟಿಯಲ್ಲ, ಅತಿಮೆಲ್ಲನೆ ಅಲ್ಲ, ಮಧ್ಯಮ ಅಂತಸ್ತಿನದು. ವಿಷಯ ನಿರೂಪಣೆಯ ರೀತಿಯಲ್ಲಿ ಒಂದು ಪೂರ್ವಾಲೋಚನೆಯಿಂದ ಗೊತ್ತಾದ ಅನುಕ್ರಮ ತೋರುತ್ತದೆ. ಅವಸರವೂ ಮಂದವೂ ಎರಡೂ ಅಲ್ಲದ ಈ ಮಂಗಳಕರವಾದ ಮಾತು ಹೃದಯವನ್ನು ಸ್ವಾಧೀನಪಡಿಸಿಕೊಳ್ಳ ಬಲ್ಲದ್ದಾಗಿದೆ" ಎಂದು ಹೇಳಿರುತ್ತಾನೆ.

(ವಾಲ್ಮೀಕಿ ರಾಮಾಯಣ, ಕಿಷ್ಕಿಂಧಾಕಾಂಡ)

ಮೇಲೆ ಕಂಡಂತೆ ಶ್ರೀ ರಾಮಚಂದ್ರನಿಂದ ಸಂಸ್ತುತ್ಯಮಾನವಾದ ಆಂಜನೇಯನೂ ಅವನ ರಾಜನಾದ ಸುಗ್ರೀವನೂ ಅವನ ಪ್ರಜೆಗಳಾದ ನಳ ನೀಲಾದಿಗಳೂ ನಾಲ್ಕು ಕಾಲಿನ ಕಪಿಗಳೆಂದು ಭಾವಿಸುವುದು ವಿವೇಕವೆ? ಇವರನ್ನು ಕರ್ನಾಟಕದ ಮೂಲನಿವಾಸಿಗಳಾದ ಕನ್ನಡಿಗರು ಎಂದು ತಿಳಿವುದು ಸಾಧುವಲ್ಲವೆ? ಇವರ ಕಥೆಗಳಿಗೆ ಕಪಿಧ್ವಜಗಳಿರುತ್ತಿದ್ದುದರಿಂದ ಇವರನ್ನು ಕಪಿಧ್ವಜರು, ವಾನರ ಕುಲದವರು ಎಂದು ಜನ ಕರೆದಿರಬೇಕಲ್ಲವೆ?

ಇಂದಿಗೂ ಕರ್ನಾಟಕದಲ್ಲಿ (ವಿಶಾಲ ಮೈಸೂರು ರಾಜ್ಯ) ವಿರಾಜಮಾನವಾಗಿರುವ, ಕಿಷ್ಕಿಂಧೆ, ಪಂಪಾಕ್ಷೇತ್ರ, ಪಂಪಾ ಸರೋವರ, ಋಷ್ಯಮೂಕ, ಹೇಮಕೂಟ, ಮತಂಗ ಮೊದಲಾದುವನ್ನು ಕಣ್ಣಾರಕಂಡು ಶ್ರೀ ರಾಮಲಕ್ಷ್ಮಣರಂತೆಯೇ ಜನತೆಯಿಂದ ಪೂಜಾರ್ಹರೆನಿಸಿರುವ ಸುಗ್ರೀವ, ಆಂಜನೇಯಾದಿಗಳ ದೇವಾಲಯಗಳನ್ನು ಪ್ರತ್ಯಕ್ಷವಾಗಿ ನೋಡುತ್ತಿರುವ ನಾವುಗಳು ಕೋಟಿಗಟ್ಟಲೆ ಜನರಿಂದ ಪೂಜೆಗೊಳ್ಳುತ್ತಿರುವ ಮತ್ತು ಪುರುಷೋತ್ತಮನಾದ ಶ್ರೀರಾಮಚಂದ್ರನ ಅನುಗ್ರಹಕ್ಕೆ ಪಾತ್ರರಾದ ಈ ವಾನರ

ಕುಲದ ವೀರರನ್ನು, ಕಪಿಧ್ವಜದಿಂದ ಪರಿಶೋಭಿಸಲ್ಪಟ್ಟರಥವುಳ್ಳ ಈ ಶೂರ ಜನರನ್ನು ಕನ್ನಡ ಕುಲದ ಮೂಲಪುರುಷರೆಂದು ತಿಳಿಯಲು ಸಮರ್ಥರಾಗ ಬಾರದೆ?

ಭರತಭಕ್ತಿ ಕಾವ್ಯವು ಕನ್ನಡ ಸಾಹಿತ್ಯಕ್ಕೆ ಅಲಂಕಾರ ಪ್ರಾಯವಾದ ಒಂದು ವಿನೂತನ ಕಾವ್ಯ. ಇದರಲ್ಲಿ ೯ ಸಂಧಿಗಳೂ, ೬೪೪ ವಾರ್ಧಕ ಷಟ್ಪದಿಯ ಪದ್ಯಗಳೂ ಇವೆ. ಈ ಕವಿ ಸಂಸ್ಕಾರ ಜನ್ಯವಾದ ಕವಿತಾ ಸಂಪತ್ತನ್ನು ಪಡೆದಿದ್ದಾನೆ. ಕವಿಯ ಹೃದಯದಲ್ಲಿ ಯಾವುದೋ ಒಂದು ದಿವ್ಯ ಸ್ಫೂರ್ತಿ ನೆಲೆಗೊಂಡು ತನ್ಮುಖದಿಂದ ಈ ಸುಂದರ ಕಾವ್ಯವನ್ನು ಹಾಡಿಸಿದೆಯೆಂದು ನಮಗೆ ಈ ಗ್ರಂಥಾವಲೋಕನದಿಂದ ತಿಳಿದು ಬರುತ್ತದೆ. "ತದ್ಗುಣೈಃ ಕರ್ಣಮಾಗತ್ಯ ಚಾಪಲಾಯ ಪ್ರಚೋದಿತಃ'' ಎಂಬ ಕವಿಕುಲ ಗುರುವಿನ ಮಾತು ಪ್ರಕೃತಕಾವ್ಯಕರ್ತೃವಿಗೂ ಅನ್ವಯಿಸುತ್ತದೆ.

ಈ ಭರತಭಕ್ತಿ ಕಾವ್ಯವು ಮಹಾನುಭಾವನಾದ ಭರತನನ್ನು ಕಥಾ ನಾಯಕನನ್ನಾಗಿ ಉಳ್ಳುದಾಗಿದೆ. ಸಾವಧಾನವಾಗಿ ವಿಚಾರಮಾಡಿದರೆ ಭರತನ ಬಂಧುಪ್ರೇಮವೂ, ರಾಮಭಕ್ತಿಯೂ ರಾಮಾಯಣದ ಪರಿಪೂರ್ಣ ತೆಗೆ ಎಷ್ಟೊಂದು ಮುಖ್ಯವೆಂಬುದನ್ನು ನಾವು ಮನಗಾಣಬಹುದು. ಭರತನ ಧೀರೋದಾತ್ತ ಗುಣಗಳನ್ನು ತಿಳಿಯಲು ರಾಮಾಯಣದಲ್ಲಿ ಬೇಕಾದಷ್ಟು ಸಂದರ್ಭಗಳಿವೆ. ಕಿರಿಯ ಹೆಂಡತಿಯಾದ ಕೈಕೆಯ ಮಾತಿಗೆ ಸಿಕ್ಕಿ ಬಿದ್ದು ಮಹಾರಾಜ ದಶರಥನು, ಭರತನನ್ನು ಅಯೋಧ್ಯೆಯ ಅರಸನನ್ನಾಗಿ ಮಾಡಲೂ, ಹಿರಿಯ ಮಗನಾದ ಶ್ರೀರಾಮಚಂದ್ರನನ್ನು ಅಡವಿಗಟ್ಟಲೂ ಒಪ್ಪಿಕೊಳ್ಳುತ್ತಾನೆ. ಮಾನವ ಸಹಜವಾದ ಮಮಕಾರದಿಂದಲೋ ಅಥವಾ ದುರ್ದಮನೀಯವಾದ ಮಾಯೆಯಿಂದಲೋ ಕೈಕೆಯು ಮೋಹಿತಳಾಗಿ ತನ್ನ ಮಗನು ಚಕ್ರವರ್ತಿಯಾಗಬೇಕೆಂದು ಬಯಸುತ್ತಾಳೆ. ಸಂದರ್ಭವು ಭರತ ನನ್ನು ಅನಾಯಾಸವಾಗಿ ಅಯೋಧ್ಯೆಯ ಚಕ್ರವರ್ತಿಯನ್ನಾಗಿ ಮಾಡಲು ಅನುಕೂಲವಾಗಿರುತ್ತದೆ. ಪರಿಸ್ಥಿತಿಯು ಹೀಗೆ ಅನುಕೂಲವಾಗಿದ್ದರೂ ಭರತನು ರಾಜ್ಯೈಶ್ವರ್ಯಗಳಿಗೆ ಮೋಹಿಸದೆ, ಸತ್ಯಧರ್ಮಗಳಿಗೆ, ಕುಲ

---

ಮಾರುತಿ ಗುಡಿಗಳು ಎಲ್ಲೆಲ್ಲೂ ಇವೆ. ಸುಗ್ರೀವನ ಗುಡಿಗಳು ಬೆಂಗಳೂರು ಮತ್ತು ಮೇಲುಕೋಟೆಗಳಲ್ಲಿವೆ. (ಸಂಪಾದಕ)

ಕ್ರಮಾಗತವಾದ ಕೀರ್ತಿಗೌರವಗಳಿಗೆ ಕಟ್ಟು ಬೀಳುತ್ತಾನೆ. ಅಯೋಧ್ಯೆಯ ಅರಸುತನಕ್ಕೆ ಅಣ್ಣನಾದ ಶ್ರೀರಾಮನು ಅರ್ಹನೆಂದು ಭಾವಿಸುತ್ತಾನೆ. ಅಣ್ಣನು ಅಡವಿಗೆ ಹೋದುದಕ್ಕಾಗಿ ಮರುಗುತ್ತಾನೆ. ತನ್ನ ತಾಯಿಯಾದ ಕೈಕೆಯ ಸ್ವಾರ್ಥಕ್ಕಾಗಿ ತಲೆ ತಗ್ಗಿಸುತ್ತಾನೆ. ಶ್ರೀರಾಮನನ್ನು ಹುಡುಕಿಕೊಂಡುಹೋಗಿ ಅಡವಿಯಲ್ಲಿ ಅವನನ್ನು ಸಂದರ್ಶಿಸಿ ಅತಿಭಕ್ತಿಯಿಂದ ಪ್ರಾರ್ಥಿಸುತ್ತಾನೆ. ತನ್ನ ತಾಯಿಯು ಮಾಡಿದ ತಪ್ಪಿಗಾಗಿ ಅಣ್ಣನಲ್ಲಿ ಕ್ಷಮಾಯಾಚನೆ ಮಾಡುತ್ತಾನೆ. ಕಡೆಗೆ ಹಿರಿಯರ ಅಣತಿಗೆ ಕಟ್ಟುಬಿದ್ದು ೧೪ ವರ್ಷ–ಶ್ರೀ ರಾಮನು ವನವಾಸವನ್ನು ಮುಗಿಸಿ ಬರುವವರೆಗೆ–ನಂದಿಗ್ರಾಮದಲ್ಲಿ ನಾರುಮುಡಿಯನ್ನುಟ್ಟು ಶ್ರೀರಾಮ ಪಾದುಕೆಗಳನ್ನು ಸಿಂಹಾಸನದ ಮೇಲಿಟ್ಟು ಪೂಜಿಸಿ ಪ್ರಜಾಸಂರಕ್ಷಣೆಯ ಕಾರ್ಯವನ್ನು ಮುಂದುವರಿಸುತ್ತಾನೆ. ಅರಣ್ಯವಾಸದಿಂದ ಶ್ರೀರಾಮನು ಹಿಂತಿರುಗಿದ ಕೂಡಲೇ ರಾಜ್ಯವನ್ನು ಅಣ್ಣನಿಗೆ ಒಪ್ಪಿಸಿ ತಾನು ಶ್ರೀರಾಮನ ಆಜ್ಞಾಧಾರಕನಾಗಿ ಲೋಕಸೇವಾ ಕಾರ್ಯದಲ್ಲಿ ನಿರತನಾಗುತ್ತಾನೆ. ಒಂದು ವೇಳೆ ಭರತನು ಈ ವಿಧವಾದ ಸೌಜನ್ಯವನ್ನು ತೋರದಿದ್ದರೆ ರಾಮಾಯಣದ ಗತಿ ಏನಾಗುತ್ತಿತ್ತೆಂಬುದನ್ನು ನಾವು ಯೋಚಿಸಬೇಕು. ಆಗ ನಮಗೆ ತಿಳಿಯುತ್ತದೆ. ರಾಮಾಯಣದ ಮಹಾಪುರುಷರಲ್ಲಿ ಶ್ರೀರಾಮನಿಗೆ ಸಮಾನವಾದಷ್ಟು ಯೋಗ್ಯತೆಯುಳ್ಳವನು ಭರತನೆಂಬುದು. ಭರತ ಭಕ್ತಿ ಕಾವ್ಯವು ಈ ವಿಷಯವನ್ನು ಎಂದರೆ ರಾಮಾಯಣದಲ್ಲಿ ಭರತನ ಪ್ರಾಮುಖ್ಯತೆ ಎಷ್ಟೆಂಬುದನ್ನು ನಮ್ಮ ಕಣ್ಣಿನ ಮುಂದೆ ಸ್ಪಷ್ಟವಾಗಿ ಚಿತ್ರಿಸಿದೆ. ಈ ದೆಸೆಯಲ್ಲಿ ಕವಿ ರಾಮಸ್ವಾಮಿ ಐಯ್ಯಂಗಾರ್‌ರವರು ರಾಮಾಯಣ ಸಾಹಿತ್ಯಕ್ಕೆ ಒಂದು ದೊಡ್ಡ ಸೇವೆಯನ್ನು ಸಲ್ಲಿಸಿದ್ದಾರೆಂದು ನಾವು ಭಾವಿಸಬಹುದು. ಹೆಸರಿನಿಂದ ಇದು ಭರತಭಕ್ತಿ ಕಾವ್ಯವಾದರೂ ಸಮಗ್ರ ರಾಮಾಯಣದ ಕಥೆಯನ್ನೂ ಈ ಗ್ರಂಥದಲ್ಲಿ ವಿಹಂಗಮ ದೃಷ್ಟಿಯಿಂದ ಹೇಳಲಾಗಿದೆ ಪರಮಾತ್ಮನೇ ಶ್ರೀರಾಮನೆಂದೂ, ಆದಿಶೇಷನೇ ಲಕ್ಷ್ಮಣನೆಂದೂ, ಚಕ್ರವೇ ಭರತನೆಂದೂ, ಶಂಖವೇ

---

ನಂದಿಗ್ರಾಮವು ಅಯೋಧ್ಯೆಯ ಪಕ್ಕದಲ್ಲಿದೆ. ಕೋಲಾರ ಜಿಲ್ಲೆಯಲ್ಲಿಯೂ ನಂದಿಗ್ರಾಮ, ನಂದಿಬೆಟ್ಟ ಇವೆ. (ಸಂಪಾದಕ)

ಶತ್ರುಘ್ನನೆಂದೂ ಲಕ್ಷ್ಮಿಯೇ ಆನಂದವೆಂಬ ಸೀತೆಯೆಂದೂ ಹಿರಿಯ ತತ್ತ್ವ ನಿರೂಪಣೆಯನ್ನು ಇದು ಹೊಂದಿರುತ್ತದೆ. ಕವಿಗೆ ದತ್ತವಾಗಿರುವ ಪ್ರಾಸಾದಿಕ ಶೈಲಿಯು ಗ್ರಂಥದ ತೇಜಸ್ಸನ್ನು ಅಧಿಕಗೊಳಿಸಿದೆ. ಈ ಕಾವ್ಯಸ್ಥ ಅದ್ವೈತ ಭಾವವು ಕನ್ನಡ ಭಾರತ, ಜೈಮಿನಿ ಭಾರತಗಳ ಉದಾತ್ತ ಭಾವನೆಗಳನ್ನು ನಮಗೆ ಆಡಿಗಡಿಗೆ ಸ್ಮರಣೆಗೆ ತರುತ್ತದೆ. ಈ ನೂತನ ಕಾವ್ಯದಲ್ಲಿ ನವರಸಗಳು ಉಚಿತನರಿತು ಬಂದಿದ್ದರೂ 'ಭಕ್ತಿರಸವೇ ಕಾವ್ಯದ ಆತ್ಮ' ಎಂಬುದನ್ನು ಅಲ್ಲಲ್ಲಿ ಬರುವ ಸ್ತೋತ್ರಗಳಿಂದಲೂ ವಿವರಣೆಯಿಂದಲೂ ನಾವು ಮನಗಾಣಬಹುದಾಗಿದೆ. ವಸ್ತುನಿರ್ಮಾಣ, ಪಾತ್ರಪೋಷಣ, ರಸಭಾವ ನಿರೂಪಣ, ಉಚಿತ ಪದಪ್ರಯೋಗ, ಸರಳಸುಂದರ ಶೈಲಿ ಇತ್ಯಾದಿ ಗುಣಸಂಪತ್ತಿನಿಂದ ಕೂಡಿರುವ ಈ ಭರತಭಕ್ತಿ ಕಾವ್ಯವನ್ನು ಈ ಶತಮಾನದ ಒಂದು ಉತ್ತಮ ಕಾವ್ಯವೆಂದು ನಾವು ಧೈರ್ಯವಾಗಿ ಹೇಳಬಹುದು.

ಈ ಕಾವ್ಯದಲ್ಲಿ ವಾಲ್ಮೀಕಿ ರಾಮಾಯಣದಲ್ಲಿ ಇಲ್ಲದಿರುವ ಕೆಲವು ಸುಂದರ ಸನ್ನಿವೇಶಗಳನ್ನು ನಾವು ಕಾಣಬಹುದು. ಕೈಕೆಯು ಮಾಯೆಯಿಂದ ಮೋಹಿತಳಾಗಿ ದಶರಥನಲ್ಲಿ ವರವನ್ನು ಕೇಳಿದುದು, ಅಹಲ್ಯೆಯು ತಾನಾಗಿ ಕಲ್ಲಾದ ಸಂಗತಿ, ವಾಲಿಗೆ ಲಕ್ಷ್ಮಣನು ಕೊಟ್ಟ ಉತ್ತರ, ಸೀತಾದೇವಿಯು ಅಗ್ನಿಯಲ್ಲಿ ಅಡಗಿ ಬಂದುದು ಇತ್ಯಾದಿ ಸನ್ನಿವೇಶಗಳು ಪ್ರಕೃತ ಕವಿಯ ನೂತನ ದೃಷ್ಟಿಗೆ ನಿದರ್ಶನವೆನ್ನಬಹುದು. ಹೀಗೆ ಕಥಾವಸ್ತುವನ್ನು ಅಳವಡಿಸಲು ಕವಿ ಕಂಬರಾಮಾಯಣ (ತಮಿಳು) ರಾಮಚರಿತ ಮಾನಸ (ಹಿಂದಿ) ಚಂಪು ರಾಮಾಯಣ, ಆನಂದ ರಾಮಾಯಣ, ವಿಶ್ವಾಮಿತ್ರ ರಾಮಾಯಣ (ಸಂಸ್ಕೃತ) ಮೊದಲಾದ ಪ್ರಾಚೀನ ಕಾವ್ಯಗಳನ್ನು ಅಧ್ಯಯನ ಮಾಡಿದುದರ ಪರಿಣಾಮವೆಂದು ಹೇಳಬಹುದು. ಒಟ್ಟಿನಲ್ಲಿ ಭರತಭಕ್ತಿ ಕಾವ್ಯವು ಸಹೃದಯರ ಮನಸ್ಸಿಗೆ ಆನಂದವನ್ನೂ ಭಾವುಕರ ಮನಸ್ಸಿಗೆ ಭಕ್ತಿಯನ್ನೂ ವಿಚಾರಪರರ ಮನಸ್ಸಿಗೆ ಜ್ಞಾನಾನುಭವವನ್ನೂ ಉಂಟು ಮಾಡುವ ಒಂದು ಒಳ್ಳೆಯ ಗ್ರಂಥವೆಂದು ನಾವು ಹೇಳಲಡ್ಡಿಯಿಲ್ಲ. ಈ ಕಾವ್ಯದಲ್ಲಿ ಉತ್ತಮ ಗ್ರಂಥಗಳಲ್ಲಿರಬೇಕಾದ ವಸ್ತುನಿರ್ಮಾಣ, ಪಾತ್ರ ಪೋಷಣೆ, ರಸಾಭಾವನಿರೂಪಣೆ, ಶಬ್ದಾಲಂಕಾರ ಅರ್ಥಾಲಂಕಾರಗಳು,

ಸಮುದ್ರವರ್ಣನೆ, ವರ್ಷಾಕಾಲಾದಿ ವರ್ಣನೆಗಳು, ಉತ್ತ್ರಸು ಶೈಲಿಗೆ ಅನ ಗುಣವಾದ ಪದಪೈತ್ರಿ, ಉಚಿತ ಪದಪ್ರಯೋಗ ಇತ್ಯಾದಿ ಶುಭಲಕ್ಷಣ ಗಳನ್ನು ನಾವು ಅಲ್ಲಲ್ಲಿ ಕಾಣಬಹುದು.

ಪ್ರಕೃತಕಾವ್ಯ ಕರ್ತೃಗಳಾದ ಶ್ರೀ ಪಂಡಿತ ರಾಮಸ್ವಾಮಿ ಐಯ್ಯಂಗಾರ್ಯ ರವರು ನಮ್ಮ ದೇಶದಲ್ಲಿ ಓರ್ವ ಗಣ್ಯರಾದ ವಿದ್ವಾಂಸರು. ಸಂಸ್ಕಾರ ಜನ್ಯ ಕವಿಗಳು. ವಿನಯಾದಿ ಸದ್ಗುಣ ಸಂಪತ್ತುಗಳುಳ್ಳ ಸಹೃದಯರು. ಇವರಿಗಿ ರುವ ಕನ್ನಡನಾಡು ನುಡಿಗಳ ಮೇಲಣ ಆಸಕ್ತಿಯೂ, ಆದರ್ಶ ಪುಸುಷು ನಾದ ಶ್ರೀ ರಾಮಚಂದ್ರನಲ್ಲಿರುವ ಪರಮಭಕ್ತಿಯೂ ಶ್ಲಾಘ್ಯವಾದುವು.

ಪಂಡಿತ ರಾಮಸ್ವಾಮಿ ಐಯ್ಯಂಗಾರ್ಯರವರು ಈಗಾಗಲೇ ಹಲವಾರು ಗ್ರಂಥಗಳನ್ನೂ ಲೇಖನಗಳನ್ನೂ ಬರೆದು ಕನ್ನಡಿಗರಿಗೆ ಚಿರಪರಿಚಿತರಾಗಿದ್ದಾರೆ. ಪ್ರಹ್ಲಾದಚರಿತೆ, ಸುಪ್ರಭಾ ವಿಲಾಸ, ಕಬೀರ ದಾಸ, ಹರಿಮಾಯಾ ಮೊದ ಲಾದ ಅವರ ನಾಟಕಗಳೂ, ಗೀತಕುಸುಮಾಕರ, ಕಲ್ಯಾಣಪಾರಿಜಾತ, ಹರಿಭಜನ ಕುಸುಮ ವಲ್ಲರಿ ಮೊದಲಾದ ಅವರ ಹಾಡುಗಬ್ಬಗಳೂ, ರಂಗಪ್ಪ ಬಂದವ್ನೆ ಇತ್ಯಾದಿ ಜಾನಪದ ಗೀತೆಗಳೂ ನಮ್ಮ ನಾಡಿನ ಸಹೃದಯರ ಮನ್ನಣೆಗೆ ಪಾತ್ರನೆನಿಸಿವೆ.

'ಸಾಹಿತ್ಯವು ಸಮಕಾಲೀನ ಜನರ ರನ್ನ ಗನ್ನಡಿ' ಎಂದು ವಿಚಾರ ಪರರು ಹೇಳಿದ್ದಾರೆ. ಸಾಹಿತ್ಯವನ್ನು ಓದುವುದು ಮನುಷ್ಯನ ಉನ್ನತಿಗೆ ಸಾಧನ. ಉತ್ತಮವಾದ ಆಹಾರ, ಶುದ್ಧವಾದ ನೀರು, ಪರಿ ಶುದ್ಧವಾದ ಗಾಳಿ ಇವು ಜನಜೀವನಕ್ಕೆ ಎಷ್ಟು ಮುಖ್ಯವೋ ಉತ್ತಮ ವಾದ ಸಾಹಿತ್ಯವೂ ಅಷ್ಟೇ ಮುಖ್ಯ—ಅದಕ್ಕಿಂತಲೂ ಮುಖ್ಯ. ಆದ್ದರಿಂದಲೇ ನಮ್ಮ ಹಿರಿಯರು "ಅಸತ್ಕಾವ್ಯಾಲಾಂಪಾಶ್ಚ ವರ್ಜ ಯೇತ್" ಎಂದರೆ ಕೆಟ್ಟ ಕಾವ್ಯಗಳನ್ನು ಓದಬಾರದು ಎಂದು ಬುದ್ಧಿ ಹೇಳಿದ್ದಾರೆ. ಈ ಮಾತನ್ನು ಇಂದಿನ ತರುಣ ಜನ ಗಮನಿಸಬೇಕು. ಉತ್ತಮ ಸಾಹಿತ್ಯವನ್ನು ಓದುವ ಅಭ್ಯಾಸ ಜನತೆಯಲ್ಲಿ ಕಡಿಮೆಯಾಗುತ್ತಿದೆ. ಪುರಾಣ ಪುಣ್ಯಕಥೆಗಳು ಜನರಲ್ಲಿ ಅಪರೂಪವೆನಿಸಿವೆ. ಕಾಮಪ್ರಚೋದನೆಯ

ಕಿಸೆಯ ಕಾದಂಬರಿಗಳು ಎಲ್ಲೆಲ್ಲಿಯೂ ಅಂಟುರೋಗಗಳಂತೆ ಹಬ್ಬಿವೆ. ಖಾನಾ ವಳಿಯ ರುಚಿಕಟ್ಟಾದ ತಿಂಡಿ ತಿನಿಸುಗಳನ್ನು ಆರೋಗ್ಯದ ದೃಷ್ಟಿಯನ್ನರಿಯದ ಜನ ಬಯಸಿ ಬಾಯಿ ಬಿಡುವಂತೆ, ಆತ್ಮನ ದೃಷ್ಟಿಯನ್ನು ಅರಿಯದ ಆಧುನಿಕ ತರುಣ ತರುಣಿಯರು ಇಂದ್ರಿಯೋತ್ತೇಜಕ ಸಾಹಿತ್ಯವನ್ನು ಓದಲು ಧಾವಿ ಸುತ್ತಿದ್ದಾರೆ. ಇದು ನಿಜವಾಗಿಯೂ ಸಮಾಜದ ಅನಾರೋಗ್ಯ ಲಕ್ಷಣವೆನ್ನ ಬಹುದು. ಇಂತಹ ಕಾಲದಲ್ಲಿ ಜನರನ್ನು ಒಳ್ಳೆಯ ಮಾರ್ಗಕ್ಕೆ ತಿರುಗಿಸುವ ಭರತಭಕ್ತಿಕಾವ್ಯದಂತಹ ಸದ್ಗ್ರಂಥಗಳು ಹುಟ್ಟುತ್ತಿರುವುದು ನಾಡಿನ ಪುಣ್ಯವೆಂದು ಭಾವಿಸಬಹುದು.

ಭಾರತೀಯರು ಬಹು ಹಿಂದಿನ ಕಾಲದಲ್ಲಿಯೇ ಎಷ್ಟೊಂದು ಸುಸಂಸ್ಕೃತ ತರಾಗಿದ್ದರೆಂಬುದಕ್ಕೆ ರಾಮಾಯಣವೂ, ಎಷ್ಟೊಂದು ಪರಾಕ್ರಮಿಗಳೂ ಬುದ್ಧಿಶಾಲಿಗಳೂ ಆಗಿದ್ದರೆಂಬುದಕ್ಕೆ ಮಹಾಭಾರತವೂ, ಎಷ್ಟೊಂದು ಮಟ್ಟಿನ ದಾರ್ಶನಿಕರಾಗಿದ್ದರೆಂಬುದಕ್ಕೆ ಭಗವದ್ಗೀತೆಯೂ ನಿದರ್ಶನ ಗಳಾಗಿವೆ.

ರಾಮಾಯಣದ ಸ್ವಾರಸ್ಯವನ್ನೂ ಕನ್ನಡದ ಮಹತ್ವವನ್ನೂ ಕಾವ್ಯದ ಸೌಂದರ್ಯವನ್ನೂ ಬಯಸಬೇಕೆಂಬ ಸುಕೃತಶಾಲಿಗಳು, ಈ ಭರತಭಕ್ತಿ ಕಾವ್ಯ ವನ್ನು ಓದಿ ಆನಂದಿಸಲಿ. ಸಚ್ಚಿದಾನಂದ ರೂಪನಾದ ಮಾಂಗರೀಶನ ದಿವ್ಯಾನುಗ್ರಹಕ್ಕೆ ಪಾತ್ರರಾಗಲಿ.

ವಿಷ್ಣುನಾ ಸದೃಶೋ ವೀರ್ಯೇ ಸೋಮವತ್ ಪ್ರಿಯದರ್ಶಿನಃ।<br>
ಕಾಲಾಗ್ನಿ ಸದೃಶೋರಾಮೋ ಕ್ಷಮಯಾ ಪೃಥಿವೀ ಸಮಃ॥



# ಸಮಾಜದಲ್ಲಿ ರೈತರ ಸ್ಥಾನಮಾನಗಳು

ಭಾರತದೇಶದಲ್ಲಿ ಸಮಾಜವನ್ನು ಗುಣ ಕರ್ಮ ಪ್ರಧಾನವಾಗಿ ಬಹಳ ಪ್ರಾಚೀನ ಕಾಲದಿಂದ ವಿಭಾಗಿಸಿಕೊಂಡು ಬಂದಂತೆ ತೋರುತ್ತದೆ. "ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣ ಕರ್ಮ ವಿಭಾಗಶಃ" ಎಂಬ ಗೀತಾಚಾರ್ಯನ ಮಾತು ಈ ನಮ್ಮ ಅಭಿಪ್ರಾಯವನ್ನು ಸಮರ್ಥಿಸುತ್ತದೆ. ಬುದ್ಧಿ ಪ್ರಧಾನ ಕೆಲಸಗಳನ್ನು ಮಾಡತಕ್ಕವರು, ಬಾಹುಬಲ ಪ್ರಧಾನ ಕಾರ್ಯಗಳನ್ನು ನಡೆಸತಕ್ಕವರು, ಇವೆಲ್ಲಕ್ಕೂ ಅಶಕ್ತರಾಗಿ ಕೇವಲ ಸಮಾಜ ಸೇವೆಯಲ್ಲಿಯೇ ನಿರತರಾಗಿರತಕ್ಕವರು ಎಂದು ನಾಲ್ಕು ಭಾಗವಾಗಿ ಸಮಾಜವನ್ನು ಹಿಂದಿನವರು ವಿಂಗಡಿಸಿದಂತೆ ತೋರುತ್ತದೆ. ಒಂದು ಕಾಲದಲ್ಲಿ ಈ ಮೇಲೆ ಕಂಡ ನಾಲ್ಕು ಗುಂಪುಗಳ ವ್ಯವಸ್ಥೆಯು ಸಮಾಜಕ್ಕೆ ಅಗತ್ಯವಾಗಿ ಇದ್ದಿರಲೂ ಬಹುದು. ಅವು ಪ್ರಗತಿದಾಯಕವಾಗಿಯೂ ಇದ್ದಿರಬಹುದು. ಆದರೆ ಈ ವ್ಯವಸ್ಥೆ ಕಾಲಕ್ರಮದಲ್ಲಿ ಜನ್ಮಗತಗಳೆನಿಸಿ ಚಾತುರ್ವರ್ಣ್ಯ ಎನಿಸಿಕೊಂಡಿತು. ಕಾಲಕಳೆದಂತೆ ಇದರಿಂದ ಸಮಾಜದಲ್ಲಿ ಊಚ ನೀಚ ಭಾವಗಳು ಉಂಟಾದವು. 'ಮೊದಮೊದಲ ಗುಂಪಿಗಿಂತ ಕಡೆಕಡೆಯ ಗುಂಪುಗಳು ಕಡಿಮೆ' ಎಂಬ ತಪ್ಪು ಭಾವನೆಯು ಬಲಿಯಿತು. ವೇದದ ಪುರುಷ ಸೂಕ್ತದಲ್ಲಿ ಈ ವಿಷಯ ಕಾಣಿಸಿಕೊಂಡಿತು. ಈ ದೆಸೆಯಲ್ಲಿ ಬಳೆದ ಹಿಂದೂ ಸಮಾಜದಲ್ಲಿ ಬುದ್ಧಿಪ್ರಧಾನ ಬ್ರಾಹ್ಮಣರ, ಬಲಪ್ರಧಾನ ಕ್ಷತ್ರಿಯರ ಪ್ರಾಬಲ್ಯ ಅಧಿಕವಾಗಿ, ವ್ಯವಸಾಯ, ವ್ಯಾಪಾರ, ಸಮಾಜಸೇವೆ ಮಾಡುವ ಜನಗಳು ಕಡಿಮೆ ತರಗತಿಯೆನಿಸಿಕೊಂಡರು. ಅವರ ಮನಸ್ಸಿನಲ್ಲಿಯೂ ಕೂಡ ದಾಸ್ಯ ಮನೋಭಾವ ಅಧಿಕವಾಯಿತು. ಅವರು ಕೈಗೊಂಡ ಕಾರ್ಯಕಲಾಪಗಳು ಅಷ್ಟೊಂದು ಗೌರವಾರ್ಹವಲ್ಲವೆಂದು ಜನಸಾಮಾನ್ಯರು ತಿಳಿದು, ಅವರಿಗೂ ತಮ್ಮ ಕಾರ್ಯಗಳಲ್ಲಿ ತಕ್ಕಷ್ಟು ಉತ್ಸಾಹವಿಲ್ಲದೆ ಅವನತಿಗೆ ಕಾರಣವಾಯಿತು. ಅದೂ ಅಲ್ಲದೆ, ಈ ಜಾತಿಭೇದಗಳ ಗೊಂದಲದಿಂದ ಭಾರತ

ದೇಶವು ದುರ್ಬಲವಾಯಿತು. ಇದು ಭಾರತದ ಪರಾಧೀನತೆಗೂ ಕಾರಣ ವೆನಿಸಿತು. ಸಮಾಜದ ಈ ಏರುಪೇರುಗಳನ್ನು ಸರಿಪಡಿಸಲು ಬುದ್ಧ ಮತ್ತು ಬಸವ ಪ್ರಯತ್ನಿಸಿದರು. ಗಾಂಧಿಜಿ ಇದನ್ನು ಪೂರ್ಣಗೊಳಿಸಿದರು. ಈಗ ಭಾರತ ಸರ್ಕಾರವೇ ಈ ಕಾರ್ಯಕೈಗೊಂಡಿದೆ.

ಮಹರ್ಷಿ ಕೌಟಿಲ್ಯನು ತನ್ನ ಸೂತ್ರಗಳಲ್ಲಿ "ಸುಖಸ್ಯ ಮೂಲಂ ಧರ್ಮಃ, ಧರ್ಮಸ್ಯ ಮೂಲಂ ಅರ್ಥಃ, ಅರ್ಥಸ್ಯ ಮೂಲಂ ರಾಜ್ಯಂ"— ಅಂದರೆ ಸುಖದ ಮೂಲವು ಧರ್ಮದಲ್ಲಿ, ಧರ್ಮದ ಮೂಲವು ಅರ್ಥದಲ್ಲಿ, ಅರ್ಥದ ಮೂಲವು ರಾಜ್ಯದಲ್ಲಿ ಎಂದು ಜನತೆಗೆ ಕರೆನೀಡಿದ್ದಾನೆ. ಒಂದು ರಾಜ್ಯದಲ್ಲಿ ಧರ್ಮ ವ್ಯವಸ್ಥೆ ತೃಪ್ತಿಕರವಾಗಿರಬೇಕಾದರೆ ಆ ರಾಜ್ಯದ ಜನರು ನೆಮ್ಮದಿಯಿಂದ ಇರಬೇಕು. ಜನತೆಯಲ್ಲಿ ಸುಖಸಂತೋಷಗಳಿರಬೇಕಾದರೆ ಆ ನಾಡಿನ ಜನಗಳಿಗೆ ಅನ್ನಬಟ್ಟೆಗಳ ಕೊರತೆಯಿರಬಾರದು. ಕ್ಷಾಮ ಡಾಮರಗಳ ಜಂಜಡವಿರಬಾರದು. ರಾಜ್ಯದಲ್ಲಿ ವ್ಯವಸಾಯ, ವ್ಯಾಪಾರ, ಕೈಗಾರಿಕೆಗಳು ಚೆನ್ನಾಗಿ ಮುಂದುವರಿದು ಆ ಜನರು ಸಂತೋಷ ಚಿತ್ತ ರಾಗಿರಬೇಕು ಎಂದು ಚಾಣಕ್ಯನ ಮತ.

ದೇಶದ ಸಂಪತ್ತನ್ನು ಅಭಿವೃದ್ಧಿಗೊಳಿಸುವ ಮಾರ್ಗಗಳಲ್ಲಿ, ವ್ಯವಸಾಯ, ವ್ಯಾಪಾರ, ಮತ್ತು ಕೈಗಾರಿಕೆ ಇವು ಮೂರು ಬಹು ಮುಖ್ಯ ವಾದವುಗಳು. ಶ್ರಮ ಸಹಿಷ್ಣುಗಳೂ ನಿಸರ್ಗದ ಪುತ್ರರೂ ಆದ ಈ ಜನರ ದುಡಿಮೆಯನ್ನು ದೇಶದ ಅಭಿವೃದ್ಧಿಯು ಬಹುಮಟ್ಟಿಗೆ ಅವಲಂಬಿಸರುತ್ತದೆ. ರಷ್ಯ, ಚೀಣ, ಅಮೆರಿಕ. ಇಂಗ್ಲೆಂಡ್, ಜರ್ಮ ಮೊದಲಾದ ರಾಜ್ಯಗಳು ಈ ನಮ್ಮ ಮಾತಿಗೆ ನಿದರ್ಶನವೆನಿಸಿವೆ. ಅಂದರೆ ವ್ಯವಸಾಯ, ವ್ಯಾಪಾರ, ಮತ್ತು ಕೈಗಾರಿಕೆಗಳನ್ನು ಅಭಿವೃದ್ಧಿಗೊಳಿಸುವ ಆ ರಾಷ್ಟ್ರಗಳು ಇಂದು ವಿಶ್ವ ದಲ್ಲಿ ಪ್ರಧಾನಶಕ್ತಿ ಎನಿಸಿವೆ. ನಮ್ಮ ರಾಷ್ಟ್ರವೂ ಆ ಮಾಲೆಯಲ್ಲಿ ಸೇರು ವಂತಾಗಿರುವುದು ನಮ್ಮಗಳ ಕರ್ತವ್ಯವೆನಿಸಿದೆ. ಕಾರಣ ದೇಶದಲ್ಲಿ ಉತ್ಪಾದನಾಶಕ್ತಿ ಅಧಿಕಗೊಳ್ಳುವುದು ಅಗತ್ಯವೂ ಅನಿವಾರ್ಯವೂ ಎನಿಸಿದೆ.

ಭಾರತವು ಸ್ವತಂತ್ರವಾದ ಹದಿನಾಲ್ಕು ವರ್ಷಗಳಲ್ಲಿ ನಮ್ಮ ಪ್ರಭುತ್ವವು. ಎಲ್ಲ ಬಗೆಯಿಂದಲೂ ದೇಶದ ಸಂಪತ್ತನ್ನು ಅಧಿಕಗೊಳಿಸಲು

ಬಹುವಾಗಿ ಪ್ರಯತ್ನಿಸುತ್ತಿದೆ. ಎಲ್ಲಕ್ಕೂ ಹೆಚ್ಚಾಗಿ ವ್ಯವಸಾಯ ಮತ್ತು ಕೈಗಾರಿಕೆಗಳ ಪ್ರಗತಿಗೆ ರಾಷ್ಟ್ರನಾಯಕರು ಹೆಚ್ಚು ಗಮನವನ್ನು ಕೊಟ್ಟಿದ್ದಾರೆ. ಭಾರತದಲ್ಲಿ ಆಹಾರದ ಅಭಾವ ಬಹಳವಾಗಿದೆ. ರಾಷ್ಟ್ರದ ಜನಸಂಖ್ಯೆ–ಮಳೆಗಾಲದ ಹಣಬೆಗಳಂತೆ ಬಹಳವಾಗಿ ವರ್ಷವರ್ಷಕ್ಕೂ ಹೆಚ್ಚುತ್ತಿದೆ. ವಿಶ್ವದ ಸುಮಾರು ಮುನ್ನೂರುಕೋಟಿ ಜನಸಂಖ್ಯೆಯಲ್ಲಿ ಭಾರತದಲ್ಲಿಯೇ ನಲವತ್ತುಕೋಟಿ ಜನರಿದ್ದಾರೆ. ಆದರೆ ಈ ಜನತೆಗೆ ತಕ್ಕಷ್ಟು ಆಹಾರ ವಸ್ತು ನಮ್ಮ ರಾಷ್ಟ್ರದಲ್ಲಿ ಬೆಳೆಯುತ್ತಿಲ್ಲ. A ಇದಕ್ಕಾಗಿ ನಾವು ಅಮೇರಿಕಾಕ್ಕೆ ಗೋಧಿಗಾಗಿಯೂ ಬರ್ಮಕ್ಕೆ ಅಕ್ಕಿಗಾಗಿಯೂ ಮತ್ತುಳಿದ ದೇಶಗಳಿಗೆ ಹಲವಾರು ಜೀವನ ಪದಾರ್ಥಗಳಿಗಾಗಿಯೂ ಮೊರೆಯಿಡಬೇಕಾಗಿದೆ. ಇದು ನಿಜವಾಗಿಯೂ ಭಾರತ ದೇಶಕ್ಕೆ ಅಪಮಾನಕರವಾದ ಸಂಗತಿ. ಭಾರತದ ಆರ್ಥಿಕ ಪರಾಧೀನತೆಯ ಲಕ್ಷಣ.

ಭಾರತ ಸರ್ಕಾರದವರೂ ರಾಜ್ಯಸರ್ಕಾರದವರೂ ಒಕ್ಕಲುತನದ ಅಭಿವೃದ್ಧಿಗೆ ಹಾಗೂ ಒಕ್ಕಲಿಗರ ಏಳಿಗೆಗೆ ಇಂದು ಹೆಚ್ಚು ಗಮನ ಕೊಡುತ್ತಿದ್ದಾರೆ. ಮೂರನೇ ಪಾಂಚವಾರ್ಷಿಕ ಯೋಜನೆಯಲ್ಲಿ ವ್ಯವಸಾಯಕ್ಕೆ ಹೆಚ್ಚು ಬೆಂಬಲಬಂದಿದೆ. ನಮ್ಮ ರಾಷ್ಟ್ರದಲ್ಲಿ ಭಕ್ರನಂಗಾಲ್, ಹಿರಾಕುಡ್, ದಾಮೋದರ್, ನಾಗಾರ್ಜುನ, ತುಂಗಭದ್ರಾ, ಭದ್ರಾ, ಕೃಷ್ಣರಾಜಸಾಗರ, ಮೆಟ್ಟೂರು ಮೊದಲಾದ ಅತ್ಯಂತ ದೊಡ್ಡ ದೊಡ್ಡ ಜಲಾಶಯಗಳನ್ನು ನಿರ್ಮಿಸಿ ವ್ಯವಸಾಯವನ್ನು ಅಧಿಕಗೊಳಿಸುತ್ತಿದ್ದಾರೆ. ಹತ್ತುವರ್ಷಗಳಿಂದ ಈ ದೆಸೆಯಲ್ಲಿ ಎರಡು ಯೋಜನೆಗಳು ನಡೆದು ದೇಶದಲ್ಲಿ ಸರ್ವಾಂಗೀಣ ಪ್ರಗತಿಯುಂಟಾಗಿದೆ. ನದಿಯ ನಾಲೆಗಳ ಸಣ್ಣ ಪುಟ್ಟ ಕೆರೆಗಳ ಜೀರ್ಣೋದ್ಧಾರ, ಬಾವಿಗಳ ನಿರ್ಮಾಣ ಇವುಗಳಿಗೆ ಸರ್ಕಾರದವರು ಹೆಚ್ಚಿನ ಗಮನವನ್ನು ಕೊಟ್ಟಿರುತ್ತಾರೆ. ಇದೇ ರೀತಿ ಮುಂದೆ ನುಗ್ಗಿದರೆ ನಮ್ಮ ರಾಷ್ಟ್ರ ಎಂಟು ಹತ್ತು ವರ್ಷಗಳಲ್ಲಿ ಆಹಾರದಲ್ಲಿ ಕೂಡ ಸ್ವಾವಲಂಬನೆಯನ್ನು ಪಡೆಯಬಹುದು. ಅಂದಿಗೆ ಭಾರತದ ಸ್ವಾತಂತ್ರ್ಯವು ಅರ್ಥಪೂರ್ಣವೆನಿಸಬಹುದು. ನಮ್ಮ ಜನ ಆತ್ಮಗೌರವದಿಂದ ಬಾಳಬಹುದು.

---

A ಜಗತ್ತಿನಲ್ಲಿ ಸರಾಸರಿ ಎಕರೆಗೆ ಕಡಿಮೆ ಬೆಳೆ ಬೆಳೆಯುವ ದೇಶ ಭಾರತವೆನಿಸಿದೆ.

ಭಾರತವು ಬಲಶಾಲಿಯಾಗಬೇಕಾದರೆ ಈ ನಾಡಿನಲ್ಲಿ ಒಕ್ಕಲಿಗರ ಸ್ಥಾನಮಾನಗಳು ಅಧಿಕಗೊಳ್ಳಬೇಕು. ವ್ಯವಸಾಯದ ಕಾರ್ಯಕಲಾಪಗಳು ಅಗ್ರಗಣ್ಯವೆನಿಸಬೇಕು. ರಾಜ್ಯಭಾರ ಮಾಡುವವರಿಗಿಂತ, ಗ್ರಂಥನಿರ್ಮಾಣ ಮಾಡುವವರಿಗಿಂತ, ಸಂಗೀತ ನೃತ್ಯ ಕಲೆಗಾರರಿಗಿಂತ ವ್ಯವಸಾಯಗಾರರು ಯಾವುದರಲ್ಲಿಯೂ ಕಡಮೆಯಲ್ಲ ಎಂಬ ಭಾವನೆ ಎಲ್ಲ ಕಡೆಯೂ ಬಳೆಯಬೇಕು. ಇದರ ಗುಟ್ಟನ್ನು ಅರಿತ ರಾಷ್ಟ್ರಕವಿ ಸರ್ವಜ್ಞನು ಒಕ್ಕಲಿಗರ ಪ್ರಾಮುಖ್ಯತೆಯನ್ನೂ, ಒಕ್ಕಲುತನದ ಹಿರಿಮೆ ಗರಿಮೆಗಳನ್ನೂ ಮನಮೆಚ್ಚಿ ಹಾಡಿದ್ದಾನೆ

"ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೆ ಮೇಲು।
ಮೇಟಿಯಿಂ ರಾಟೆ ನಡೆದುದಲ್ಲದೆ ದೇಶ।
ದಾಟವೇ ಕೆಡುಗು ಸರ್ವಜ್ಞ"॥

"ಬೆಕ್ಕು ಮನೆಯೊಳು ಲೇಸು ಮುಕ್ಕುಕಲ್ಲಿಗೆ ಲೇಸು।
ನಕ್ಕುನಗಿಸುವ ನುಡಿಲೇಸು।
ಊರಿಂಗೆ ಒಕ್ಕಲಿಗಲೇಸು ಸರ್ವಜ್ಞ"॥

ಮೇಲೆಕಂಡ ಸರ್ವಜ್ಞನ ಮಾತುಗಳಲ್ಲಿ ಬಹಳ ವಿಶಾಲವಾದ ಅರ್ಥವಿದೆ. ಜನತೆಯ ಜೀವನಾಧಾರವಾದ ಧಾನ್ಯಗಳು, ಹಣ್ಣು ಹಂಪಲುಗಳು, ಕಬ್ಬು, ಹತ್ತಿ, ಕಾಫಿ, ಟೀ, ಸಕ್ಕರೆ ಮೊದಲಾದ ಉಪಯುಕ್ತ ಸಾಧನ–ಸಂಪತ್ತು ಇವುಗಳೆಲ್ಲವನ್ನೂ ಬೆಳೆಯತಕ್ಕವನು ಒಕ್ಕಲಿಗನು. ಹಾಲು, ಮೊಸರು, ಬೆಣ್ಣೆ, ತುಪ್ಪಗಳನ್ನು ಸಿದ್ಧಗೊಳಿಸತಕ್ಕವನು ಒಕ್ಕಲಿಗ. ಇತರರ ಸುಖವು ಬಹು ಮಟ್ಟಿಗೆ ಈ ವ್ಯವಸಾಯಗಾರರನ್ನೇ ಅವಲಂಬಿಸಿರುತ್ತದೆ. ಕಬ್ಬಿನಿಂದ ಸಕ್ಕರೆಯಾಗುತ್ತದೆ. ಕಾಫಿ, ಟೀ ಮೊದಲಾದವು ಜನತೆಯ ಸ್ಫೂರ್ತಿಯನ್ನು ಹೆಚ್ಚಿಸುತ್ತವೆ. ವ್ಯವಸಾಯಕ್ಕೂ ಪಶುಪಾಲನೆಗೂ ನಿಕಟವಾದ ಸಂಬಂಧವಿದೆ. ಈ ಎಲ್ಲ ಕಾರಣಗಳಿಂದ "ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೆ ಮೇಲು, ಊರಿಂಗೆ ಒಕ್ಕಲಿಗ ಲೇಸು" ಎಂಬ ಸರ್ವಜ್ಞನ ಮಾತಿನ ತಾತ್ಪರ್ಯವನ್ನು ನಾವು ಸುಲಭವಾಗಿ ತಿಳಿಯಬಹುದು.

ಒಕ್ಕಲಿಗನನ್ನು ಆಧುನಿಕ ಕವಿಯೊಬ್ಬನು "ನೇಗಿಲಯೋಗಿ" ಎಂದು ಕರೆದಿರುವುದು ಅರ್ಥಪೂರ್ಣವಾಗಿದೆ. ರೈತ, ವ್ಯವಸಾಯಗಾರ, ಒಕ್ಕಲಿಗ ಈ ಮೊದಲಾದ ಹೆಸರುಗಳಿಂದ ಕರೆಯಲ್ಪಡುವ 'ನೇಗಿಲ ಯೋಗಿಯು' ನಿಜವಾಗಿಯೂ ಗೌರವಾರ್ಹನು. ಭೂಮಿ, ನೀರು, ಅರಣ್ಯ, ಆಕಾಶ, ಗೋವುಗಳು, ಬಣ್ಣ ಬಣ್ಣದ ಹೂಗಿಡಗಳು, ಉತ್ತಮವಾದ ಬೆಳೆಗಳು, ಸುಂದರ ಮೃಗ ಪಕ್ಷಿಗಳು, ಇವುಗಳ ಮಧ್ಯೆ ಹುಟ್ಟಿ ಬೆಳೆಯುವ ಒಕ್ಕಲಿಗನ ಜೀವನವು ಯೋಗಿ ಜೀವನವೇ ಸರಿ. ಅವನು ನಮ್ಮ ನಾಡಿನ ಹಿತೈಷಿಯಾದ ನೇಗಿಲಯೋಗಿಯೇ ಸರಿ. ಅವನು ಸದಾ ಸಂತೋಷ ಚಿತ್ತನೂ ಸಂತೃಪ್ತನೂ ಎನಿಸಿರುವನೆಂಬುದು ಸಹಜವಾಗಿಯೇ ಇದೆ. 'ಸದಾ ಸಂತೋಷಚಿತ್ತಾನಾಂ' ಎಂದು ಗೀತೆ ಹೇಳಿದೆಯಲ್ಲವೆ?

ಇತ್ತೀಚಿನ ದಿನಗಳಲ್ಲಿ ಕೇಂದ್ರಸರ್ಕಾರದವರೂ ರಾಜ್ಯಸರ್ಕಾರದವರೂ ಉತ್ತಮ ಬೆಳೆಯನ್ನು, ಉತ್ತಮ ತಳಿಯನ್ನು ಸೃಷ್ಟಿಸುವ ವ್ಯವಸಾಯಗಾರನಿಗೆ ಹೆಚ್ಚು ಮನ್ನಣೆಯನ್ನು ಕೊಡುತ್ತಿದ್ದಾರೆ. ದೇಶದ ಸ್ವತಂತ್ರೋತ್ಸವ ಮತ್ತು ದಸರಾ ಹಬ್ಬಗಳ ಕಾಲಗಳಲ್ಲಿ ಈ ಒಕ್ಕಲಿಗರಿಗೆ ಪ್ರಶಸ್ತಿಗಳನ್ನು ಬಹುಮಾನಗಳನ್ನು ಕೊಡುವ ಪದ್ಧತಿಯು ನಿಜಕ್ಕೂ ಶ್ಲಾಘ್ಯವೆನಿಸಿದೆ. ಚೆನ್ನಾಗಿ ಯೋಚನೆ ಮಾಡಿ ನೋಡಿದರೆ ಒಕ್ಕಲಿಗತನದಲ್ಲಿ ಪ್ರವೀಣನಾದವನೇ 'ರಾಜ್ಯದ ವ್ಯವಸಾಯ ಮಂತ್ರಿ' ಎನಿಸಿದರೆ ಅದರಿಂದ ರಾಜ್ಯದ ಉನ್ನತಿಗೆ ಹೆಚ್ಚು ಸಹಾಯವಾದೀತೆಂದು ಪ್ರಾಜ್ಞರ ಭಾವನೆ. ಅಂತಹ ಕೃಷಿಕನು ಉನ್ನತಸ್ಥಾನದಲ್ಲಿದ್ದರೆ ದೇಶಕ್ಕೆ ದುರ್ಭಿಕ್ಷ ಬರಲಾರದು ಎಂದು ಹೇಳಬಹುದು. "ಕೃಷಿತೋನಾಸ್ತಿ ದುರ್ಭಿಕ್ಷಃ" ಎಂಬ ಪುರಾಣ ವಾಕ್ಯವು ಈ ನಮ್ಮ ಮಾತನ್ನು ಸಮರ್ಥಿಸುತ್ತಿದೆ.

ಕನ್ನಡ ನಾಡಿನಲ್ಲಿ "ಒಕ್ಕಲಿಗ" ಎಂಬ ಶಬ್ದವು ಎರಡು ಅರ್ಥಗಳಲ್ಲಿ ವ್ಯವಹರಿಸಲ್ಪಟ್ಟಿದೆ. ಹಳೆಯ ಮೈಸೂರು ರಾಜ್ಯದಲ್ಲಿ ಇದು ಜಾತಿ ವಾಚಕವೆನಿಸಿದೆ. ಉತ್ತರ ಕರ್ಣಾಟಕದಲ್ಲಿ ಇದು ವೃತ್ತಿವಾಚಕವಾಗಿದೆ. ಕರ್ಣಾಟಕ ಏಕೀಕರಣವಾಗಿ ವಿಶಾಲ ಮೈಸೂರು ರಾಜ್ಯ ಸ್ಥಾಪನೆಯಾದ ಇಂದಿನ ದಿವಸ

ಗಳಲ್ಲಿ ನಾಡಿನ ಈ ಪರಿಸ್ಥಿತಿಯನ್ನು ತಿಳಿದಿರುವುದು ನಮ್ಮಗಳ ಕರ್ತವ್ಯ ವೆನಿಸಿದೆ.

ಕರ್ನಾಟಕದ ರಾಷ್ಟ್ರಪುರುಷರಾದ ಶ್ರೀ ಬಸವೇಶ್ವರರು "ಕಾಸಿ ಕಮ್ಮಾರನಾದ, ಬೀಸಿ ಮಡವಾಳನಾದ, ಹಾಸನಿಕ್ಕಿ ಸಾಲಿಗನಾದ, ವೇದವ ನೋದಿ ಹಾರುವನಾದ" ಎಂಬ ಒಂದು ವಚನದಲ್ಲಿ ಈಗಿರುವ ಹಲವಾರು ಜಾತಿಗಳು, ಆ ಜನ ಬಹುಕಾಲದಿಂದ ನಡೆಸಿಕೊಂಡು ಬಂದ ವೃತ್ತಿಗಳನ್ನು ಅವಲಂಬಿಸಿಕೊಂಡು ಆದುವು ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಆದುದರಿಂದ ಒಕ್ಕಲುತನ ಮಾಡುವವನು 'ಒಕ್ಕಲಿಗ' ಎಂಬ ಅರ್ಥ ಈ ವಿಷಯದಲ್ಲಿ ಸಮಂಜಸವಾದುದು ಎಂದು ನಾವು ಭಾವಿಸಬಹುದು.

ರಾಷ್ಟ್ರದಲ್ಲಿ ರಾಜಕಾರಿಣಿಗಳು, ಸಾಹಿತ್ಯಭಕ್ತರು, ವ್ಯಾಪಾರಗಾರರು, ಅಥವಾ ಕಾರ್ಮಿಕರು ಮತ್ತು ವ್ಯವಸಾಯಗಾರರು–ಇವರುಗಳ ಜೀವನದ "ಸರ್ವೆ" ನಡೆಸಿದರೆ ಅದರಲ್ಲಿ ಹೆಚ್ಚು ಗುಣಾಂಶಗಳು ಒಕ್ಕಲಿಗರಿಗೆ ಬರುವು ವೆಂದು ನಾವು ಧೈರ್ಯದಿಂದ ಹೇಳಬಹುದು. ನೂರಕ್ಕೆ ಎಂಬತ್ತರಷ್ಟು ಮಂದಿ ವ್ಯವಸಾಯಗಾರರಿಂದ ಕೂಡಿದ ಭಾರತದಲ್ಲಿ ಮುಖ್ಯಪ್ರಜೆಯಾದ ಒಕ್ಕಲಿಗರು ನಿರ್ಮಲ ಜೀವಿಗಳಾಗಿರುವುದು ಎಂಬ ಮಾತು ಎಲ್ಲರೂ ಹೆಮ್ಮೆ ಪಡತಕ್ಕ ಸಂಗತಿಯಾಗಿದೆ. ಆದ್ದರಿಂದಲೇ ಕವಿ ಠಾಕೂರರು "ದೇವರು ಒಕ್ಕಲಿಗರ ತೋಳುಗಳಲ್ಲಿ, ಕೂಲಿಕಾರರ ತೊಡೆಗಳಲ್ಲಿ ಇರುವನು" ಎಂದು ಗೀತಾಂಜಲಿಯಲ್ಲಿ ಹೇಳುವುದು ಸಾಧುವಾಗಿಯೇ ಇದೆ.

ಮಾನವಜಾತಿಯ ಚರಿತ್ರೆಯನ್ನೂ ಅಂತೆಯೇ ಭಾರತದ ಇತಿಹಾಸ ವನ್ನೂ ಪರಿಶೀಲಿಸಿದರೆ, ಪಶುಪಾಲನೆ ಮತ್ತು ವ್ಯವಸಾಯ ಕರ್ಮಗಳು ನಾಗರಿಕತೆಯ ಉಗಮ ಸ್ಥಳಗಳು ಎನಿಸುತ್ತವೆ. ಯಾರನ್ನೂ ವಂಚಿಸದೆ, ಇನ್ನೊಬ್ಬರನ್ನು ಅವಲಂಬಿಸದೆ, ತನ್ನ ಕಾಲ ಮೇಲೆ ತಾನು ನಿಂತು, ಆತ್ಮ ಗೌರವದಿಂದ ಬಾಳುವ ಮಾರ್ಗಗಳಲ್ಲಿ ವ್ಯವಸಾಯವು ಅಗ್ರಗಣ್ಯವಾದುದು. ಆದ್ದರಿಂದಲೇ ಪ್ರಾಚೀನ ಕಾಲದ ಋಷಿ ಮುನಿಗಳು ಕೂಡ ಪವಿತ್ರವಾದ ಒಕ್ಕಲುತನದ ಕಾಯಕವನ್ನು ಕೈಗೊಂಡು ನಡೆಸಿದರೆಂದು ತಿಳಿಯಬಹುದು.

ಇಂದು ಅಮೆರಿಕದ ಅಧ್ಯಕ್ಷರಾಗಿರುವ ಜಾನ್‌ಕೆನೆಡಿಯವರು ಆ ನಾಡಿನ ಒಕ್ಕಲಿಗನ ಮಗ. ಇಂದು ರಾಜ್ಯದ ಹಾಗೂ ಕೇಂದ್ರದ ಮಂತ್ರಿಗಳಾಗಿರುವ ಹಲವು ಮಂದಿ ಮಹನೀಯರು ಒಕ್ಕಲಿಗ ಕುಟುಂಬಕ್ಕೆ ಸೇರಿದವರು. ಅಖಿಲ ಭಾರತ ಕಾಂಗ್ರೆಸ್ ಮಾಜಿ ಅಧ್ಯಕ್ಷರು ಕೂಡ ಈ ವ್ಯವಸಾಯಗಾರರ ಮನೆತನ ದಲ್ಲಿಯೇ ಹುಟ್ಟಿದವರು ಎಂಬುದನ್ನು ಪರಿಗಣಿಸಿದಾಗ ನಾಡಿನಲ್ಲಿ ಒಕ್ಕಲಿಗ ಮನೆತನದವರು ಎಷ್ಟು ಉನ್ನತವಾದ ಸ್ಥಾನಮಾನಗಳನ್ನು ಗಳಿಸಿರುವ ರೆಂಬುದನ್ನು ನಾವು ಅರ್ಥಮಾಡಿಕೊಳ್ಳಬಹುದು.

ನಮ್ಮ ಕನ್ನಡನಾಡಿನ ಸಾಮಾಜಿಕ ಹಾಗೂ ರಾಜಕೀಯ ಚಳುವಳಿ, ಬಾರ್ಡೋಲಿಯ ಸತ್ಯಾಗ್ರಹ ಮೊದಲಾದುವು ಯಶಸ್ವಿಯಾದುದು ಒಕ್ಕ ಲಿಗರ ಸಾಹಸದಿಂದ. ಹಾಗೂ ಅವರ ಧೈರ್ಯ ಸ್ಥೈರ್ಯಗಳಿಂದ ಮಾತ್ರ.

ಹದಿನೆಂಟಯ ಶತಮಾನದಲ್ಲಿ ಕನ್ನಡ ನಾಡಿನಲ್ಲಿ ವಿಖ್ಯಾತ ಹಾಡುಗಬ್ಬ ಗಾರರೆನಿಸಿರುವ ಶ್ರೀ ಘನಮಠಾರ್ಯರು "ಕೃಷಿ ಜ್ಞಾನ ಪ್ರದೀಪಿಕೆ" ಎಂಬ ಒಂದು ಗ್ರಂಥವನ್ನು ರಚಿಸಿದ್ದಾರೆ. ಅದರಲ್ಲಿ ಅವರು ಒಕ್ಕಲಿಗರು ತಮ್ಮ ಕಾಯಕವನ್ನು ನಿಷ್ಠೆಯಿಂದ, ದೇಶಾಭಿಮಾನದಿಂದ, ಸುವ್ಯವಸ್ಥೆಯಿಂದ ನಡೆಸಬೇಕೆಂದು ಹೇಳುತ್ತಾ 'ರೈತರು ಪಾರಮಾರ್ಥಿಕ ಕೃಷಿಯನ್ನು ಮರೆಯ ಬಾರದು' ಎಂದು ಎಚ್ಚರಿಸಿದ್ದಾರೆ. ಭೂಮಿತಾಯಿಯ ಮಕ್ಕಳಾದ ಒಕ್ಕಲಿಗರು, ಹೃದಯವೆಂಬ ಹೊಲವನ್ನು ಹಸನು ಮಾಡಿ, ಪರಮಾರ್ಥದ ಬಿತ್ತನೆಯನ್ನುಮಾಡಿ, ದುರ್ಗುಣಗಳೆಂಬ ಕಳೆಯನ್ನು ಕಿತ್ತು, ಭಕ್ತಿ, ಜ್ಞಾನ, ವೈರಾಗ್ಯನಾಮಕವಾದ ಬೆಳೆಗಳನ್ನು ಬೆಳೆಯಬೇಕೆಂದೂ, ಹೃದಯ ಪ್ರಪಂಚದಲ್ಲಿ ಆನಂದವೆಂಬ ಕೆರೆಯು ಬತ್ತದಂತೆ ನೋಡಿಕೊಳ್ಳಬೇಕೆಂದೂ ಎಚ್ಚರಿಸಿದ್ದಾರೆ. ಮೇಲೆ ಕಂಡ ಘನಮಠಾರ್ಯರ ಬೋಧೆಗೆ, ಶೂನ್ಯ ಸಂಪಾದನೆಯಲ್ಲಿ ತೋಟಗಾರನಾದ ಗೊಗ್ಗಯ್ಯನನ್ನು ಕುರಿತು "ತನುವ ತೋಟವ ಮಾಡಿ, ಮಾನವ ಗುದ್ದಲಿಯ ಮಾಡಿ, ಅಗಿದು ಕಳೆದೆನಯ್ಯಾ ಭ್ರಾಂತಿಯ ಬೇರನು. ಒಡೆದು ಸಂಸಾರದ ಹೆಂಟೆಯ, ಬಗಿದು ಬಿತ್ತಿದೆ ನಯ್ಯಾ ಬ್ರಹ್ಮಬೀಜವ, ಅಖಂಡ ಮಂಡಲವೆಂಬ ಬಾವಿ, ಪವನವೇ

ರಾಟಾಳ, ಸುಷುಮ್ನ ನಾಳದಿಂದ ಉದಕವ ತಿದ್ದಿ, ಬಸವಗಳೈವರು ಹಸಗೆಡಿಸಿಹವೆಂದು ಸಮತೆ ಸೈರಣೆಯೆಂಬ ಬೇಲಿಯನಿಕ್ಕಿ ಆವಾಗಲೂ ಈ ತೋಟದಲ್ಲಿ ಜಾಗರ ಇದ್ದು ಸಸಿಯ ಸಲಹಿದೆನು ಕಾಣಾ ಗುಹೇಶ್ವರಾ" ಎಂಬ ಅಮೃತಸದೃಶವಾದ ವಚನವು ಸ್ಫೂರ್ತಿಯನ್ನು ಕೊಟ್ಟಿರಬಹುದು. ಈ ಮೇಲೆ ಕಂಡ ಎಲ್ಲ ವಿಚಾರ ಸರಣಿಯ ಸಾರಾಂಶವನ್ನೇ ಒಪ್ಪಿಕೊಳ್ಳುವುದಾದರೆ ಒಕ್ಕಲಿಗನು ಸಮಾಜಕ್ಕೆ ಮಾತೃಸ್ವರೂಪನು, ಪಿತೃಸ್ವರೂಪನು, ಮತ್ತು ಆಚಾರ್ಯಸ್ವರೂಪನು.

ಮನೆಗೆ ನೆಲಗಟ್ಟು ಇದ್ದಂತೆ, ಮರಕ್ಕೆ ತಾಯಿಬೇರು ಇದ್ದಂತೆ, ಒಕ್ಕಲಿಗನು ಸಮಾಜಕ್ಕೆ ಅತ್ಯಂತ ಮುಖ್ಯನು. ಸಮಾಜದ ಉತ್ಸಾಹ, ಆನಂದ, ತೃಪ್ತಿ, ನೆಮ್ಮದಿಗಳು ಜನತೆಯ ಅನ್ನಬಟ್ಟೆಗಳನ್ನೇ ಅವಲಂಬಿಸಿವೆ. ಅದು ದೇಶದ ವ್ಯವಸಾಯವನ್ನೇ ಆಶ್ರಯಿಸಿದೆ. ತನ್ನ ಸುಖವನ್ನು ಮರೆತು, ಭೂಮಿದೇವಿ, ದೇವೇಂದ್ರರಾಯ ಇವರ ಬಾಂಧವ್ಯವನ್ನು ಅಳವಡಿಸಿಕೊಂಡು ಒಕ್ಕಲುತನವನ್ನು ಅಭಿವೃದ್ಧಿಪಡಿಸುವ ಹೊಣೆ ವ್ಯವಸಾಯಗಾರನನ್ನು ಅವಲಂಬಿಸಿದೆ. ಅವನ ಕ್ಷೇಮಚಿಂತನೆಯನ್ನು ಸರ್ಕಾರವೂ ಸಮಾಜವೂ ನೋಡಿಕೊಳ್ಳಬೇಕು. ಅವನು ಬೆಳೆದ ಬೆಳೆಗಳಿಗೆ ಮಾರುಕಟ್ಟೆಯಲ್ಲಿ ಒಳ್ಳೆಯ ಬೆಲೆ ಬರುವಂತೆ ಸರ್ಕಾರ ವ್ಯವಸ್ಥೆಗೊಳಿಸಬೇಕು. ಒಕ್ಕಲಿಗನ ಮನೆಯು ನಂದಗೋಕುಲದಂತೆ ಕಂಗೊಳಿಸುವಂತೆ ಆಗಬೇಕು. ಅದರಿಂದಲೇ ನಾಡಿನ ಉನ್ನತಿ, ಸಮಾಜದ ಅಭ್ಯುದಯ, ಇದರಿಂದ ವಿಶ್ವದ ಶಾಂತಿ ಸಾಧನೆಯೂ ಸಾಧ್ಯವಾದೀತು.

'ಸಮಾಜದಲ್ಲಿ ಉನ್ನತ ಸ್ಥಾನಮಾನಗಳುಳ್ಳವರು ಯಾರು' ಎಂಬ ಪ್ರಶ್ನೆಗೆ 'ದೊಡ್ಡ ಅಧಿಕಾರದಲ್ಲಿರುವವರು, ಹೆಚ್ಚು ಐಶ್ವರ್ಯವುಳ್ಳವರು' ಎಂಬ ಉತ್ತರ ಸಾಮಾನ್ಯವಾಗಿ ದೊರೆಯುತ್ತದೆ. ಇದು ಪಾಶ್ಚಾತ್ಯ ನಾಗರಿಕತೆಯ ಫಲವಾಗಿ ಬಂದ ಭಾವನೆ. ಆದರೆ 'ಭಾರತೀಯ ಸಭ್ಯತೆಯು ನಗರಮೂಲವಲ್ಲ, ಆರಣ್ಯಕ' ಎಂಬ ವಿಶ್ವಕವಿ ಠಾಕೂರರ ಅಭಿಪ್ರಾಯ ತಿಳಿದವರಿಗೆ ನಮ್ಮ ಋಷಿ ಮುನಿಗಳು, ಆಚಾರ್ಯಪುರುಷರು, ಕವಿಶ್ರೇಷ್ಠರು, ರಾಜಾಧಿ

ರಾಜರಿಗಿಂತ ಶ್ರೇಷ್ಠರು ಯಾರು ಎಂಬುದನ್ನು ಅರಿತವರಿಗೆ, ಮಿಗಿಲಾದ ಉದಾತ್ತವಾದ ಹಾಗೂ ಸನಾತನವಾದ ಸದ್ಗುಣಗಳನ್ನು ಅಳವಡಿಸಿಕೊಂಡು ದೇಶಕ್ಕಾಗಿ ಸಮಾಜಕ್ಕಾಗಿ ಸದಾ ಸಂತೋಷ ಚಿತ್ತನಾಗಿ ಶ್ರಮಿಸುವ ಆ ವ್ಯವಸಾಯಗಾರನ ಹಿರಿಮೆ ಗರಿಮೆಗಳು ಅರ್ಥವಾಗುತ್ತವೆ.

ಪರಮೇಶ್ವರನ ಸೃಷ್ಟಿಯಾದ ಪ್ರಕೃತಿಯ ಸೌಂದರ್ಯವನ್ನು ಕಂಡು ಕಳಕಳಿಸುವ, ಹೊಲ ಗದ್ದೆ ತೋಟಗಳನ್ನು ಕಂಡು, ಸುಗಂಧಮಯ ಫಲ ಗಳನ್ನು ಸುಂದರ ಪುಷ್ಪಗಳನ್ನು ಕಂಡು, ಹೊಳೆಹೊಳೆಯುವ ಸೂರ್ಯ ಚಂದ್ರರನ್ನು ಕಂಡು, ತುಂಬಿ ಹರಿಯುವ ಹೊಳೆಹಳ್ಳಗಳನ್ನು ಕಂಡು, ನಲಿಯುವ ಎರಳೆ, ಹಾಡುವ ಕೋಕಿಲೆ, ಕುಣಿಯುವ ನವಿಲು, ಅಂಬಾ ಎನ್ನುವ ಹಸುಕರುಗಳನ್ನು ಕಂಡು, ಆತ್ಮೀಯಭಾವದಿಂದ ಪ್ರೀತಿಸುವ, ಮೊದಲು ಧರ್ಮ ದೇವತೆಯಂತೆ ಇರುವ ಗೋವುಗಳನ್ನು ತೃಪ್ತಿಪಡಿಸಿ ಅನಂತರ ತಾನು ಊಟಮಾಡುವ, ಮನೆಗೆ ಬಂದ ಅತಿಥಿಯ ಸೇವೆ ದೇವರ ಸೇವೆಯೆಂದು ಭಾವಿಸುವ, ಸುಳ್ಳು, ಮೋಸ ಮೊದಲಾದವು ಸಂಸಾರಿಗೆ ಸಲ್ಲವು ಎಂದು ತಿಳಿದು ಭೂಮಿ ತಾಯಿಯ ಮಗನೆನಿಸಿ, ದೇವೇಂದ್ರರಾಯನ ಭಕ್ತ ನೆನಸಿಕೊಂಡ ರೈತನು ತನಗೆ ಅಸತ್ಯವು ಅನುಚಿತವೆಂದು ಭಾವಿಸಿ 'ಹರನೆಂಬುದೇ ಸತ್ಯ, ಸತ್ಯ ಎಂಬುದೆ ಹರನು' ಎಂಬುದನ್ನು ಆಚರಣೆಯಿಂದ ತೋರಿಸುವ, ಇನ್ನೊಬ್ಬರ ಸುಖದುಃಖಗಳು ತನ್ನವೆಂದು ಭಾವಿಸುವ, ತಾನು ಬೆಳೆದ ಮೊದಲಬೆಳೆ ದೇವರಿಗಾಗಿ ಮೀಸಲು ಎಂದು ನಂಬಿ ಧರ್ಮಕ್ಕೆ ತಲೆಬಾಗುವ, ತನ್ನ ಸುಖಕ್ಕಿಂತ ತನ್ನ ಹಳ್ಳಿಗರ ಹಾಗೂ ತನ ದೇಶಬಾಂಧವರ ಸುಖ ಹಿರಿದೆಂದು ಭಾವಿಸುವ, ಬೆಲೆಯ ವಸ್ತುಗಳನ್ನು ನಾಡಿಗೆ ಕೊಟ್ಟು ಸಾಮಾನ್ಯ ವಸ್ತುಗಳನ್ನು ತನಗಾಗಿ ಇರಿಸಿಕೊಳ್ಳುವ, ತನ್ನ ಅಶ್ವತ್ಥಕಟ್ಟೆಯೇ ತನ್ನ ಧರ್ಮದೇವತೆಯೆಂದು ನಂಬಿರುವ, ಊರಿನಲ್ಲಿ ಹೆಚ್ಚು ವಯಸ್ಸಾದವನೇ ಹಿರಿಯನೆಂದು ತಿಳಿದಿರುವ, ಕಥೆ, ಪುರಾಣ, ಭಜನೆ, ಬಯಲಾಟಗಳನ್ನು ಉತ್ಸಾಹದಿಂದ ಕೇಳುವ ಹಾಡುವ ಹಾಗೂ ನೋಡುವ, ''ದೇವನೊಬ್ಬ ನಾಮ ಹಲವು'' ಎಂಬ ಅನುಭವಿಗಳ ಮಾತಿ ನಂತೆ, ಶಿವ, ವಿಷ್ಣು, ಶಂಕರ, ನಾರಾಯಣ ಎಂಬ ಎಲ್ಲ ಹೆಸರಿನ

ದೇವಾಲಯಗಳನ್ನು ಅದ್ವೈತ ಭಕ್ತಿಯಿಂದ ಸೇವಿಸುವ, ವಿದ್ಯಾರ್ಥಿಗಳು ದೇಶದ ಭಾವೀ ಪ್ರಜೆಗಳೆಂದು ಅರಿತು ಪ್ರೀತಿಸುವ, ಬ್ರಾಹ್ಮಣ, ಜಂಗಮ, ಸಾಧು, ಶರಣ, ಫಕೀರರು ಸಹಾಯಕ್ಕೆ ಅರ್ಹರೆಂದು ಭಾವಿಸುವ, ಕುಂಟ, ಕುರುಡ, ಹೆಳವ, ರೋಗಿ, ವೃದ್ಧರನ್ನು ಕಂಡು ಮರುಗುವ, ಕಾಲಕ್ಕೆ ಸರಿಯಾಗಿ ಸರ್ಕಾರದ ಕಂದಾಯವನ್ನು ಸಲ್ಲಿಸಿ ಕರ್ತವ್ಯವನ್ನು ನಿರ್ವಹಿಸುವ, ತನಗಾಗಿ ತನ್ನ ಜನತೆಗಾಗಿ ಮಳೆಗಾಳಿಗಳೆನ್ನದೆ ಸದಾ ಶ್ರಮಿಸುವ, ಹೊತ್ತು ಹುಟ್ಟುವ ಮುನ್ನ ಎದ್ದು ದೇವರನ್ನು ಸ್ಮರಿಸಿ ತನ್ನ ಹೊಲಗದ್ದೆಯ ಕೆಲಸ ಗಳಿಗೆ ಹೋಗುವ, ಕತ್ತಲಾಗುವ ಮುನ್ನ ಮನೆ ಮಠಗಳನ್ನು ಸೇರಿ ನಿಸರ್ಗ ಜೀವನ ನಡೆಸುವ, ದೊರೆತುದರಲ್ಲಿ ತೃಪ್ತಿ ಎನಿಸುವ, ಭಾರತದ ರೈತನು, ಕರ್ಣಾಟಕದ ಒಕ್ಕಲಿಗನು ನಿಜಕ್ಕೂ ಧನ್ಯನು. ಅಲ್ಲದೆ ಸಮಾಜದಲ್ಲಿ ಎಲ್ಲರಿಗಿಂತ ಅವನು ಹಿರಿಯ ಸ್ಥಾನಮಾನಗಳುಳ್ಳವನು ಎಂಬುದನ್ನು ಒಪ್ಪದಿರುವವರಾರು?

---

ಬೆಂಗಳೂರಿನ ಒಕ್ಕಲಿಗರ ಸಂಘದ ಸುವರ್ಣೋತ್ಸವ ಸಂಚಿಕೆಯಿಂದ (ಸಂ)



# ಹಾಸ್ಯದ ಗುಟ್ಟುಗುರಿ

ಆಲೋಚನೆ ಮಾಡುವ ಶಕ್ತಿ, ಮಾತಾಡುವ ಶಕ್ತಿ, ಹಾಗೂ ನಗುವ-ಆನಂದಪಡುವ ಶಕ್ತಿ ಇರುವುದು ಮನುಷ್ಯನಿಗೆ ಮಾತ್ರ. ಐದು ನಿಮಿಷ ನಗುವುದು ಐದು ಸೇರು ಆಕಳ ಹಾಲು ಕುಡಿಯುವುದಕ್ಕಿಂತ ಪುಷ್ಟಿಕರ. ನಗುವಿನಲ್ಲಿ ಮಂದಹಾಸ, ಅಟ್ಟಹಾಸ ಎಂದು ಎರಡು ವಿಧ. ಮಂದಹಾಸ, ನಾಗರಿಕ, ಅಟ್ಟಹಾಸ ಅನಾಗರಿಕವೆನಿಸಿದೆ.

ಹಾಸ್ಯದ ಆನಂದ ಎಲ್ಲರಿಗೂ ಬೇಕು. ಆದರೆ ಹಾಸ್ಯದ ವಿಮರ್ಶೆ ಯಾರಿಗೂ ಬೇಡ. ಮನುಷ್ಯನಿಗೆ ಪ್ರತಿಯೊಂದಕ್ಕೂ ಕಾರಣ ಹುಡುಕ ಬೇಕೆಂಬ ಆಸೆ ಸಹಜವಾಗಿರುವುದರಿಂದ, ನಾವು ಏತಕ್ಕೆ ನಗುತ್ತೇವೆ ಎಂಬ ಪ್ರಶ್ನೆಯು ಆಗಾಗ್ಗೆ ಕೆಲವರ ಮನಸ್ಸಿನಲ್ಲಿ ಹುಟ್ಟಿ, ಬಗೆ ಬಗೆ ಉತ್ತರಗಳು ಬಂದಿರುತ್ತವೆ. ಎಲ್ಲ ತರಹದ ಹಾಸ್ಯಕ್ಕೂ ಒಂದೇ ಒಂದು ಕಾರಣವೆಂದು ತಿಳಿಯುವುದು ತಪ್ಪು. ನಾನಾ ಸನ್ನಿವೇಶಗಳಲ್ಲಿ ನಾನಾ ಕಾರಣಗಳಿಂದ ನಾವು ನಗುತ್ತೇವೆ. ಒಬ್ಬ ಮನುಷ್ಯನು ಬಿದ್ದರೆ ನಾವು ನಗದೇ ಇದ್ದರೂ. ಒಬ್ಬನು ಹೊಸ ಉಡುಪನ್ನು ಧರಿಸಿ ಬಹಳ ಹೆಮ್ಮೆಯಿಂದ ಕೈ ಕೋಲನ್ನು ಬೀಸಿಕೊಂಡು ಹೋಗುತ್ತಾ ನಡುಬೀದಿಯಲ್ಲಿ ಜಾರಿಬಿದ್ದರೆ ಆಗ ನಗದೇ ಇರುವುದು ಬಹಳ ಕಷ್ಟ.

ಜೀವರಾಶಿಗಳಲ್ಲಿ ನಗುವ ಪ್ರಾಣಿ ಮನುಷ್ಯನೊಬ್ಬನೇ. ಮನುಷ್ಯನ ನಡೆನುಡಿಗಳೇ ಹಾಸ್ಯದ ವಾತಾವರಣ. ಮನುಷ್ಯನಲ್ಲಿರುವ ಮನಸ್ಸೇ ಅದರ ಜನ್ಮಸ್ಥಳ. ಪ್ರೇಮವು ಹೃದಯದಲ್ಲಿರುವಂತೆ, ಸೌಂದರ್ಯವು ನೋಡುವ ಕಣ್ಣಿನಲ್ಲಿರುವಂತೆ, ಹಾಸ್ಯವು ಆಲೋಚಿಸುವ ಮನಸ್ಸಿನಲ್ಲಿ ನೆಲೆಸಿರುತ್ತದೆ. ನಮ್ಮ ಮುಖವನ್ನು ಕನ್ನಡಿಯಲ್ಲಿ ನೋಡುವಂತೆ ನಮ್ಮ ಮನಸ್ಸಿನ ಪ್ರತಿ

ಬಿಂಬವನ್ನು ಆಗಾಗ್ಗೆ ನೋಡುವುದಕ್ಕೆ ಒಂದು ಕನ್ನಡಿಯನ್ನು ನಮ್ಮ ಮನಸ್ಸಿನಲ್ಲಿ ತಯಾರಿಸಿಕೊಳ್ಳಬೇಕು. ಅದರಲ್ಲಿ ಕಾಣುವ ದೃಶ್ಯಗಳಿಂದ ಹಾಸ್ಯವು ಯಥೇಚ್ಛವಾಗ ಉದ್ಭವಿಸುವುದು. ಆದರೆ ಆ ರೀತಿ ಅವಲೋಕಿಸುವುದಕ್ಕೆ ಮುಖ್ಯವಾಗಿ ಬೇಕಾದ ಗುಣಗಳು ಶಾಂತ ಚಿತ್ತತೆ ಮತ್ತು ಧೈರ್ಯವಾದ ಮನೋಭಾವ.

ಮನಸ್ಸಿನಲ್ಲಿ ಉಂಟಾಗುವ ಯೋಚನೆಗಳೆಲ್ಲವನ್ನೂ ಹೊರಗೆ ಎತ್ತಿ ಇತರರಿಗೆ ಹೇಳುವುದರಲ್ಲಿ ಅನೇಕ ಸಂಕೋಚಗಳು ತೋರಿ ಬರುತ್ತವೆ. ನಮಗಿರುವ ಆತ್ಮಗೌರವಕ್ಕೆ ಎಲ್ಲಿ ಲೋಪವುಂಟಾಗುವುದೋ ಎಂಬ ಭೀತಿಯೂ ಬಹಳ ಮಟ್ಟಿಗೆ ಅಡ್ಡಿ ಬರುತ್ತದೆ. ಸತ್ಯಾಂಶವನ್ನೇ ನುಡಿಯುವುದರಲ್ಲಿ ಹಾಸ್ಯದ ರಹಸ್ಯವು ಅನೇಕಾವರ್ತಿ ಕಂಡುಬರುತ್ತದೆ.

ಮೃಗಗಳು ತಮ್ಮ ಚಿಕ್ಕವಯಸ್ಸಿನಲ್ಲಿ ಯಾವ ಕಾರ್ಯವನ್ನು ಮಾಡುತ್ತವೆಯೋ ಅವುಗಳನ್ನೇ ಜೀವಮಾನದಲ್ಲೆಲ್ಲಾ ಮಾಡುತ್ತವೆ. ಅವುಗಳಲ್ಲಿ ಬದಲಾವಣೆ ಮತ್ತು ಬೆಳೆವಣಿಗೆಗಳು ಇರುವುದೇ ಇಲ್ಲ. ಆದರೆ ಮನುಷ್ಯನ ಜೀವನದಲ್ಲಿ ಬೆಳೆವಣಿಗೆ ಮತ್ತು ಬದಲಾವಣೆ ಇವು ಕಂಡು ಬರುವುದು ಸ್ವಾಭಾವಿಕ. ಹಾಗಿಲ್ಲದ ಪಕ್ಷದಲ್ಲಿ ನಗುವುಂಟಾಗುವುದು. ಹತ್ತು ವರುಷದ ಹುಡುಗನು ತೊಟ್ಟಿಲಿನಲ್ಲಿ ಮಲಗಿ ಹಾಲು ಕುಡಿಯುವುದು, ಇಪ್ಪತ್ತು ವರ್ಷದ ಹುಡುಗನು ಗೋಲಿ ಆಡುವುದು ಅರುವತ್ತು ವರ್ಷದ ಮುದುಕನು ಹದಿನೈದು ವಯಸ್ಸಿನ ವಧುವನ್ನು ವರಿಸುವುದು ಇವೆಲ್ಲವೂ ಹಾಸ್ಯಾಸ್ಪದ. ಸಂಭಾಷಣದಲ್ಲೂ ಹಿಂದಿನ ವಿಷಯಗಳನ್ನೇ ವಿವರಿಸುತ್ತಾ, ಕಾಲ, ಸಮಯ, ಮತ್ತು ಕೇಳುವವರ ಆಸಕ್ತಿ, ಇವುಗಳಿಗೆ ಸಂಬಂಧವಲ್ಲದೆ ಮಾತನಾಡುವವರು ಹಾಸ್ಯಕ್ಕೆ ತುತ್ತಾಗುತ್ತಾರೆ.

ಮನುಷ್ಯನ ಅಂಗಗಳಲ್ಲಿನ ವಿಕಾರವೂ ಹಾಸ್ಯಕ್ಕೆ ಒಂದು ಕಾರಣ. ಕೈಕಾಲುಗಳು ಬಹಳ ಚಿಕ್ಕದಾಗಿ, ಹೊಟ್ಟೆಯು ಮಾತ್ರ ದಪ್ಪನಾಗಿದ್ದರೆ ನೋಡುವುದರಿಂದ ನಗುವುಂಟಾಗುತ್ತದೆ, ನಡೆವಳಿಕೆಗಳಲ್ಲಿ ಸ್ವಾತಂತ್ರ್ಯ

ವಿರುವುದೇ ಮನುಷ್ಯನ ಸ್ವಭಾವ. ಅಸ್ವತಂತ್ರನಾಗಿ ಎರಡು ನಿಮಿಷಕ್ಕೊಂದಾವರ್ತಿ ಭುಜಕುಣಿಸುವುದಾಗಲಿ, ತಲೆಯನ್ನು ಕೆರೆಯುವುದಾಗಲಿ ನೋಡಿದವರಿಗೆ ನಗುವುಂಟಾಗುವುದು. ಮನಸ್ಸಿನಲ್ಲಿ ಉಂಟಾಗುವ, ನಿರೀಕ್ಷಣೆಗೂ ಪ್ರತ್ಯಕ್ಷವಾದ ನಿಜಾಂಶಕ್ಕೂ ಇರುವ ವ್ಯತ್ಯಾಸವೇ ಹಾಸ್ಯದ ರಹಸ್ಯ. ವಿರಾಟಪರ್ವ ನಾಟಕದಲ್ಲಿ ಕೀಚಕನು ಸ್ತ್ರೀವೇಷಧಾರಿಯಾದ ಭೀಮಸೇನನನ್ನು ದ್ರೌಪದಿಯೆಂದು ದೂರದಲ್ಲಿ ನಿರೀಕ್ಷಿಸಿ ಸಮೀಪಕ್ಕೆ ಬಂದ ನಂತರ ಭೀಮನ ಮೀಸೆಯನ್ನು ನೋಡಿದಾಗ, ಅವನಿಗೆ ಉಂಟಾದ ಸೋಲು ಪ್ರೇಕ್ಷಕರ ಆನಂದಕ್ಕೆ ಕಾರಣ. ಕೆಲವು ವೇಳೆ ಹಾಸ್ಯವು ಆಡುವ ಮಾತಿನಲ್ಲೇ ಅಡಗಿರುತ್ತದೆ.

ಹೂವಿನಂತೆ ಹಾಸ್ಯವು ಬಹುಬೇಗ ಬಾಡುವುದು. ಒಂದೇ ಹಾಸ್ಯವನ್ನು ಅನೇಕ ಕಾಲ ನುಡಿಯುವುದು ಒಂದೇ ಹೂವನ್ನು ಅನೇಕ ದಿವಸ ಇಡುವುದು ಎರಡೂ ಅನರ್ಥ. ಹಾಸ್ಯವು ಜೀವನದಲ್ಲಿ ಮುಖ್ಯವಾದರೂ, ಅದರ ಮಿತಿಯೇ ಅದರ ಗತಿ. ಹಾಸ್ಯಗಾರನು ಮತ್ತು ಹಾಸ್ಯ ಅನುಭವಿಸುವವರು ಏಕಮನಸ್ಸಿನಿಂದ ಇರುವುದು ಅಗತ್ಯ. ಹಾಸ್ಯವು ಒಂದು ಕಲೆ. ಇತರ ಕಲೆಗಳಂತೆ ನಾವು ಶ್ರಮಿಸಿ ಅಭಿವೃದ್ಧಿಪಡಿಸಬೇಕು. ಹಾಸ್ಯದ ಪರಮವೈರಿಗಳು ಮನುಷ್ಯನಲ್ಲಿರುವ ವ್ಯಸನ ಮತ್ತು ಆತಂಕ. ಈ ಶತ್ರುಗಳೊಡನೆ ಪ್ರತಿದಿನವೂ ಹೋರಾಡದ ಹೊರತು ಹಾಸ್ಯಕ್ಕೆ ಯಾವ ಆಸ್ಪದವೂ ಇರುವುದಿಲ್ಲ. ದುಃಖಿಗಳು, ರೋಗಿಗಳು ಇವರಿಗೆ ಹಾಸ್ಯರಸ ದೂರವಾದುದು.

ಸಣ್ಣಸಣ್ಣ ವಿಷಯಗಳನ್ನು ದೊಡ್ಡದಾಗಿ ಮಾಡುವುದು ಆಳುವ ಮಾರ್ಗ. ಬಹಳ ಪ್ರಮಾದವೆಂದು ತಿಳಿಯುವ ವಿಷಯಗಳನ್ನು ಸಾಧಾರಣ ಮಾತ್ರವೆಂದು ತಿಳಿಯುವುದು ಹಾಸ್ಯದ ಮಾರ್ಗ. ನಗುವಿನಿಂದ ದೇಹದ ಆರೋಗ್ಯವು ಉತ್ತಮವಾಗುವುದಲ್ಲದೆ, ಅನೇಕ ರೋಗಗಳು ನಿವಾರಣೆಯಾಗುವುವೆಂದೂ ಮನಸ್ಸಿನ ಕೊರಗಿನಿಂದ ಜನರು ರೋಗಿಯಾಗುತ್ತಾರೆಂದೂ, ಈಚೆಗೆ ಅನೇಕ ಪ್ರಮುಖ ವೈದ್ಯರು ನಿಸ್ಸಂದೇಹವಾಗಿ

ಸಾರುತ್ತಿದ್ದಾರೆ. ಆದ್ದರಿಂದ ಜನಗಳ ಆರೋಗ್ಯ ದೃಷ್ಟಿಯಿಂದ ಸರ್ಕಾರದವರು ಹಾಸ್ಯಪ್ರವೃತ್ತಿಯನ್ನು ಜನತೆಯಲ್ಲಿ ರೂಪಿಸುವ ಯೋಜನೆಯೊಂದನ್ನು ಕೈಗೊಳ್ಳಲೆಂದು ನಮ್ಮ ಸಲಹೆ.

ಸದಾ ಗೋಳುವೋರೆ ಹಾಕಿಕೊಳ್ಳುವುದು, ಎಂದೂ ನಗದೇ ಇರುವುದು, ಹಾಸ್ಯಮಯ ಗ್ರಂಥಗಳನ್ನು ಓದದೆ ಇರುವುದು, ವಿನೋದಪರ ನಾಟಕ ನೋಡದೆ ಇರುವುದು ಆರೋಗ್ಯ ಜೀವನಕ್ಕೆ ಆತಂಕ.

ಈ ಕಷ್ಟ ಕಾಲದಲ್ಲಿ ಯಾವುದಕ್ಕೂ ವಿರಾಮ ಇಲ್ಲದಿರುವಾಗ ನಗುವುದಕ್ಕೆ ಅವಕಾಶವೆಲ್ಲಿ ಬಂತು? ವಿರಾಮವಾದರೂ ಎಲ್ಲಿ?'. ಇದಕ್ಕೆ ನಮ್ಮ ಉತ್ತರ. ನೀವು ರಾತ್ರಿ ಮಲಗುವುದಕ್ಕೆ ಮುಂಚೆ ಒಂದು ಬಾರಿ ನಗಬಹುದು. ಅದಕ್ಕೆ ಅವಕಾಶವೂ ಇರುತ್ತದೆ. ನೀವು ಬೆಳಗ್ಗೆ ಎದ್ದು ಏನು ಮಾಡಬೇಕೆಂದಿದ್ದೀರಿ? ನೀವು ಏನು ಮಾಡಿದಿರಿ? ಇವೆರಡರನ್ನೂ ಹೋಲಿಸಿ ನೋಡಿದರೆ ಸಾಕಷ್ಟು ನಗಬಹುದು. ಅಂದೇ ರಾತ್ರಿ ನಗುವುದಕ್ಕೆ ವಿರಾಮ ದೊರೆಯದಿದ್ದರೆ ಭಾನುವಾರವಾದರೂ ನಗುವುದಕ್ಕೆ ಏಕೆ ಪ್ರಯತ್ನ ಪಡಬಾರದು? ಅಂದು ಎಲ್ಲರಿಗೂ ರಜಾ ಇದ್ದು ವಿರಾಮವಿರುತ್ತದಲ್ಲವೆ?

ಭಗವಂತನಲ್ಲಿ ನಾವು ನಮ್ಮ ಬೇಡಿಕೆಗಳನ್ನು ಸಲ್ಲಿಸುವಾಗ ನಮಗೆ ತತ್ಕಾಲಕ್ಕೆ ಕಂಡು ಬರುವ ಅವಶ್ಯಕತೆಗಳನ್ನು ಮಾತ್ರ ನಮ್ಮ ಮನಸ್ಸಿಗೆ ತಂದುಕೊಳ್ಳುತ್ತೇವೆ. ಬಡವನು ಕೇಳುವುದು, ತಿನ್ನುವುದಕ್ಕೆ ಆಹಾರ; ಭಾಗ್ಯವಂತರು ಕೇಳುವುದು ತಿಂದ ಆಹಾರವನ್ನು ಜೀರ್ಣಿಸುವ ಶಕ್ತಿ. ಹಲ್ಲು ನೋವಿನಿಂದ ನರಳುವಾಗ ಬಡವನೂ ಭಾಗ್ಯವಂತನೂ ಕೇಳುವುದು ಒಂದೇ—ನೋವಿನಿಂದ ಬಿಡುಗಡೆ. ಹಾಸ್ಯಗಾರನು ಭಗವಂತನಿಗೆ ಸಲ್ಲಿಸುವ ಪ್ರಾರ್ಥನೆಯೆಂದರೆ–'ಮನುಷ್ಯರ ಮೇಲೆ ಕೃಪೆಯಿಟ್ಟು ಅವರ ಹುಬ್ಬುಗಳನ್ನು ಮೇಲಕ್ಕೆತ್ತಿ, ಕಣ್ಣುಗಳನ್ನು ಅರಳಿಸಿ, ಕೆನ್ನೆಗಳನ್ನು ಪಕ್ಕಕ್ಕೆ ಎಳೆದುಕೊಂಡು ಕೊಂಚ ನಗುವ ಅಭ್ಯಾಸವನ್ನು ನೀಡು ಪರಮೇಶ್ವರಾ' ಎಂದು.

ಮನುಷ್ಯನ ಹೆಚ್ಚುಗಾರಿಕೆ ನಗುವುದರಿಂದ. ಏಕೆಂದರೆ, ಪ್ರಾಣಿಗಳಲ್ಲಿ ನಗುವವನು ಮನುಷ್ಯನು ಮಾತ್ರ. ಸಂತೋಷ ಹೆಚ್ಚಿದಾಗ, ಅನೌಚಿತ್ಯವನ್ನು ಕಂಡಾಗ, ವಿನೋದದ ದೃಶ್ಯಗಳನ್ನು ನೋಡಿದಾಗ, ವಿಲಕ್ಷಣ ಮಾತುಗಳನ್ನು ಕೇಳಿದಾಗ ಮನುಷ್ಯನು ನಗುತ್ತಾನೆ. ನಗುವುದು ಆರೋಗ್ಯ ಹಾಗೂ ಸಹೃದಯತೆಯ ಲಕ್ಷಣವೆಂದು ಭಾವಿಸಲ್ಪಟ್ಟಿದೆ. ನಗದಿರುವುದು ಮಾನವನಿಗೆ ಒಂದು ಕುಂದಕ. ಅಷ್ಟೇ ಅಲ್ಲ, ನಗದಿರುವವನು ಅಪಾಯಕಾರಿ. ಅಪೂರ್ಣ ಮಾನವ ಎಂಬ ಭಾವನೆಯೂ ಇದೆ. ಆದರೆ ನಗುವಿಕೆಗೂ ಸಮಯ ಸಂದರ್ಭಗಳುಂಟು. ದೊಡ್ಡವರನ್ನು, ಪರಸ್ತ್ರೀಯರನ್ನು, ಶತ್ರುಗಳನ್ನುಕಂಡು ನಕ್ಕರೆ ಆಗುವ ಅನರ್ಥವೆಷ್ಟೆಂಬುದು ತಿಳಿದೇಇದೆ. ಹಾಗೆಯೇ ರೋಗಿಗಳ ಮುಂದೆ, ಮತ್ತು ಸ್ಮಶಾನಗಳಲ್ಲಿ ನಗುವುದು ಶುದ್ಧ ಅವಿವೇಕವೇ ಸರಿ. ನಗುವುದರಲ್ಲಿ, ಅಹಹ, ಹುಹುಹು, ಹೆಹೆಹೆ, ಹಿಹಿಹಿ ಎಂಬ ನಾಲ್ಕು ಕ್ರಮಗಳುಂಟು. ಇವುಗಳಲ್ಲಿ ಮೊದಮೊದಲದಕ್ಕಿಂತ ಕಡೆ ಕಡೆಯದು ಕೀಳೆಂಬ ತಿಳಿವಳಿಕೆಯುಂಟು. ಈ ನಾಲ್ಕು ಬಗೆಯ ನಗುವಿನ ಭೇದಗಳಿಂದ ವ್ಯಕ್ತಿಯ ಮನೋಧರ್ಮವನ್ನು ತಿಳಿಯಬಹುದೆಂದು ಮನಶ್ಶಾಸ್ತ್ರಜ್ಞರು ಹೇಳುತ್ತಾರೆ. ಇದಲ್ಲದೆ ಪ್ರೌಢರಿಗೆ ಇನ್ನೂ ಗಂಭೀರವಾದ ಮಂದಹಾಸವಿದ್ದೇ ಇದೆ.

"ರಸಿಕರಾಡಿದ ಮಾತು ಶಶಿಯುದಿಸಿ ಬಂದಂತೆ" ಎಂದು ಸರ್ವಜ್ಞನು ಹೇಳಿದ್ದಾನೆ. 'ನಕ್ಕುನಗಿಸುವುದೇ ಸಾಹಿತ್ಯದ ಗುರಿ' ಎಂದು ಕೈಲಾಸಂ ಹೇಳಿರುವರು.

ನಮ್ಮ ಲಾಕ್ಷಣಿಕರು ನವರಸಗಳಲ್ಲಿ 'ಹಾಸ್ಯರಸ' ಒಂದೆಂದು ಹೇಳಿದ್ದಾರೆ. ಸಂಸ್ಕೃತ ನಾಟಕಗಳಲ್ಲಿ ವಿದೂಷಕನು ಹಾಸ್ಯದ ಪುತ್ತಳಿಯಂತಿದ್ದಾನೆ. ಕನ್ನಡ ಭಾರತ, ನಗೆಗಡಲು, ಸರ್ವಜ್ಞವಚನಗಳು, ಕೈಲಾಸಂ ನಾಟಕಗಳು, ಮುದ್ದಣನ ರಾಮಾಶ್ವಮೇಧ ಮೊದಲಾದುವನ್ನು ಓದುವಾಗ ಕನ್ನಡ ಸಾಹಿತ್ಯದಲ್ಲಿರುವ ಹಾಸ್ಯರಸದ ಮಾಧುರ್ಯವನ್ನು ನಾವು ಕೆಲಮಟ್ಟಿಗೆ ತಿಳಿಯಬಹುದು.

ಲೋಕವಿಖ್ಯಾತರಾದ ಮಹಾತ್ಮಗಾಂಧಿ, ಜಾರ್ಜ್‌ಬರ್ನಾರ್ಡ್‌ಷಾ ಮೊದಲಾದವರ ಮಾತುಕತೆಗಳಲ್ಲಿ ರಾಜಹಾಸ್ಯವು ಎದ್ದು ಕಾಣುತ್ತಿತ್ತು. ಹಾಸ್ಯಕಲೆಯು ಅವರವರ ಸಂಸ್ಕೃತಿ ಮಟ್ಟಕ್ಕೆ ಅನುಗುಣವಾಗಿರುತ್ತದೆ. ಬೈಲಾಟಗಳು, ಕೀರ್ತನಗಳು, ಪುರಾಣಗಳು, ನಾಟಕಗಳು ಮೊದಲಾದುವುಗಳಲ್ಲಿ ಹಾಸ್ಯತುಂಬಿರುತ್ತದೆ. ಸರ್ಕಸ್ ಕಂಪನಿಗಳಲ್ಲೂ ಹಾಸ್ಯಗಾರರಿರುವುದುಂಟು. ಪತ್ರಿಕೆಗಳಲ್ಲಿಯೂ ಹಾಸ್ಯದ ಚುಟಕೆಗಳಿರುತ್ತವೆ. ಜನರ ಬೇಸರವನ್ನು ಪರಿಹರಿಸಿ, ಉತ್ಸಾಹವನ್ನುಂಟುಮಾಡುವುದ ಹಾಸ್ಯದ ಪ್ರಯೋಜನ. ಹಾಸ್ಯವನ್ನು ಉಚಿತವರಿತು ಉಪಯೋಗಿಸಿಕೊಳ್ಳುವುದು ವಿವೇಕಗಳಾದ ರಸಿಕರ ಲಕ್ಷಣ.

ಹಾಸ್ಯದ ಭಾವನೆಯಿಂದ ಅಭಿವ್ಯಕ್ತವಾಗುವ ಬಾಹ್ಯಲಕ್ಷಣವೇ ನಗುವಿಕೆ. ನಗುವಾಗ ಧ್ವನಿ ಕರ್ಕಶವಾಗದಂತೆ, ಮುಖ ವಿಕಾರವಾಗದಂತೆ, ಮುಂದಿರುವವರಿಗೆ ಅಸಹ್ಯವಾಗದಂತೆ, ನೋಡುವವರಿಗೆ ಬೇಸರವಾಗದಂತೆ ಎಚ್ಚರದಿಂದಿರುವುದು ಪ್ರತಿಯೊಬ್ಬರ ಕರ್ತವ್ಯ. ರಾಜಸೂಯಯಾಗದಲ್ಲಿ ದ್ರೌಪದಿಯು ಕೌರವನನ್ನು ನೋಡಿ ನಕ್ಕುದರಿಂದ ಮುಂದಿನ ಭಾರತ ಕಥೆ ನಡೆಯಿತು. ರಾವಣನು ಲಂಕೆಯಲ್ಲಿ ಮಾರುತಿಯನ್ನು ಪರಿಹಾಸ್ಯ ಮಾಡಿದುದು ಮುಂದಿನ ರಾಮಾಯಣಕ್ಕೆ ಕಾರಣವಾಯಿತು. ಪೂಜ್ಯಗಣಪತಿಯನ್ನು ನೋಡಿ ನಕ್ಕ ಚಂದ್ರನು (ಭಾದ್ರಪದ ಶುದ್ಧ ಚತುರ್ಥಿಯಲ್ಲಿ) ಶಾಪಗ್ರಸ್ಥನಾಗಿದ್ದಾನೆ.

ನಮ್ಮ ದೇಶದಲ್ಲಿ ವಿಜಯನಗರ ಕಾಲದ ತೆನಾಲಿ ರಾಮಕೃಷ್ಣನ ಕಥೆಗಳು ಹಾಸ್ಯ ರಸದಿಂದ ತುಂಬಿವೆ. ಕೈಲಾಸ ವಾಸಿ ಕೈಲಾಸಂರ ಮಾತುಕತೆ ನಗುವಿನ ಹೊಳೆಯಾಗಿದ್ದುವು. ಕನ್ನಡದ ಸರ್ವಜ್ಞ, ತೆಲುಗಿನ ವೇಮಣ್ಣ ವಚನಗಳಲ್ಲಿಯೂ, ಜಾನಪದ ಸಾಹಿತ್ಯದಲ್ಲಿಯೂ, ಗಾದೆಯ ಮಾತುಗಳಲ್ಲಿಯೂ ನಗೆಗಾರಿಕೆ ತುಂಬಿದೆ ಎಂಬುದನ್ನು ನಾವು ತಿಳಿದಿದ್ದೀವೆ. ಕೈಲಾಸದ 'ಭೃಂಗಿ, ಹಾಸ್ಯದ ಮೂರ್ತಿಯಾಗಿ ಕಂಗೊಳಿ

ಸಿದ್ದಾನೆ. ಪುರಾಣಗಳಲ್ಲಿ ನಾರದ ಋಷಿಯು ಕೆಲವು ಕಾರ್ಯಕಲಾಪಗಳು ನಗೆಗೆ ಕಾರಣವಾಗಿವೆ. ನಮ್ಮ ದೇವರುಗಳಾದ, ಗಣಪತಿ, ಮಾರುತಿ, ನರ ಸಿಂಹ, ವರಾಹ, ಹಯಗ್ರೀವ ಮೊದಲಾದವರ ಚಿತ್ರಗಳನ್ನು ಕಂಡು ಪಾಶ್ಚಾತ್ಯರು ನಗುವುದುಂಟು. ರಾವಣನನ್ನು ಕಂಡು ಮಾರುತಿ, ಮಾರುತಿ ಯನ್ನು ಕಂಡು ರಾವಣ ನಕ್ಕುದನ್ನು ಕೇಳಿದೇವಲ್ಲವೆ?. ಮುಖ್ಯವಾಗಿ ಹಾಸ್ಯ ರಸ ಮಾನವಸಮಾಜಕ್ಕೆ ನಿಸರ್ಗವಾಗಿದೆ. ಅವಶ್ಯವಾಗಿದೆ. ಅದನ್ನು ಉಚಿತವರಿತು ಬಳಸಿಕೊಳ್ಳುವುದು ವಿವೇಕವಾಗಿದೆ. ಅದರಿಂದ ಆರೋಗ್ಯ ಭಾಗ್ಯವು ಹೆಚ್ಚುತ್ತದೆ. ಮನಸ್ಸು ವಿಕಾಸವಾಗುತ್ತದೆ. ಆಯುಷ್ಯವೂ, ಉತ್ಸಾಹವೂ ಅಧಿಕವಾಗುತ್ತದೆ. ಜೀವನದ ಪ್ರಗತಿಯುಂಟಾಗುತ್ತದೆ.

## ಹಾಸ್ಯರಸ

ಕಂದ॥ ಜೀವನ ನಾಟಕದೊಳ್‌ಸಂ।
–ಜೀವನಮೆನಿಸಿರ್ಪ ಹಾಸ್ಯರಸವಂ ತಿಳಿಯು॥
–ತ್ತಾವಗಮುದನೌಪಾಸಿಪ।
ಕೋವಿದ ನವ ಧನ್ಯನಲ್ತೆ ಧರಣೀತಳದೊಳ್॥

ದುಗುಡಂ ಪೋಪುದು ಮನದೊಳ್।
ಕಡುವೈರಿಯು ಮಿತ್ರನಪ್ಪನಾನಗೆಗಡಲೊಳ್॥
ಒಡಲಿನ ರೋಗಂ ಪೋಪುದು।
ಮೃಡನೊಲುಮೆಯುನೀವುದಿದುವೆ ಹಾಸ್ಯರಸಂದಲ್॥

'ಶೂಲಪಾಣಿ'



# ಮಹಾತ್ಮ ಚಳ್ಳಕುರಿಕೆಯ ಸ್ವಾಮಿಗಳು

ಪರಮೇಶ್ವರನ ಚೈತನ್ಯವು ಒಂದೊಂದು ವಸ್ತುವಿನಲ್ಲಿ ಒಂದೊಂದು ಬಗೆಯಾಗಿ ಅಭಿವ್ಯಕ್ತವಾಗುತ್ತದೆ. ಜ್ಞಾನಿಗಳಾದವರಿಗೆ ಜಗತ್ತಿನಲ್ಲೆಲ್ಲಾ ಪರಮಾತ್ಮನ ಚೈತನ್ಯವು ಕಂಗೊಳಿಸುತ್ತದೆ. "ಸರ್ವಂಖಲ್ವಿದಂಬ್ರಹ್ಮ" ಎಂಬ ಉಪನಿಷನ್ಮಂತ್ರವು ಪರಮೇಶ್ವರನ ಸರ್ವಾಂತರ್ಯಾಮಿತ್ವವನ್ನು ಬೋಧಿಸುತ್ತದೆ. ಆದುದರಿಂದಲೇ ನಿಗಮಾಗಮ ಸಾರಭೂತವಾದ ಗೀತೆಯಲ್ಲಿ ಭಗವಾನ್ ಶ್ರೀ ಕೃಷ್ಣನು 'ಪಂಡಿತಾಸ್ಸಮದರ್ಶಿನಃ' ಎಂಬುದಾಗಿ ನಿರೂಪಿಸಿದ್ದಾನೆ. ಅನುಭವಿಗಳು ಪ್ರತಿದಿನದ ತಮ್ಮ ನಡೆನುಡಿಗಳಲ್ಲಿಯೂ, ಈ ತತ್ವವನ್ನು ಮನಗಾಣುತ್ತಾರೆ. ಶ್ರೀ ಶೈಲ ಪರ್ವತಕ್ಕೆ ಹೋದ ಅಕ್ಕ ಮಹಾದೇವಿಗೆ ವನವೂ, ಆ ವನದೊಳಗಣ ತರುಗಳೂ, ಆ ತರುಗಳಲ್ಲಿ ಆಡುತ್ತಿದ್ದ ಖಗ ಮೃಗಗಳೂ ಶ್ರೀ ಚನ್ನಮಲ್ಲಿಕಾರ್ಜುನನಾಗಿ ಕಾಣಿಸಿದುದು ಈ ತತ್ವಾನುಭವದ ಬಲದಿಂದಲೇ ಅಲ್ಲವೆ?

ಪ್ರಪಂಚದ ಪ್ರತಿಯೊಂದು ವಸ್ತುವಿನಲ್ಲಿಯೂ, ಭಗವಂತನ ಚೈತನ್ಯವಿರುವುದಾದರೂ, ಮನುಷ್ಯ ಜೀವಿಯಲ್ಲಿ ಈ ತೇಜಸ್ಸು ಅಧಿಕವಾಗಿ ವಿಕಾಸಗೊಂಡಿದೆ. ಮಾನವರಲ್ಲಿಯೂ ಕಾಮಕ್ರೋಧ ರಹಿತರೂ, ಪರೋಪಕಾರ ಪರಾಯಣರೂ, ಜಿತೇಂದ್ರಿಯರೂ, ಪರಿಶುದ್ಧ ಚರಿತ್ರರೂ, ಭಕ್ತಿಜ್ಞಾನ ವೈರಾಗ್ಯಸಂಪನ್ನರೂ ಆದ ಮಹಾತ್ಮರಲ್ಲಿ ಈಶ್ವರೀ ಚೈತನ್ಯವು ಅಧಿಕಾಧಿಕವಾಗಿ ಗೋಚರವಾಗುತ್ತದೆ. ಅಂತಹ ಮಹಾತ್ಮರ ಜೀವಿತವು ಸರ್ವವಿಧದಿಂದಲೂ ಜಗತ್ತನ್ನು ಬೆಳಗಿಸಿ ಜನಜೀವನವನ್ನು ಪವಿತ್ರಗೊಳಿಸುತ್ತದೆ.

ಪುಣ್ಯಭೂಮಿಯೆನಿಸಿದ ಭರತಖಂಡದಲ್ಲಿಯೂ ತದಂತರ್ಗತವಾದ ನಮ್ಮ ನಲ್ಮೆಯ ಕರ್ನಾಟಕದಲ್ಲಿಯೂ ಇಂತಹ ಎಷ್ಟೋ ಮಂದಿ ಸಾಧು ಸತ್ಪುರುಷರು ಆಗಿಹೋಗಿದ್ದಾರೆ. ಅವರೆಲ್ಲರ ತಪಸ್ಸಿನ, ಅನುಭವದ, ಆಶೀರ್ವಾದದ ಬಲದಿಂದಲೇ ನಾವುಗಳು ಇನ್ನೂ ಲೋಕದಲ್ಲಿ ನಾಗರಿಕ ಮಾನವರೆಂದು ಪರಿಗಣಿತರಾಗುವ ಸ್ಥಿತಿಯಲ್ಲಿದ್ದೇವೆ. ಅಂತಹ ಮಹಾತ್ಮರ ಚರಿತ್ರೆಯನ್ನು ತಿಳಿಯುವುದು, ಪಠಿಸುವುದು ಪುಣ್ಯಪ್ರದವೇ ಅಲ್ಲದೆ ಪ್ರಯೋಜನಕರವೂ ಆದುದು. ನಮ್ಮ ನಾಡಿನ ಬಳ್ಳಾರಿ ಜಿಲ್ಲೆಯ ಚಳ್ಳಕುರಿಕೆಯ ಗ್ರಾಮದಲ್ಲಿ ಆಗಿಹೋದ ಒಬ್ಬ ಮಹಾತ್ಮರ ಚರಿತ್ರೆಯನ್ನು ಅತಿ ಸಂಗ್ರಹವಾಗಿ ಇಲ್ಲಿ ಬರೆಯಲಾಗಿದೆ.

ಮಹಾತ್ಮ ಚಳ್ಳಕುರಿಕೆ ಸ್ವಾಮಿಗಳು ಈಗ್ಗೆ ಸುಮಾರು ಹದಿನೈದು ವರ್ಷಗಳ ಹಿಂದೆ ಆ ಗ್ರಾಮದಲ್ಲಿ ಶಿವಾಧೀನರಾದರೆಂದು ತಿಳಿದು ಬರುತ್ತದೆ. ಇವರು ಹುಟ್ಟಿದ ದಿವಸ, ಸ್ಥಳ, ತಂದೆ ತಾಯಿಗಳ ಹೆಸರು, ಬೋಧಿಸಿದ ಗುರು ಈ ವಿಷಯಗಳಾವುವೂ ಇದುವರೆಗೆ ಯಾರಿಗೂ ತಿಳಿದುಬಂದಿಲ್ಲ. ಇವರು ಕೇವಲ ವೈರಾಗ್ಯಸಂಪನ್ನರಾಗಿ ತಮ್ಮ ದರ್ಶನಕ್ಕೆ ಬಂದ ಭಕ್ತ ಕೋಟಿಯನ್ನು ಬೋಧಾಮೃತದಿಂದಲೂ ತಮ್ಮ ಆತ್ಮಬಲದಿಂದಲೂ, ಅನುಗ್ರಹಿಸುತ್ತಿದ್ದರೆಂದು ತಿಳಿದುಬಂದಿದೆ. ಇವರು ಸಾದಾ ಜಡಭರತನಂತೆ, ದಸರದೇವಯ್ಯನಂತೆ ಇರುತ್ತಿದ್ದರೆಂದು ಹೇಳುತ್ತಾರೆ. ಇವರು ಅನೇಕ ಪವಾಡಗಳನ್ನು ಮಾಡಿದರೆಂದು ಹೇಳುತ್ತಾರೆ. ಇವರ ಮಾಹಾತ್ಮ್ಯವನ್ನು ಕಣ್ಣಾರ ಕಂಡವರು ಈಗಲೂ ಹಲವು ಮಂದಿ ಇದ್ದಾರೆ. ಇವರನ್ನು ಎರ್ರಿ ಸ್ವಾಮಿ, ಚಳ್ಳಕುರಿಕೆಯ ತಾತ ಮೊದಲಾದ ಹೆಸರುಗಳಿಂದ ಜನರು ಕರೆಯುತ್ತಾರೆ. ಇವರು ಯಾವ ಕುಲ, ಜಾತಿ, ಭೇದಗಳನ್ನೂ ಎಣಿಸದೆ ಎಲ್ಲ ಮತ ಪಂಥದವರಿಂದಲೂ ಅನ್ನಪಾನಗಳನ್ನು ತೆಗೆದುಕೊಳ್ಳುತ್ತಿದ್ದರೆಂದು ತಿಳಿದುಬರುತ್ತದೆ. ಆದ್ದರಿಂದ ಇವರು ಆರೂಢರಾಗಿದ್ದರೆಂದು ಹೇಳ ಬಹುದಾಗಿದೆ. ಇವರಿಗೆ ಅಂತ್ಯಕಾಲದಲ್ಲಿ ಸುಮಾರು ನೂರು ವರ್ಷ ಗಳಾಗಿರಬಹುದಾದರೂ ಅದುವರೆಗೆ ಇವರು ತಮ್ಮ ಚರಿತ್ರೆಯ ಬಗೆಗೆ ಒಬ್ಬರಲ್ಲಿಯೂ ಪ್ರಸ್ತಾಪಿಸದಿರುವುದನ್ನು ನೋಡಿದರೆ ಇವರು ಶ್ರೀ ಮುಷ್ಟಿನ

ಷಡಕ್ಷರಸ್ವಾಮಿಯಂತೆ ಅಸದೃಶವಾದ ವೈರಾಗ್ಯ ಸಂಪನ್ನರಾಗಿದ್ದರೆಂದು ತೋರುತ್ತದೆ. ಇವರು ಸತ್ತ ಎಮ್ಮೆಯ ಕರುವನ್ನು ಬದುಕಿಸಿದರು, ನದೀ ಪ್ರವಾಹದಲ್ಲಿ ಸಮಾಧಿಸ್ಥರಾಗಿ ಕುಳಿತಿದ್ದರು, ಹಲವರ ರೋಗ ರುಜಿನಗಳನ್ನು ಹರಿಸಿದರು, ಹಲವರ ಅಭೀಷ್ಟಗಳನ್ನು ಅನುಗ್ರಹಿಸಿದರು ಎಂದು ಮೊದಲಾಗಿ ಜನರು ಹೇಳಿಕೊಳ್ಳುತ್ತಿರುವ ದಂತ ಕಥೆಗಳು ಅಸಂಖ್ಯಾತವಾಗಿದೆ. ಶ್ರದ್ಧಾ ಪ್ರಧಾನರಾದ ಭಾವಿಕ ಜನರು ಈ ಕಥೆಗಳನ್ನು ವಿಶ್ವಾಸದಿಂದ ನಂಬುತ್ತಾರೆ. ತರ್ಕ ಪ್ರಧಾನವಾದ ಪ್ರಕೃತಿ ನಿಯಮಗಳಿಗೆ ವಿರುದ್ಧವಾದ (Natural Laws) ಕಾರ್ಯಗಳು ನಡೆಯುವುದಿಲ್ಲವೆಂದು ವಾದಿಸುವ ನಾಗರಿಕರಿಗೆ ಇಂತಹ ಪವಾಡಗಳು ಅಪ್ರಿಯವೆಂಬುದನ್ನು ತಿಳಿದು ಇಲ್ಲಿ ಅವನ್ನು ವಿವರಿಸುವ ಗೊಡವೆಗೆ ನಾನು ಹೋಗಲಿಲ್ಲ; ಆದರೂ ಇಂತಹ ಮಹಾತ್ಮರಲ್ಲಿ ಒಂದು ಬಗೆಯ ಪವಿತ್ರತೆ, ಆತ್ಮಪ್ರಭಾವ, ಸಾಮಾನ್ಯ ಮನುಷ್ಯರಿಗಿಂತಲೂ ಮಿಗಿಲಾದ ಶಕ್ತಿ, ತೋರಿಬರುವುದೆಂಬುದನ್ನು ಇಂತಹ ತಾರ್ಕಿಕರಾದರೂ ತಮ್ಮ ಜೀವನದ ಹಲವು ಸಂದರ್ಭಗಳಲ್ಲಿ ಮನಗಾಣಬಹುದು. ಉದಾಹರಣೆಗಾಗಿ:—ಮಹಾತ್ಮಗಾಂಧಿಯವರ ಕೊರಳಿಗೆ ಹಾಕಿದ ಹೂವಿನ ಹಾರವನ್ನು ಹರಾಜು ಮಾಡಿದಾಗ ಜನರು ನೂರಾರು ರೂಪಾಯಿಗಳನ್ನು ಕೊಟ್ಟು ಕೊಂಡುಕೊಂಡು ಅದರಿಂದ ತಾವು ಪವಿತ್ರರಾದಂತೆ ಭಾವಿಸಿ, ಒಂದು ಬಗೆಯ ಆತ್ಮಶಾಂತಿಯನ್ನು ಹೊಂದಿದ ಲಕ್ಷಗಟ್ಟಲೆ ನಾಗರಿಕರನ್ನು ನಾವು ನೋಡಿದ್ದೇವೆ. ಅಂಗಡಿಯ ಹೂವಿನ ಹಾರವು ಗಾಂಧಿಯವರ ದೇಹಸ್ಪರ್ಶನದಿಂದ ಎಷ್ಟೊಂದು ಘನತೆಯನ್ನು ಪಡೆಯಿತೆಂಬುದನ್ನು ನಾವು ಕಣ್ಣಾರ ಕಂಡು ಅಂಗೀಕರಿಸಿದ ಮೇಲೆ, ಪುರಾಣಕಾಲದ ಸತ್ಪುರುಷರ ಚರಿತ್ರೆಗಳಲ್ಲಿ ತೋರಿ ಬರುವ ಪವಾಡಗಳಲ್ಲಿ ಏನೋ ಒಂದು ಬಗೆಯ ತತ್ವಾರ್ಥವೂ ಸ್ವಾರಸ್ಯವೂ ಇರಬಹುದೆಂದು ನಾವು ಊಹಿಸಬಹುದಾಗಿದೆ.

ಶ್ರೀ ಚಳ್ಳಕುರಿಕೆಯ ಸ್ವಾಮಿಗಳ ಚರಿತ್ರೆಯನ್ನು ಐತಿಹಾಸಿಕ ದೃಷ್ಟಿಯಿಂದ ಬರೆಯಲು ನಮಗೆ ಸಾಧನಗಳಿಲ್ಲವಾಗಿದೆ. ಅವರು ಮಾಡಿದ

ಬೋಧನೆಗಳನ್ನು ಅವರ ಭಕ್ತರು ಸಂಗ್ರಹಿಸಿ ಬರೆದಿಟ್ಟಿದ್ದರೆ ಅದರಿಂದ ಕನ್ನಡಿಗರಿಗೆ ಮಹೋಪಕಾರವಾಗುತ್ತಿತ್ತು. ನಮ್ಮ ಜನರಲ್ಲಿ ಇನ್ನೂ ಇಂತಹ ಎಚ್ಚರಿಕೆ ಉಂಟಾಗಿಲ್ಲವೆಂದು ಹೇಳಬೇಕಾಗಿದೆ. ಶ್ರೀ ರಾಮಕೃಷ್ಣ ಪರಮ ಹಂಸರ ಚರಿತ್ರೆ ಮತ್ತು ಬೋಧೆಯ ಪರಿಚಯವನ್ನೋದಿದವರಿಗೆ ನಮ್ಮ ಈ ಮಾತಿನ ಅರ್ಥವು ಸುಲಭವಾಗಿ ಹೊಳೆಯುತ್ತದೆ. ಮಹನೀಯರಾದ ಈ ಸ್ವಾಮಿಗಳ ಬಗೆಗೆ ಹಲವು ಮಂದಿ ಪಂಡಿತರೂ, ಕವಿಗಳೂ, ಕವಿತೆಗಳನ್ನೂ ಹಾಡುಗಳನ್ನೂ ಕಟ್ಟಿಹಾಡಿದ್ದಾರೆ. ಅಂತಹ ಹಾಡುಗಳು ಕನ್ನಡನಾಡಿನ ಹಲವೆಡೆಗಳಲ್ಲಿ ಈಗಲೂ ಪ್ರಚಾರದಲ್ಲಿದೆ. ಇವನ್ನು ನಾವು ಕನ್ನಡ ಜನಪದ ಸಾಹಿತ್ಯದಲ್ಲಿ ಪರಿಗಣಿಸಬಹುದಾಗಿದೆ. ಶ್ರೀಗಳಲ್ಲಿ ಭಕ್ತಿ ಭಾವವನ್ನುಳ್ಳ ಹಲವು ಮಂದಿ ಮಹನೀಯರು ಬೆಂಗಳೂರಿನಲ್ಲಿಯೂ ಇದ್ದಾರೆ. ಈ ಪಟ್ಟಣದ ಶ್ರೀ ರಾಮಲಿಂಗೇಶ್ವರ ದೇವಾಲಯದಲ್ಲಿ (ಮಕ್ಕಳ ಬಸವಣ್ಣನ ಗುಡಿ) ಶ್ರೀ ಸ್ವಾಮಿಗಳ ಭಾವಚಿತ್ರವನ್ನಿಟ್ಟು ಭಕ್ತಿಯಿಂದ ಪೂಜಿಸುತ್ತಿದ್ದಾರೆ. ಈಗಲೂ ಹಲವರ ಸ್ವಪ್ನದಲ್ಲಿ ಶ್ರೀಗಳು ದರ್ಶನವನ್ನು ಕೊಟ್ಟು ಅವರ ಕೋರಿಕೆಯಂತೆ ಅನುಗ್ರಹಿಸುತ್ತಿರುವರೆಂದು ನಾವು ಕೇಳಿದ್ದೇವೆ. ಜಗತ್ತಿನ ಎಲ್ಲ ಭಾಗದ ಸತ್ಪುರುಷರಲ್ಲಿಯೂ ಇಂತಹ ಅನುಭವಗಳು ಗೋಚರ ವಾಗುತ್ತವೆ. ಒಟ್ಟಿನಲ್ಲಿ ಕರ್ನಾಟಕದಲ್ಲಿ ಆಗಿಹೋದ ಮಹಾತ್ಮರಾದ ಸತ್ಪುರುಷರ ಮಾಲಿಕೆಯಲ್ಲಿ ಶ್ರೀ ಚಳ್ಳಕುರಿಕೆಯ ಸ್ವಾಮಿಗಳು ಪರಿಗಣಿತ ರಾಗಿದ್ದಾರೆ.

ಬಳ್ಳಾರಿಯ ತಾಲ್ಲೋಕಿನ ಚಳ್ಳಕುರಿಕೆಯ ಗ್ರಾಮದಲ್ಲಿ ಶ್ರೀ ಸ್ವಾಮಿ ಗಳವರ ಸಮಾಧಿ ಮತ್ತು ಮಠವಿದೆ. ಅದರ ಎಲ್ಲ ಜವಾಬ್ದಾರಿಯೂ ಲಿಂಗ ವಂತರ ಕೈಯ್ಯಲ್ಲಿದೆಯೆಂದು ಕೇಳುತ್ತೇವೆ. ಅದು ದಾಸೋಹದ ಮಠ ವಾಗಿಯೂ, ಒಳ್ಳೆಯ ಕ್ಷೇತ್ರವಾಗಿಯೂ ವಿರಾಜಮಾನವಾಗಿದೆ. ಪ್ರತಿವರ್ಷದ ಜ್ಯೇಷ್ಠ ಶುದ್ಧ ಷಷ್ಠಿಯ ದಿನ ಶ್ರೀಗಳ ವಾರ್ಷಿಕೋತ್ಸವವಾಗುತ್ತದೆ. ಶ್ರೀ ಸ್ವಾಮಿಗಳ ಮಹಿಮಾಕಾರ್ಯಗಳನ್ನು ತಿಳಿಯಲಿಚ್ಛಿಸುವವರು ಶ್ರೀಮಾನ್ ಬಳ್ಳಾರಿ ಕೆ. ಎಂ. ಕರಿಬಸವಯ್ಯನವರು, ೧೯೩೨ ನೆಯ ಇಸವಿಯಲ್ಲಿ ಬರೆದು

ಪ್ರಕಟಿಸಿರುವ ಶ್ರೀ ಸ್ವಾಮಿಗಳ ಚರಿತ್ರೆಯನ್ನೋದಿ ಸಮಾಧಾನವನ್ನು ಹೊಂದಬೇಕೆಂದು ನಮ್ಮ ಪ್ರಾರ್ಥನೆ. ಶ್ರೀ ಸ್ವಾಮಿಗಳ ಆತ್ಮಪ್ರಭೆಯು ಕನ್ನಡನಾಡು, ಕನ್ನಡನುಡಿ, ಕನ್ನಡಿಗರ ಜೀವನ, ಕನ್ನಡಸಾಹಿತ್ಯ ಮೊದಲಾದವುಗಳನ್ನು ಬೆಳಗುವಂತೆ ಅನುಗ್ರಹಿಸಲೆಂದು ಪುನಃ ಪುನಃ ನಮ್ಮ ಪ್ರಾರ್ಥನೆ.

## ವೈರಾಗ್ಯ

ಹೆಣ್ಣಿನ ಆಕರ್ಷಣೆಯಂ।<br>
ಮಣ್ಣಿನ ಮಮತೆಯನು ತೊರೆದ ಸಮ್ಯಕ್ ಪುರುಷಂ॥<br>
ಹೊನ್ನಿನ ಭ್ರಾಂತಿಯನುಳಿದವ।<br>
ನನ್ನುತ ಯೋಗೀಶನೆಂದು ತಿಳಿಯಲ್ ಬರ್ಕುಂ॥

ಮಾನವ ದೇಹದ ಬೆಲೆಯಂ।<br>
ಮಾನವ ಜೀವನದ ಗುಟ್ಟುಗುರಿಗಳ ನೆಲ್ಲಂ॥<br>
ಮಾನವಲೋಕ ರಹಸ್ಯವ।<br>
ನೇನೆಂಬೆಂ ಜ್ಞಾನಿಯೊರ್ವ ನರಿವಂ ನಿಸದಂ॥

'ಶೂಲಪಾಣಿ'



# ಹೊಸಗನ್ನಡ ಪಿತಾಮಹ

## ಕೈ॥ ಎನ್. ಶ್ರೀಕಂಠಶಾಸ್ತ್ರಿಗಳು

ಸುಮಾರು ೨೦೦೦ ವರ್ಷಗಳಷ್ಟು ಪ್ರಾಚೀನತೆಯುಳ್ಳ ಕನ್ನಡ ಸಾಹಿತ್ಯದ ಚರಿತ್ರೆಯಲ್ಲಿ ೨೦ನೆಯ ಶತಮಾನದ ಪ್ರಾರಂಭದಿಂದ ಹೊಸಗನ್ನಡ ಸಾಹಿತ್ಯವು ತಲೆಯೆತ್ತಿ ನಿಂತುಕೊಂಡಿತೆಂದು ಹೇಳಬಹುದು. ಕನ್ನಡದಲ್ಲಿ ಹೊಸಮಾದರಿಯ ನಾಟಕಗಳು, ಕಾದಂಬರಿಗಳು, ಜೀವನಚರಿತ್ರೆಗಳು, ಕಾವ್ಯವಿಮರ್ಶೆಗಳು ಈ ಕಾಲದಲ್ಲಿಯೇ ವಿದ್ವಾಂಸರಿಂದ ವಿರಚಿತವಾದುವು. ಹೀಗೆ ಹೊಸಗನ್ನಡ ಸಾಹಿತ್ಯವನ್ನು ಸೃಷ್ಟಿಸಿ ಪಿತಾಮಹರೆನಿಸಿಕೊಂಡವರಲ್ಲಿ ಆಸ್ಥಾನ ಮಹಾವಿದ್ವಾನ್ ಕೈ॥ ನಂಜನಗೂಡು ಶ್ರೀಕಂಠಶಾಸ್ತ್ರಿಗಳು ಒಬ್ಬರಾಗಿದ್ದಾರೆ. ಇವರು ಪ್ರಖ್ಯಾತ ನಾಟಕಕಾರರೂ ಆಧುನಿಕ ಕವಿಶ್ರೇಷ್ಠರೂ ಸುಪ್ರಸಿದ್ಧ ಪತ್ರಿಕಾಲೇಖಕರೂ ಎನಿಸಿಕೊಂಡು ಸಕಲ ಕನ್ನಡಿಗರ ಮನ್ನಣೆಗೂ ಪಾತ್ರರಾಗಿದ್ದರು. ಇವರು ಹಿಂದಿನ ಶತಮಾನದಲ್ಲಿ ಪ್ರಖ್ಯಾತ ವಿದ್ವಾಂಸರೆನಿಸಿದ್ದ ಆಸ್ಥಾನವಿದ್ವಾನ್ ನಂಜನಗೂಡು -ಸುಬ್ಬಾಶಾಸ್ತ್ರಿಗಳ ಪುತ್ರರು. ಇವರ ಜನನ ೧೮೫೩. ಇವರ ಜೀವಿತಕಾಲ ೭೩ ವರ್ಷಗಳು. ಇವರಿಗೆ ಕನ್ನಡ, ತೆಲುಗು ಮತ್ತು ಸಂಸ್ಕೃತ ಭಾಷೆಗಳಲ್ಲಿ ಒಳ್ಳೆಯ ಪಾಂಡಿತ್ಯವಿತ್ತು. ಇವರಿಗೆ ಸಂಗೀತ ಮತ್ತು ನಾಟಕ ಕಲೆಗಳಲ್ಲಿ ಒಳ್ಳೆಯ ಪರಿಚಯವಿತ್ತು.

ಇವರು ಮೈಸೂರು ಮಹಾರಾಜರ ವಿದ್ಯಾಗುರುಗಳು. ರಾಜಧಾನಿಯ ಅರಸು ಬೋರ್ಡಿಂಗ್ ಸ್ಕೂಲಿನಲ್ಲಿ ೪೦ ವರ್ಷಗಳ ಕಾಲ ಸೇವೆಸಲ್ಲಿಸಿದರು. 'ಕರ್ಣಾಟಕ ಚಂದ್ರಿಕೆ' ಎಂಬ ಮಾಸ ಪತ್ರಿಕೆಯನ್ನು ೧೩ ವರ್ಷಗಳ ಕಾಲ

ನಡೆಸಿ ಸಾಹಿತ್ಯಕ್ಕೆ ಸೇವೆಸಲ್ಲಿಸಿದರು. ಇವರು ಮೈಸೂರು ಅರಮನೆ, ಮೈಸೂರಿನ ನಾಗರಿಕರು, ರಂಭಾಪುರಿ ಜಗದ್ಗುರುಗಳು, ಸಾಹಿತ್ಯ ಪರಿಷತ್ತು ಮೊದಲಾದ ಕಡೆಗಳಿಂದ ಸನ್ಮಾನವನ್ನು ಪಡೆದಿದ್ದಾರೆ. ನಾಟಕಸಂಸ್ಥೆಗಳಿಗೆ ಅನೇಕ ನಾಟಕಗಳನ್ನು ಬರೆದುಕೊಟ್ಟು ಉಪಕಾರಮಾಡಿದ್ದಾರೆ.

ಕೈ॥ ನಂಜನಗೂಡು ಶ್ರೀಕಂಠಶಾಸ್ತ್ರಿಗಳು ಒಟ್ಟು ೭೮ ಗ್ರಂಥಗಳನ್ನು ಬರೆದಿದ್ದಾರೆಂದು ತಿಳಿದು ಬಂದಿದೆ. "ಕೃಷ್ಣರಾಜೇಂದ್ರ ಚರಿತಂ, ಯದು ರತ್ನಾನ್ವಯಂ" ಎಂಬ ಎರಡು ಚಂಪೂಕಾವ್ಯಗಳನ್ನೂ "ರೇಣುಕ ವಿಜಯ ಪುರಾಣ" ಎಂಬ ಷಟ್ಪದೀ ಕಾವ್ಯವನ್ನೂ ಇವರು ಬರೆದಿದ್ದಾರೆ. ಇವರ ಕವಿತಾಶೈಲಿಯು ಶಬ್ದಾರ್ಥಾಲಂಕಾರಗಳಿಂದೊಡಗೂಡಿ ಸರಳವೂ ಮನೋಹರವೂ ಆಗಿದೆ. ಇವರು ನಾಟಕಕಲೆಗಳಲ್ಲಿ ಹೆಚ್ಚಿನ ಆಸಕ್ತಿಯನ್ನು ವಹಿಸಿ ಉತ್ತಮವಾದ ಹಲವು ನಾಟಕಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಮುಂದೆ ಹೇಳಿರುವ ಗ್ರಂಥಗಳು ಗಣ್ಯವಾಗಿವೆ.

ಧ್ರುವ ವಿಜಯ ನಾಟಕ, ಸೀತಾಪರಿಣಯ ನಾಟಕ, ಸೀತಾಸುವರ್ಣ ಮೃಗ ನಾಟಕ, ಪ್ರಿಯದರ್ಶಿಕಾ ನಾಟಕೆ, ಕನಕಲತಾ ಪರಿಣಯ, ಕೃಷ್ಣ ವಿಜಯ ವ್ಯಾಯೋಗ, ನಿರುಪಮ, ಉತ್ಪಲ ಕುಮಾರಿ, ವಿಷ್ಣುಲೀಲಾ ನಾಟಕಂ, ಮಹಾರಣ್ಯ ಪುರಾಧಿಪತ್ಯ, ರಾಘವಾಭ್ಯುದಯಂ, ವ್ಯವಹಾರ ಧರ್ಮ ಬೋಧಿನೀ, ಅಭಿಜ್ಞಾನ ಪ್ರಧಾನ ನಾಟಕ, ತಿಲೋತ್ತಮಾ, ಕಲಹ ಪ್ರಿಯ ಪ್ರಹಸನ, ನವೀನ ಪ್ರಪಂಚ ಇತ್ಯಾದಿ.

ಈ ಮೇಲೆ ಕಂಡ ಗಂಥಗಳೇ ಅಲ್ಲದೆ "ಸಂಗೀತ ಪಾರಿಜಾತ" ಎಂಬ ಮತ್ತೊಂದು ಗ್ರಂಥವನ್ನೂ ಇವರು ಬರೆದಂತೆ ತಿಳಿದುಬಂದಿದೆ.

ಕನ್ನಡದಲ್ಲಿ ಚಿಕ್ಕದೇವರಾಯರ ಆಸ್ಥಾನ ಕವಿ ಸಿಂಗರಾರ್ಯ ಬರೆದ "ಮಿತ್ರವಿಂದಾ ಗೋವಿಂದ" ಎಂಬ ನಾಟಕವೇ ಮೊದಲನೆಯದು. ಅನಂತರ ಚಾಮರಾಜ ಒಡೆಯ ಆಸ್ಥಾನ ಕವಿ ಕೈ॥ ಅಭಿನವ ಕಾಳಿದಾಸ ಬಸಪ್ಪಶಾಸ್ತ್ರಿ

ಗಳಿಂದ ವಿರಚಿತವಾದ "ಅಭಿಜ್ಞಾನ ಶಕುಂತಲ" "ಉತ್ತರ ರಾಮಚರಿತೆ" "ಚಂಡ ಕೌಶಿಕ" "ರತ್ನಾವಳಿ" ವಿಕ್ರಮೋರ್ವಶೀಯ, ಶೂರಸೇನಚರಿತೆ, ನಾಟಕಗಳು ಸಾಹಿತ್ಯದಲ್ಲಿ ಪ್ರಾಮುಖ್ಯತೆಯನ್ನು ಪಡೆದಿವೆ. ಅನಂತರ ಸಾಹಿತ್ಯ ಪಿತಾಮಹ ನಂಜನಗೂಡು ಶ್ರೀಕಂಠಶಾಸ್ತ್ರಿಗಳ ನಾಟಕಗಳೇ ಗಣನಾರ್ಹ ವಾದುವೆಂದು ನಾವು ಹೇಳಬಹುದು. ಶ್ರೀ ಶಾಸ್ತ್ರಿಗಳು ತ್ರಿಭಾಷಾಪಂಡಿತರೂ ಜನ್ಮತಃ ಕವಿಗಳೂ, ವಿಶಾಲ ಲೋಕಾನುಭವಿಗಳೂ ಆಗಿದ್ದುದರಿಂದ ಸಾಹಿತ್ಯದ ಎಲ್ಲ ಕ್ಷೇತ್ರಗಳಲ್ಲಿಯೂ ಅಗ್ರಗಣ್ಯರೆನಿಸಿ ಸೇವೆಯನ್ನು ಸಲ್ಲಿಸಿದ್ದಾರೆ. ಪ್ರೌಢ ವಾದ ಚಂಪೂಶೈಲಿ, ಸರಳವಾದ ಷಟ್ಪದೀ ಶೈಲಿಯಲ್ಲಿ ಕಾವ್ಯಗಳನ್ನು ಬರೆದಿ ದ್ದಾರೆ. ಹೊಸಕನ್ನಡ ಸಾಹಿತ್ಯದಲ್ಲಿ ಹಲವಾರು ಪೌರಾಣಿಕ, ಐತಿಹಾಸಿಕ ನಾಟಕ ಗಳನ್ನು ರಚಿಸಿದ್ದಾರೆ. ಮುಖ್ಯವಾಗಿ ಇವರು ರಾಮಾಯಣದ ಕಥಾ ವಸ್ತುವನ್ನು ಕುರಿತು ಬರೆದಿರುವ ನಾಟಕಗಳು ಹೆಚ್ಚಿನ ಜನಪ್ರಿಯತೆಯನ್ನು ಪಡೆದಿವೆ. ಅವು ರಂಗಭೂಮಿಯ ಮೇಲೆ ಅಭಿನಯಿಸಲ್ಪಟ್ಟು ನಾಡಿನ ಜನರನ್ನು ಬಹಳವಾಗಿ ಆಕರ್ಷಿಸಿವೆ. ಇವರ ಗದ್ಯದ ಶೈಲಿಯು ಅತ್ಯಂತ ಸುಸಂಸ್ಕೃತವೂ ಮನಮೋಹಕವೂ ಆದುದು.

ಇನ್ನು ಇವರ ಗದ್ಯ ಪದ್ಯ ಶೈಲಿಯ ಪರಿಚಯವನ್ನು ನಾವು ಅವರ ಗ್ರಂಥಗಳಲ್ಲಿ ಕೆಲವು ಆರಿಸಿದ ಭಾಗಗಳಿಂದ ಸುಲಭವಾಗಿ ತಿಳಿಯ ಬಹುದಾಗಿದೆ.

"ಯಾವುದು ಹೇಗಿದ್ದರೂ ಐಶ್ವರ್ಯವೊಂದಿದ್ದರೆ ಲೋಕವೆಲ್ಲಾ ಕರಗತವಾಗುವುದು, ಅದಿಲ್ಲದ ಪಕ್ಷದಲ್ಲಿ ಎಲ್ಲವೂ ವಿಷಮಯವಾಗಿ ಪರಿಣಮಿ ಸುವುದು. ಮೋಹನ ಚಂದ್ರನು ವಿದ್ಯಾವಂತ, ಗುಣವಂತ, ಸೌಂದರ್ಯ ವಂತ, ಯುವಕನಾಗಿಯೂ ಇರುವನು. ತಿಲೋತ್ತಮೆಗೂ ಅವನಿಗೂ ಅನುರಾಗವು ದೃಢಮೂಲವಾಗಿರುವುದು. ಇಷ್ಟಾದರೂ ಅವನು ಬಡವ, ನನ್ನ ಐಶ್ವರ್ಯ, ನನ್ನ ಗಾಂಭೀರ್ಯ, ನನ್ನ ಔದಾರ್ಯ ಇವುಗಳು ಕಾಂಚನ ವರ್ಮವನ್ನು ವಿಕ್ರೀತದಾಸನನ್ನಾಗಿ ಮಾಡಿಕೊಂಡು ತಿಲೋತ್ತಮೆಯನ್ನು ನನ್ನವಳನ್ನಾಗಿ ಮಾಡಲು ಪ್ರಯತ್ನಿಸಿರುವುವು. ತಿಲೋತ್ತಮೆಯ ಸೌಂದರ್ಯ

ವನ್ನು ಕಂಡು ಮುಗ್ಧನಾದ ನನಗೆ ಹಗಲಿರುಳೂ ಅದೇ ಯೋಚನೆಯಾಗಿದೆ. ಆದರೆ ಸೌಂದರ್ಯದಲ್ಲಿ ನಾನು ಅವಳಿಗೆ ಅನುರೂಪನಲ್ಲವೆಂದು ಬುದ್ಧಿಯಿಲ್ಲದ ಕೆಲವರು ಆಡಿಕೊಳ್ಳಬಹುದು. ನನಗೇನು ಕಣ್ಣು, ಕಿವಿ, ಮೂಗು, ಕೈಕಾಲುಗಳಿಲ್ಲವೆ ? ನಾನೇನು ಮನುಷ್ಯನಲ್ಲವೆ ? ಹೊಟ್ಟೆ ಸ್ವಲ್ಪ ದೊಡ್ಡ ದಾಗಿದ್ದ ಮಾತ್ರಕ್ಕೇ ನನ್ನ ರೂಪಕ್ಕೆ ಕೊರತೆಯೇನು ? ಯಾವನಾದರೊಬ್ಬ ವೈದ್ಯನನ್ನು ಹುಡುಕಿ ಹಣದಾಸೆಯನ್ನು ತೋರಿಸಿದರೆ ಅವನು ನನ್ನನ್ನು ಸುಂದರನಾಗಿ ಕಾಣುವಂತೆ ಮಾಡಲಾರನೆ ? ಇರಲಿ, ಈಗ ಮೊದಲು ಆವನಾದರೂ ಒಬ್ಬ ವೈದ್ಯನನ್ನು ಹುಡುಕಿ ನನ್ನ ಹೊಟ್ಟೆಯುಬ್ಬರವು ಕಡಿಮೆ ಯಾಗುವಂತೆ ಔಷಧವನ್ನು ತೆಗೆದುಕೊಳ್ಳುವೆನು ಎಂದಾಲೋಚಿಸಿ, ಶಹಭಾಷ್! ತಿಲೋತ್ತಮೆಗೆ ನಾನು ಪತಿಯಾಗಬೇಕಾದರೆ ನನ್ನ ಹೊಟ್ಟೆಯು ಸಣ್ಣದಾಗಬೇಕು, ಆದಕ್ಕೆ ತಕ್ಕ ಔಷಧವು ದೊರೆಯಬೇಕಾದರೆ ವೈದ್ಯನಿಗೆ ಹಣದಾಸೆಯಿರಬೇಕು.. ಆ ಆಸೆಯನ್ನು ಪೂರ್ತಿಗೊಳಿಸಿದರೆ ನನ್ನಲ್ಲಿರುವ ಹಣದಲ್ಲಿ ಸ್ವಲ್ಪವನ್ನು ಅವನಿಗೆ ಕೊಡಬೇಕು. ಅಹಾ! ಈಗ ನನ್ನಲ್ಲಿ ಹಣ ವಿಲ್ಲದೆ ನಾನೂ ಮೋಹನಚಂದ್ರನಂತೆ ಬಡವನಾಗಿದ್ದ ಪಕ್ಷದಲ್ಲಿ ತಿಲೋ ತ್ತಮೆಯ ಆಸೆಯನ್ನೇ ತೊರೆಯಬೇಕಾಗಿದ್ದಿತ್ತಲ್ಲ? ಎಲೈ ಧನವೆ, ನಿನ್ನ ಅನು ಗ್ರಹದಿಂದ ಸಮಸ್ತವೂ ಸಿದ್ಧಿಸುವುದೆನ್ನುವುದಕ್ಕೆ ಯಾವ ಸಂಶಯವೂ ಇಲ್ಲ. (ಎಂದು ತಿರುಗಿನೋಡಿ) ಇದೇನು ! ಇತ್ತಕಡೆ ಯಾವನೋ ಒಬ್ಬ ವೃದ್ಧನು ಬರುತ್ತಿರುವನು. ಇವನನ್ನು ವಿಚಾರಿಸಿದರೇನಾದರೂ ನನ್ನ ದೊಡ್ಡಹೊಟ್ಟೆ ಯನ್ನು ಕಡಿಮೆ ಮಾಡತಕ್ಕ ವೈದ್ಯನ ವಿಷಯವು ತಿಳಿದು ಬಂದೀತೋ ಏನೋ ?" (ಎಂದು ಮುಂದೆ ಬಂದು ನಿಲ್ಲುವನು) ಈ ಮಾತುಗಳು ತಿಲೋತ್ತಮಾ ನಾಟಕದ 'ಪಿಚಂಡಿಲಾ' ಎಂಬ ಪಾತ್ರಮುಖದಿಂದ ಬಂದವುಗಳು. ಮೇಲಿನ ಗದ್ಯದಲ್ಲಿ ಶಾಸ್ತ್ರಿಗಳ ಸರಳ ಸುಂದರ ಕನ್ನಡ ವಚನ ಶೈಲಿಯನ್ನು ನಾವು ಅರಿಯಬಹುದು. ಅದರಲ್ಲಿ ಅಲ್ಲಲ್ಲಿ ಇಣಕಿ ನೋಡುವ ತಿಳಿ ಹಾಸ್ಯದಿಂದ ನಾವು ಆನಂದವನ್ನು ಅನುಭವಿಸಬಹುದು.

ಶ್ರೀ ಶಾಸ್ತ್ರಿಗಳ ಷಟ್ಪದೀ ಶೈಲಿಯ ಸುಂದರ ನಿದರ್ಶನವನ್ನು ಅವರ ರೇಣುಕ ವಿಜಯ ಪುರಾಣದಿಂದ ನಾವು ಅರಿಯಬಹುದು.


ಬ್ರಹ್ಮೀ ಭೂತ
ಶ್ರೀ ನಾರಾಯಣ ಮಹರಾಜರು


ಆಸ್ಥಾನ ಮಹಾ ವಿದ್ವಾನ್
ದಿವಂಗತ ನಂ. ಶ್ರೀಕಂಠ ಶಾಸ್ತ್ರಿಗಳು

ಭಾ॥ಷ॥ ಕಾಲಕಾಲ ಪುರಾಣ ವಾಣೀ ।
ಲೋಲ ನುತ ಯಮಿಜಾಲ ಸಮುದನು ।
ಕೂಲ ಪೊರೆ ಕರುಣಾಲವಾಲ ಮೃಕಂಡುಸುತಪಾಲ ॥
ನೀಲಗಲ ನಿಖಿಲೇಷ್ಟ ವಿತರಣ ॥
ಶೀಲ ನಿರ್ಮಲ ವಾರಣಾಜಿನ ।
ಚೇಲ ಭವಭಯಹರಣ ಕೌಶಲ ಭೂತಿಸಿತಫಾಲ ॥ ೧ ॥

ಶ್ರೀ ಮಹಾಬಲ ಶೈಲವಾಸಿನಿ ।
ಸೋಮಧರ ಶುದ್ಧಾಂತ ಭಾಮಿಸಿ ।
ಕಾಮ ಸಂಜೀವಿನಿ ಮೃಡಾಣಿ ಗಣೇಶ ಗುಹಜನನೀ ॥
ವಾಮದೇವ ವಿಲಾಸಿನೀ ಸು ॥
ಪ್ರೇಮಪೂರಿತ ಹೃದ್‌ಭವಾನೀ ।
ಸಾಮಜೋತ್ತಮ ಗಾಮಿನೀ ಕೃಪೆದೋರಿ ಪಾಲಿಸು ನೀ ॥೨॥

ವಾಣಿ ವೀಣಾಪಾಣಿ ಪನ್ನಗ ।
ವೇಣಿ ನತಗೀರ್ವಾಣಿ ಸುಗುಣ ॥
ಶ್ರೇಣಿ ಬೊಮ್ಮನರಾಣಿ ಮಂಗಲಸರಣಿ ಕಲ್ಯಾಣಿ ॥
ಜಾಣತನದೊಳಗಾಣ ಮಾದೊಡ ।
ಮೂಣಯವು ಬಳಿಸಾರದಂತಿರ ।
ಲೇಣಲೋಚನೆ ನಲಿದು ನರ್ತಿಸು ನನ್ನನಾಲಗೆಯೋಳ್॥ ೩ ॥

ಓಡೆ ಹೃದಯದಿ ಕವಿದ ಕತ್ತಲೆ ।
ಕೂಡೆ ಮತಿಯದು ಮಕ್ತಿಪಥವನು ।
ನಾಡೆ ಶಿವತತ್ವ ಪ್ರಸಂಗದ ಭಾಗ್ಯಕೈಗೂಡೆ ॥
ಬೇಡಿದರೆ ಇಷ್ಟಾರ್ಥ ತತಿಯನು ।
ನೀಡುತಂತೇವಾಸಿಗಳ ಕಾ।
ಪಾಡುವಾ ಶ್ರೀ ರೇಣುಕನು ದಯಮಾಳ್ಕೆ ಮಂಗಳವ ॥ ೪ ॥

ಈ ಭಾಮಿನೀಷಟ್ಪದಿ ಪದ್ಯಗಳು ಎಷ್ಟೊಂದು ಸರಳವಾಗಿಯೂ ಸುಂದರವಾಗಿಯೂ ಸುಶ್ರಾವ್ಯವಾಗಿಯೂ ಇವೆಯೆಂಬುದನ್ನು ನಾವು ಸುಲಭವಾಗಿ ಮನಗಾಣಬಹುದು.

ಶ್ರೀ ನಂಜನಗೂಡು ಶ್ರೀ ಕಂಠಶಾಸ್ತ್ರಿಗಳ ಗದ್ಯ ಮತ್ತು ಷಟ್ಪದೀ ಶೈಲಿಗಳಂತೆಯೇ ಅದರ ಚಂಪೂ ಶೈಲಿಯೂ ಕೂಡ ಎಷ್ಟೊಂದು ಮನೋಹರವಾಗಿದೆಯೆಂಬುದನ್ನು ಮನಗಾಣಲು ಈ ಪದ್ಯಗಳನ್ನು ಓದಬಹುದು.

ವೃತ್ತ ॥ ಶ್ರೀಮದ್ವೇದ ವಧೂಟಿಗಳ್ ನಲವಿನಿಂದಾರಂಕರಂ ಸೇರ್ವರೋ ।
ಪ್ರೇಮಂಬೆತ್ತು ಯಮೀಂದ್ರರಾವನಡಿಯಂ
ಕಾಣಲ್ಕೆಕಾಂಕ್ಷಿಪ್ಪರೋ॥
ಸೋಮಾದಿತ್ಯರದಾರ್ಗೆ ನೇತ್ರಮೊ ಆದಾರ್ತ್ರೈವರ್ಗ
ಮಂದಾರನೋ ।
ಆ ಮಾದೇವನೊರಲ್ದು ನೀಡುಗೆಮಗಿಂದಾನಂದ
ಸಂದೋಹಮಂ ॥೧॥

ಕಂ॥ ಗಿರಿವರ ಹೃದಯೋಲ್ಲಾಸಿನಿ ।
ನರಪತಿ ಕೃಷ್ಣೇಂದ್ರ ಕುಶಲದಾಯಿನಿ ಜನನೀ ॥
ಗರಳನಗರಾಧಿವಾಸಿನಿ ।
ಗಿರಿಶಾಂತಃ ಪುರನಿವಾಸಿನೀ ಪೊರೆಯೆಮ್ಮಮ್ ॥ ॥ ೨ ॥

ಕುಲದಿಂದೇಂ ಬಲದಿಂದೇಂ ।
ತೊಳಗುವ ಸೌಂದರ್ಯದಿಂದಮೇಂ ವಿದ್ಯೆಯಿನೇಂ ॥
ನೆಲಸಿರೆ ಲಕ್ಷ್ಮಿಯನುಗ್ರಹ ॥
ಮಿಳೆಯೊಳಗ ಖಿಲೇಷ್ಟಸಿದ್ಧಿಯಪ್ಪುದು ಸತ್ಯಂ । ॥ ೩ ॥

ಓರ್ವರನೋರ್ವರ್ ತಾಗುತೆ ।
ಗರ್ವೋದ್ಧತರಾಗಿ ಕಾದುತಿರಲೀವೀರರ್ ॥
ಉರ್ವಿಯಿದು ನಡುಗುತಿರ್ದುದ ।
—ಖರ್ವಬಲರ್ ನೋಡಲಿವರದೇಂಕಲಿಗಳೊ ಮೇಣ್ ॥ ೪ ॥

ವೃತ್ತ ॥ ರಾಮ ಕರುಣಾ ಸೀಮ ಪರಮಾನಂದಕಂದ ಮನೋಽಪಮಾ।
ರಾಮ ಸುಗುಣಸ್ತೋಮ ಜಿತಸಂಗ್ರಾಮ ಭೂವರಚಂದ್ರಮಾ॥
ರಾಮ ಮುನಿಪಪ್ರೇಮ ವಿನಮದ್ವಾನರೇಶ ಸುಹೃತ್ತಮಾ।
ರಾಮ ದುರಿತವಿರಾಮ ಪಾಲಯ ಯೋಗಿವಿಶ್ರಮ
ರಾಮ ಮಾ ॥ ೫ ॥

ಗುರಿಯಾಗದಿರ್ಕೆ ಲೋಕಂ ॥
ವಿರಹಾಗ್ನಿಗೆ ಸತ್ಯಚಂದ್ರನೆಸಗೆಮ ನಾಡೊಳ್ ।
ಕರವೆಸೆಗೆ ಗಂಡವೆಂಡಿರ್ ॥
ಧರೆಯೊಳ್ ವೈಗರೆಗೆ ದುಷ್ಟ ಮಶಕಧ್ವಾಂತಂ ॥ ॥ ೬ ॥

ಇಪ್ಪತ್ತನೇ ಶತಕದ ಪ್ರಾರಂಭದಲ್ಲಿ ಕೈ॥ ಶ್ರೀಕಂಠಶಾಸ್ತ್ರಿಗಳು ಪೌರಾಣಿಕ, ಐತಿಹಾಸಿಕ ಮತ್ತು ಸಾಮಾಜಿಕ ನಾಟಕಗಳನ್ನು ಬರೆಯುವುದರ ಮೂಲಕ ವಾಗಿಯೂ, ಸಂಸ್ಕೃತ ಮತ್ತು ತೆಲುಗು ಸಾಹಿತ್ಯದಿಂದ ಅನೇಕ ಉತ್ತಮ ಕೃತಿಗಳನ್ನು ಕನ್ನಡಕ್ಕೆ ಭಾಷಾಂತರಿಸುವುದರ ಮೂಲಕವಾಗಿಯೂ, ತಮ್ಮ 'ಕರ್ಣಾಟಕ ಚಂದ್ರಿಕೆ' ಎಂಬ ಮಾಸಿಕದಲ್ಲಿ ವಿವಿಧ ವಿಷಯಗಳನ್ನು ಕುರಿತು ವಿದ್ವತ್ ಪೂರ್ಣವೂ ವಿಚಾರಾರ್ಹವೂ ವಿನೂತನವೂ ಆದ ಲೇಖನಗಳನ್ನು ಬರೆಯುವುದರ ಮೂಲಕವಾಗಿಯೂ, ಪ್ರಾಚೀನಶೈಲಿಯ ಚಂಪು ಮಧ್ಯಮ ಕಾಲದ ಷಟ್ಪದಿ ಛಂದಸ್ಸುಗಳಲ್ಲಿ ಸರಳಕಾವ್ಯಗಳನ್ನು ನಿರ್ಮಿಸುವುದರ ಮೂಲಕವಾಗಿಯೂ ಕನ್ನಡರಂಗಭೂಮಿಯನ್ನು ಸಂಗೀತ ಸಾಹಿತ್ಯ ಗಳಿಂದ ಅಲಂಕರಿಸುವ ಮೂಲಕವಾಗಿಯೂ, ಕನ್ನಡ ನಾಡಿಗೆ

ಕನ್ನಡ ಸಾಹಿತ್ಯಕ್ಕೆ ಮಾಡಿರುವ ಸೇವೆಯು ಅಪಾರವಾದುದು. ಈ ಕಾರಣಗಳಿಂದ ನಂಜನಗೂಡು ಶ್ರೀಕಂಠಶಾಸ್ತ್ರಿಗಳನ್ನು ನಾವು ಆಧುನಿಕ ಕನ್ನಡ ಸಾಹಿತ್ಯದ ಓರ್ವ ಆಚಾರ್ಯ ಪುರುಷರೆಂದು ಕರೆಯಬಹುದಾಗಿದೆ.

ಇವರು ದೊಡ್ಡ ವಿದ್ವಾಂಸರ ಮನೆತನಕ್ಕೆ ಸೇರಿದವರೆಂಬುದನ್ನೂ ಇವರ ತಂದೆಯವರಾದ ಆಸ್ಥಾನ ವಿದ್ವಾನ್ ಸುಬ್ಬಾಶಾಸ್ತ್ರಿಗಳು ಉಭಯ ಭಾಷಾ ವಿದ್ವಾಂಸರೂ ಮೃಚ್ಛಕಟಿಕ ನಾಟಕವನ್ನು ಕನ್ನಡಕ್ಕೆ ಭಾಷಾಂತರಿಸಿದವರೂ ಆಶುಕವಿಗಳೂ ಎಂಬುದನ್ನು ನಾವು ಈ ಪ್ರಸಂಗದಲ್ಲಿ ನೆನಪಿನಲ್ಲಿಟ್ಟಿರುವುದು ಅಗತ್ಯವೆನಿಸಿದೆ.

## ಪಾಂಡಿತ್ಯ

ಕಂದ॥ ವೇದಾಗಮ ಶಾಸ್ತ್ರಂಗಳ।
ನಾದರದಿಂದೋದಿ ಭವ್ಯನಾಟಕ ಕಲೆಯೊಳ್ ।
ಸಾಧು ಕವಿತ್ವದ ಪರಿಯೊಳ್ ।
ಮೇದಿನಿಯೊಳ್ ಗಣ್ಯನಿವನೆ ಶ್ರೀಕಂಠಾರ್ಯಂ ॥ ॥ ೧ ॥
ವಸ್ತುಕ ವರ್ಣಕ ಕಾವ್ಯವ ।
ಸಿಸ್ತಿಂ ನಿನ್ನಂತೆ ಬರೆವನಾವಂ ಬುವಿಯೊಳ್॥
ಪ್ರಸ್ತುತಕಾಲದಿ ರೂಪಕ ।
ವಸ್ತುಗಳಂ ರಚಿಸರಾರು ನಿನ್ನವೊಲಿಳೆಯೊಳ್? ॥ ೨ ॥

ಶ್ರೀಕಂಠಾಭಿಧ ಶಾಸ್ತ್ರಿಯೆ ।
ಈಕರ್ಣಾಟಾಖ್ಯದೇಶ ದುಜ್ವಲ ನಿಧಿಯೆ ॥
ಲೋಕೈಕ ಕೀರ್ತಿಶಾಲಿಯೆ ।
ಮೂಕಾಗಿಹೆನಿಂದು ನಿನ್ನ ಸುಗುಣದ ದೆಸೆಯಿಂ ॥

'ಶೂಲಪಾಣಿ'

—೦೦—

ಕೈ॥ ನಂಜನಗೂಡು ಶ್ರೀಕಂಠಶಾಸ್ತ್ರಿಗಳು, ಮೈಸೂರು ಮಹಾರಾಜರ ಆಸ್ಥಾನದಲ್ಲಿ ಮಹಾವಿದ್ವಾಂಸರೂ, ಸುಪ್ರಸಿದ್ಧ ನಾಟಕಕಾರರೂ, ಪ್ರತಿಭಾನ್ವಿತ ಕವಿಗಳೂ, ಹೆಸರಾಂತ ಲೇಖಕರೂ ಎನಿಸಿಕೊಂಡು ಸಕಲ ಕನ್ನಡಿಗರ ಮನ್ನಣೆಗೂ ಪಾತ್ರರಾದ ಮಹನೀಯರು. ಇವರು ತಾ॥ ೨-೭-೫೬ ರಂದು ಮೈಸೂರಿನ ತಮ್ಮ ಮನೆಯಲ್ಲಿ ಹೃದಯಕ್ರಿಯೆ ನಿಂತು ತಮ್ಮ ೭೩ನೆಯ ವಯಸ್ಸಿನಲ್ಲಿ ದಿವಂಗತರಾದರು. ಇವರು ನಾಲ್ವರು ಪುತ್ರರನ್ನೂ ಇಬ್ಬರು ಪುತ್ರಿಯರನ್ನೂ ಹಲವಾರು ಮಂದಿ ಪೌತ್ರರನ್ನೂ ಅಸಂಖ್ಯಾತ ಬಂಧು ಮಿತ್ರರನ್ನೂ ಆಗಲಿ ಭೌತಿಕ ಪ್ರಪಂಚದಿಂದ ಕಣ್ಮರೆಯಾಗಿ ಭಗವಂತನ ಪಾದಾರವಿಂದವನ್ನು ಸೇರಿದರು.

ಪೂಜ್ಯ ಶಾಸ್ತ್ರಿಗಳು ನಂಜನಗೂಡಿನಲ್ಲಿ ಸುಪ್ರಸಿದ್ಧ ಆಸ್ಥಾನ ವಿದ್ವಾನ್ ನಂ. ಸುಬ್ಬಾಶಾಸ್ತ್ರಿಗಳ ಮಗನಾಗಿ ಹುಟ್ಟಿದರು. ಕನ್ನಡ, ತೆಲುಗು ಮತ್ತು ಸಂಸ್ಕೃತ ಭಾಷೆಗಳಲ್ಲಿ ಗಣ್ಯ ವಿದ್ವಾಂಸರು. ಸಂಗೀತ ನಾಟಕ ಕಲೆಗಳಲ್ಲಿ ಪ್ರಖ್ಯಾತರು ಕವಿತೆಯು ಇವರ ಹುಟ್ಟುಗುಣ. ಇವರು ಆಶುಕವಿಗಳೂ ಕೂಡ. ಇವರಿಂದ ವಿರಚಿತವಾದ ಗ್ರಂಥಗಳ ಪಟ್ಟಿಯನ್ನು ನೋಡಿದರೆ 'ಕರ್ನಾಟಕ ಕಂಠೀರವ' ಮತ್ತು 'ಮಹಾಕವಿ' ಎಂಬ ಬಿರುದುಗಳು ಇವರಿಗೆ ಅನ್ವರ್ಥವೆಂದು ಹೇಳಬಹುದು. ದಿವಂಗತರು ಎತ್ತರವಾದ ಹಾಗೂ ತೆಳುವಾದ ಮೈಕಟ್ಟುಳ್ಳವರು, ಸದಾ ನಗುಮುಖ, ವಿನಯವರ್ತನೆಯುಳ್ಳವರು ಆಗಿದ್ದರು. ಸನಾತನಧರ್ಮದಲ್ಲಿ ಅವರಿಗೆ ಅಪಾರವಾದ ಶ್ರದ್ಧೆಯಿತ್ತು. ಆದರೂ ಸರ್ವ ಧರ್ಮ ಸಮನ್ವಯಾಚಾರ್ಯರೆನಿಸಿದ್ದರು. ಇದಕ್ಕೆ ಸಾಕ್ಷಿ ಅವರು ಬರೆದಿರುವ ರೇಣುಕವಿಜಯ ಪುರಾಣಂ. ವೀರಶೈವ ಮತಾಚಾರ್ಯರಾದ ಶ್ರೀ ರೇಣುಕರ ವಿಚಾರವನ್ನು, ವೈದಿಕ ಮತಾಚಾರ್ಯರಾದ ಶ್ರೀ ಶಾಸ್ತ್ರಿಗಳು ಎಷ್ಟೊಂದು ಶ್ರದ್ಧಾಸಕ್ತಿಯಿಂದ ಬರೆದಿರುವರೆಂಬುದನ್ನು ನಾವು ಇಲ್ಲಿ ಪರಿಶೀಲಿಸಬಹುದು.

ಶ್ರೀ ಶಾಸ್ತ್ರಿಗಳು ನಾಟಕ ಸಾಹಿತ್ಯದಲ್ಲಿ ಅತ್ಯಂತ ಆಸಕ್ತಿ ವಹಿಸಿದ್ದರು. ಇದಕ್ಕೆ ಅವರು ರಚಿಸಿರುವ ಹತ್ತಾರು ನಾಟಕಗಳೇ ನಿದರ್ಶನ. ಸುಪ್ರಸಿದ್ಧ

ನಟರಾದ ವರದಾಚಾರ್ಯರಿಗೆ ಕೆಲವು ನಾಟಕಗಳನ್ನು ಬರೆದುಕೊಟ್ಟು ಕನ್ನಡ ರಂಗಭೂಮಿಗೆ ಮಹೋಪಕಾರ ಮಾಡಿದರು. ಚಾಮುಂಡೇಶ್ವರೀ ನಾಟಕ ಸಭೆಯವರಿಗೂ ಹಲವು ನಾಟಕಗಳನ್ನು ಬರೆದುಕೊಟ್ಟರು. ಮೈಸೂರು ದೇಶದ ಸಂಗೀತ ನಾಟಕ ಆಕ್ಯಾಡಮಿಯ ಜನರಲ್ ಕೌನ್ಸಿಲ್ ಸದಸ್ಯರಾಗಿ ಇವರು ಸರ್ಕಾರದಿಂದಲೂ ಗೌರವಿಸಲ್ಪಟ್ಟರು.

ಶಾಸ್ತ್ರಿಗಳ ಪ್ರತಿಭೆ ಬಹುಮುಖವಾದುದು. ಇವರು ಉತ್ತಮ ಸಾಹಿತಿಗಳಾಗಿದ್ದಂತೆಯೇ ಶಿಕ್ಷಣವಿದರೂ ಆಗಿದ್ದರು. ಮೈಸೂರು ಅರಸು ಬೋರ್ಡಿಂಗ್ ಸ್ಕೂಲಿನಲ್ಲಿ ಇವರು ಉಪಾಧ್ಯಾಯರು. ಶ್ರೀ ಜಯಚಾಮ ರಾಜ ಒಡೆಯರಿಗೆ ಕನ್ನಡ ಬೋಧಕರು. ಬ್ರಾಹ್ಮಣ ಧರ್ಮಸಹಾಯ ಸಭೆಗೆ ಇವರು ಕಾರ್ಯದರ್ಶಿಗಳು. ಮೈಸೂರು ಸಿಟಿ ಕೋ ಆಪರೇಟಿವ್ ಬ್ಯಾಂಕ್ ಉಪಾಧ್ಯಕ್ಷರು. ಒಟ್ಟಿನಲ್ಲಿ ಶಾಸ್ತ್ರಿಗಳು ಎಲ್ಲರಿಗೂ ಎಲ್ಲ ಕಾಲದಲ್ಲಿಯೂ ಬೇಕಾಗಿದ್ದರು. ಇವರ ಸೇವೆ ಬಹುಮುಖವಾದುದು.

ಶ್ರೀ ಶಾಸ್ತ್ರಿಗಳ ಪದ್ಯರಚನೆಯಂತೆಯೇ ಗದ್ಯರಚನೆಯೂ ಹೆಸ ರಾಂತುದು. ಇವರ ಲೇಖನಶೈಲಿಯು ಮೋಹಕವಾದುದು. ವಿದ್ವತ್ ಪೂರ್ಣವಾದುದು.

ಶ್ರೀ ಶಾಸ್ತ್ರಿಗಳು ಒಟ್ಟು ೭೮ ಗ್ರಂಥಗಳನ್ನು ವಿರಚಿಸಿರುವರು. ಅವು ಗಳಲ್ಲಿ ೧. ಕನಕಲತಾ ಪರಿಣಯ, ೨. ಮಹಾರಣ್ಯ ಪುರಾಧಿಪತ್ಯ, ೩. ಧ್ರುವವಿಜಯ ನಾಟಕ ೪. ಕೃಷ್ಣವಿಜಯ ವ್ಯಾಮೋಹಂ, ೫. ಪ್ರಿಯ ದರ್ಶಿಕಾ ನಾಟಕ, ೬. ಕಲಹಪ್ರಿಯ ಪ್ರಹಸನ, ೭. ನವೀನ ಪ್ರಪಂಚ, ೮. ವ್ಯವಹಾರ ಧರ್ಮಬೋಧಿನಿ, ೯. ವಿಜಯಾಭ್ಯುದಯಂ, ೧೦. ಕೃಷ್ಣ ಲೀಲಾ, ೧೧. ಉಜ್ವಲ ಕುಮಾರಿ, ೧೨. ಸೀತಾಪರಿಣಯನಾಟಕಂ, ೧೩. ನಿರುಪಮ, ೧೪. ರಾಘವಾಭ್ಯುದಯ, ೧೫. ರಾಜಸೂಯಯಾಗ ೧೬. ಸೀತಾಸ್ವರ್ಣಮೃಗ, ೧೭. ಕವಿಕುಂದನ ಕಥೆಗಳು, ೧೮. ರೇಣುಕ ವಿಜಯ ಪುರಾಣಂ ಇತ್ಯಾದಿ.

೧೯೫೨ನೇ ವರ್ಷದ ನಂಬರ್‌ನಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನವರು ಶ್ರೀ ಶಾಸ್ತ್ರಿಗಳನ್ನು ಬೆಂಗಳೂರಿಗೆ ಆಹ್ವಾನಿಸಿ ಗೌರವಿಸಿದರು. ಅಳಿದ

ಮತ್ತು ಈಗಿನ ಮೈಸೂರು ಮಹಾರಾಜರು ಇವರಿಗೆ ಉದಾರಾಶ್ರಯವಿತ್ತು ಪ್ರೋತ್ಸಾಹಿಸಿದರು. ಮೈಸೂರು ದೇಶದ ಜನರು ಇವರನ್ನು ಬಗೆಬಗೆಯಿಂದ ಸನ್ಮಾನಿಸಿದರು. ಇವೆಲ್ಲಕ್ಕೂ ಪೂಜ್ಯ ಶಾಸ್ತ್ರಿಗಳು ಅರ್ಹರು. ಬಡತನದ ಬೇಗೆಯಿಂದ ಬೆಂದು ಹೋಗಿದ್ದರೂ ಅವರ ಸದ್ಗುಣ ಸಂಪತ್ತು ಕೊಂಚವೂ ಕಡಿಮೆಯಾಗಲಿಲ್ಲ. ಸದಾ ಪರೋಪಕಾರ ನಿರತರಾಗಿ ಬಾಳಿದರು. ತಮ್ಮ ಕಡೆಗಾಲದಲ್ಲಿ 'ಜೀವನ' ಪತ್ರಿಕೆಗೆ ಕನ್ನಡ ನಾಟಕಗಳನ್ನು ಕುರಿತು ಒಂದು ಲೇಖನ ಬರೆದುಕೊಟ್ಟರು. ಅವರ ವಿಯೋಗವು ದೇಶಕ್ಕೂ ಸಾಹಿತ್ಯಕ್ಕೂ ಅವರ ಮನೆತನದವರಿಗೂ ಅಪಾರ ನಷ್ಟವನ್ನುಂಟು ಮಾಡಿದೆ. ದೈವೇಚ್ಛೆಗೆ ಉಪಾಯವಿಲ್ಲ. "ಜಾತಸ್ಯ ಮರಣಂ ಧ್ರುವಂ" ಎಂಬ ವಾಕ್ಯ ಪ್ರಸಿದ್ಧವಾಗಿದೆ. ಶಾಸ್ತ್ರಿಗಳ ಭೌತಿಕ ದೇಹ ಇಂದು ಕಣ್ಮರೆಯಾಗಿದ್ದರೂ ಅವರ ಕೀರ್ತಿದೇಹ ನಾಡಿನಲ್ಲಿ ಸದಾ ಮೆರೆಯುತ್ತಿದೆ.



# ಶ್ರೀ ಸಮರ್ಥ ನಾರಾಯಣ ಗುರುಗಳು

ಊರಿಂಗೆ ದಾರಿಯನು ಯಾರು ತೋರಿದರೇನು?

ನಾರಾಯಿದಾ ಮೋಕ್ಷದಿರವನರುಹಿದ ಗುರುರಾಯ ಯಾರಾದ
ರೇನು ಸರ್ವಜ್ಞ?

ಬೆಂಗಳೂರು ಪಟ್ಟಣದಲ್ಲಿ ಬಸವನಗುಡಿಯ ಶ್ರೀ ಮಲ್ಲಿಕಾರ್ಜುನ ದೇವಾಲಯದ ಪಕ್ಕದಲ್ಲಿ ಒಂದು ಸಾವಿರದ ಮುನ್ನೂರ ಮೂವತ್ತು ಮಂದಿ ಋತ್ವಿಜರಿಂದ, ಸುಮಾರು ೬೦ ಸಾವಿರ ರೂಪಾಯಿ ವೆಚ್ಚದಲ್ಲಿ "ಅತಿರುದ್ರಸ್ವಾ ಹಾಕಾರ ಮಹಾಯಾಗ"ವನ್ನು ನಡೆಸಿದ, ತಾ|| ೩-೯-೪೫ರ ದಿನ ಮಹಾ ಯಾಗದ ಪೂರ್ಣಾಹುತಿಯ ಅನಂತರದಲ್ಲಿ ಮಹಾಯಾಗವು ಸಂಪೂರ್ಣವಾಗಿ ಮುಗಿದ ಕೂಡಲೇ ತನ್ನ ಆತ್ಮ ಸಂತೋಷದಿಂದ ಪರಬ್ರಹ್ಮನಲ್ಲಿ ಬೆರತು ಹೋದ ಶ್ರೀ ಗುರು ನಾರಾಯಣ ಮಹರಾಜರ ಚರಿತ್ರೆಯು ಆಶ್ಚರ್ಯಜನಕ ವಾಗಿದೆ. "ಶರಣರ ಸಾವು ಮರಣದಲ್ಲಿ ನೋಡು" ಎಂಬ ಜಾಣ್ನುಡಿಯು ಈ ಮಹಾತ್ಮರ ವಿಷಯದಲ್ಲಿ ಪ್ರತ್ಯಕ್ಷ ನಿದರ್ಶನವಾಗಿದೆ.

ಶ್ರೀ ಸಮರ್ಥ ನಾರಾಯಣ ಮಹರಾಜರು ಜನ್ಮತಃ ಕನ್ನಡಿಗರು. ಇವರ ಮೂಲಸ್ಥಳ ಬಿಜಾಪುರ ಜಿಲ್ಲಾ ಸಿಂಧಗಿ. ಆ ಊರಿನಲ್ಲಿ ಸತ್ಪುರುಷರ ವಂಶದವರೆಂದು ಪ್ರಸಿದ್ಧರಾದ ಸ್ಮಾರ್ತ ಬ್ರಾಹ್ಮಣ ಶ್ರೀ ಭೀಮರಾಯರು ಮತ್ತು ಅವರ ಪತ್ನಿ ಸಾಧ್ವೀ ಲಕ್ಷ್ಮೀಬಾಯಿ ಇವರೇ ಶ್ರೀ ಸಮರ್ಥರ ತಂದೆ ತಾಯಿಗಳು. ಶ್ರೀ ಭೀಮರಾಯರು ಕಾರಣಾಂತರದಿಂದ ಸಿಂಧಗಿಯಿಂದ ಬಾಗಲಕೋಟೆಗೆ ಬಂದು ವಾಸಮಾಡುತ್ತಿದ್ದರು. ಅಲ್ಲಿ ೧೮೮೫ನೇ ಮೇ ೨೫ನೇ ತಾರೀಖಿನ ದಿನ ಈ ಮಹಾತ್ಮರು ಜನಿಸಿದರು. ಮಗುವಿಗೆ ಹನ್ನೆರಡನೆಯ ದಿನ 'ನಾರಾಯಣ' ಎಂದು ನಾಮಕರಣವಾಯಿತು. ಸ್ವಲ್ಪ ದಿನಗಳಲ್ಲೇ ಶ್ರೀ ಸಮರ್ಥರ ತಂದೆ ತಾಯಿಗಳು ಪರಲೋಕವಾಸಿಗಳಾದರು.

ಈ ಕಾರಣ ಶಿಶುವನ್ನು ಅವರ ಚಿಕ್ಕಪ್ಪನವರು ಪೋಷಿಸಿದರು. ಕೊಂಚ ದಿನಗಳಲ್ಲೇ ನರಗುಂದದಲ್ಲಿದ್ದ ಶಿಶುವಿನ ಅಜ್ಜಿ, ಮಗುವನ್ನು ತಾನು ಸಾಕುವುದಾಗಿ ಮಗುವನ್ನು ಬಾಗಲಕೋಟೆಯಿಂದ ನರಗುಂದಕ್ಕೆ ಕರತಂದರು. ಸಮರ್ಥರ ಬಾಲಲೀಲೆ ಧಾರವಾಡಜಿಲ್ಲೆಯ ನರಗುಂದದಲ್ಲಿ ಪ್ರಾರಂಭವಾಯಿತು. ನರಗುಂದದ ಘಾಟೆಮಾಸ್ತರು ಸಮರ್ಥರ ವಿದ್ಯಾಗುರುಗಳಾದರು. ಆದರೆ ಇವರ ಶಾಲಾಭ್ಯಾಸವು ಅಷ್ಟು ಮುಂದುವರೆಯಲಿಲ್ಲ. ದಿನವೂ ದೇವಾಲಯದಲ್ಲಿ ಭಜನೆಮಾಡುವುದು, ಪೂಜೆಮಾಡುವುದು ಇತ್ಯಾದಿಗಳಲ್ಲೇ ತಮ್ಮ ಬಾಲ್ಯವನ್ನು ಕಳೆದರು. ಘಾಟೆಮಾಸ್ತರು ತಮ್ಮ ಮಗಳ ಲಗ್ನಕ್ಕಾಗಿ ಧಾರವಾಡಕ್ಕೆ ಇವರನ್ನು ಸಂಗಡ ಕರೆತಂದು ಅಲ್ಲಿಯೇ ಇವರ ಉಪನಯನವನ್ನು ನೆರವೇರಿಸಿದರು. ಉಪನಯನಾನಂತರ ಸಮರ್ಥರ ಮನೋಗತಿ ಬದಲಾವಣೆಯಾಗಿ ಅವರ ದ್ವಿಜತ್ವ ಸಾರ್ಥಕವಾಯಿತು. ಸಮರ್ಥರ ಅಜ್ಜಿಯು ಇವರನ್ನು ಶ್ರೀಮಂತ ಮನೆತನಕ್ಕೆ ದತ್ತಕಕೊಡುವ ಆಲೋಚನೆಯನ್ನು ಮಾಡಿದರು. ಈ ಸುದ್ದಿಯನ್ನು ಕೇಳಿ ಸಮರ್ಥ ನಾರಾಯಣ ಗುರುಗಳು ಮನೆತನದ ಹಂಗು ತೊರೆದು ಅಜ್ಜಿಗೆ ತಿಳಿಯದಂತೆ ತೀರ್ಥಕ್ಷೇತ್ರ ಸಂಚಾರಕ್ಕೆ ಹೊರಟು ಹೋದರು. ಇದು ಸಮರ್ಥ ರಾಮದಾಸ ಸ್ವಾಮಿಗಳು ಮದುವೆಯ ಚಪ್ಪರದಿಂದ–ತನಗೆ ಸಂಸಾರ ಬೇಡವೆಂದು ಹೇಳಿ–ಹೊರಟು ಹೋದ ಕಥೆಯನ್ನು ಜ್ಞಾಪಕಕ್ಕೆ ತಂದಿತು.

ಶ್ರೀ ಸಮರ್ಥರು ನರಗುಂದದಿಂದ ಹೊರಬಿದ್ದು ಕುಂದಗೋಳದಲ್ಲಿ ಕೆಲದಿವಸವಿದ್ದು, ಅಲ್ಲಿಂದ ಅರವೀ ಕ್ಷೇತ್ರಕ್ಕೆ ಹೋಗಿ ಅಲ್ಲಿಂದ ಮುಂದೆ ಕಲ್ಯಾಣ ಕರ್ಣಾಟಕದಲ್ಲಿರುವ ಗಾಣಗಾಪುರಕ್ಕೆ ಹೋಗಿ ಸೇರಿದರು. ಗಾಣಗಾಪುರದಲ್ಲಿ ಶ್ರೀ ದತ್ತಮಂದಿರದಲ್ಲಿ ವಾಸಿಸಿ ಶ್ರೀ ಸಮರ್ಥರು ತಮ್ಮ ಆಧ್ಯಾತ್ಮಿಕ ಸಾಧನೆಯನ್ನು ಮುಂದುವರಿಸಿದರು. ''ಭಿಕ್ಷಾನ್ನವು ಮೋಕ್ಷಕ್ಕೆ ಸಾಧನವೆಂಬ'' ದಾಸರ ವಾಕ್ಯದಂತೆ ಇವರು ಗಾಣಗಾಪುರದಲ್ಲಿ ಮಧುಕರಿಯನ್ನು ಬೇಡಹತ್ತಿದರು. ಶ್ರೀ ದತ್ತಾತ್ರೇಯನು ಗಾಣಗಾಪುರದಲ್ಲಿ ಇವರ ಭಕ್ತಿಗೆ ಮೆಚ್ಚಿ ಇವರಿಗೆ ಸಾಕ್ಷಾತ್ಕಾರವಾದನು. ಶ್ರೀಗುರು ದತ್ತನ ಅನುಗ್ರಹದಿಂದ ಇವರಿಗೆ ವಾಕ್ಸಿದ್ಧಿಯೂ, ಪವಾಡಗಳೂ ಅಳವಟ್ಟವು. ಇವರ

ಮಹಿಮೆಗಳನ್ನು ಕಂಡು ಜನಜಂಗುಳಿಯು ಇವರ ಬೆನ್ನು ಹತ್ತಿತು. ಶ್ರೀ ನಾರಾಯಣ ಮಹರಾಜರು ರಾಮಕೃಷ್ಣ ಪರಮಹಂಸರಂತೆ ಭಕ್ತಿಮಾರ್ಗ ದಿಂದ ಪರಮಾತ್ಮನನ್ನು ಸಾಕ್ಷಾತ್ಕಾರ ಮಾಡಿಕೊಂಡ ಸಾಧಕರು. ಅಲ್ಲಿಂದ ಮುಂದೆ ಗಾಣಗಾಪುರವನ್ನು ಬಿಟ್ಟು ಶ್ರೀ ದತ್ತನ ಪ್ರೇರಣೆಯಂತೆ ಮಹಾ ರಾಷ್ಟ್ರದ ಮುಖ್ಯ ಪಟ್ಟಣವಾದ ಪುಣ್ಯನಗರಿ ಅಥವಾ ಪುಣೆಗೆ ೪೦ ಮೈಲಿಗಳ ದೂರದಲ್ಲಿರುವ ಶ್ರೀ ಕೃಷ್ಣ ಭೇಟಕ್ಕೆ ಸಮರ್ಥರು ಹೋಗಿ ನಿಂತರು. ಅದನ್ನೇ ತಮ್ಮ ಪುಣ್ಯಾಶ್ರಮವನ್ನಾಗಿಯೂ ವಸತಿಯನ್ನಾಗಿಯೂ ಮಾಡಿಕೊಂಡರು. ಅಲ್ಲಿ ಧರ್ಮಛತ್ರ, ವಿದ್ಯಾಶಾಲೆ, ಗೋಶಾಲೆ, ಶ್ರೀ ದತ್ತಾತ್ರೇಯ ದೇವಾಲಯ ಮೊದಲಾದವುಗಳನ್ನು ಲಕ್ಷಗಟ್ಟಲೆ ಹಣ ವೆಚ್ಚದಿಂದ ಶ್ರೀ ಶ್ರೀ ಸಮರ್ಥರು ಕಟ್ಟಿಸಿರುವರು. ಈ ಕ್ಷೇತ್ರದಲ್ಲಿರುವ ಕಟ್ಟೋಣಗಳಿಗೆ ಸುಮಾರು ೩೦ ೪೦ ಲಕ್ಷ ರೂಪಾಯಿಗಳು ಖರ್ಚಾಗಿವೆಯೆಂದು ಕಂಡವರು ಹೇಳುತ್ತಾರೆ. ಈ ಹಣವೆಲ್ಲಾ ಭಕ್ತರಿಂದ ಕಾಣಿಕೆಯಾಗಿ ಬಂದುದು.

ಶ್ರೀ ನಾರಾಯಣ ಮಹರಾಜರು ಅತಿರುದ್ರ ಮಹಾಯಾಗ, ೧೧೦೮ ಸತ್ಯನಾರಾಯಣ ವ್ರತ ಇತ್ಯಾದಿ ಹಲವು ಮಹತ್ಕಾರ್ಯಗಳನ್ನು ಭಕ್ತಿಯಿಂದ ನಡೆಸಿದ್ದಾರೆ. ಇಂತಹ ಸತ್ಕರ್ಮಗಳಿಂದ ವಿಶ್ವಶಾಂತಿಯಾಗುವುದೆಂದು ಅವರ ನಂಬಿಕೆ. ಸುಮಾರು ೯ ವರ್ಷಗಳ ಹಿಂದೆ ಶ್ರೀ ಕ್ಷೇತ್ರ ಭೇಟದಲ್ಲಿ ಅತಿರುದ್ರಾಭಿಷೇಕ ಮತ್ತು ೧೧೦೮ ಸತ್ಯನಾರಾಯಣ ಪೂಜೆಗಳನ್ನು ಈ ಮಹಾತ್ಮರು ೧೩೩೧ ಋತ್ವಿಜರಿಂದ ಕೂಡಿ ನಡೆಸಿದರು.

ನಾಲ್ಕಾರು ವರ್ಷಗಳ ಹಿಂದೆ ಶಿವಮೊಗ್ಗೆಯಲ್ಲಿ ಶ್ರೀ ತುಂಗಾನದಿಯ ತೀರದಲ್ಲಿ ಶ್ರೀಗುರುಗಳು ಸತ್ಯನಾರಾಯಣ ಪೂಜೆಯನ್ನು ಅಭೂತ ಪೂರ್ವ ವಾಗಿ ನಡೆಸಿದರು. ಇದೆಲ್ಲವೂ ಮಹರಾಜರಿಗೆ ಇರುವ ದೈವಭಕ್ತಿಗೂ, ವೇದ ನಿಷ್ಠೆಗೂ ಧರ್ಮಶ್ರದ್ಧೆಗೂ ನಿದರ್ಶನವಾಗಿದೆ. ಇವರು ಶ್ರೀ ಕ್ಷೇತ್ರಭೇಟ ದಲ್ಲಿ ಸ್ಥಾಪಿಸಿರುವ ಶ್ರೀ ದತ್ತಾತ್ರೇಯ ಮೂರ್ತಿಯನ್ನು ೫೦೦ ತೊಲ ಶುದ್ಧ ಚಿನ್ನದಿಂದ ಮಾಡಿಸಿರುವರೆಂದು ಪ್ರತೀತಿ ಇದೆ. ಇದು ಒಬ್ಬ ಭಕ್ತ ಮುಂಬಯಿ ಸೇಟಜಿಯ ಸೇವಾಫಲ.

ಶ್ರೀ ನಾರಾಯಣ ಮಹರಾಜರು ಜನ್ಮತಃ ಕನ್ನಡಿಗರಾದುದರಿಂದಲೂ, ಬಹುಕಾಲ ಮಹಾರಾಷ್ಟ್ರದಲ್ಲಿ ವಾಸಮಾಡಿದುದರಿಂದಲೂ, ಈ ಉಭಯ ಪ್ರಾಂತಗಳಲ್ಲಿಯೂ, ಇವರ ಮಹಿಮೆಯು ಹಬ್ಬಲು ಕಾರಣವಾಯಿತು. ಇವರ ದೈವಭಕ್ತಿ, ಭೂತದಯೆ, ವಿಶ್ವಪ್ರೇಮ, ವಿದ್ಯಾಭಿಮಾನ, ವಿನಯಶೀಲತೆ ಇತ್ಯಾದಿ ಸದ್ಗುಣಗಳು ಒಮ್ಮೆ ಇವರ ಸಂದರ್ಶನವನ್ನು ಮಾಡಿದವರ ಮನಸ್ಸಿನಮೇಲೆ ಉತ್ತಮೋತ್ತಮ ಪರಿಣಾಮವನ್ನು ತಪ್ಪದೆ ಉಂಟುಮಾಡುತ್ತಿದ್ದವು. ಶ್ರೀ ಸಮರ್ಥರು ಪ್ರಚಂಡವಾಗಿ ನಡೆಸಿದ ಯಜ್ಞಯಾಗಗಳು, ಪೂಜೆ ಪುರಸ್ಕಾರಗಳು ಇವರ ಹಿರಿಮೆಯನ್ನು ಹೆಚ್ಚಿಸಲು ಕಾರಣವಾದವು. ಇವರ ಈ ಅದ್ಭುತ ಶಕ್ತಿಯನ್ನು ಕಂಡು ಕೆಲವರು ಇವರನ್ನು ಕಲಿಯುಗದ 'ವಸಿಷ್ಠರು' ಎಂದು ಕರೆದುದುಂಟು.

ಶ್ರೀ ನಾರಾಯಣ ಮಹರಾಜರು ಬೆಂಗಳೂರಿಗೆ ಆಗಮಿಸಿ ವಿಶ್ವೇಶ್ವರಪುರದಲ್ಲಿರುವ ಶ್ರೀ ಶ್ಯಾಂಪುರ ಸಹೋದರರ ದಿವ್ಯ ಭವನದಲ್ಲಿ ಬಿಡಾರ ಮಾಡಿದರು. ಇಲ್ಲಿ ಅವರ ಆರೋಗ್ಯವು ಬಹಳ ಕ್ಷೀಣವಾಗಿತ್ತು. ಆದರೂ ಅವರ ಸನ್ನಿಧಿಯಲ್ಲಿ ದಿನವೂ ಕೀರ್ತನ, ಪುರಾಣ, ಭಜನಾದಿಗಳು ನಡೆಯುತ್ತಿದ್ದವು. ಒಂದು ಶ್ರಾವಣ ಶುದ್ಧ ಏಕಾದಶೀ ದಿವಸ ಶ್ರೀ ಸಮರ್ಥರ ಸನ್ನಿಧಿಯಲ್ಲಿ ಶರಣಸಾಹಿತ್ಯ ಸಂಪಾದಕರು "ಮೋಕ್ಷ ವಶೀಕರಣ" ಎಂಬ ಅಮೋಘವಾದ ಕೀರ್ತನವನ್ನು ಇಂಪಾದ ಸಂಗೀತಮೇಳದೊಡನೆ ನಡೆಸಿದರು. ಆ ದಿನ ಗುರುಮಹರಾಜರು ತಮಗಾದ ಕೀರ್ತನಾನಂದದಿಂದ ಹಿರಿಹಿರಿ ಹಿಗ್ಗಿದರು. ಗುರುಗಳು ಕೀರ್ತನ ಕೇಸರಿಯವರನ್ನು ಕರುಣಾಮಯ ದೃಷ್ಟಿಯಿಂದ ವೀಕ್ಷಿಸಿ ಅನುಗ್ರಹಿಸಿದರು. ಹಲವುಮಂದಿ ಕವಿಗಳೂ, ಪಂಡಿತರೂ, ಗಾಯಕರೂ, ಶ್ರೀ ಸಮರ್ಥರ ಸನ್ನಿಧಿಯಲ್ಲಿ ತಮ್ಮ ಭಕ್ತಿಯ ಸೇವೆಯನ್ನು ಸಲ್ಲಿಸಿ ಕೃತಾರ್ಥರಾದರು.

೧೯೪೫ನೇ ಸೆಪ್ಟೆಂಬರು ತಾ॥ ೧-೩ ಮತ್ತು ಈ ಮೂರು ದಿನ ಬೆಂಗಳೂರು ಬಸವನಗುಡಿಯಲ್ಲಿ ಅತಿರುದ್ರ ಸ್ವಾಹಾಕಾರ ಮಹಾಯಾಗವು ನಡೆಯಿತು. ಅದಕ್ಕಾಗಿ ೨೦೦ ಅಡಿ ಉದ್ದ ೧೭೭ ಅಡಿ ಅಗಲದ ವಿಶಾಲವಾದ ಚಪ್ಪರವು

ಸಿದ್ಧವಾಗಿತ್ತು. ಆಧುನಿಕ ನಾಗರಿಕತೆಯ ಗುರುತುಗಳಾದ ವಿದ್ಯುದ್ದೀಪಗಳೂ, ಧ್ವನಿವಾಹಕ ಯಂತ್ರಗಳೂ, ಪ್ರಾಚೀನ ಸಂಸ್ಕೃತಿಯ ನಿದರ್ಶನವಾದ ಆ ಮಂಟಪವನ್ನು ಅಲಂಕರಿಸಿದ್ದುವು.

೬೦ ಅಗ್ನಿ ಕುಂಡಗಳು ಅಲ್ಲಿ ಪರಿಶೋಭಿಸಿದವು. ೬೦ ಮಣ ತುಪ್ಪ ಮತ್ತು ೪೦೦ ಸೇರು ಎಳ್ಳು ಆಹುತಿಯಾದವು. ೧೩೩೧ ಮಂದಿ ಋತ್ವಿಜರು ಆ ಯಾಗವನ್ನು ನಡೆಸಿದರು. ವೇದಘೋಷದ ಅಪೂರ್ವ ನಾದವೂ, ಯಜ್ಞಶಾಲೆಯ ಮಹಿಮಾಯುಕ್ತವಾದ ದೃಶ್ಯವೂ, ಪ್ರೇಕ್ಷಕರ ಮನಸ್ಸಿನ ಮೇಲೆ ಆನಂದಾಶ್ಚರ್ಯಗಳನ್ನುಂಟುಮಾಡುತ್ತಿದ್ದುವು. ಸುಮಾರು ಬೆಂಗಳೂರಿನ ಒಂದು ಲಕ್ಷ ಮಂದಿ ಈ ಯಾಗಶಾಲೆಯನ್ನು ಸಂದರ್ಶಿಸಿದರು. ಮೈಸೂರು ಸರ್ಕಾರವು ಈ ಯಾಗಕ್ಕಾಗಿ ೧೦೦೦ ರೂಪಾಯಿಗಳನ್ನು ಕಾಣಿಕೆಯಾಗಿ ಸಮರ್ಪಿಸಿತು. ಆ ಮಹಾಯಾಗವು ವಿಧ್ಯುಕ್ತವಾಗಿ ನಡೆಯಿತು. ಪ್ರಾಚೀನಕಾಲದ ಋಷ್ಯಾಶ್ರಮಗಳ ನೆನಪನ್ನು ತಂದಿತು. ಯಾಗದ ಕಡೆಯಲ್ಲಿ ಅದನ್ನು ಆಸಕ್ತಿಯಿಂದ ಕೈಗೊಂಡವರನ್ನು ಬಲಿಯಾಗಿ ತೆಗೆದುಕೊಂಡಿತು. ಅವರ ಅಂತ್ಯಕ್ರಿಯೆ ಬೆಂಗಳೂರು ಗವಿಪುರದಲ್ಲಿ ಆಗಿದೆ. ಅವರ ಬೃಂದಾವನ ಅಲ್ಲಿದೆ ಅದೊಂದು ಕ್ಷೇತ್ರವಿನಿಸಿದೆ.

ಈ ಯಾಗದ ಸಂದರ್ಶನಕ್ಕೆ ಮೈಸೂರಿನ ದಿವಾನರಾದ ಪ್ರಧಾನ ಶಿರೋಮಣಿ ಶ್ರೀ ಎಸ್. ಮಾಧವರಾಯರು, ಮಾನ್ಯ ಮಂತ್ರಿಗಳು ಶ್ರೀ ಓ. ಪುಲ್ಲಾರೆಡ್ಡಿ, ಶ್ರೀ ಎಂ. ಎ. ಶ್ರೀನಿವಾಸನ್, ಡಾ|| ರಾಯರ್ಸ್ ಮೊದಲಾದವರು ಆಗಮಿಸಿದ್ದರು. ಪೋಲೀಸ್ ಉಸ್ತುವಾರಿಯೂ, ಸ್ವಯಂಸೇವಕರ ಉತ್ಸಾಹವೂ ಈ ಯಾಗವನ್ನು ತೃಪ್ತಿಕರವಾಗಿ ನಡೆಸಲು ಸಹಾಯವಾಗಿದ್ದುವು.

ಶ್ರೀ ನಾರಾಯಣ ಮಹರಾಜರು ಯಾಗದ ಮೊದಲನೇ ಮತ್ತು ಎರಡನೇ ದಿನ ಯಾಗಶಾಲೆಗೆ ದಯೆಮಾಡಿಸಿ ಅಲ್ಲಿ ನೆರೆದಿದ್ದ ಲಕ್ಷಾಂತರ ಜನಗಳಿಗೆ ತಮ್ಮ ದರ್ಶನವನ್ನಿತ್ತರು. ಲಕ್ಷಾಂತರ ಜನರು

ಮಹರಾಜರ ದರ್ಶನವನ್ನು ಪಡೆದು ಆನಂದೋತ್ಸಾಹಗಳಿಂದ ನಭೋ ಮಂಡಲವನ್ನು ಭೇದಿಸುವಂತೆ "ಶ್ರೀನಾರಾಯಣ ಮಹರಾಜ್ ಕೀ ಜೈ" ಎಂದು ಜಯಘೋಷವನ್ನು ಮಾಡಿದರು.

ಶ್ರೀ ನಾರಾಯಣ ಮಹರಾಜರು ಆತ್ಮಜ್ಞಾನಿಗಳು. ಜೀವನ್ಮುಕ್ತರು. ಅದು ಕಾರಣವೇ ಆಚಾರ್ಯ ಭೀಷ್ಮನಂತೆ ಇಚ್ಛಾಮರಣಿಗಳು. ಯಾಗದ ಕಡೆಯ ದಿನ ಅವರು ಯಜ್ಞಶಾಲೆಗೆ ಬರಲು ಶರೀರದ ಅಸ್ವಾಸ್ಥ್ಯದಿಂದ ಸಾಧ್ಯವಾಗಲಿಲ್ಲ. ಆದರೂ ತಾವು ಮಲಗಿದ್ದ ಸ್ಥಳಕ್ಕೇ ಯಾಗವು ಮುಂದು ವರೆದ, ಪೂರ್ಣಾಹುತಿಯೂ ನಡೆದ, ಬ್ರಹ್ಮಭೋಜನವಾದ ಸುದ್ದಿಗಳನ್ನು ಮೇಲಿಂದ ಮೇಲೆ ಕೇಳಿ ತಿಳಿಯುತ್ತಿದ್ದರು. (ಯಾಗಶಾಲೆಗೂ ಶ್ರೀ ನಾರಾಯಣ ಮಹರಾಜರಿದ್ದೆಡೆಗೂ ಟೆಲಿಫೋನ್ ಸಂಬಂಧವಿತ್ತು.)

ತಾ. ೩-೯-೪೫ ರ ದಿನ ಸಂಜೆಯ ೬-೩೦ ಘಂಟೆಗೆ ಶ್ರೀ ನಾರಾಯಣ ಮಹರಾಜರು ಅತಿರುದ್ರಸ್ವಾಹಾಕಾರಯಾಗವು ಪರಿಪೂರ್ಣವಾದ ಸಂತೋಷ ವಾರ್ತೆಯನ್ನು ಕೇಳಿ ಪರಮೇಶ್ವರನಿಗೆ ತಿಳಿಸಲು ಆತುರದಿಂದ ಪ್ರಯಾಣ ಮಾಡಿದರೋ ಎಂಬಂತೆ ಹಸನ್ಮುಖದಿಂದ ಶಿವಲೋಕವನ್ನು ಸಾರಿ ಬಾಳಿನ ನಶ್ವರತೆಯನ್ನು ಲೋಕಕ್ಕೆ ಸಾರಿದರು.

ಶ್ರೀ ಸಮರ್ಥರ ಮರಣವಾರ್ತೆ ಕಾಳ್ಗಿಚ್ಚಿನಂತೆ ಊರಿನಲ್ಲೆಲ್ಲ ಹಬ್ಬಿತು. ಅವರ ಭೌತಿಕ ದೇಹದ ಸಂದರ್ಶನಾರ್ಥವಾಗಿ ಲಕ್ಷಗಟ್ಟಲೆ ಸ್ತ್ರೀ ಪುರುಷರು ಸೇರಿದರು. ಮರುದಿನ ಬೆಂಗಳೂರು ನಗರದ ರಾಜಬೀದಿಗಳಲ್ಲಿ ಶ್ರೀ ಸಮರ್ಥರ ಕಳೇಬರದ ವೈಭವದ ಮೆರೆವಣಿಗೆಯಾಯಿತು. ಹೂವಿನ ವಿಮಾನದಲ್ಲಿ ಶ್ರೀ ಸಮರ್ಥರ ಭೌತಿಕ ದೇಹವು ಅಲಂಕೃತವಾಗಿತ್ತು. ಲಕ್ಷಕ್ಕೆ ಹೆಚ್ಚು ಜನರು ಅವರ ಚರಮದರ್ಶನವನ್ನು ಪಡೆದರು. ಅದೇ ರಾತ್ರಿ ಸುಮಾರು ೧೧ ಗಂಟೆಗೆ ಬೆಂಗಳೂರು ಗವಿಪುರದಲ್ಲಿರುವ ಶ್ರೀ ಗಂಗಾಧರೇಶ್ವರ ದೇವಾಲಯದ ಮುಂಭಾಗದ ಕೆಂಪಾಂಬುಧಿ ಕೆರೆಯ ಪಕ್ಕದ ಪ್ರದೇಶದಲ್ಲಿ ಶ್ರೀಗಂಧದ ಕಟ್ಟಿಗೆಗಳಿಂದ ಕೂಡಿದ ಚಿತೆಯ ಮೇಲೆ ಶ್ರೀ ಸಮರ್ಥರ ಭೌತಿಕ ದೇಹವನ್ನಿಟ್ಟು ಅಗ್ನಿ ಸ್ಪರ್ಶನ ಮಾಡಿಸಲಾಯಿತು.

ಕರ್ಪೂರವು ಬೆಂಕಿಯ ಸಂಗದಿಂದ ಬೆಂಕಿಯಾದಂತೆ, ಗೃಹಾಕಾಶವು ಮಹಾಕಾಶವಾದಂತೆ, ಮಹಾತ್ಮರ ಆತ್ಮವು ಪವಿತ್ರಾತ್ಮನಲ್ಲಿಯೂ, ಪಾಂಚಭೌತಿಕ ದೇಹವು ಪಂಚಭೂತಗಳಲ್ಲಿಯೂ ಸೇರಿಹೋಯಿತು. "ಜಾತಸ್ಯ ಮರಣಂ ಧ್ರುವಂ" ಎಂಬ ಮಾತು ನಿಜವಾಯಿತು. ಜನರು ಮಹಾತ್ಮರ ವಿಯೋಗದಿಂದ ಕಣ್ಣೀರಿಟ್ಟರು. ಆತ್ಮಜ್ಞಾನಿಗಳು ಅವರ ಆಶ್ಚರ್ಯಕರವಾದ ಈ ಮರಣವನ್ನು ಕಂಡು ಕೌತುಕಪಟ್ಟರು. ಬೆಂಗಳೂರಿನಲ್ಲಿ ಶ್ರೀ ಸಮರ್ಥರ ಮಾತು ಮನೆಮಾತಾಯಿತು. ಅತಿರುದ್ರಮಹಾಯಾಗವು ಕೃತಯುಗದ ದೃಶ್ಯವನ್ನು ಕಲಿಯುಗದಲ್ಲಿ ಸ್ಮರಣೆಗೆ ತರುತ್ತಿತ್ತು.

ಶ್ರೀ ಸಮರ್ಥರ ರೂಪವು, ಥಟ್ಟನೆ ಕಂಡರೆ ಮಹಾತ್ಮ ಗಾಂಧಿಯವರ ಹೋಲಿಕೆಯಂತಿತ್ತು. ಗಾಂಧಿಯವರದು ಜ್ಞಾನಮಾರ್ಗ, ಸಮರ್ಥರದು ಭಕ್ತಿಮಾರ್ಗ, ಸಮರ್ಥರಿಗೆ ಸಾಯುವಾಗ ೬೦ ವರ್ಷಗಳು ತುಂಬಿದ್ದವು. ಸಮರ್ಥರು ದತ್ತಾತ್ರೇಯನ ಅವತಾರವೆಂದು ಕೆಲವರ ನಂಬಿಕೆ. ವಿದ್ಯಾರಣ್ಯರ ಅವತಾರವೆಂದು ಮತ್ತೆ ಕೆಲವರ ನಂಬಿಕೆ. ಶ್ರೀ ಸಮರ್ಥರ ಸಂದರ್ಶನಕ್ಕೆ ಹಲವು ಮಂದಿ ರಾಜ ಮಹಾರಾಜರು ಶ್ರೀ ಕ್ಷೇತ್ರಭೇಟಿಕ್ಕೆ ಬಂದು ಹೋಗಿರುವರು. 'ಉದಾರ ಚರಿತಾನಾಂತು ವಸುಧೈವ ಕುಟುಂಬಕಂ' ಎಂಬ ಕವಿ ವಾಕ್ಯವು ಶ್ರೀ ಗುರುಗಳ ಜೀವನದಲ್ಲಿ ಸಾರ್ಥಕವೆನಿಸಿತು.

ಮುಖ್ಯವಾಗಿ ಶ್ರೀ ಸಮರ್ಥರು ಕರ್ಣಾಟಕದ ಹಾಗೂ ಸನಾತನ ಧರ್ಮದ ತೇಜಸ್ಸನ್ನು ಹೆಚ್ಚಿಸಿದ ಮಹಾಪುರುಷರೆಂಬುದರಲ್ಲಿ ಯಾರಿಗೂ ಭಿನ್ನಾಭಿಪ್ರಾಯವಿಲ್ಲ. ಅವರ ಅನುಗ್ರಹಕ್ಕೆ ಪಾತ್ರರಾದ ಭಕ್ತರು ಧನ್ಯರೇ ಸರಿ. ಅವರ ಆಶೀರ್ವಾದಕ್ಕೆ ಪಾತ್ರರಾದವರು ಸತ್ಪುರುಷರೇ ಸರಿ.

## ಆತ್ಮಾರ್ಪಣ

೧

ಕಂದ ‖ ತನುವಂ ಮನಮಂ ಧನಮಂ ।
ಜನಸೇವೆಗೆ ಮೀಸಲಾಗಿಸುತ್ತಂ ನಿಸದಂ ‖

ಮುನಿವರ ನಾರಾಯಣ ಗುರು |
ವನುದಿನವಂ ಕಳೆದನವನೆ ನಿಜಕು ಸಮರ್ಥಂ |

೨

ವೈದಿಕ ಮಾರ್ಗದಿ ನಡೆಯುತೆ |
ಸಾಧಿಸಿ ನಿಜಯಜ್ಞ ಯಾಗಮಾರ್ಗ ಕ್ರಮದಿಂ ||
ಸಾಧುವರೇಣ್ಯಂ ಗುರುವರ|
ಭೇದಿಸಿದಂ ಭವದ ಬೇರನರಿಯಲ್ ಜಗದೊಳ್ ||

೩

ಹೆಣ್ಣಂ ಹೊನ್ನಂ ಮಣ್ಣಂ |
ಕಣ್ಣಿಂದಂ ಕಾಣುತಿರ್ದು ಕಾಣದ ತೆರದಿಂ ||
ಸಣ್ಣಿಸಿ ಮಾಯೆಯ ಮದವಂ |
ಸನ್ಮುನಿ ನಿಜಮೋಕ್ಷ ರಾಜ್ಯಮಂ ಮೇಣ್ ಪಡೆದಂ ||



ಆಸ್ಥಾನ ಮಹಾವಿದ್ವಾನ್, ಕರ್ಣಾಟಕ ಭಾಷಾರತ್ನಂ

## ಕೈ|| ಪಿ. ಆರ್. ಕರಿಬಸವಶಾಸ್ತ್ರಿಗಳು

ಕನ್ನಡ ನಾಡು, ಸಾಹಿತ್ಯ, ಸಂಸ್ಕೃತಿ, ಲಲಿತ ಕಲೆಗಳು, ಉನ್ನತ ಮಟ್ಟದ ಜನಜೀವನ, ಉದಾತ್ತವಾದ ತತ್ವಜ್ಞಾನ, ಅಹಿಂಸಾ ಧರ್ಮ, ವಿಶ್ವ ಪ್ರೇಮ, ಅತಿಥಿ ಸತ್ಕಾರ ಮೊದಲಾದ ಶ್ರೇಷ್ಠಗುಣಗಳಿಂದ ಭರತಖಂಡ ದಲ್ಲಿಯೇ ಪ್ರಖ್ಯಾತಿಯನ್ನು ಗಳಿಸಿದೆ. ನಮ್ಮ ನಾಡಿನ ಈ ಮಿಗಿಲಾದ ಸಾಂಸ್ಕೃತಿಕ ಸಂಪತ್ತಿಗೆ ಈ ದೇಶದಲ್ಲಿ ಆಗಿ ಹೋದ ಸಾಧುಸಂತರು, ಮಹಾ ರಾಜರು, ಕವಿ ಪಂಡಿತರು, ವಿವಿಧ ಕಲಾವಿದರು, ಅನುಭಾವಿಗಳು ಅಹಿಂಸಾ ನಿರತರು ಬಹುಮಟ್ಟಿಗೆ ಕಾರಣವೆಂದು ಹೇಳಬಹುದು. ಕರ್ಣಾಟಕದ ಸುಮಾರು ಎರಡು ಸಾವಿರ ವರ್ಷಗಳ ಉಜ್ವಲ ಚರಿತ್ರೆಯಲ್ಲಿ ಅಸಂಖ್ಯಾತ ಜೀವರತ್ನಗಳು ಬೆಳಕು ಕಂಡಿವೆ. ಅಂತಹವರ ಚರಿತ್ರೆಯನ್ನು ಅವಲೋಕಿ ಸುವುದು, ಅರಸುವುದು, ಅನುಭವ ಪಡೆಯುವುದು ಇಂದಿನ ಜನರ ಆದ್ಯ ಕರ್ತವ್ಯವಾಗಿದೆ. ಕರ್ನಾಟಕದ ಪ್ರಾಚೀನಕಾಲದ ಆಗುಹೋಗುಗಳಿಗೂ ರಾಜಧಾನಿಗಳಿಗೂ ನಿಕಟ ಸಂಬಂಧವಿದೆ. ಮೈಸೂರು ಇಂತಹ ಪ್ರಾಚೀನ ರಾಜಧಾನಿಗಳಲ್ಲಿ ಒಂದು. ಸುಮಾರು ೫೦೦ ವರ್ಷಕ್ಕೂ ಮೇಲ್ಪಟ್ಟಷ್ಟು ಹಿಂದಿನಿಂದ ಪ್ರಜಾಪ್ರಭುತ್ವದ ಇಂದಿನ ಯುಗದಲ್ಲಿ ಕೂಡ ಅದು ರಾಜಧಾನಿ ಯೆನಿಸಿರುವುದು ಆನಂದದಾಯಕವೂ, ಆಶ್ಚರ್ಯಕರವೂ ಆದ ಸಂಗತಿ. ಆ ನಗರದಲ್ಲಿ ಪ್ರಖ್ಯಾತರಾದ ರಾಜ ಮಹಾರಾಜರು ಹುಟ್ಟಿದಂತೆಯೇ ವಿಖ್ಯಾತರಾದ ಕಲಾವಿದರೂ ಪಂಡಿತರೂ ಕವಿಗಳೂ ಹುಟ್ಟಿರುವರೆಂಬುದು ಗಮನಾರ್ಹವಾದ ಸಂಗತಿ. 'ಕರ್ನಾಟಕ ಸೌಭಾಗ್ಯಲಕ್ಷ್ಮಿಯ ನೆಲೆವೀಡು ಮೈಸೂರು' ಎಂದು ಕವಿಗಳು ಕರೆದಿರುವುದರಲ್ಲಿ ತುಂಬಾ ಔಚಿತ್ಯವಿದೆ.

---

(ತಾ|| ೬-೫-೬೭ರಂದು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಆಸ್ಥಾನ ವಿದ್ವಾನ್, ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು, ಬೆಂಗಳೂರು ಆಕಾಶ ವಾಣಿಯಲ್ಲಿ ನಿರೂಪಿಸಿದ ಭಾಷಣ.)

ಕೈ॥ ಪಿ. ಆರ್. ಕರಿಬಸವಶಾಸ್ತ್ರಿಗಳು ಮೈಸೂರಿನವರು. ಇವರ ತಂದೆ ಪಂಡಿತ ರುದ್ರಪ್ಪ, ತಾಯಿ ಸಾಧ್ವಿ ನಂಜಮ್ಮ. ಇವರ ಜನನ ಶಾಲಿವಾಹನಶಕ ೧೭೭೦ ನೇ ಕೀಲಕ ಸಂವತ್ಸರ. ಅಂದರೆ ಇಂದಿಗೆ ಶಾಸ್ತ್ರಿಗಳು ಹುಟ್ಟಿ ೧೧೬ ವರ್ಷ. ಇವರ ವಿದ್ಯಾಗುರುಗಳು ಬೆಟ್ಟದ ಪುರದ ಬವಸ ದೇವರು, ಪಂಡಿತ ಚಿಟಗಿ ಬಸವಲಿಂಗಪ್ಪನವರು, ಬಾಚಳ್ಳಿ ಶ್ರೀಕಂಠಶಾಸ್ತ್ರಿಗಳು. ಇವರ ಮನೆತನ ವೈದ್ಯ, ಸಾಹಿತ್ಯ, ಕಾವ್ಯವಾಚನ ಮೊದಲಾದ ವಿದ್ಯೆಗಳಿಗೆ ಹೆಸರಾದುದು. ಶಾಸ್ತ್ರಿಗಳು ಕುಶಾಗ್ರಬುದ್ಧಿಯುಳ್ಳ ಪಂಡಿತರೆನಿಸಿಕೊಂಡರು, ಉಭಯ ಭಾಷಾವಿಶಾರದರಾದರು.

ಇವರು ಮೊದಲು ಮೈಸೂರಿನ ವೆಸ್ಲಿಯರ್ಮಿಷನ್ ಹೈಸ್ಕೂಲಿನಲ್ಲಿ ಕನ್ನಡ ಪಂಡಿತರಾಗಿ ೧೫ ವರ್ಷ ಕೆಲಸ ಮಾಡಿದರು. ಅನಂತರ ಮೈಸೂರು ಮಹಾರಾಜರ ಕಾಲೇಜಿನಲ್ಲಿ ೩೦ ವರ್ಷ ಪ್ರಥಮ ಪಂಡಿತರಾಗಿ ಸೇವೆ ಸಲ್ಲಿಸಿದರು. ಅನೇಕ ಕ್ರೈಸ್ತಪಾದ್ರಿಗಳು ಇವರಲ್ಲಿ ಕನ್ನಡವನ್ನು ಅಭ್ಯಾಸ ಮಾಡಿದರು. ಬೈಬಲನ್ನು ಕನ್ನಡಕ್ಕೆ ಭಾಷಾಂತರಿಸುವುದರಲ್ಲಿ ನೆರವಾದರು.

ರೆ॥ ಗ್ರೀನೋಡ್, ಹಾಕಿನ್, ಹೆಗ್, ಕಾಸ್ಟಿಕ್ ಗಲಿಫರ್ಡ್, ಥಾಮ್ ಸನ್, ಮಿಸೆಸ್ ಗಲಿಫರ್ಡ್–ಇವರುಗಳು ಶಾಸ್ತ್ರಿಗಳಲ್ಲಿ ಕನ್ನಡವನ್ನು ಅಭ್ಯಾಸಮಾಡಿದರು. ಕನ್ನಡ ಸಾಹಿತಿಗಳಿಗೆ ಸುಪರಿಚಿತರಾದ ಡಾ॥ ರೈಸ್, ಡಾ॥ ಕಿಟ್ಟೆಲ್ ಇವರುಗಳಿಗೆ ಶಾಸ್ತ್ರಿಗಳು ತುಂಬಾ ಸಹಾಯಕರಾಗಿದ್ದು ಕನ್ನಡಕ್ಕೆ ಸೇವೆಯನ್ನು ಸಲ್ಲಿಸಿದರು.

ಕೈ॥ ಪಿ. ಆರ್. ಕರಿಬಸವಶಾಸ್ತ್ರಿಗಳು, ವಿಖ್ಯಾತ ವಿದ್ವಾಂಸರಾದ ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳು, ನಂಜನಗೂಡು ಸುಬ್ಬಾಶಾಸ್ತ್ರಿಗಳು, ಆರ್. ನರಸಿಂಹಾಚಾರ್ಯರು, ಕವಿ ತಿಲಕ ಅಯ್ಯಾಶಾಸ್ತ್ರಿಗಳು, ಸೋಸಲೆ ಮರಿದೇವರು, ವ್ಯಾಕರಣದ ಬಿ. ಮಲ್ಲಪ್ಪನವರು, ಸಾಹಿತ್ಯರತ್ನ ವೆಂಕಟರಾಮಾ ಶಾಸ್ತ್ರಿಗಳು ಮೊದಲಾದವರ ಆಪ್ತವರ್ಗಕ್ಕೆ ಸೇರಿದವರು.

ಶಾಸ್ತ್ರಿಗಳ ಶಿಷ್ಯಸಂಪತ್ತು ಅಗಾಧವಾದುದು. ದಿವಂಗತರಾದ ರಾಜಕವಿ ವಿಭೂಷಣ ಎಚ್. ಲಿಂಗರಾಜ ಅರಸರು, ವಿದ್ವಾನ್ ಕಾನಕಾನಹಳ್ಳಿ

ವರದಾಚಾರ್ಯರು. ಆಸ್ಥಾನವಿದ್ವಾನ್ ಎನ್. ಆರ್. ಕರಿಬಸವಶಾಸ್ತ್ರಿಗಳು, ಪಂಡಿತರತ್ನಂ ಶಿರಸಿ ಗುರುಶಾಂತಶಾಸ್ತ್ರಿಗಳು ಮೊದಲಾದವರು ಶಾಸ್ತ್ರಿಗಳ ಶಿಷ್ಯಕೋಟಿಗೆ ಸೇರಿದವರು. ಪೂಜ್ಯಶಾಸ್ತ್ರಿಗಳ ವಿದ್ವತ್ತನ್ನು ಕಂಡು ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು ಅವರನ್ನು ಆಸ್ಥಾನ ಮಹಾವಿದ್ವಾಂಸರನ್ನಾಗಿ ಮಾಡಿದರು. ಅನಂತರ ಕೆಲವು ದಿವಸಗಳಾದ ಮೇಲೆ ೧೯೧೮ನೇ ವರ್ಷದಲ್ಲಿ ದಸರಾದರ್ಬಾರಿನಲ್ಲಿ ಅವರಿಗೆ 'ಕರ್ಣಾಟಕ ಭಾಷಾರತ್ನಂ' ಎಂಬ ಬಿರುದನ್ನೂ ರಾಜಮರ್ಯಾದೆಗಳನ್ನೂ ಕೊಟ್ಟು ಗೌರವಿಸಿದರು.

ಶ್ರೀ ಶಾಸ್ತ್ರಿಗಳು ತಮ್ಮ ಮನೆಯಲ್ಲಿ ನೂರಾರು ಮಂದಿ ವಿದ್ಯಾರ್ಥಿಗಳಿಗೆ ಅನ್ನಬಟ್ಟೆಗಳನ್ನು ಕೊಟ್ಟು, ಅವರಿಗೆ ಪಾಠ ಹೇಳಿ ಸ್ವಂತ ಮಕ್ಕಳಂತೆ ಕಾಪಾಡಿ ಅಭಿವೃದ್ಧಿಗೆ ತಂದರು. 'ಭಾಷೋಜ್ಜೀವಿನೀ' ಎಂಬ ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಿ ಸಾವಿರಾರು ಮಂದಿಗೆ ಸಂಸ್ಕೃತವನ್ನು ಹೇಳಿಕೊಟ್ಟರು. ಮುಡುಕುತೊರೆಯಲ್ಲಿ ಮತಸಂವರ್ಧಿನೀ ಸಭಾ ಎಂಬ ಸಂಸ್ಥೆಯನ್ನು ಸ್ಥಾಪಿಸಿ ಪ್ರತಿವರ್ಷ ಜಾತ್ರೆಯಲ್ಲಿ ಧರ್ಮ ಪ್ರಸಾರ ಕಾರ್ಯಗಳನ್ನು ನಡೆಸಿದರು.

ಮೈಸೂರಿನಲ್ಲಿ 'ಶಂಕರವಿಲಾಸ' ಎಂಬ ಅಚ್ಚುಕೂಟವನ್ನು ಸ್ಥಾಪಿಸಿ 'ಮತಪ್ರಕಾಶಿಕಾ' ಎಂಬ ಪತ್ರಿಕೆಯನ್ನು ಹಲವಾರು ವರ್ಷ ನಡೆಸಿದರು. ಶಾಸ್ತ್ರಿಗಳು ಸರ್ಕಾರದ ಪಠ್ಯಪುಸ್ತಕಗಳ ಸಮಿತಿಯಲ್ಲಿ ಕೆಲಕಾಲ ಸದಸ್ಯರಾಗಿದ್ದರು. ಕರ್ನಾಟಕದ ಹಲವೆಡೆಗಳಲ್ಲಿ ಸಂಚರಿಸಿ ಅಲ್ಲಿ ವಿದ್ವತ್ಪೂರ್ಣವಾದ ಭಾಷಣಗಳನ್ನು ಮಾಡಿ ಜನತೆಯನ್ನು ಎಚ್ಚರಿಸಿದರು. ಅವರ ಮನೆ ಸದಾ ಒಂದು ಪಾಠಶಾಲೆಯಂತೆಯೇ ಕಂಗೊಳಿಸುತ್ತಿತ್ತು. ಅವರು ಪ್ರಾಚೀನ ಕಾಲದ ಆಶ್ರಮಗಳ ಕುಲಪತಿಗಳಂತೆ ಪರಿಶೋಭಿಸುತ್ತಿದ್ದರು.

ಮಹಾಪ್ರತಿಭಾಶಾಲಿಗಳಾದ ಹಾಗೂ ದೇಶಾಭಿಮಾನಿಗಳಾದ ಪಿ. ಆರ್. ಕರಿಬಸವಶಾಸ್ತ್ರಿಗಳು ಈ ಮುಂದೆ ಹೇಳುವ ಸಂಸ್ಕೃತ ಮತ್ತು ಕನ್ನಡ ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸಿ ದೇಶಕ್ಕೆ ಹಾಗೂ ಭಾಷೆಗೆ ಉಪಕಾರ ಮಾಡಿದ್ದಾರೆ.

ಕ್ರಿಯಾಸಾರ, ಸಿದ್ಧಾಂತ ಶಿಖಾಮಣಿ, ದೀಕ್ಷಾವಿಧಿ, ಮಹಾದೇವ ಮನೋವಿಲಾಸ, ಲಿಂಗಧಾರಣ ಚಂದ್ರಿಕೆ, ಅನುಭವ ಸೂತ್ರ, ವಿವಾಹವಿಧಿ, ವೀರಶೈವೋತ್ಕರ್ಷ ಸಂಗ್ರಹ, ಸಂಸ್ಕೃತ ಬಸವೇಶ ವಿಜಯ, ಕನ್ನಡ ಬಸವೇಶ ವಿಜಯ, ಕನ್ನಡ ಮಹಾಭಾರತ, ಸಟೀಕ ಜೈಮಿನೀ ಭಾರತ, ಕನ್ನಡ ಜೈಮಿನೀ ಭಾರತ, ರಾಜಶೇಖರ ವಿಳಾಸ, ಭಕ್ತಾಧಿಕ್ಯ ರತ್ನಾವಳಿ, ಶಬರಶಂಕರ ವಿಳಾಸ, ದಶಗ್ರಂಥಿ, ಅನುಭವಸಾರ, ವ್ಯಾಸೋಕ್ತ ಬಸವ ಪುರಾಣ, ಶಿವಾದ್ವೈತಮಂಜರಿ, ಸಿದ್ಧೇಶ್ವರ ಪುರಾಣ, ಪ್ರಹ್ಲಾದ ಚರಿತೆ, ವೀರಶೈವ ಪ್ರದೀಪಿಕಾ, ನಳಚರಿತ್ರೆ, ಶಿವಭಕ್ತಿಸಾರ, ನಯಃಶತಕ, ಸಟೀಕಾ ತ್ರಿಕಾಂಡ ಅಮರಕೋಶ, ಸಚಿತ್ರ ಕರ್ಣಾಟಕ ಬಾಲಬೋಧೆ, ಶಬ್ದಾವಳಿ, ಶಿವಪೂಜಾವಿಧಿ, ಗಣಸಹಸ್ರನಾಮಾವಳಿ ಈ ಮೇಲೆ ಕಂಡ ಗ್ರಂಥಗಳಲ್ಲಿ, ಕರ್ನಾಟಕ ಬಾಲಬೋಧೆ, ನಯಶತಕ, (ಕಂದರೂಪವಾಗಿದೆ) ವೀರಶೈವೋತ್ಕರ್ಷಸಂಗ್ರಹ (ಸಂಸ್ಕೃತ ಭಾಷೆಯಲ್ಲಿ ರಚಿತವಾಗಿದೆ.) ಕನ್ನಡ ಬಸವೇಶ ವಿಜಯ (ಗದ್ಯ ರೂಪವಾಗಿದೆ.) ಇವುಗಳು ಶಾಸ್ತ್ರಿಗಳಿಂದ ವಿರಚಿತವಾದುವು. ಜೈಮಿನೀ ಭಾರತದ ೧೭ ಅಧ್ಯಾಯಗಳಿಗೆ ಇವರು ಸುಂದರವಾದ ಟೀಕೆಯನ್ನು ಬರೆದಿದ್ದಾರೆ. ಜನಪ್ರಿಯ ಕನ್ನಡ ಗ್ರಂಥಗಳಾದ ಜೈಮಿನೀ ಭಾರತ, ರಾಜಶೇಖರ ವಿಳಾಸ, ಶಬರಶಂಕರ ವಿಳಾಸ, ಅನುಭವಸಾರ, ಪ್ರಹ್ಲಾದಚರಿತೆ, ಕನ್ನಡ ಭಾರತ ಎಂಬ ಗ್ರಂಥಗಳನ್ನು ಶುದ್ಧವಾಗಿ ಸುಂದರವಾಗಿ ಸಂಪಾದಿಸಿ ಪ್ರಕಟಿಸಿದ್ದಾರೆ.

ಶಾಸ್ತ್ರಿಗಳಲ್ಲಿ ಮಿಗಿಲಾದ ಬೋಧನ ಶಕ್ತಿ ಇದ್ದಿತು. ಅವರು ಕಾಲೇಜು ಪಂಡಿತರಾಗಿದ್ದು ವಿಖ್ಯಾತ ಪ್ರಾಧ್ಯಾಪಕರನ್ನು ತಯಾರು ಮಾಡಿದರು. ಕನ್ನಡ ಸಂಸ್ಕೃತ ಗ್ರಂಥಗಳನ್ನು ಸಂಪಾದಿಸಿ ವಿದ್ವಾಂಸರಿಗೆ ಮಾರ್ಗದರ್ಶಕರಾದರು. ನಾಗವರ್ಮನ ಕಾದಂಬರಿಯಲ್ಲಿ ಕಾಣವಾಗಿದ್ದ ಕೆಲವು ಪದ್ಯಗಳನ್ನು ಅಚ್ಚಾದ ಸಂಸ್ಕೃತ ಕಾದಂಬರಿಯ ಸಹಾಯದಿಂದ ಶ್ರೀ ಶಾಸ್ತ್ರಿಗಳು ಬರೆದಿರುವುದನ್ನು ನೋಡಬಹುದು. ಈ ಗ್ರಂಥವನ್ನು ಕೈ॥ ಬಿ. ಮಲ್ಲಪ್ಪನವರು ಪ್ರಕಟಿಸಿರುತ್ತಾರೆ.

ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳ ಶಾಕುಂತಲ ನಾಟಕದ ಪೀಠಿಕೆಯಲ್ಲಿ, ರಾಜಶೇಖರ ವಿಳಾಸ ಮತ್ತು ಜೈಮಿನೀ ಭಾರತದ ಪೀಠಿಕೆ ಗಳಲ್ಲಿ ಶಾಸ್ತ್ರಿಗಳ ಅಗಾಧವಾದ ವಿಮರ್ಶಾಶಕ್ತಿ ಮತ್ತು ಪಾಂಡಿತ್ಯಗಳನ್ನು ನಾವು ಕಾಣಬಹುದು. ಶಾಸ್ತ್ರಿಗಳು ಉನ್ನತವಾದ ದೇಹ, ಸುಂದರವಾದ ಮುಖಮುದ್ರೆ, ಉತ್ಸಾಹಪೂರ್ಣವಾದ ಜೀವನ, ಉದಾರಬುದ್ಧಿ, ಮಿಗಿಲಾದ ಧೈರ್ಯಸ್ಥೈರ್ಯ ಮೊದಲಾದ ಮಹದ್ಗುಣಗಳಿಂದ ಕಂಗೊಳಿಸುತ್ತಿದ್ದರು. ಶಾಸ್ತ್ರಿಗಳ ವ್ಯಕ್ತಿತ್ವವು ಪಾಂಡಿತ್ಯ ಪೂರ್ಣವೆನಿಸಿದ್ದಿತು. ಸೋಲನ್ನರಿ ಯದ ವಾದಸಂಪತ್ತು ಅವರಿಗೆ ಒಲಿದುಬಂದಿತ್ತು. ಅವರನ್ನು ನೋಡಿದ ಯಾರಾದರೂ ಬಹುಬೇಗ ಅವರ ಅಧೀನವಾಗುತ್ತಿದ್ದರು. ಅಂತಹ ವ್ಯಕ್ತಿತ್ವ ಅವರದು. ಶಾಸ್ತ್ರಿಗಳ ಮೂವನ ಮನೆ ತುಮಕೂರು ಜಿಲ್ಲಾ ಗುಬ್ಬಿಹೊಸಹಳ್ಳಿ. ಅವರ ಧರ್ಮಪತ್ನಿಯ ಹೆಸರು ಚೆನ್ನಮ್ಮ. ಶಾಸ್ತ್ರಿಗಳ ಪೂರ್ವವಯಸ್ಸಿನಲ್ಲಿಯೇ ಈಕೆಯು ಕಣ್ಮರೆಯಾದಳು. ಅನುಕೂಲ ಪತ್ನಿಯ ವಿರಹದಿಂದ ಶಾಸ್ತ್ರಿಗಳು ಬಹಳ ಮರುಗಿದರು. ಶಾಸ್ತ್ರಿಗಳಿಗೆ ಸ್ವಂತ ಮಕ್ಕಳಿಲ್ಲ. ಅವರು ತಮ್ಮ ಮನೆತನದ ಕಾರ್ಯನಿರ್ವಹಣೆಗೆ ಅವರ ಅಣ್ಣನ ಮಗ 'ರುದ್ರಪ್ಪ' ಎಂಬುವರನ್ನು ಸಾಕಿಕೊಂಡರು.ಅವರೇ ಶಾಸ್ತ್ರಿ ಗಳ ಆಸ್ತಿ ಪಾಸ್ತಿಗಳಿಗೆ ಉತ್ತರಾಧಿಕಾರಿಗಳಾದರು.

ಶಾಸ್ತ್ರಿಗಳು ಮುಪ್ಪಿನ ಕಾಲದಲ್ಲಿ ಸುಮಾರು ೫-೬ ವರ್ಷಗಳ ಕಾಲ ತುಮಕೂರಿನಲ್ಲಿದ್ದರು. ಆ ಕಾಲದಲ್ಲಿ ನನಗೆ ಅವರಲ್ಲಿ ಶಿಷ್ಯವೃತ್ತಿ ಮಾಡುವ ಸುಯೋಗವು ದೊರೆಕಿತು. ಪೂಜ್ಯಶಾಸ್ತ್ರಿಗಳು ತಮ್ಮ ೮೪ನೇ ವಯಸ್ಸಿನಲ್ಲಿ (ತಾ॥ ೩೦-೮-೧೯೩೧ನೇ) ಬುಧವಾರ ಮೈಸೂರಿನ ತಮ್ಮ ಮನೆಯಲ್ಲಿ ದೇಹವನ್ನು ಬಿಟ್ಟು ಪರಶಿವನ ಪಾದಾರವಿಂದವನ್ನು ಸೇರಿದರು. ಶ್ರೀ ಶಾಸ್ತ್ರಿಗಳ ದಿವ್ಯಭಾವ ಚಿತ್ರವು ಮೈಸೂರು ಮಹಾರಾಜರ ಕಾಲೇಜು ಭವನದಲ್ಲಿಯೂ, ಬೆಂಗಳೂರು ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿಯೂ ಇಂದಿಗೂ ಕಂಗೊಳಿಸುತ್ತಿದೆ. ಅವರು ಅತ್ಯಂತ ಶ್ರಮದಿಂದ ಸಂಗ್ರಹಿಸಿ, ಸಂಶೋಧಿಸಿ, ವಿರಚಿಸಿ ಪ್ರಕಟಿಸಿದ ಗ್ರಂಥಗಳು ಇಂದಿಗೂ ಅವರ ಸ್ಮಾರಕ ವೆನಿಸಿವೆ.

ಕರ್ಣಾಟಕ ಭಾಷಾರತ್ನಂ, ಮಹಾವಿದ್ವಾನ್ ಪಿ. ಆರ್. ಕರಿಬಸವ ಶಾಸ್ತ್ರಿಗಳು ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಪಂಡಿತರೇ ಅಲ್ಲದೆ ಕವಿಗಳೂ ಆಗಿದ್ದರು. ಅವರ ಕವಿತೆಯ ಮಾದರಿಯಾಗಿ ಶತಕದ ಎರಡು ಪದ್ಯಗಳು:

ಕಂ|| ದಾರಿಯನರಿಯದ ಮಾನವ |
ನೂರಂ ಸೇರುವನೆ ಬುದ್ಧಿಯುತನಾದೊಡಮೇಂ? ||
ಸಾರತರ ನೀತಿಯರಿಯದ |
ಧೀರಂ ತಾಂ ಲೋಕಯಾತ್ರೆಯೊಳ್‌ಕರಮೆಳವಂ ||
ಗುಣಹೀನಂ ಗುಣವಂತನ |
ನೆಣಿಸಂ ಗುಣಿ ಸುಗುಣಶಾಲಿಯಂ ಮಚ್ಚರಿಸಂ ||
ಗುಣಿ ಸುಗುಣವತ್ಸಲಂ ಈ ಧಾರಿ |
ರಿಣಿಯೊಳ್ ದುರ್ಲಭನೆನಿಪ್ಪನಿದು ಪರಮಾರ್ಥಂ ||

ಅವರ ವೃತ್ತ ರಚನಾ ಸಾಮರ್ಥ್ಯಕ್ಕೆ ನಿದರ್ಶನವು ರಾಜಶೇಖರ ವಿಳಾಸ ದಲ್ಲಿದೆ:

ವೃತ್ತ|| ಬಾಲಸುಧಾಂಶುಪತ್ತನ ಷಡಕ್ಷರ ಸತ್ಕವಿ ನಿರ್ಮಿತಂ ಸುಧೀ |
ಲಾಲಿತ ರಾಜಶೇಖರ ವಿಳಾಸ ಸಮಾಹ್ವಯ ಸುಪ್ರಬಂಧಮಾ ||
ನೀಲಿತ ಬುದ್ಧಿ ಪಾಠಕ ವಿಲೇಖಕ ಸಂಗತಿಯಿಂದಬದ್ಧಮಾ |
ಲಾಲಯಮಾಗಿ ನಂಜುವೆರೆಸಿರ್ದಿನಿವಾಲವೊಲಿರ್ದುದಕ್ಕಟಾ ||
ಪಂಡಿತ ರುದ್ರದೇವತನಯಂ ಗಿರಿಜಾಪತಿ ಪಾದಪೂಜನೋ |
ದ್ದಂಡತರ ಪ್ರಭಾವ ಪರಿಲಬ್ಧಲಸತ್ಕವಿತಾವಿಲಾಸನಾ ||
ಖಂಡದ ಸಾಮ್ಯಕೃಷ್ಣವಸುಧಾಪತಿ ದಿವ್ಯಸಭಾಮನೀಷಿ ಕೈ |
ಕೊಂಡು ಸಮಂತಿದಂ ಕರಿವೃಷಾಂಕನೆ ತಿರ್ದುತೆ ಮುದ್ರೆಗೈಸಿದಂ ||

ಶ್ರೀ ಶಾಸ್ತ್ರಿಗಳ ಸಂಸ್ಕೃತ ಕವಿತೆಯ ಒಂದು ಮಾದರಿ 'ವೀರಶೈವ ಮತ ಪ್ರಕಾಶಿಕಾ' ಎಂಬ ಪತ್ರಿಕೆಯಿಂದ

ವೃತ್ತ॥ ಶ್ರೀ ಮತ್ಕೈವಲ್ಯಲಕ್ಷ್ಮೀವಿಹರಣ ಸದನೋಜ್ಜಯಿನ್ಯಾಖ್ಯ
ಪುರ್ಯಾಂ ॥
ರಾಜಸ್ಸದ್ಧರ್ಮ ಸಿಂಹಾಸನಪತಿರಿತಿ ಸಿದ್ಧೂತ ಸಂಸಾರಭೀತಿಃ ॥
ನೀತಿಖ್ಯಾತಿ ಪ್ರತಿಷ್ಠಾ ಧೃತಿಕೃತಿ ಸುಕೃತಾಚಾರ ಸೌಶೀಲ್ಯ
ಸತ್ಯಕ್ಷ್ಮೀ ।
ರಾಂಭೋರಾಶಿ ಚಂದ್ರಸ್ಸಜಯತಿ ಗುರುಸಿದ್ಧಾಖ್ಯ ಸದ್ದೇಶಿ
ಕೇಂದ್ರಃ ॥
ಯಃ ಕಲ್ಯಾಣನಿಧಿರ್ಭಜಂತಿ ಶರಣಾಃ ಯಂ ಪಂಡಿತಾ ಸ್ಸರ್ವದಾ ।
ಯೇನ ಖ್ಯಾತ ನತಾವನಂ ವಿಲಸಿತಂ ಯಸ್ಮೈಶಿವಸ್ಸರ್ವದಾ ।
ಯಸ್ಮಾಜ್ಜಾಗ್ರತಿ ಭವ್ಯಕಾರ್ಯನಿವಹಾ ಯಸ್ಯಪ್ರದೀಪ್ತಂ
ಯಶೋ ।
ಯಸ್ಮಿನ್‌ಸಂತಿ ಗುಣಾವಿಭಾತಿ ಗುರುಸಿದ್ಧಾಚಾರ್ಯ
ವರ್ಯೋಮಹಾನ್ ॥

ಈ ಕನ್ನಡ ಮತ್ತು ಸಂಸ್ಕೃತ ಪದ್ಯಗಳ ವಾಚನದಿಂದ ನಾವು ಅವರ ಕವಿತ್ವಶಕ್ತಿಯನ್ನೂ ಭಾಷಾಪ್ರಭುತ್ವವನ್ನೂ ಅರಿಯಬಹುದು.

ಕನ್ನಡ ಸಂಸ್ಕೃತ ಉಭಯಭಾಷಾ ಪಂಡಿತರೂ, ಸುದೀರ್ಘವಾದ ತಮ್ಮ ಜೀವನವನ್ನು ನಾಡು-ನುಡಿಗಳ ಏಳಿಗೆಗಾಗಿ ಸವೆಸಿದವರೂ ಸಾವಿರಾರು ಮಂದಿ ವಿದ್ಯಾರ್ಥಿಗಳನ್ನು ಅನುಗ್ರಹಿಸಿ ಕಾಪಾಡಿದವರೂ, ದಿವ್ಯ ಭವ್ಯವಾದ ತಮ್ಮ ಜೀವನದಿಂದ ಕನ್ನಡಿಗರಿಗೆ ಸ್ಫೂರ್ತಿಯನ್ನು ಕೊಟ್ಟವರೂ, ವಿದ್ಯಾಬೋಧಕರೂ, ಕನ್ನಡ ಕುಲರಸಿಕರೂ, ಕನ್ನಡ ನಾಡಿನ ಕರ್ಮಯೋಗಿಗಳೂ ಆದ ಕರ್ಣಾಟಕ ಭಾಷಾರತ್ನಂ ಕರಿಬಸವ ಶಾಸ್ತ್ರಿಗಳ ಚರಿತ್ರೆಯು ನಿಜಕ್ಕೂ ಸ್ಫೂರ್ತಿದಾಯಕವಾದುದು.

ಕನ್ನಡನಾಡಿನಲ್ಲಿ ಹುಟ್ಟಿ ಕನ್ನಡದಲ್ಲಿ ವಿದ್ವಾಂಸರಾಗಿ ಕನ್ನಡದ ಏಳಿಗೆಗಾಗಿ ಜೀವನವನ್ನು ಸವೆಸಿದ ಮಹನೀಯರ ಪಂಕ್ತಿಯಲ್ಲಿ ಕರ್ಣಾಟಕ ಭಾಷಾರತ್ನಂ ಕರಿಬಸವಶಾಸ್ತ್ರಿಗಳು ಅಗ್ರಗಣ್ಯರು.

# ಕರ್ಣಾಟಕದಲ್ಲಿ ಸಂಸ್ಕೃತ ವಿದ್ಯೆ

ಸಂಸ್ಕೃತ ಭಾಷೆ ಮತ್ತು ಸಾಹಿತ್ಯವು ನಮ್ಮ ಭರತಖಂಡದಲ್ಲಿ ಅತ್ಯಂತ ಪ್ರಾಚೀನವೂ ಪವಿತ್ರವೂ ಆದವುಗಳೆಂದು ಭಾವಿಸಲ್ಪಟ್ಟಿವೆ. ಭಾರತೀಯರಿಗೆ ಪರಮ ಪ್ರಮಾಣ ಗ್ರಂಥಗಳೆಂದೆನಿಸಿದ, ವೇದಗಳು, ಆಗಮಗಳು, ಉಪನಿಷತ್ತುಗಳು, ದರ್ಶನಗಳು, ಸ್ಮೃತಿಗಳು, ಪುರಾಣಗಳು, ಗೀತಾದಿ ವೇದಾಂತ ಗ್ರಂಥಗಳು, ಪ್ರಸ್ಥಾನತ್ರಯಗಳು ಮೊದಲಾದ ಮಹತ್ವದ ವಾಙ್ಮಯವು ಆ ಸಂಸ್ಕೃತ ಭಾಷೆಯಲ್ಲಿ ಅಡಗಿರುವುದರಿಂದ ಇದರ ಬಗೆಗೆ ಹೆಚ್ಚಿನ ಭಕ್ತಿಗೌರವಗಳನ್ನು ನಮ್ಮ ದೇಶದ ಜನರು ವಹಿಸಿರುತ್ತಾರೆ. ಅಲ್ಲದೆ ಪ್ರಪಂಚದಲ್ಲೇ ಪ್ರಖ್ಯಾತ ಕವಿಗಳೆನಿಸಿರುವ, ಭಾಸ, ಕಾಳಿದಾಸ, ಭವಭೂತಿ, ಬಾಣಭಟ್ಟ, ದಂಡಿ, ಭಾರವಿ, ಅಶ್ವಘೋಷ, ಶ್ರೀಹರ್ಷ ಮೊದಲಾದ ಪ್ರತಿಭಾವಂತರು ಬರೆದಿರುವ, ಕಾವ್ಯ, ನಾಟಕ, ಅಲಂಕಾರಾದಿ ಗ್ರಂಥಗಳು ಸಂಸ್ಕೃತ ಭಾಷೆಯಲ್ಲಿ ಶೋಭಿಸುತ್ತಿವೆ. ಮಹರ್ಷಿಗಳಾದ ವ್ಯಾಸ, ವಾಲ್ಮೀಕಿಗಳು ಸಂಸ್ಕೃತದಲ್ಲಿ ಬರೆದಿರುವ, ಸಕಲಮಾನವ ಜಾತಿಗೂ ಉಪಯುಕ್ತ ಗ್ರಂಥಗಳಾದ, ಮಹಾಭಾರತ, ರಾಮಾಯಣ ಕಾವ್ಯಗಳೂ, ಶ್ರೀ ಶಂಕರಾಚಾರ್ಯರು, ಶ್ರೀ ರಾಮಾನುಜಾಚಾರ್ಯರು, ಶ್ರೀಕರಾಚಾರ್ಯರು, ಶ್ರೀ ಆನಂದ ತೀರ್ಥರು, ಶ್ರೀ ಸಾಯಣ ಮತ್ತು ಮಾಧವಾಚಾರ್ಯರು ಸಂಸ್ಕೃತದಲ್ಲಿ ಬರೆದಿರುವ ಭಾಷ್ಯಗಳೂ, ವ್ಯಾಖ್ಯಾನಗ್ರಂಥಗಳೂ ಜಗತ್ತಿನ ವಿವೇಕಗಳ ಮನ್ನಣೆಗೆ ಪಾತ್ರವಾಗಿವೆ. ಸಂಸ್ಕೃತ ಭಾಷೆಯಲ್ಲಿರುವ ಭರತನ ನಾಟ್ಯಶಾಸ್ತ್ರ, ಚರಕ–ಸುಶ್ರುತರ ಆಯುರ್ವೇದ ಗ್ರಂಥಗಳು, ಪತಂಜಲಿಯ ಯೋಗಶಾಸ್ತ್ರ, ಕಪಿಲಋಷಿಯ ಸಾಂಖ್ಯಶಾಸ್ತ್ರ, ಭಾಸ್ಕರಾಚಾರ್ಯರ ಗಣಿತ ಶಾಸ್ತ್ರ, ವರಾಹಮಿಹಿರನ ಜ್ಯೋತಿಷ ಶಾಸ್ತ್ರ, ಕೌಟಿಲ್ಯನ ಅರ್ಥಶಾಸ್ತ್ರ, ಅಂತೆಯೇ ಸಂಗೀತ ಶಾಸ್ತ್ರ, ಶಿಲ್ಪ ಶಾಸ್ತ್ರ, ಮೊದಲಾದ ಲೋಕೋಪಯುಕ್ತಗಳಾದ ಶಾಸ್ತ್ರ ಗ್ರಂಥಗಳು ಜಗತ್ತಿನ ಎಲ್ಲ

ಭಾಗದ ರಸಿಕ ವೃಂದವನ್ನೂ ದಾರ್ಶನಿಕರನ್ನೂ ಸಹೃದಯರನ್ನೂ ತಮ್ಮೆಡೆಗೆ ಆಕರ್ಷಿಸುತ್ತಿವೆ.

ಸಂಸ್ಕೃತದಲ್ಲಿ ಇರುವ ನಮ್ಮ ವೇದಗಳು ಜಗತ್ತಿನ ಅತಿ ಪ್ರಾಚೀನವಾದ ವಾಙ್ಮಯವೆನಿಸಿವೆ. ನಮ್ಮ ಉಪನಿಷತ್ತು ಮತ್ತು ಗೀತೆಗಳು ಜಗತ್ತಿನ ಜನರ ಜೀವನವನ್ನು ಪೂರ್ಣಗೊಳಿಸುವ ಹಾಗೂ ಜಗತ್ತಿಗೆ ಶಾಂತಿಯನ್ನೀಯುವ ಉತ್ತಮ ಗ್ರಂಥಗಳೆನಿಸಿವೆ. ನಮ್ಮ ಭಾಸ, ಕಾಳಿದಾಸಾದಿ ಮಹಾಕವಿಗಳಿಂದ ನಿರ್ಮಿತವಾದ ಕಾವ್ಯ ನಾಟಕಗಳು ಲೋಕದ ಜನರಿಗೆ ಮೇಲುಮಟ್ಟದ ಜೀವನ ಸೌಂದರ್ಯವನ್ನು ಬೋಧಿಸುವ ಅಮರ ಕೃತಿಗಳೆನಿಸಿವೆ. ನಮ್ಮ ವಿವಿಧ ಶಾಸ್ತ್ರಗ್ರಂಥಗಳು ಜಗತ್ತಿನ ಜನತೆಗೆ ಜ್ಞಾನ-ಭಂಡಾರವೆಂಬಂತಿವೆ. ಆದುದರಿಂದಲೇ ಸಂಸ್ಕೃತ ಭಾಷೆ ಮತ್ತು ಸಾಹಿತ್ಯವು ಪ್ರಾಚೀನತೆ, ಪವಿತ್ರತೆ, ಲೋಕೋಪಯುಕ್ತತೆ ಮೊದಲಾದ ಸದ್ಗುಣಗಳಿಂದ ಗಣ್ಯತೆಯನ್ನು ಪಡೆದಿದೆ.

ಸಂಸ್ಕೃತ ಭಾಷೆಯನ್ನು ನಮ್ಮ ಹಿರಿಯರು ಗೀರ್ವಾಣ ಭಾಷೆ, ದೇವ ಭಾಷೆ ಎಂದು ಮೊದಲಾಗಿ ಗೌರವಿಸಿದ್ದಾರೆ. ವಿಶಾಲವಾದ ಈ ಭರತ ಖಂಡದಲ್ಲಿ ಸಂಸ್ಕೃತ ಭಾಷೆಯು ಭಾರತೀಯ ಸಂಸ್ಕೃತಿಯ ಉದ್ಧಾರಕ್ಕೂ ಪ್ರಭಾವಕ್ಕೂ ಕಾರಣವಾಗಿದೆ. ಅನೇಕ ಪ್ರಾಂತಗಳಿರುವ, ಹಲವು ದೇಶ ಭಾಷೆಗಳಿಂದ ಕೂಡಿರುವ, ವಿಶಾಲವಾದ ಈ ಭರತಖಂಡದಲ್ಲಿ ಸಂಸ್ಕೃತವು ಬಹಳ ಕಾಲದಿಂದ ರಾಷ್ಟ್ರಭಾಷೆಯಾಗಿ ಗೌರವಿಸಲ್ಪಟ್ಟಿದೆ. ಆದ ಕಾರಣವೇ ನಮ್ಮ ಧರ್ಮ ಗ್ರಂಥಗಳೂ ರಾಜನೀತಿ ಗ್ರಂಥಗಳೂ ದಾರ್ಶನಿಕ ಗ್ರಂಥಗಳೂ ಸಂಸ್ಕೃತ ಭಾಷೆಯಲ್ಲಿಯೇ ರಚಿಸಲ್ಪಟ್ಟವೆ. ಹಿಮಾಲಯದಿಂದ ಕನ್ಯಾಕುಮಾರಿವರೆಗಿನ ವಿಶಾಲವಾದ ನಮ್ಮ ದೇಶದಲ್ಲಿ ಒಂದೇ ಧರ್ಮ, ಒಂದೇ ಬಗೆಯ ದೇಶಾಭಿಮಾನವು ಕಂಡು ಬರುವುದಕ್ಕೆ ಮುಖ್ಯ ಕಾರಣವು ಸಂಸ್ಕೃತ ಭಾಷೆಯ ಪ್ರಭಾವವೇ ಎಂದು ಹೇಳಬಹುದು.

ಭರತಖಂಡದಲ್ಲಿ ಸಂಸ್ಕೃತವು ಅತ್ಯಂತ ಪ್ರಾಚೀನವಾದ ಭಾಷೆಯೆನಿಸಿದೆ. ಉತ್ತರ ಹಿಂದೂಸ್ಥಾನದ, ಹಿಂದಿ, ಬಂಗಾಳಿ, ಬಿಹಾರಿ, ಗುಜ

ರಾತಿ, ಒರಿಯ, ನೇಪಾಳಿ, ಕಾಶ್ಮೀರಿ, ಪುಷ್ಟು, ಪಂಜಾಬಿ, ಮೊದಲಾದ ಆರ್ಯ ಭಾಷೆಗಳಿಗೆ ಸಂಸ್ಕೃತವು ಮಾತೃಸ್ಥಾನವೆನಿಸಿದೆ. ದಕ್ಷಿಣ ಹಿಂದೂಸ್ಥಾನದ ಕನ್ನಡ, ತೆಲುಗು, ತಮಿಳು, ಮಲೆಯಾಳ, ತುಳು ಮೊದಲಾದ ದ್ರಾವಿಡ ಭಾಷೆಗಳಿಗೆ ಸಂಸ್ಕೃತವು ಹೆತ್ತತಾಯಿಯಲ್ಲವಾದರೂ ಸಾಕುತಾಯಿಯಂತೆ ಮಹೋಪಕಾರ ಮಾಡಿದೆ. ಒಟ್ಟನಲ್ಲಿ ಭರತಖಂಡದಲ್ಲಿ ಎಲ್ಲ ಭಾಷೆಗಳೂ ಸಾಹಿತ್ಯಗಳೂ ಸಂಸ್ಕೃತದ ಹಂಗಿಗೆ ಒಂದಲ್ಲ ಒಂದು ರೀತಿಯಿಂದ ಒಳಪಟ್ಟವೆ. ಆದುದರಿಂದ ಭಾರತೀಯನೆನಿಸಿದ ಪ್ರತಿಯೊಬ್ಬನೂ ಸಂಸ್ಕೃತವನ್ನು ಕಲಿಯುವುದು ಹಾಗೂ ಪ್ರೋತ್ಸಾಹಿಸುವುದು ಆಗತ್ಯವಾಗಿದೆ.

ಇಂದು ಸಂಸ್ಕೃತವು ತನ್ನ ಮಹತ್ವದಿಂದಲೇ ಭರತಖಂಡದ ಎಲ್ಲೆಯನ್ನೂ ದಾಟಿ ಜಗತ್ತನ್ನೆಲ್ಲಾ ವ್ಯಾಪಿಸಿದೆ. ಪ್ರಪಂಚದ ಎಲ್ಲ ವಿಶ್ವವಿದ್ಯಾನಿಲಯಗಳಲ್ಲಿಯೂ ಸಂಸ್ಕೃತಕ್ಕೆ ಮೀಸಲು ಪೀಠಗಳಿವೆ. ಪ್ರಪಂಚದ ಪ್ರಾಚೀನ ಭಾಷೆಗಳಾದ, ಗ್ರೀಕ್, ಲ್ಯಾಟಿನ್, ಅರಬ್ಬಿ ಭಾಷೆಗಳ ಸಾಲಿನಲ್ಲಿ ಸಂಸ್ಕೃತಕ್ಕೆ ಅಗ್ರಸ್ಥಾನವಿದೆ. ಸಂಸ್ಕೃತವು ಇಂದು ಜನಸಾಮಾನ್ಯರ ಬಳಕೆಯಲ್ಲಿಲ್ಲದಿದ್ದ ಮಾತ್ರಕ್ಕೆ ಮೃತಭಾಷೆ (Dead Language) ಯಾಗುವುದಿಲ್ಲ. ಈಗಲೂ ಹಲವು ಮಂದಿ ವಿದ್ವಾಂಸರು ಸಂಸ್ಕೃತದಲ್ಲಿಯೇ ಮಾತ ಕತೆ ನಡೆಸುವುದನ್ನು ನಾವು ನೋಡುತ್ತಿದ್ದೇವೆ. ಸಂಸ್ಕೃತದ ನೆರವಿಲ್ಲದೆ ಭಾರತದ ಯಾವ ಭಾಷೆಯೂ ಇರಲಾರದು.

ಲ್ಯಾಟಿನ್, ಗ್ರೀಕ್ ಭಾಷೆಗಳ ಪಂಕ್ತಿಯಲ್ಲಿ ಸಂಸ್ಕೃತಕ್ಕೆ ಅಗ್ರಸ್ಥಾನವಿದೆ. ಇದಕ್ಕೆ ಉದಾಹರಣೆಯಾಗಿ ಇಂಗ್ಲೆಂಡಿನಲ್ಲಿ ಹಲವು ಸಂಸ್ಕೃತ ಗ್ರಂಥಗಳು ಪ್ರಕಟವಾಗಿರುವುದೂ, ಪಾಶ್ಚಾತ್ಯ ಪಂಡಿತರಾದ ಮ್ಯಾಕ್ಸ್ ಮುಲ್ಲರ್ (Max Muller), ವಿಂಟರ್‌ನಿಟ್ಜ್ (Winternitz) ಎಚ್. ಎಚ್. ವಿಲ್ಸನ್ (H. H. Wilsons) ರಾತ್ (Roth) ಗ್ರಿಫಿತ್ (Griffith) ಕೀತ್ (Keeth) ವೀಬರ್ (Weber) ಕೋಲ್‌ಬ್ರೂಕ್ (Colebrook) ಜಾನ್‌ಸ್ಟನ್ (Johnston) ಥಾಮಸ್ (Thomas) ಮೊದಲಾದ ಪಾಶ್ಚಾತ್ಯ ಪಂಡಿತರು ಸಂಸ್ಕೃತ

ಗ್ರಂಥಗಳನ್ನು ಭಾಷಾಂತರಿಸಿರುವರಲ್ಲದೆ, ಸಂಸ್ಕೃತದ ಬಗ್ಗೆ ಗೌರವಾರ್ಹವಾದ ಮಾತುಗಳನ್ನಾಡಿರುವುದೂ ನಮಗೆಲ್ಲರಿಗೂ ಹೆಮ್ಮೆಯನ್ನುಂಟು ಮಾಡುವ ಸಂಗತಿಯಾಗಿದೆ. ಶ್ರೀ ವಿಲ್ಸನ್‌ಮಹಾಶಯರು ತಮ್ಮದೊಂದು ಪತ್ರದಲ್ಲಿ ಸಂಸ್ಕೃತ ಭಾಷೆಯ ಪ್ರಭಾವವನ್ನು ಈ ರೀತಿಯಾಗಿ ಕೊಂಡಾಡಿರುವರು.

ಅಮೃತಂ ಮಧುರಂ ಸಮ್ಯಕ್। ಸಂಸ್ಕೃತಂ ಹಿ
ತತೋಽಧಿಕಮ್।
ದೇವಭೋಗ್ಯಮಿದಂ ಯಸ್ಮಾತ್ ದೇವಭಾಷೇತಿ ಕಥ್ಯತೇ॥
ನಜಾನೇ ವಿದ್ಯತೇ ಕಿಂ ತತ್ ಮಾಧುರ್ಯಮಿಹಸಂಸ್ಕೃತೇ।
ಸರ್ವದೈವ ಸಮುನ್ಮತ್ತಾಃ ಯೇನ ವೈದೇಶಿಕಾ ವಯಂ॥
ಯಾವದ್ಭಾರತ ವರ್ಷಸ್ಯಾತ್ ಯಾವದ್ವಿಂಧ್ಯ ಹಿಮಾಚಲಾ।
ಯಾವದ್ಗಂಗಾಚ ಗೋದಾಚ ತಾನದೇವಹಿ ಸಂಸ್ಕೃತಮ್॥

ಮ್ಯಾಕ್ಸ್‌ಮುಲ್ಲರ್ ಮಹಾಶಯರು ಅವರ 'History of Ancient Sanskrit Literature' 'ಎಂಬ ಗ್ರಂಥದಲ್ಲಿ ಸಂಸ್ಕೃತದ ಮಹತ್ವವನ್ನು ಕುರಿತು ಹೀಗೆ ಹೇಳಿದ್ದಾರೆ. "No one who wishes to acquire a thorough knowledge of Greek Latin or any other of the Indo - Europeon language no one who takes an interest in the philology and the historical growth of human speech, on one who desires to study the history of man-kind to discover the germs of the language, religion and mythology of our fore-fathers, the wisdom of Him who is not the God of the jews only can dispense with some knowledge of Sanskrit"

"ಗ್ರೀಕ್, ಲ್ಯಾಟಿನ್ ಮೊದಲಾದ ಇಂಡೋ ಯುರೋಪಿಯನ್ ಭಾಷೆಗಳನ್ನು ಸರಿಯಾಗಿ ತಿಳಿದುಕೊಳ್ಳುವುದಕ್ಕಾಗಲಿ, ಭಾಷಾಶಾಸ್ತ್ರ, ದರ್ಶನ, ವೇದಾಂತ, ಮೊದಲಾದ ಶಾಸ್ತ್ರಗಳ ಪರಿಚಯಕ್ಕಾಗಲಿ, ಮಾನವನ ಚರಿತ್ರೆಯನ್ನು ತಿಳಿದುಕೊಳ್ಳಲಿಕ್ಕಾಗಲಿ, ಪ್ರಾಚೀನರ ಭಾಷೆ, ಧರ್ಮ, ದೇವತಾಶಾಸ್ತ್ರಗಳ ಮೂಲವನ್ನು ಅರಿತುಕೊಳ್ಳಲಿಕ್ಕಾಗಿ, ಒಟ್ಟಿನಲ್ಲಿ ಸರ್ವೇಶ್ವರನಾದ ಮಹಾದೇವನ ಸ್ವರೂಪದ ಜ್ಞಾನಕ್ಕಾಗಲಿ ಸಂಸ್ಕೃತ ಭಾಷೆಯ ಅಧ್ಯಯನವಿಲ್ಲದೆ ಬೇರೆ ಮಾರ್ಗವೇ ಇಲ್ಲ."

"What can India teach us?" ಎಂಬ ಪುಸ್ತಕದಲ್ಲಿ ಇದೇ ಮಹನೀಯರು ಮತ್ತಷ್ಟು ಹೃದಯಂಗಮವಾಗಿ ತಿಳಿಸುತ್ತಾರೆ. "If I were asked under what sky, the human mind most fully developed some of its choicest gifts, has most deeply pondered on the greatest problems of life, has found solutions of some of them, which will deserve the attention of even those who have studied Plato and Kant, I would point to India."

"ಯಾವ ದೇಶದಲ್ಲಿ ಮಾನವನು ದೈವದತ್ತವಾದ ತನ್ನ ಶಕ್ತಿಗಳನ್ನು ಸಂಪೂರ್ಣವಾಗಿ ಸದುಪಯೋಗಪಡಿಸಿಕೊಂಡಿದ್ದಾನೆ? ಯಾವ ಜನಾಂಗವು ಜೀವನದ ಸಮಸ್ಯೆಗಳನ್ನು ಆಳವಾಗಿ ವಿಚಾರ ಮಾಡಿದೆ? ಮತ್ತು ಅದಕ್ಕೆ ತಕ್ಕ ಪರಿಹಾರಗಳನ್ನು ಕಂಡು ಹಿಡಿದಿದೆ? ಎಂದು ನನ್ನನ್ನು ಕೇಳಿದರೆ, ಅದಕ್ಕೆ ಉತ್ತರವಾಗಿ ನಾನು ಭರತ ಖಂಡವನ್ನೇ ತೋರಿಸುತ್ತೇನೆ. ಈ ಪರಿಹಾರ ಗಳು ಅವರಿಗೆ ಮಾತ್ರವೇ ಅಲ್ಲದೆ, ಪ್ಲೇಟೋ, ಕ್ಯಾಂಟ್ ಮೊದಲಾದ ನವೀನ ದಾರ್ಶನಿಕರ ಗ್ರಂಥಗಳನ್ನು ಅಧ್ಯಯನ ಮಾಡುವವರಿಗೂ ಸಹ ಪ್ರಚೋದಕ ಗಳಾಗಿವೆ"

ಹೀಗೆಂದು ಅಭಿಪ್ರಾಯ ಪಟ್ಟಿರುತ್ತಾರೆ.

ಸಂಸ್ಕೃತ ಸಾಹಿತ್ಯವು ಪಾಶ್ಚಾತ್ಯರಿಗೆ ತಿಳಿದದ್ದು ಒಂದು ಹೊಸ ಪ್ರಪಂಚವನ್ನೇ ಕಂಡು ಹಿಡಿದ ಹಾಗಾಗಿದೆಯೆಂದು ಕೈ॥ ಬಾಲ ಗಂಗಾಧರ ತಿಲಕರು ಹೇಳಿದ್ದಾರೆ.

"Through the discovery of the ancient langauge and sacred books of India, a discover which the professor Maxmuller compares with the discovery of a new world."

ಅಭಿಜ್ಞಾನ ಶಾಕುಂತಲದ ಭಾಷಾಂತರವನ್ನು ಓದಿ ಗಯಟೆ ಎಂಬ ಜರ್ಮನ್ ಕವಿಯು ತನಗಾದ ಆನಂದವನ್ನು ಹೀಗೆ ತಿಳಿಸಿರುತ್ತಾನೆ;

"ವಸಂತ ಋತುವಿನ ಪುಷ್ಪಗಳೂ, ನಾನಾವಿಧವಾದ ಫಲಗಳೂ, ವಿಧ ವಿಧವಾದ ಸುಖಸಂತೋಷಗಳೂ, ಶಾಂತಿ ಸಮೃದ್ಧಿಗಳೂ, ಇಹಪರ ಸೌಖ್ಯ ಗಳೆಲ್ಲವೂ ಶಾಕುಂತಲವೆಂಬ ಒಂದು ಗ್ರಂಥದಲ್ಲಿ ಅಡಗಿವೆ;"

"Wilt tho, the blossoms of spring and the the fruits that are later in season, Wilt thou have charms and belights".

Wilt thou have strength and support wilt thou with one short word encompass the earth and the heven.

All is said if I name only, Shakuntala thee."

ತನ್ನ ಜೀವನದ ಕೊನೆಯ ದಿವಸಗಳಲ್ಲಿ ಗೀತೆ ಮತ್ತು ಉಪನಿಷತ್ತು ಗಳಿಂದಲೇ ಮನಶ್ಶಾಂತಿಯು ದೊರಕಬಲ್ಲುದೆಂಬ ಹಿರಿಯ ಆಶೆಯಿಂದ

ಶೋಪೆನ್ಹೋರ್ (Schopenheur) ಎಂಬ ದಾರ್ಶನಿಕರು ಆಡಿರುವ ಅಮರವಾಣಿಯು ಸುವರ್ಣಾಕ್ಷರಗಳಲ್ಲಿ ಬರೆದಿಡುವಂತಹುದಾಗಿದೆ.

'The study of Gita and Upanishads—the greatest solace in the last days my life.'

ವಿಶ್ವದ ಪ್ರಾಜ್ಞರು ಸಂಸ್ಕೃತ ಭಾಷೆಯ ಮಹತ್ವವನ್ನು ಚೆನ್ನಾಗಿ ಅರಿತಿರುವುದರಿಂದಲೇ ಅದಕ್ಕೆ ಹೆಚ್ಚಿನ ಮನ್ನಣೆಯನ್ನು ಕೊಟ್ಟಿದ್ದಾರೆ. ಲಂಡನ್, ಆಕ್ಸ್‌ಫರ್ಡ್, ಬರ್ಲಿನ್, ಪ್ಯಾರಿಸ್, ನ್ಯೂಯಾರ್ಕ್ ನಗರಗಳಲ್ಲಿನ ಪುಸ್ತಕಭಂಡಾರದಲ್ಲಿ ಅಮೌಲ್ಯ ಸಂಸ್ಕೃತ ಗ್ರಂಥಗಳ ಸಂಗ್ರಹವಿದೆ. ಹಾಗೆಯೇ ಭಾರತದಲ್ಲಿಯೂ ಮೈಸೂರು, ತಂಜಾವೂರು, ಮದರಾಸು, ಪುಣೆ, ಬೊಂಬಾಯಿ, ಕಲ್ಕತ್ತ, ಕಾಶಿ, ಶ್ರೀನಗರ, ಖಟ್ಮಂಡುಗಳಲ್ಲಿ ಇರುವ ಪುಸ್ತಕಾಲಯಗಳಲ್ಲಿಯೂ ಉತ್ತಮೋತ್ತಮವಾದ ಸಂಸ್ಕೃತ ಗ್ರಂಥಗಳಿವೆ. ಈ ಸಂಸ್ಕೃತ ಪುಸ್ತಕಾಲಯಗಳು ಸಂಸ್ಕೃತ ವಿದ್ಯೆಯ ಸಂಶೋಧನೆಗೆ ಹೆಚ್ಚಿನ ಸೇವೆಯನ್ನು ಸಲ್ಲಿಸಿವೆ. ನಮ್ಮ ಕರ್ನಾಟಕ ದೇಶದಲ್ಲಿಯೂ ಉಡುಪಿ, ಶೃಂಗೇರಿ, ಧಾರವಾಡ, ಹುಬ್ಬಳ್ಳಿ, ಯಾದಗಿರಿ: ಸೊಲ್ಲಾಪುರ, ಬಳ್ಳಾರಿ, ಬೆಂಗಳೂರು, ಮೈಸೂರು ಮೊದಲಾದ ಸ್ಥಳಗಳಲ್ಲಿ ಸಂಸ್ಕೃತ ಕಾಲೇಜುಗಳೂ ಪಾಠಶಾಲೆಗಳೂ ಸ್ಥಾಪನೆಯಾಗಿ ಈ ಬಗ್ಗೆ ಹೆಚ್ಚಿನ ಸೇವೆಯನ್ನು ಸಲ್ಲಿಸುತ್ತಿವೆ. ಸರ್ಕಾರದವರೂ ಶ್ರೀಮಂತ ಮಹನೀಯರೂ ನಾನಾರೀತಿಯಿಂದ ಸಂಸ್ಕೃತದ ಪ್ರಚಾರಕ್ಕೆ ಸಹಾಯ ಮಾಡಿರುತ್ತಾರೆ.

ಮೈಸೂರು ದೇಶದಲ್ಲಿನ ಕಾಲೇಜು ಮತ್ತು ವೇದ ಮಹಾ ಪಾಠಶಾಲೆಗಳಲ್ಲಿ ಸಮಸ್ತ ಹಿಂದೂ ಜನಗಳಿಗೂ ಸಂಸ್ಕೃತ ಸಾಹಿತ್ಯ ಮತ್ತು ವೇದವನ್ನು ಕಲಿಸುವಂತೆ ಸರ್ಕಾರದವರು ಆಜ್ಞೆಮಾಡಿರುತ್ತಾರೆ. ಈಗ ಅದರಂತೆಯೇ ಪಾಠಪ್ರವಚನಗಳು ನಡೆಯುತ್ತಿವೆ. ಬೆಂಗಳೂರು, ಮೈಸೂರು ಸಂಸ್ಕೃತಕಾಲೇಜು

ಗಳ ಮತ್ತು ವೇದಮಹಾಪಾಠಶಾಲೆಯ ಮೇಲ್ವಿಚಾರಣೆಗಾಗಿ ಸರ್ಕಾರದವರು ಪ್ರಾಜ್ಞರ ಸಲಹಾ ಸಮಿತಿಗಳನ್ನು ಏರ್ಪಡಿಸಿರುತ್ತಾರೆ. ಈ ಸಂಸ್ಕೃತ ಕಾಲೇಜುಗಳಲ್ಲಿ, ವೇದಾಧ್ಯಯನ, ಸಾಹಿತ್ಯ, ತರ್ಕ, ವ್ಯಾಕರಣ, ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಜೈನ, ಶಕ್ತಿವಿಶಿಷ್ಟಾದ್ವೈತ (ವೀರಶೈವ ಸಿದ್ಧಾಂತ)ಗಳು ಬೋಧಿಸಲ್ಪಡುತ್ತಿವೆ. ಮೈಸೂರು ಶ್ರೀಮನ್ಮಹಾರಾಜರವರ ಸಂಸ್ಕೃತ ಕಾಲೇಜಿನಲ್ಲಿಯೂ ಬೆಂಗಳೂರು ವೇದ ಮಹಾಪಾಠಶಾಲೆಯಲ್ಲಿಯೂ ಎಲ್ಲಾ ಹಿಂದೂ ಮತ ಬಾಂಧವರಿಗೂ ವೇದಾಧ್ಯಯನಕ್ಕೆ ಅವಕಾಶವನ್ನು ಕಲ್ಪಿಸಿಕೊಡಲಾಗಿದೆ.

ಬೆಂಗಳೂರು ಸಂಸ್ಕೃತ ಕಾಲೇಜಿನಲ್ಲಿಯೂ ಮೈಸೂರು ಕಾಲೇಜಿನಲ್ಲಿಯೂ ಓದುವ ವಿದ್ಯಾರ್ಥಿಗಳಿಗೆ ವೇತನಗಳು ಕೊಡಲ್ಪಡುತ್ತಿವೆ. ಮೈಸೂರಿನಲ್ಲಿ ಮತ್ತು ಬೆಂಗಳೂರಿನಲ್ಲಿ ಆಯುರ್ವೇದ ಶಾಸ್ತ್ರದ ಅಭ್ಯಾಸಕ್ಕೂ ಒಂದೊಂದು ಕಾಲೇಜಿದೆ.

ಸಂಸ್ಕೃತ ಕಾಲೇಜುಗಳಲ್ಲಿ ಕ್ರಮವಾಗಿ ಶಿಕ್ಷಣ ದೊರೆಯಲು ಅಭ್ಯಾಸದ ಅವಧಿಯನ್ನು ಪ್ರಾರಂಭದಿಂದ ೧೩ ವರ್ಷಗಳವರೆಗೆ ಗೊತ್ತು ಮಾಡಲಾಗಿದೆ.[೧] ಪ್ರಥಮ ೩ ವರ್ಷ, ಕಾವ್ಯ ೨ ವರ್ಷ, ಸಾಹಿತ್ಯ ೩ ವರ್ಷ, ಉತ್ತಮ ೫ ವರ್ಷ ಈ ರೀತಿಯಾಗಿ ಒಟ್ಟು ೧೩ ವರ್ಷಗಳು ವಿಧಾಯಕವಾಗಿವೆ. ವಿದ್ಯಾರ್ಥಿಗಳು ಶಾಲಾ ಕಾಲೇಜುಗಳಲ್ಲಿ ಓದಿಯಾಗಲಿ, ಸ್ವತಂತ್ರವಾದ ಗುರುಕುಲಗಳಲ್ಲಿ ಅಭ್ಯಾಸ ಮಾಡಿಯಾಗಲಿ ಪರೀಕ್ಷೆಗಳಿಗೆ ಕುಳಿತುಕೊಳ್ಳಲು ಅವಕಾಶವನ್ನು ಸರ್ಕಾರದವರು ಏರ್ಪಡಿಸಿರುತ್ತಾರೆ. ಸಂಸ್ಕೃತವನ್ನು ದ್ವಿತೀಯ ಭಾಷೆಯಾಗಿ ತೆಗೆದುಕೊಂಡು ಎಸ್. ಎಸ್.

---

೧ ಸಂಸ್ಕೃತದ ಅಭ್ಯಾಸದ ಅವಧಿಯು ಬಂಗಾಳ, ಜಯಪುರ, ಬರೋಡ, ಮತ್ತು ಕಾಶಿಗಳಲ್ಲಿ ೧೨ ವರ್ಷ, ತಿರುವಾಂಕೂರಿನಲ್ಲಿ ೬ ವರ್ಷ, ಮದ್ರಾಸಿನಲ್ಲಿ ೬ ವರ್ಷಗಳಂತೆ ಗೊತ್ತಾಗಿದೆ.

ಎಲ್. ಸಿ. ಯಲ್ಲಿ ಉತ್ತೀರ್ಣರಾದವರನ್ನು ಸಾಹಿತ್ಯಪರೀಕ್ಷೆಯ ತರಗತಿಗೆ ಸೇರಿಸಿಕೊಳ್ಳಲು ಅವಕಾಶವಿದೆ. ಸ್ವಂತವಾಗಿ ಓದಿಕೊಂಡು ಬಂದ ವಿದ್ಯಾರ್ಥಿಗಳಿಗೆ ಆಯಾ ತರಗತಿಗಳಿಗೆ ಸೇರಿಕೊಂಡು ಅಭ್ಯಾಸಮಾಡುವ ಅವಕಾಶವಿದೆ. ಎಲ್ಲಾ ವಿದ್ಯಾರ್ಥಿಗಳಿಗೂ ಯಾವ ವ್ಯತ್ಯಾಸವನ್ನೂ ಮಾಡದೆ ಮಾಹೆಯಾನಾ ೩ರೂ ನಿಂದ ೧೦ರೂ ವರೆವಿಗೂ ವೇತನವನ್ನೂ, ಪರೀಕ್ಷೆಗಳಲ್ಲಿ ತೇರ್ಗಡೆಯಾದವರಿಗೆ ೫ ರಿಂದ ೧೫ರೂ ವರೆವಿಗೂ (ಶಾಲುಜೋಡಿ ಸಹಿತ) ಬಹುಮಾನವಾಗಿ ಕೊಡಲ್ಪಡುತ್ತದೆ. ರಾಜ್ಯದ ಗಣ್ಯರಾದ ಮಹನೀಯರನೇಕರು ವಿದ್ಯಾರ್ಥಿಗಳಿಗೆ ಪಾರಿತೋಷಿಕಗಳನ್ನೂ ವೇತನಗಳನ್ನೂ ಕೊಡಲು ತಕ್ಕ ಏರ್ಪಾಟುಗಳನ್ನು ಮಾಡಿರುತ್ತಾರೆ. ಸಾಹಿತ್ಯ ಪರೀಕ್ಷೆಗಳಲ್ಲಿ ಉತ್ತೀರ್ಣರಾದವರಿಗೆ ಎಸ್. ಎಸ್. ಎಲ್. ಸಿ. ಯವರಿಗೆ ಸಿಗಬಹುದಾದ ಮಾಧ್ಯಮಿಕಶಾಲಾ ಉಪಾಧ್ಯಾಯ ವೃತ್ತಿಯೂ, ವಿದ್ವಾನ್ ಪರೀಕ್ಷೆಯಲ್ಲಿ ಉತ್ತೀರ್ಣರಾದವರಿಗೆ ಬಿ. ಎ. ಗ್ರಾಜುಯೇಟುಗಳಿಗೆ ದೊರೆಯುವಂತೆ ಹೈಸ್ಕೂಲುಗಳಲ್ಲಿ ಬೋಧಕ ವೃತ್ತಿಯೂ ಸಿಗುವಂತೆ ಸರ್ಕಾರದವರು ಸೌಕರ್ಯವನ್ನು ಕಲ್ಪಿಸಿರುತ್ತಾರೆ. B

ಮೈಸೂರು ಮತ್ತು ಬೆಂಗಳೂರು ಸಂಸ್ಕೃತ ಕಾಲೇಜುಗಳಿಗೆ ಸಂಬಂಧಿಸಿದಂತೆ ಎಲ್ಲಾ ಮತೀಯರಿಗೂ ಇರಲು ಅನುಕೂಲವಾಗುವಂತೆ ಸರ್ಕಾರದ ಆಶ್ರಯದಲ್ಲಿ ನಡೆಯುವ ವಿದ್ಯಾರ್ಥಿ ನಿಲಯಗಳಿವೆ. ಇದಲ್ಲದೆ ಇತರರ ವಿದ್ಯಾರ್ಥಿ ನಿಲಯಗಳಿವೆ. ಇದಲ್ಲದೆ ಈ ಕಾಲೇಜಿನಲ್ಲಿ ಅಭ್ಯಾಸ ಮಾಡುವ ಎಲ್ಲಾ ವಿದ್ಯಾರ್ಥಿಗಳಿಗೂ ಮಧ್ಯಾಹ್ನ ಕಾಲದಲ್ಲಿ ಉಪಾಹಾರವನ್ನು ಉಚಿತವಾಗಿ ಏರ್ಪಡಿಸಲಾಗಿದೆ. ಇದಕ್ಕೆ ಸರ್ಕಾರದವರೂ

---

B ಸಂಸ್ಕೃತ ವಿದ್ವಾಂಸರಿಗೆ ಪ್ರೋತ್ಸಾಹ ಕೊಡುವ ಬಗೆಗೆ ಯು. ಪಿ. ಸರ್ಕಾರದವರು ತಾ. ೬-೮-೧೯೫೦ರ ಹಿಂದೂ ಪತ್ರಿಕೆಯಲ್ಲಿ ಪ್ರಕಟಿಸಿರುವ ವಿಷಯವನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

ಖಾಸಗೀ ಮಹನೀಯರೂ ಉದಾರವಾಗಿ ಧನಸಹಾಯ ಮಾಡಿರುತ್ತಾರೆ. ಇಂತಹ ಧರ್ಮಶೀಲರಾದ ಮಹನೀಯರ ಭಾವ ಚಿತ್ರಗಳು ಬೆಂಗಳೂರು ಕಾಲೇಜಿನ ಸಭಾಂಗಣದಲ್ಲಿ ಚಿರಸ್ಮರಣೀಯವಾಗಿ ಶೋಭಿಸುತ್ತಿವೆ. ಇದಲ್ಲದೆ ಮೈಸೂರು, ಬೆಂಗಳೂರು, ಸಿದ್ಧಗಂಗೆ ಮೊದಲಾದ ಸ್ಥಳಗಳಲ್ಲಿ ವೀರಶೈವ ವಿದ್ಯಾರ್ಥಿಗಳಿಗೆ ಹಲವು ಮಠಾಧಿಪತಿಗಳಿಂದಲೂ ಉದಾರಿಗಳಾದ ಶ್ರೀಮಂತರಿಂದಲೂ ವಿದ್ಯಾರ್ಥಿ ನಿಲಯಗಳು ಏರ್ಪಡಿಸಲ್ಪಟ್ಟಿವೆ. ಇಂತಹ ನಿಲಯಗಳು ಬ್ರಾಹ್ಮಣ, ವೈಶ್ಯ ಮತ್ತು ಜೈನ ವಿದ್ಯಾರ್ಥಿಗಳಿಗೂ ಏರ್ಪಾಟಾಗಿವೆ. ಬೆಂಗಳೂರು ಮೈಸೂರು ಕಾಲೇಜುಗಳಿಗೆ ಮೈಸೂರು ರಾಜದಿಂದಲೇ ಅಲ್ಲದೆ ಭಾರತದ ಇತರ ಭಾಗಗಳಿಂದಲೂ ವಿದ್ಯಾರ್ಥಿಗಳು ಬಂದು ಅಭ್ಯಾಸಮಾಡಿ ವಿದ್ವಾಂಸರಾಗಿ ಹೋಗುತ್ತಿದ್ದಾರೆ. ಅನೇಕ ಹೆಣ್ಣು ಮಕ್ಕಳು ಕೂಡಾ

---

## SANSKRIT SCHOLARS AND GOVT. JOBS

Lucknow, Aug. 4.:- The U. P. Government have decided to give recognition to the Government Sanskrit College degrees and diplomas for the purpose of state services and admission to Governmental and non-Governmental technical institutions. The Shastri degree will be ltreated as equivalent to the Bachelor of Arts degree, the Uttar Madhyam with Intermediate standard, the Purva Madhyam with High School and Prathama with class Eight.

ಬೆಂಗಳೂರು, ಮೇಲುಕೋಟೆ ಸಂಸ್ಕೃತ ಕಾಲೇಜುಗಳಿಗೆ ಸೇರಿರುವುದು ಶ್ಲಾಘ್ಯವಾದ ಮಾದರಿಯಾಗಿದೆ. ಕಾಶೀ ಮತ್ತು ಕಲ್ಕತ್ತಗಳಲ್ಲಿ ಹೆಚ್ಚು ಮಂದಿ ಸ್ತ್ರೀಯರು ಸಂಸ್ಕೃತವನ್ನು ಓದುತ್ತಿದ್ದಾರೆ ಎಂಬುದು ಇಲ್ಲಿ ಗಮನಾರ್ಹ.

ಮೈಸೂರು ಸಂಸ್ಕೃತ ವಿದ್ವಾನ್ ಪರೀಕ್ಷೆಯು ಭಾರತದ ಇತರ ತೀರ್ಥ (ಕಲ್ಕತ್ತ) ಭೂಷಣ (ಢಕ್ಕ) ಆಚಾರ್ಯ (ಕಾಶಿ) ಶಿರೋಮಣಿ (ಮದ್ರಾಸು) ವಿಶಾರದ, ಶಾಸ್ತ್ರೀ (ಪಂಜಾಬು) ಉಪಾಧ್ಯಾಯ (ಜಯಪುರ) ಮಹಾಚಾರ್ಯ (ಬೊಂಬಾಯಿ) ಮಹಾವಿದ್ವಾನ್ (ತಿರುವಾಂಕೂರು) ಮೊದಲಾದ ಪ್ರೌಢಪರೀಕ್ಷೆಗಳಿಗೆ ಸಮಾನವಾಗಿದೆ.

ಕರ್ನಾಟಕ ಹಾಗೂ ಭಾರತದ ವಿದ್ಯಾರ್ಥಿಗಳು ನಮ್ಮ ನಾಡಿನ ಪ್ರಾಚೀನರ, ಜ್ಞಾನ, ಪ್ರತಿಭೆ, ಅನುಭವಗಳ ಭಂಡಾರವಾದ ಸಂಸ್ಕೃತ ವಿದ್ಯೆಯನ್ನು ಅಭ್ಯಾಸ ಮಾಡಿ, ಪ್ರಾಚೀನ ವಿಶ್ವವಿದ್ಯಾನಿಲಯಗಳಾದ ನಳಂದ, ತಕ್ಷಶಿಲಾ, ಬಳ್ಳಿಗಾವಿ, ಐಹೊಳೆ ಮತ್ತು ವಿಜಯನಗರಗಳ ಕಾಲದ ಸಂಸ್ಕೃತಿ ವೈಭವವನ್ನು ಮತ್ತೊಮ್ಮೆ ಜಗತ್ತಿನ ಮುಂದೆ ಬೆಳಗುವಂತೆ ಮಾಡಲೆಂದು ಆಶಿಸುತ್ತೇವೆ.

ಸಂಸ್ಕೃತ ಭಾಷಾಭ್ಯಾಸಕ್ಕೆ, ಸಂಸ್ಕೃತ ಸಾಹಿತ್ಯದ ಅಭಿವೃದ್ಧಿಗೆ ಮೈಸೂರಿನ ರಾಜಮನೆತನದವರು ಅಪಾರವಾದ ಪ್ರೋತ್ಸಾಹವನ್ನು ಮೊದಲಿನಿಂದಲೂ ಕೊಡುತ್ತಾ ಬಂದಿರುತ್ತಾರೆ. ಅದರಲ್ಲಿಯೂ ವಿಶೇಷವಾಗಿ, ಚಿಕ್ಕದೇವರಾಜ ಒಡೆಯರು, ಮುಮ್ಮಡಿ ಕೃಷ್ಣರಾಜ ಒಡೆಯರು, ಚಾಮರಾಜ ಒಡೆಯರು ಮತ್ತು ರಾಜರ್ಷಿ ನಾಲ್ವಡಿ ಕೃಷ್ಣರಾಜ ಒಡೆಯರು ಇವರುಗಳ ಕಾಲದಲ್ಲಿ ಸಂಸ್ಕೃತಕ್ಕೆ ಹೆಚ್ಚಿನ ಪ್ರೋತ್ಸಾಹ ಲಭಿಸಿದೆ. ಮಹಾಪ್ರಭುಗಳಾದ ಶ್ರೀ ಜಯಚಾಮರಾಜೇಂದ್ರ ಒಡೆಯರು ತಮ್ಮ ಹಿರಿಯರ ಮೇಲ್ಪಂಕ್ತಿಯನ್ನೇ ಅನುಸರಿಸಿ ಸಂಸ್ಕೃತ ಪ್ರಚಾರಕ್ಕೆ ಮಿಗಿಲಾದ ಬೆಂಬಲವನ್ನು ಕೊಟ್ಟಿರುತ್ತಾರೆ. ಕರ್ನಾಟಕದ

ವಿಖ್ಯಾತ ರಾಜಮನೆತನದವರಾದ, ಹೊಯ್ಸಳರು, ಚಾಳುಕ್ಯರು, ರಾಷ್ಟ್ರಕೂಟರು, ವಿಜಯನಗರದವರು, ಮತ್ತು ಕೆಳದಿಯ ರಾಜರು ತಮ್ಮ ಆಳ್ವಿಕೆಯಲ್ಲಿ ಸಂಸ್ಕೃತ ಕವಿಗಳಿಗೆ ಉದಾರಾಶ್ರಯವನ್ನು ಕೊಟ್ಟಿದ್ದಾರೆ. ಮಿತಾಕ್ಷರಿಯನ್ನು ಬರೆದ ವಿಜ್ಞಾನೇಶ್ವರನೂ, ವಿಕ್ರಮಾಂಕ ದೇವಚರಿತೆಯನ್ನು ಬರೆದ ಬಿಲ್ಹಣನೂ ಕಲ್ಯಾಣದ ವಿಕ್ರಮಾದಿತ್ಯನ ಆಸ್ಥಾನ ಕವಿಗಳಾಗಿದ್ದರು. ಮಾನಸೋಲ್ಲಾಸ ಎಂಬ ವಸ್ತುಕೋಶವನ್ನು ಬರೆದ ಆಹವಮಲ್ಲ ಸೋಮೇಶ್ವರನು ಕಲ್ಯಾಣದ ಕನ್ನಡ ರಾಜನಾಗಿದ್ದನು. ಪ್ರಪಂಚದಲ್ಲಿಯೇ ಪ್ರಖ್ಯಾತಿಯನ್ನು ಪಡೆದಿರುವ ಶಿವತತ್ವ ರತ್ನಾಕರವನ್ನು ಬರೆದ ಕೆಳದಿಯ ಬಸವರಾಜನು ಬಿದನೂರಿನ ಕನ್ನಡ ರಾಜನಾಗಿದ್ದನು. ವೇದಗಳಿಗೆ ಭಾಷ್ಯವನ್ನು ಬರೆದ ಸಾಯಣಚಾರ್ಯರೂ, ಸರ್ವದರ್ಶನ ಸಂಗ್ರಹವನ್ನು ಬರೆದ ಮಾಧವಾಚಾರ್ಯರೂ ಕನ್ನಡ ರಾಜರಾದ ವಿಜಯನಗರದ ಅರಸರ ಆಶ್ರಯದಲ್ಲಿ ಇದ್ದವರು. ಮಧುರಾವಿಜಯಂ ಮಹಾಕಾವ್ಯವನ್ನು ಬರೆದ ಗಂಗಾದೇವಿಯು ವೀರಕಂಪಣರಾಯನ ಧರ್ಮಪತ್ನಿಯು. ಶ್ರೀ ನಿಜಗುಣ ಶಿವಯೋಗಿಯ 'ವಿವೇಕ ಚಿಂತಾಮಣಿ' ಎಂಬ ವಸ್ತುಕೋಶವನ್ನು ಸಂಸ್ಕೃತಕ್ಕೆ ಭಾಷಾಂತರಿಸಿದ ಮಹಾಕವಿಯು ಕೊಡಗಿನ ಲಿಂಗರಾಜನು. ಇವರುಗಳೆಲ್ಲರೂ ಕನ್ನಡನಾಡಿನ ಅರಸುಮನೆತನದ ಉಜ್ವಲ ಪರಂಪರೆಗೆ ಸೇರಿದವರೆಂಬುದನ್ನು ನಮ್ಮ ಜನಗಳು ಸ್ಮರಣೆಯಲ್ಲಿ ಇಟ್ಟುಕೊಂಡು ಸಂಸ್ಕೃತದ ವ್ಯಾಸಂಗಕ್ಕೆ ಹೆಚ್ಚು ಉತ್ಸಾಹ ಸ್ಫೂರ್ತಿಗಳನ್ನು ಹೊಂದಲಿ. ಸಂಸ್ಕೃತದ 'ಪಂಚತಂತ್ರವು' ಅದೆಷ್ಟೋ ಶತಮಾನಗಳ ಹಿಂದೆಯೇ ಪ್ರಪಂಚದ ಹಲವು ಭಾಷೆಗಳಿಗೆ ಅನುವಾದಿಸಲ್ಪಟ್ಟಿದೆ. ಶ್ರೀ ಕೃಷ್ಣನ ಭಗವದ್ಗೀತೆಯು ಜಗತ್ತಿನ ಎಲ್ಲ ಭಾಷೆಗಳಲ್ಲಿಯೂ ಪ್ರತಿಬಿಂಬಿಸಲ್ಪಟ್ಟಿದೆ. ವಿಶ್ವದಲ್ಲಿಯೇ ಶ್ರೇಷ್ಠತಮವೆನಿಸಿದ ಉಪನಿಷತ್ತು ಮೊಗಲಾಯರ ದಾರಾಶಿಕೋ ಎಂಬ ರಾಜಪುತ್ರನಿಂದ ಪಾರ್ಶಿಭಾಷೆಗೆ ತರ್ಜುಮೆಯಾಗಿದೆಯೆಂಬುದನ್ನು ನಮ್ಮ ಜನರೂ ವಿದ್ಯಾರ್ಥಿಗಳೂ ಮನಸ್ಸಿಗೆ ತಂದುಕೊಂಡರೆ ಸಂಸ್ಕೃತದ ಮಹತ್ವವನ್ನು ಅರಿಯಲು ಸಹಾಯವಾಗುತ್ತದೆ.

ಕರ್ನಾಟಕ ದೇಶದಲ್ಲಿ ಸಂಸ್ಕ ತಕ್ಕೆ ಇಂಗ್ಲಿಷ್ ಕಲಿಯುವ ಶಾಲೆ ಗಳಲ್ಲಿಯೂ ಅವಕಾಶವಿದೆ. ವಿದ್ಯಾರ್ಥಿಯು ಶಾಲೆ ಕಾಲೇಜುಗಳಲ್ಲಿ ದ್ವಿತೀಯ ಭಾಷೆಯಾಗಿಯೂ ಐಚ್ಛಿಕ ಭಾಷೆಯಾಗಿಯೂ ಸಂಸ್ಕೃತವನ್ನು ತೆಗೆದುಕೊಳ್ಳಲು ಅವಕಾಶವಿದೆ. ಮೇಲುಕೋಟೆ ಸಂಸ್ಕೃತ ಕಾಲೇಜು, ಬೆಂಗಳೂರು ವೇದಮಹಾ ಪಾಠಶಾಲೆಗಳನ್ನು ಈಗಿರುವ ಮುಜ ರಾಯಿ ಇಲಾಖೆಯಿಂದ ತಪ್ಪಿಸಿ ವಿದ್ಯಾಇಲಾಖೆಗೆ ಕೂಡಿಸಿದರೆ ಸಂಸ್ಕೃತ ವಿದ್ಯಾಪ್ರಚಾರಕ್ಕೆ ಹೆಚ್ಚು ಸಹಾಯವಾಗುತ್ತದೆ. ಅಲ್ಲದೆ ಈಗಿರುವ ೧೩ ವರ್ಷಗಳ ಅವಧಿಯನ್ನು ೧೨ ವರ್ಷಗಳಿಗೆ ಇಳಿ ಸುವುದು ಆಗತ್ಯವೆಂದು ತೋರುತ್ತದೆ. ಮುಖ್ಯವಾಗಿ ಸಂಸ್ಕೃತವು ಭಾರತೀಯರ ಪ್ರಾಚೀನ ಜ್ಞಾನಾನುಭವಗಳ ಭಂಡಾರವೆನಿಸಿದೆ.

ಭಾ.ಷ॥ ಮನೆಗೆ ನೆಲಗಟ್ಟಿರ್ಪವೊಲು ಜನ ।
ಮನಕೆ ಸಂಸ್ಕೃತ ವಿದ್ಯೆಯಿರ್ಪುದು ।
ಸನುಮತದಿ ನೋಡಲ್ಕೆ ವೇದಪುರಾಣ ಶಾಸ್ತ್ರಗಳ ॥
ಮನೆಯು ಸಂಸ್ಕೃತ ಭಾಷೆಯೆಂಬರು ।
ವಿನುತ ವಿದ್ವಜ್ಜನರು ಲೋಕದಿ ।
ಘನತಮರು ಅವರಲ್ತೆ ಸಂಸ್ಕೃತ ಓದಿ ಬರೆಯುವರು ॥



# ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳು

ಕನ್ನಡದಲ್ಲಿ ಉತ್ತಮವಾದ ಪೌರಾಣಿಕ ನಾಟಕಗಳನ್ನು ರಚಿಸಿದವರಲ್ಲಿ ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳ ಹೆಸರು ಮೊದಲನೆಯದು. ನಮಗೆ ತಿಳಿದಿರುವಂತೆ ಅಭಿಜ್ಞಾನ ಶಾಕುಂತಲ, ಉತ್ತರ ರಾಮಚರಿತ್ರ, ಚಂಡಕೌಶಿಕ, ವಿಕ್ರಮೋರ್ವಶೀಯ, ಮಾಲತೀ ಮಾಧವ, ಶೂರಸೇನ ಚರಿತೆ ರತ್ನಾವಳಿ, ಎರಬ ಏಳು ನಾಟಕಗಳನ್ನು ಇವರು ಬರೆದಿದ್ದಾರೆ. ಈ ಮೇಲೆ ಕಂಡ ನಾಟಕಗಳಲ್ಲಿ ಆರು ಸಂಸ್ಕೃತದಿಂದ ಭಾಷಾಂತರವಾದುವು. "ಶೂರಸೇನ ಚರಿತೆ" ವಿಖ್ಯಾತ ಆಂಗ್ಲಕವಿ ಷೇಕ್ಸ್‌ಪಿಯರನ "ಒಥೆಲೋ" ನಾಟಕದ ಭಾಷಾಂತರವಾಗಿದೆ.

ಕನ್ನಡದಲ್ಲಿ ಸುಮಾರು ಒಂದು ಸಾವಿರ ವರ್ಷಗಳಿಂದ ಮಹಾಕಾವ್ಯಗಳು ನಿರ್ಮಾಣವಾಗಿದ್ದರೂ ನಮಗೆ ದೊರೆತಿರುವ ಒಂದೇ ಒಂದು ಪ್ರಾಚೀನ ನಾಟಕ ಚಿಕ್ಕದೇವರಾಯರ ಆಸ್ಥಾನಕವಿ ಸಿಂಗರಾರ್ಯ (೧೬೮೦) ವಿರಚಿತ ಮಿತ್ರವಿಂದ ಗೋವಿಂದ ಎಂಬುದು ಮಾತ್ರ. ನಿಜವಾಗಿಯೂ ಕನ್ನಡ ನಾಟಕಗಳ ಪ್ರಾರಂಭದ ಕಾಲ ೧೯ನೆಯ ಶತಮಾನದ ಉತ್ತರ ಭಾಗ ಎಂದು ಹೇಳಬಹುದು ಅಂದರೆ ಕನ್ನಡಿಗರಿಗೆ ನಾಟಕ ಕಲೆ ಗೊತ್ತಿರಲಿಲ್ಲವೆಂದು ಹೇಳುವಂತಿಲ್ಲ. ಪ್ರಾಚೀನ ಕವಿಗಳು ಕೆಲವರು ನಾಟಕಗಳನ್ನು ರಚಿಸಿರಬಹುದೆಂದು ವಿದ್ವಾಂಸರು ತರ್ಕಿಸಿದ್ದಾರೆ. ಗಧಾಯುದ್ಧ, ಹರಿಶ್ಚಂದ್ರ ಕಾವ್ಯ, ಗಿರಿಜಾಕಲ್ಯಾಣ, ಕನ್ನಡ ಭಾರತ, ಯಶೋಧರ ಚರಿತೆ, ಪ್ರಭುಲಿಂಗಲೀಲೆ ಮೊದಲಾದ ವಿಖ್ಯಾತ ಕನ್ನಡ ಕಾವ್ಯಗಳನ್ನು ಓದಿದಾಗ ನಮ್ಮ ಹಿರಿಯ ಕವಿಗಳಿಗೆ ನಾಟಕ ಕಲೆ ಚೆನ್ನಾಗಿ ಹಸ್ತಗತ ವಾಗಿತ್ತೆಂದು ಭಾಸವಾಗುತ್ತದೆ. ಕನ್ನಡ ನಾಡಿನಲ್ಲಿ ಬಳಕೆಯಲ್ಲಿರುವ ಬಯಲು ನಾಟಕಗಳು ಸಾವಿರ ವರ್ಷಗಳಷ್ಟು ಪ್ರಾಚೀನವೆಂದು ವಿದ್ವಾಂಸರು ತರ್ಕಿಸಿದ್ದಾರೆ. ಕಾರಣ, ಕನ್ನಡಿಗರಿಗೆ ನಾಟಕ ಚಿರಪರಿಚಿತವೇ ಸರಿ.



ಆಸ್ಥಾನ ಕವಿ, ಅಭಿನವ ಕಾಳಿದಾಸ

ಕೈ॥ ಬಸವಪ್ಪ ಶಾಸ್ತ್ರಿಗಳು, ಮೈಸೂರು

ಕೈ॥ ಬಸವಪ್ಪ ಶಾಸ್ತ್ರಿಗಳು ಕೇವಲ ನಾಟಕಕಾರರೇ ಅಲ್ಲ. ಮಹಾಕವಿ ಗಳೆಂಬುದಕ್ಕೆ ನಿದರ್ಶನಗಳಿವೆ. ಅವರು ಈ ಮುಂದೆ ಹೇಳುವ ಕಾವ್ಯಗಳನ್ನು ಸಂಸ್ಕೃತ ಮತ್ತು ಕನ್ನಡ ಭಾಷೆಯಲ್ಲಿ ಬರೆದಿದ್ದಾರೆ.

೧) ದಮಯಂತೀ ಸ್ವಯಂವರಂ (ಚಂಪು)
೨) ಸಾವಿತ್ರೀ ಚರಿತೆ (ಷಟ್ಪದಿ)
೩) ರೇಣುಕ ವಿಜಯಂ (ಚಂಪು)
೪) ಭರ್ತೃಹರಿ ಶತಕತ್ರಯ (ಕಂದ ವೃತ್ತ)
೫) ಶಂಕರ ಶತಕಂ (ಕಂದಗಳು)
೬) ನೀತಿಸಾರ ಸಂಗ್ರಹ (ಕಂದಗಳು)
೭) ಹರ್ಷ ಚರಿತೆ (ಸಿಕ್ಕಿಲ್ಲ)
೮) ಕೃಷ್ಣರಾಜಾಭ್ಯುದಯಂ (ಚಂಪು)
೯) ಬಾಲಿಕಾಗೀತ ಮುಕ್ತಾಕಲಾಪ (ಹಾಡುಗಳು)

ಎಂಬಿಷ್ಟು ಗ್ರಂಥಗಳನ್ನು ಕನ್ನಡದಲ್ಲಿ ಬರೆದಿದ್ದಾರೆ.

೧) ಬಿಲ್ವವೃಕ್ಷ ಪೂಜಾವಿಧಿಃ
೨) ಅಷ್ಟಮೂರ್ತಿ ತನಯಾಷ್ಟಕಂ
೩)ಬಸವೇಶಾಷ್ಟಕಂ
೪) ಶಾಂಕರೀ ನಕ್ಷತ್ರಮಾಲಾ
೫) ಸದಾಶಿವಾಷ್ಟಕಂ
೬) ತ್ರಿಷಷ್ಟಿ ಪುರಾತನ ಸ್ತವಂ
೭) ಶಿವಭಕ್ತಿ ಸುಧಾತರಂಗಿಣಿ
೮) ಆರ್ಯಾ ಶತಕಂ
೯) ಅಂಬಾಷೋಡಶ ಮಂಜರೀ
೧೦) ಸರಸ್ವತೀ ದಂಡಕಂ

ಎಂಬಿಷ್ಟು ಗ್ರಂಥಗಳನ್ನು ಸಂಸ್ಕೃತದಲ್ಲಿ ಬರೆದಿದ್ದಾರೆ.

ಹಳೆಯ ಮೈಸೂರು ರಾಜ್ಯದಲ್ಲಿ ಬಹಳಕಾಲ "ರಾಷ್ಟ್ರಗೀತೆ" ಎನಿಸಿದ್ದ "ಕಾಯೌಶ್ರೀಗೌರಿ" ಎಂಬ ಗೀತೆ ಈ ಕವಿಗಳಿಂದ ವಿರಚಿತವಾಗಿದೆ. ದಿವಂಗತರಾದ ಎಂ. ವೆಂಕಟಕೃಷ್ಣಯ್ಯನವರ 'ಸುರಭಿ' ಮಾಸಪತ್ರಿಕೆಯಲ್ಲಿ ಕೆಲವು ಸ್ವಾರಸ್ಯವಾದ ಕವಿತೆಗಳನ್ನು ಬರೆದಿದ್ದಾರೆ. ಕೈ॥ ಬಸವಪ್ಪ ಶಾಸ್ತ್ರಿಗಳ ಈ ಉಭಯ ಭಾಷಾ ಕವಿತ್ವ ನೈಪುಣ್ಯಕ್ಕೆ ೧೯ ಗ್ರಂಥಗಳು ಸಾಕ್ಷಿಯಾಗಿವೆ. ಅವರು, ಸಂಗೀತ, ನಾಟಕ, ಕಾವ್ಯವಾಚನ, ವೇದ ಶಾಸ್ತ್ರ ಪುರಾಣ ಮೊದಲಾದವುಗಳಲ್ಲಿ ಪ್ರವೀಣರೆನಿಸಿದ್ದರು. ಭಾಷಾಂತರ ಶಕ್ತಿಯು ಅಸದೃಶವಾದುದು. ಕಾಳಿದಾಸನ ಅಭಿಜ್ಞಾನ ಶಾಕುಂತಲವನ್ನು ಇವರಷ್ಟು ಗಂಭೀರವಾಗಿ ನಮ್ಮ ಭಾರತ ರಾಷ್ಟ್ರದಲ್ಲಿಯೇ ಯಾರೂ ಭಾಷಾಂತರಿಸಿಲ್ಲವೆಂದು ವಿದ್ವಾಂಸರು ಒಪ್ಪಿಕೊಂಡಿದ್ದಾರೆ. ಈ ಮಾತು ಅವರ ಕನ್ನಡ ಭರ್ತೃಹರಿ ಶತಕತ್ರಯಕ್ಕೂ ಅನ್ವಯಿಸುತ್ತದೆ.

ಮಹಾಕವಿ ಬಸವಪ್ಪ ಶಾಸ್ತ್ರಿಗಳ ತಂದೆ ಪುರೋಹಿತ ಮಹಾದೇವ ಶಾಸ್ತ್ರಿಗಳು. ತಾಯಿ ಬಸವಾಂಬಿಕೆ. ಶಾಸ್ತ್ರಿಗಳ ತಂದೆಯವರು ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನದಲ್ಲಿ ವಿದ್ವಾಂಸರೂ ಹಾಗೂ ಅರಮನೆಯ ಪುರೋಹಿತರೂ ಆಗಿದ್ದರು.

ಮಹಾಕವಿ ಬಸವಪ್ಪ ಶಾಸ್ತ್ರಿಗಳವರ ತಂದೆಯವರು ಇವರ ಚಿಕ್ಕ ವಯಸ್ಸಿನಲ್ಲಿ ತೀರಿಕೊಂಡರು. ಅನಂತರ, ಇವರನ್ನು ಬಾಲ್ಯದಲ್ಲಿ ರಕ್ಷಿಸಿದವರು ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ಕೊಟ್ಟವರು ವಿಖ್ಯಾತ ಕವಿಗಳಾದ ಅಳಿಯ ಲಿಂಗರಾಜರು. ಶಾಸ್ತ್ರಿಗಳ ವಿದ್ಯಾಗುರುಗಳು ಸುಪ್ರಸಿದ್ಧ ಗರಳಪುರೀ ಶಾಸ್ತ್ರಿಗಳು. ಬಸವಪ್ಪ ಶಾಸ್ತ್ರಿಗಳಿಗೆ ಹದಿನೆಂಟನೆಯ ವರ್ಷದಲ್ಲಿಯೇ ಕನ್ನಡ ಸಂಸ್ಕೃತ ಭಾಷೆಗಳಲ್ಲಿ ಕಾವ್ಯರಚನಾಶಕ್ತಿಯು ಬಂತೆಂದು ತಿಳಿದುಬಂದಿದೆ.

ಕಂದ ॥ ಪದಿನೆಂಟು ವಯಸ್ಸಿನೊ ।
ಳೊದವಿದ ಕವಿತಾಶಕ್ತಿಯಿಂದೆ ಬುಧನಿವಹಕ್ಕಂ ॥

ಮುದವೊಗೆಯೆ ಕೃಷ್ಣರಾಜಾ ।
ಭ್ಯುದಯ ಮೆನಿಪ್ಪೊಂದು ಕೃತಿಯ ನಿರದಾಗಿಸಿದಂ ॥

(ಕೈ॥ ಪಿ.ಆರ್. ಕರಿಬಸವ ಶಾಸ್ತ್ರೀ, ಕರ್ಣಾಟಕ ಶಾಕುಂತಲ ಪೀಠಿಕೆ)

ಮಹಾಕವಿ ಬಸವಪಶಾಸ್ತ್ರಿಗಳ ಜನನ ಕ್ರಿ. ಶ. ೧೮೪೩ನೇ ಶುಭಕೃತ್ ಸಂವತ್ಸರದಲ್ಲಿ. ಮರಣ ೧೮೯೧ನೇ ವಿಕೃತಿ ಸಂವತ್ಸರದಲ್ಲಿ ಎಂದು ತಿಳಿದಿದೆ. ಮೈಸೂರಿನಲ್ಲಿ ಒಂದು ಸಂಜೆ ಕುದುರೆಗಾಡಿಯಲ್ಲಿ ಕುಳಿತು ಮಿತ್ರರೊಂದಿಗೆ ವಿಹಾರ ಹೋಗಿದ್ದಾಗ ಕುದುರೆ ಬೆದರಿ ಇವರು ಕೆಳಗೆಬಿದ್ದು ಮೃತಿ ಹೊಂದಿದರೆಂದು ತಿಳಿದು ಬಂದಿದೆ. ಇವರ ಜೀವಿತ ಕಾಲ ಕೇವಲ ೪೮ ವರ್ಷಗಳು. ಇವರ ಮರಣ ಕಾಲದಲ್ಲಿ ಸತ್ಕವಿ ನಂಜನಗೂಡು ಸುಬ್ಬಾಶಾಸ್ತ್ರಿಗಳು, ಕರ್ಣಾಟಕ ಭಾಷಾರತ್ನಂ ಕರಿ ಬಸವ ಶಾಸ್ತ್ರಿಗಳು, ಆರ್. ತಾತಾ ಮೊದಲಾದವರು ಚರಮಗೀತೆ ಗಳನ್ನು ಬರೆದು ಹಾಡಿದ್ದಾರೆ. ಕರ್ಣಾಟಕ ಕವಿಚರಿತೆಯಲ್ಲಿ ಪೂಜ್ಯರಾದ ಆರ್. ನರಸಿಂಹಾಚಾರ್ಯರು "ಈತನು ವೀರಶೈವ ಕವಿ. ಮೈಸೂರು ಅರಮನೆಯಲ್ಲಿ ಆಸ್ಥಾನ ಕವಿಯಾಗಿದ್ದನು. ಪುಸ್ತಕ ವಾಚನದಲ್ಲಿ ಈತನ ಪಾಂಡಿತ್ಯ ಅದ್ವಿತೀಯವಾದುದಾಗಿತ್ತು. ಕವಿತೆಯೂ ಮಾನ್ಯತೆ ಪಡೆದದ್ದು" ಎಂದು ಬರೆದಿದ್ದಾರೆ. ನಾಡಿನ ಹಿರಿಯ ಸಾಹಿತಿಗಳಾದ ಆರ್. ತಾತ ಅವರು ಶ್ರೀಕೃಷ್ಣಸೂಕ್ತಿಯಲ್ಲಿ "ನಮ್ಮಕಾಲದಲ್ಲಿ ಸ್ವರ್ಗಸ್ಥ ರಾದ ಬಸವಪ್ಪ ಕವಿಗಳು ಕುಮಾರವ್ಯಾಸ ಭಾರತವನ್ನು ಓದುವದರಲ್ಲಿ ಸಮರ್ಥರೆಂದು ಹೇಳುವವರು ಇನ್ನೂ ಬಹಳ ಜನರಿದ್ದಾರೆ. ಮೈಸೂರೊಳ ಗೆಲ್ಲಾ ಇವರಂತೆ ಭಾರತ ಓದುವವರು ಇಲ್ಲ. ಅಂತಹ ಮಹಾನು ಭಾವನ್ನು ನಾವು ಕೇಳುವ ನೋಡುವ ಪುಣ್ಯವೆಲ್ಲಿದೆ'' ಎಂದು ಬರೆದಿದ್ದಾರೆ.

ಡಾ॥ ಮುಗುಳಿಯವರು ಬರೆದಿರುವ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ "೧೯ನೆಯ ಶತಕದ ಕೊನೆಯ ಭಾಗದಲ್ಲಿ ಆಗಿಹೋದ ಕವಿಗಳಲ್ಲಿ ಬಸವಪ್ಪ ಶಾಸ್ತ್ರಿಯ ಉಲ್ಲೇಖನವನ್ನು ವಿಶೇಷವಾಗಿ ಮಾಡಬೇಕು.

ಕನ್ನಡ ಸಾಹಿತ್ಯದ ಸಾವಿರಾರು ವರ್ಷಗಳ ಚರಿತ್ರೆಯಲ್ಲಿ ಶಾಕುಂತಲ ದಂತಹ ಉತ್ತಮ ನಾಟಕದ ಅನುವಾದವಾದದ್ದು ಬಸವಪ್ಪ ಶಾಸ್ತ್ರಿಯಿಂದಲೇ. ಮೊದಲು ಶೇಕ್ಸ್‌ಪಿಯರ ನಂಥ ಶ್ರೇಷ್ಠ ನಾಟಕ ಕಾರನ ಉತ್ತಮ ದುರಂತ ನಾಟಕ ವೊಂದರ ಅನುವಾದವೂ ಅವನಿಂದಲೇ. ಮೊದಲು ಹೊಸ ಕನ್ನಡ ಸಾಹಿತ್ಯಕ್ಕೆ ಇಂಗ್ಲೀಷ್ ಕೊಟ್ಟ ಸ್ಫೂರ್ತಿ ಇಲ್ಲಿ ಎದ್ದು ಕಾಣುತ್ತದೆ. ಬಸವಪ್ಪ ಶಾಸ್ತ್ರಿ ಮೇಲಾದ ಅನುವಾದಕಾರ. ಅವನ ಕವಿತಾಶಕ್ತಿ ಮತ್ತು ಪದ್ಯರಚನೆ ಶಕ್ತಿ ಮೇಲಾದುವು. ಶಾಕುಂತಲದ ಪದ್ಯಗಳಲ್ಲಿ ಇದನ್ನು ಕಾಣಬಹುದು" ಎಂದು ಬರೆದಿದ್ದಾರೆ. (ಪುಟ, ೩೭೪)

ಕನ್ನಡ ನಾಟಕಪಿತಾಮಹ ಬಸವಪ್ಪಶಾಸ್ತ್ರಿಗಳ ಸಮಾಧಿಯು ಮೈಸೂರಿನಲ್ಲಿ ಈಗಲೂ ಇದೆ. ಇವರನ್ನು ಜನರು "ಪುರೋಹಿತಸ್ವಾಮಿ" ಎಂದು ಭಕ್ತಿ' ಯಿಂದ ಕರೆಯುತ್ತಿದ್ದರೆಂಬುದು ಇಲ್ಲಿ ನೆನೆಪಿಡುವ ಸಂಗತಿ. ಇನ್ನು ಇವರು ವಿರಚಿಸಿರುವ ನಾಟಕಗಳನ್ನು ಕುರಿತು ಕೊಂಚ ಪರಿಚಯ ಮಾಡಿಕೊಳ್ಳೋಣ.

## ೧. ಕರ್ಣಾಟಕ ಶಾಕುಂತಲ ನಾಟಕ :

ಸಂಸ್ಕೃತದಲ್ಲಿ ಶಾಕುಂತಲ ನಾಟಕಕ್ಕೆ ಅಪಾರವಾದ ಕೀರ್ತಿ ಗೌರವ ಗಳಿವೆ. "ಕಾವ್ಯೇಷು ನಾಟಕಂ ರಮ್ಯ ತೇಷು ರಮ್ಯಾ ಶಕುಂತಲಾ" ಎಂಬ ಸುಭಾಷಿತವು ಈ ನಮ್ಮ ಮಾತಿಗೆ ನಿದರ್ಶನವಾಗಿದೆ. ವಿಶ್ವಕವಿಯಾದ ಕಾಲಿದಾಸನು ಈ ನಾಟಕವನ್ನು ರಚಿಸಿ ಸಂಸ್ಕೃತ ಸಾಹಿತ್ಯಕ್ಕೆ, ತನ್ಮೂಲಕ ವಿಶ್ವದ ರಸಿಕವೃಂದಕ್ಕೆ ಮಹೋಪಕಾರ ಮಾಡಿ ದ್ದಾನೆ. ಈ ನಾಟಕವನ್ನು ಬಸವಪ್ಪಶಾಸ್ತ್ರಿಗಳು, ಮಹಾರಾಜ ಚಾಮರಾಜಒಡೆಯರು, ದಿವಾಣ ರಂಗಾಚಾರ್ಲ್ಲು; ಅಂಬಲ್ ನರಸಿಂಹಯ್ಯಂಗಾರ್ಯರು, ವ್ಯಾಕರಣದ ಬಿ. ಮಲ್ಲಪ್ಪನವರು, ನೀಲಗಿರಿ ಪಾಪಣ್ಣನವರು, ಪಿ. ಆರ್. ಕರಿಬಸವ ಶಾಸ್ತ್ರಿಗಳು ಮೊದಲಾದವರ ಪ್ರೋತ್ಸಾಹದಿಂದ ಭಾಷಾಂತರಿಸಿ ಕನ್ನಡವನ್ನು

ಕಳಿಗೊಳಿಸಿದರು. ಶಾಕುಂತಲ ನಾಟಕದಲ್ಲಿ ಹಸ್ತಿನಾವತಿಯ ಅರಸನಾದ ದುಷ್ಯಂತ ಮಹಾರಾಜನು ಕಣ್ವರ ಸಾಕು ಮಗಳಾದ ಶಕುಂತಲೆಯನ್ನು ಪ್ರೀತಿಸಿ ಗಾಂಧರ್ವವಿಧಿಯಿಂದ ತಾನು ಲಗ್ನಮಾಡಿಕೊಂಡು, ದೂರ್ವಾಸರ ಶಾಪದಿಂದ ಅವಳ ಬಗೆಗೆ ಪ್ರೀತಿಯನ್ನು ತ್ಯಜಿಸಿ, ಕಡೆಗೆ ಶಾಪವಿಮೋಚನೆ ಯಾದ ಮೇಲೆ ಪಶ್ಚಾತ್ತಾಪದಿಂದ ಮರುಗಿ ಕರಗಿ ಮರೀಚಿ ಮಹರ್ಷಿಗಳ ಆಶ್ರಮದಲ್ಲಿ ಅವಳನ್ನು ಸಂದರ್ಶಿಸಿ ಪರಿಸ್ಥಿತಿಯನ್ನು ತಿಳಿಸಿ, ಪುತ್ರ ಭರತ, ಪತ್ನಿ ಶುಕುಂತಲಾ ಸಹಿತವಾಗಿ ರಾಜಧಾನಿಗೆ ಹಿಂತಿರುಗಿದ ಸುಂದರವಾದ ಕಥೆಯು ಚಮತ್ಕಾರವಾಗಿ ನಿರೂಪಿತವಾಗಿದೆ. ಮಹಾಭಾರತದ ಮೂಲ ಕಥೆಯನ್ನು ತೆಗೆದುಕೊಂಡು ಅದರಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿ, ಈ ಕಲಾಕೃತಿಯಲ್ಲಿ 'ಸ್ವರ್ಗಮರ್ತ್ಯಗಳ ಬಾಂಧವ್ಯವನ್ನು ಕಲ್ಪಿಸಿ ಮನೋಹರವಾಗಿ ಈ ನಾಟಕವನ್ನು ರಚಿಸಿದ್ದಾನೆ ಕವಿ ಕಾಲಿದಾಸ. ಈ ನಾಟಕ ವಾಚನದಿಂದ ಅಥವಾ ಅವಲೋಕನದಿಂದ ಓದುಗರಿಗೆ ಅಥವಾ ಪ್ರೇಕ್ಷಕರಿಗೆ ಗಂಗಾಸ್ನಾನದಿಂದಾಗುವ ಆತ್ಮ ಪ್ರಸನ್ನತೆಯೂ, ತಾಜಮಹಲ್ ನೋಡುವುದರಿಂದ ಆಗುವ ಮನಸ್ಸಿನ ಸಂತೋಷವೂ, ಸುಮಧುರ ಗಾನವನ್ನು ಕೇಳುವುದರಿಂದಾಗುವ ರಸಸ್ಫೂರ್ತಿಯೂ ಉಂಟಾಗುತ್ತದೆ. ಈ ನಾಟಕದ ಭಾಷಾಂತರದಲ್ಲಿ ಶಾಸ್ತ್ರಿಗಳ ಮಿಗಿಲಾದ ಭಾಷಾಪಾಂಡಿತ್ಯ ವನ್ನು ನಾವು ಮನಗಾಣಬಹುದು. ರಂಗಭೂಮಿಗೆ ಅಳವಡುವಂತೆ ಹಾಡುಗಳನ್ನು ಬರೆದು ಕಳುಹಿಸಿಕೊಟ್ಟು ಕಲಾವಿದರಿಗೆ ನೆರವಾದರು. ಈ ನಾಟಕ ರಚನೆಯನ್ನು ಕಂಡು ಹರ್ಷಿಸಿ ಮೈಸೂರಿನ ವಿದ್ವಾಂಸರ ಸಭೆ ಯಲ್ಲಿ ದಿವಾನ್ ರಂಗಾಚಾರ್ಲುರವರು ಇವರಿಗೆ "ಅಭಿನವ ಕಾಲಿದಾಸ" ಎಂಬ ಬಿರುದು ಕೊಟ್ಟು ಗೌರವಿಸಿದರು. ಅಂದಿನಿಂದ ಶಾಸ್ತ್ರಿಗಳು 'ಅಭಿನವ ಕಾಳಿದಾಸ' ಎನಿಸಿದರು. ಶಕುಂತಲದಲ್ಲಿ ಏಳು ಅಂಕಗಳಿವೆ.

## ಉತ್ತರರಾಮ ಚರಿತೆ:

ಇದು ಸಂಸ್ಕೃತದಲ್ಲಿ ವಿಖ್ಯಾತನಾಗಿರುವ ಮಹಾಕವಿ ಭವಭೂತಿ ಯಿಂದ ವಿರಚಿತವಾದ ಉತ್ತಮೋತ್ತಮವಾದ ನಾಟಕದ ಭಾಷಾಂತರ,

ಇದು ಏಳು ಅಂಕಗಳಿಂದ ಕೂಡಿದೆ. ಶ್ರೀ ರಾಮ ಚಂದ್ರನು ರಾವಣನನ್ನು ಸಂಹರಿಸಿ ಸೀತಾದೇವಿ ಯನ್ನು ಪರಿಗ್ರಹಿಸಿದ ಮೇಲೆ ಮುಂದಿನ ಕಥೆ ಈ ನಾಟಕದಲ್ಲಿ ನಿರೂಪಿತವಾಗಿದೆ. ಗರ್ಭಿಣಿ ಸೀತೆಯನ್ನು ಅರಣ್ಯಕ್ಕೆ ಕಳಿಸಿದುದು, ಅಶ್ವಮೇಧ ಮಾಡಿದುದು, ಕುಶಲವರನ್ನು ಕಂಡುದು ಇಲ್ಲಿದೆ. ಕರುಣರಸಪ್ರಧಾನವಾದ ಈ ನಾಟಕ ಭವಭೂತಿಯ ಉತ್ತಮ ಕಲಾಕೃತಿಯೆಂದೆನಿಸಿದೆ. ಇದನ್ನು ರಂಗಭೂಮಿಯ ಮೇಲೆ ಆಡಲು ಅನುಕೂಲವಾಗುವಂತೆ ಸಮಯೋಚಿತವಾದ ಹಾಡುಗಳನ್ನು ರಚಿಸಿ ಕಲಾಭಿಮಾನಿಗಳಿಗೆ ನವರಸದ ಹಬ್ಬವನ್ನುಂಟುಮಾಡಿದ್ದಾರೆ. ಶಾಸ್ತ್ರಿಗಳ ಈ ನಾಟಕದ ಕಡೆಯಲ್ಲಿ ಈ ಪದ್ಯವಿದೆ

ಕಂದ ॥ ಈ ಕಥೆ ಪಾಪಂಗಳನು ನಿ ।
ರಾಕರಿಸಲಿ ಗಂಗೆಯಂತೆ ಸಲಹಲಿ ತಾಯೊಲ್ ॥

ಲೋಕದ ಬುಧ ರೊಪ್ಪಲಿ ವಾ ।
ಲ್ಮೀಕಿಯ ಭಾರತಿಯನೆಮ್ಮ ಪಾಲಿಸಲೀಶಂ ॥

ಎಂಬ ಭರತವಾಕ್ಯವಿದೆ. ಅನಂತರ

ಕಂದ ॥ ವರಗುಣಯುತ ಚಾಮಮಹೀ।
ಶ್ವರನಿಂದಾಜ್ಞಪ್ತನಾಗಿ ತಾಂ ಸಂಸ್ಕೃತದು ॥

ತ್ತರ ರಾಮಚರಿತ್ರಮ ನಿಳೆ।
ಯರಿಯಲ್ ಬಸವಪ್ಪ ಶಾಸ್ತ್ರಿ ಕನ್ನಡಿಸಿರ್ದಂ ॥

ಎಂಬ ಕಂದ ಪದ್ಯವಿದೆ.

ಕರ್ಣಾಟಕ ಶಾಕುಂತಲದ ಕಡೆಯಲ್ಲಿ ಕೂಡ

ಕಂದ ॥ ಪ್ರಕೃತಿ ಹಿತಾರ್ಥಂ ಕ್ಷಿತಿಪಾ ।
ಳಕರುದ್ಯೋಗಿಸುಗೆ ಪೂಜ್ಯ ಮೆನಿಸುಗೆ ಜಗದೊಳ್ ॥

ಸುಕವಿಗಳ ಸೂಕ್ತಿ ವಿಶ್ವಾ ।
ಧಿಕನಿಹಪರ ಸುಖವನೆಮಗ ಮಾಗೆ ಮಾಹೇಶಂ ॥

ಎಂಬ ಭರತ ವಾಕ್ಯವಿದೆ. ಅನಂತರ

ನುತಗುಣಯುತ ಚಾಮಕ್ಷಿತಿ । ರ್ಯೋತ್ಸಾ ॥
ಪತಿ ಸನ್ನಿಧಿ ಸಚಿವವರ ನ್ನಸಿಂಹಾರ್ಯೋತ್ಸಾ ॥
ಹಿತ ಬಸವಶಾಸ್ತ್ರಿ ತಾಂ ಸಂ ।

ಸ್ಕೃತ ಶಾಕುಂತಲಮ ನಿಂತು ಕನ್ನಡಿಸಿರ್ಪಂ ಎಂಬಪದ್ಯವಿದೆ.

## ರತ್ನಾವಳೀ ನಾಟಿಕೆ :

ಇದು ಸಂಸ್ಕೃತದಲ್ಲಿ ಶ್ರೀ ಹರ್ಷ ಮಹಾರಾಜನಿಂದ ವಿರಚಿತವಾದ ನಾಟಕ ಕೌಶಾಂಬಿಯ ರಾಜನಾದ ಉದಯನಿಗೆ ಸಿಂಹಳೇಂದ್ರನ ಸುಪುತ್ರಿ ರತ್ನಾವಳಿಯನ್ನು ಯೌಗಂಧರಾಯಣನೆಂಬ ಮಂತ್ರಿಯು ಉಪಾಯಾಂತರದಿಂದ ತಂದು ಕೂಡಿಸಿದ ಕಥೆ ಇಲ್ಲಿ ನಿರೂಪಿತವಾಗಿದೆ. ಇದನ್ನು ಬಸವಪ್ಪ ಶಾಸ್ತ್ರಿಗಳು ಸಂಗ್ರಹಿಸಿ ರಂಗ ಭೂಮಿಗೆ ಅಳವಡುವಂತೆ ಹಾಡುಗಳನ್ನು ಬರೆದು ಕನ್ನಡಕ್ಕೆ ತಂದುಕೊಟ್ಟಿದ್ದಾರೆ. ಇದರಲ್ಲಿ ನಾಲ್ಕು ಅಂಕಗಳಿವೆ. ಈ ನಾಟಕದ ಪ್ರಾರಂಭದಲ್ಲಿ

ಕಂದ ॥ ಬಸವಪ್ಪ ಶಾಸ್ತ್ರಿಯಿಂದಂ ।
ಪೊಸತೆನೆ ಕನ್ನಡ ದೊಳಿರ್ದ ರತ್ನಾವಳಿಯಂ ॥
ರಸಿಕರ್ಕಳೆನಿಸಿ ದೀ ಸಾ ।
ಧು ಸಭಾಸದರೊಲ್ದು ಮೆಚ್ಚಲಾ ನಭಿನಯಿಪೆಂ॥

ಎಂಬ ಮಾತು ನಟಿಯ ಮುಖದಿಂದ ಬಂದಿದೆ.

ಈ ರತ್ನಾವಳೀ ನಾಟಿಕೆಯ ಕಡೆಯಲ್ಲಿ

ಕಂದ ॥ ನುತ ಗುಣಯುತ ಚಾಮಮಹೀ ।
ಪತಿ ನಿರವಿಸೆ ಬಸವಶಾಸ್ತ್ರಿ ವಿರಚಿಸಿದಂ ಸಂ ॥

ಸ್ಕೃತ ರತ್ನಾವಳಿಯಂ ಸ|
ನ್ನುತ ಕನ್ನಡದೊಳೆನೆ ಪೂಗಳ್ದು ನಲಿಯದರೊಳರೆ|
ಈ ನಾಟಕೆಯು ನಾಲ್ಕು ಅಂಕಗಳಿಂದ ಕೂಡಿದೆ :

## ಚಂಡ ಕೌಶಿಕ :

ಸಂಸ್ಕೃತದಲ್ಲಿ ಆರ್ಯಕ್ಷೇಮೀಶ್ವರನೆಂಬ ಕವಿಯಿಂದ ವಿರಚಿತವಾದ ಈ ನಾಟಕವನ್ನು ಕೈ || ಬಸವಪ್ಪ ಶಾಸ್ತ್ರಿಗಳು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಇದರಲ್ಲಿ ಕಂದ ವೃತ್ತಗಳಿವೆ. ಹಾಡುಗಳಿಲ್ಲ. ಈ ನಾಟಕದಲ್ಲಿ ಸತ್ಯಹರಿಶ್ಚಂದ್ರನನ್ನು ವಿಶ್ವಾಮಿತ್ರನು ಪರೀಕ್ಷಿಸಿದ ಕಥೆ ರಮಣೀಯವಾಗಿ ನಿರೂಪಿತವಾಗಿದೆ.

ಈ ನಾಟಕದ ಕಡೆಯಲ್ಲಿ,

ಕಂದ|| ವರಗುಣಯುತ ಚಾಮುಮಹೀ |
ಶ್ವರನಾಸ್ಥಾನದೊಳೆ ನೆಗಳ್ದ ಬಸವಕವೀಂದ್ರ ||
ವಿರಚಿಸುತೆ ಪಂಚಮಾಂಕಂ |
ಬರಮಿಾಕಾವ್ಯಮನೆ ಪರಮಪದಮಂ ಪಡೆದಂ ||
ಕೃತಿಯಿದು ನಡುವೊಳ್ ವಿಘ್ನ |
ಪ್ರತಿಹತವೆನಿಸಿರ್ದುದೆಂದು ಚಿಂತಿಸುತಂ ಪಂ||
ಡಿತರೊಲ್ದು ಬೆಸಸಲವರಾ |
ಣತಿಯಿಂದಳಸಿಂಗರಾರ್ಯನುಳಿದುದನುಸಿರ್ದಂ ||

ಎಂಬ ಪದ್ಯದಳಿವೆ. ಈ ನಾಟಕವನ್ನು ಬರೆದು ಮುಗಿಸಲು ಕವಿಗೆ ಆಯುಷ್ಯಬಲ ವಿರಲಿಲ್ಲವೆಂದು ತಿಳಿಸಲಾಗಿದೆ. ಈ ನಾಟಕವನ್ನು ಪೂರ್ತಿಗೊಳಿಸಿದ ಕವಿ ಸಿಂಗಳಾರ್ಯರು ನಮಗೆ ಉಪಕಾರಿಗಳೇ ಸರಿ.

## ವಿಕ್ರಮೋರ್ವಶೀಯಂ:

ಇದು ಮಹಾಕವಿ ಕಾಲಿದಾಸನಿಂದ ವಿರಚಿತವಾದ ಮತ್ತೊಂದು ನಾಟಕ. ಇದನ್ನು ಕವಿ ಬಸವಪ್ಪ ಶಾಸ್ತ್ರಿಗಳು ರಂಗಭೂಮಿಗೆ ಅನುಕೂಲ

ವಾಗುವಂತೆ ರಚಿಸಿದ್ದಾರೆ. ಇದು ಎಲ್ಲ ರೀತಿಯಿಂದಲೂ ಮೂಲವನ್ನು ಪ್ರತಿಬಿಂಬಿಸಿದೆ ಎಂದು ಹೇಳಲಾಗಿದೆ. ಈ ನಾಟಕದಲ್ಲಿ ಕೂಡ ಕವಿಗಳು ನಾಲ್ಕು ಅಂಕಗಳನ್ನು ಭಾಷಾಂತರಿಸಿದ್ದರೆಂದೂ, ಐದನೆಯ ಅಂಕವನ್ನು ಬಸವಪ್ಪ ಮಹಾಕವಿಗಳ ಪುತ್ರ ರಾದ ಕೈ॥ ಆಸ್ಥಾನ ವಿದ್ವಾನ್ ಮಹಾದೇವ ಶಾಸ್ತ್ರಿಗಳು ವಿರಚಿಸಿದರೆಂದೂ ಇದರ ಸಂಪಾದಕರು ಹೇಳಿದ್ದಾರೆ. ಭಾರತದ ಪ್ರಖ್ಯಾತ ರಾಜನಾದ ವಿಕ್ರಮ, ಸ್ವರ್ಗಲೋಕದಲ್ಲಿ ಶಾಪಗ್ರಸ್ಥಳಾದ ಊರ್ವಶಿ, ಇವರ ಪ್ರೇಮದ ಕಥೆಯನ್ನು ಈ ನಾಟಕ ಒಳಗೊಂಡಿದೆ. ಶೃಂಗಾರ ರಸಪ್ರಧಾನವಾದ ನಾಟಕವಿದು. ಇದು ಐದು ಅಂಕಗಳಿಂದ ಕೂಡಿದೆ. ಈ ನಾಟಕದ ಕಡೆಯಲ್ಲಿ,

ಕಂ॥ ಮುನ್ನಂ ಬಸವ ಕವೀಂದ್ರಂ ।
ಕನ್ನಡಿಸಿರೆ ವಿಕ್ರಮೋರ್ವಶೀಯಮಪೂರ್ಣಂ ॥
ಸನ್ನುತ ನಂಜುಂಡಾರ್ಯಂ ।
ಕನ್ನಡಿಸಲ್ ಪಂಚಮಾಂಕಮಾದುದು ಪೂರ್ಣಂ ॥

ಎಂಬ ಪದ್ಯವಿದೆ.

ವಿಕ್ರಮೋರ್ವಶೀಯದ ಭರತವಾಕ್ಯ ಇಂತಿದೆ

ಕಂದ॥ ಪರಿಕಿಸಲನ್ಯೋನ್ಯಂ ಪಗೆ ।
ದೊರೆಕೊಂಡೊಂದೆಡೆಯೊಳಿರ್ದು ಸಿರಿ ಸರಸತಿಯರ್॥
ಪರತರ ಸಂಗದೆ ಖರದಿಂ ।
ದಿರದೀಯಲಿ ಸುಜನತತಿಗೆ ಶುಭಗಳನನಿಶಂ ॥

ಈ ನಾಟಕದಲ್ಲಿ ಐದು ಅಂಕಗಳಿವೆ.

## ಶೂರಸೇನ ಚರಿತೆ :

ಇದು ಇಂಗ್ಲಿಷ್ ಕವಿಶ್ರೇಷ್ಠನಾದ ಷೇಕ್ಸ್‌ಪಿಯರನ 'ಒಥೆಲೋ' ನಾಟಕದ ಅನುವಾದ. ಶಾಸ್ತ್ರಿಗಳಿಗೆ ಇಂಗ್ಲಿಷ್ ಬರುತ್ತಿರಲಿಲ್ಲ. ದಿವಂಗತ

ಸಿ. ಸುಬ್ಬರಾಯರಿಂದ ಓದಿಸಿ ಕೇಳಿ ಕನ್ನಡದ ಜಾಯಮಾನಕ್ಕನುಸರಿಸಿ ಹೆಸರುಗಳನ್ನು ಬದಲಾಯಿಸಿ ಇದನ್ನು ರಚಿಸಿದ್ದಾರೆ. ಈ ನಾಟಕವನ್ನು ಕೂಡ ದಿವಾನ್ ರಂಗಾಚಾರ್ಲು, ಅಂಬಲ್ ನರಸಿಂಹಯ್ಯಂಗಾರ್‌ರವರ ಪ್ರೋತ್ಸಾಹದಿಂದ ರಚಿಸಿದ್ದಾರೆ. ಕವಿ ಬಸವಪ್ಪ ಶಾಸ್ತ್ರಿಗಳು ಕಾರಣ ಪುರುಷರು, ವರಕವಿಗಳು, ಸಂಸ್ಕಾರಜನ್ಯ ಮಹಾನುಭಾವರು. ಆಶು ಕವಿಗಳು. ಕೈ॥ ಚಾಮರಾಜ ಒಡೆಯರಿಗೆ ಕನ್ನಡದ ಅಧ್ಯಾಪಕರಾಗಿದ್ದವರು. ರಾಜಗುರುಗಳು ಹಾಗೂ ರಾಜಪೂಜಿತರು. ಕಾವ್ಯವಾಚನಕ್ಕೆ ಸೀಮಾ ಪುರುಷರೆನಿಸಿಕೊಂಡಿದ್ದವರು. ಇವರು ಭೋಜನದಲ್ಲಿಯೂ ಜೀವನ ದಲ್ಲಿಯೂ ಸುಖಪುರುಷರು. ಇವರು ಶಾಸ್ತ್ರಜ್ಞಾನವಲ್ಲದೆ ದೇಶಸಂಚಾರ ಮಾಡಿ ಲೋಕಾನುಭವವನ್ನು ಕೂಡ ಪಡೆದಿದ್ದರು. ಇವರು ಸ್ಥೂಲ ಕಾಯರು, ಆಜಾನುಬಾಹುಗಳು, ಮಧುರಕಂಠಧ್ವನಿಯುಳ್ಳವರು, ಕೃಷ್ಣ ವರ್ಣವುಳ್ಳವರು, ಸರಸಮಾತುಗಾರರು, ಸ್ನೇಹಪರರು ಹಾಗೂ ದೈವಭಕ್ತಿ ಸಂಪನ್ನರು ಆಗಿದ್ದರೆಂದು ತಿಳಿದುಬಂದಿದೆ. ಇವರ ಮಗ ಕೈ॥ ಬಿ. ಮಹಾದೇವ ಶಾಸ್ತ್ರಿಗಳು ರಘುವಂಶದ ಮೊದಲನೆಯ ಸ್ವರ್ಗವನ್ನು ಚಂಪೂ ರೀತಿಯಲ್ಲಿ ಭಾಷಾಂತರಿಸಿದ್ದಾರೆ. ಕೈ॥ ಜೀರಿಗೆ ಬಸವಲಿಂಗಪ್ಪ ನವರು ೧೯೧೫ರಲ್ಲಿ "ಬಸವ ಶಾಸ್ತ್ರಿಸ್ತವನಂ" ಎಂಬ ಗ್ರಂಥವನ್ನು ಬರೆ ದಿದ್ದಾರೆ. ಆಧುನಿಕ ವಿದ್ವಾಂಸರನೇಕರು ಈ ಕವಿಯ ಕವನ ಶಕ್ತಿ, ಭಾಷಾಂತರ ಶಕ್ತಿ, ಕಲಾ ಪ್ರೌಢಿಮೆ, ಕಾವ್ಯ ವಿಮರ್ಶೆಗಳನ್ನು ಕುರಿತು 'ಶರಣ ಸಾಹಿತ್ಯ, ಮೊದಲಾದ ಪತ್ರಿಕೆಗಳಲ್ಲಿ ಲೇಖನ ಬರೆದಿದ್ದಾರೆ. ಸಮಗ್ರ ಕವಿಕಾವ್ಯ ವಿಚಾರವನ್ನು ಒಳಗೊಂಡಿರುವ ಒಂದು"ಬಸವಪ್ಪ ಶಾಸ್ತ್ರಿ ಪ್ರಶಸ್ತಿ" ಅಗತ್ಯವಾಗಿದೆ. ಬಸವಪ್ಪ ಶಾಸ್ತ್ರಿಗಳು ರಚಿಸಿರುವ, ಅವರ ಶಿಷ್ಯರಾದ ಕರ್ನಾಟಕ ಭಾಷಾರತ್ನ ಕರಿಬಸವ ಶಾಸ್ತ್ರಿಗಳು ಶಾಕುಂತಲದ ಪೀಠಿಕೆಯಲ್ಲಿ ಹೇಳಿರುವಂತೆ, ಕನ್ನಡ ಮಾಲತೀ ಮಾಧವ ನಾಟಕಂ, ಕನ್ನಡ ಹರ್ಷ ಚರಿತೆ ಗಳು ನಮಗೆ ಸಿಕ್ಕಿಲ್ಲ. ಅವನ್ನು ಸಂಶೋಧಿಸಿ ಪ್ರಕಟಿಸುವುದು ಅಗತ್ಯವಾಗಿದೆ. "ಪಾಪೀಚಿರಾಯುಃ ಸುಕೃತೀ ಗತಾಯುಃ" ಎಂಬ ವಾಕ್ಯವು ಕೈ॥ ಮಹಾ ಕವಿ ಬಸವಪ್ಪ ಶಾಸ್ತ್ರಿಗಳಿಗೆ ಚೆನ್ನಾಗಿ ಅನ್ವಯಿಸುತ್ತದೆ. ಕನ್ನಡ ಕಾವ್ಯ

ಪ್ರಪಂಚಕ್ಕೂ ಕನ್ನಡ ರಂಗಭೂಮಿಗೂ ಗಮಕಕಲೆಗೂ ಶ್ರೀ ಶಾಸ್ತ್ರಿಗಳು ಸಲ್ಲಿಸಿದ ಸೇವೆ ಅಮೋಘವಾದದ್ದು. ಅಭಿನವ ಕಾಲಿದಾಸ ಬಸವಪ್ಪ ಶಾಸ್ತ್ರಿಗಳನ್ನು ಆಧುನಿಕ ಕವಿಗಳನೇಕರು ತಮ್ಮ ಗ್ರಂಥಗಳಲ್ಲಿ ಸ್ಮರಿಸಿದ್ದಾರೆ. ಆಸ್ಥಾನ ವಿದ್ವಾನ್ ಬಿ. ಮಹಾದೇವ ಶಾಸ್ತ್ರಿಗಳು ತಮ್ಮ ಕನ್ನಡ ರಘುವಂಶದ ಪ್ರಾರಂಭದಲ್ಲಿ

ಕಂದ ॥ ಉಭಯ ಕವಿತಾರವಮಾವ ।
-ಲ್ಲಭನಭಿನವ ಕಾಲಿದಾಸ ಬಿರುದಾಂಕನುಮಾ ॥
ವಿಭು ಪೂಜನಲೋಲಂ ವಾ ।
ಗ್ವಿಭವಮನೆಮಗೊಲಿದು ಕುಡುಗೆ ಬಸವ ಕವೀಂದ್ರಂ॥

ಎಂದು ಹಿತಮಿತವಾಗಿ ಕವಿಯನ್ನು ಬಣ್ಣಿಸಿದ್ದಾರೆ.



# ಶ್ರೀ ಕ್ಷೇತ್ರ ಧರ್ಮಸ್ಥಳ

"ಕನ್ನಡನಾಡು ಪುಣ್ಯದ ಬೀಡು, ಕಲೆಗಳ ಮಾಡು, ಸುಕೃತದ ಗೂಡು, ಧರ್ಮದ ಕಾಡು ಎಂದು ಕಬ್ಬಿಗನೊಬ್ಬನು ಹೇಳಿರುವಮಾತು ನಿಜಕ್ಕೂ ಸತ್ಯವಾಗಿದೆ. ಇದಕ್ಕೆ ನಿದರ್ಶನವಾಗಿ ಕರ್ಣಾಟಕದಲ್ಲಿ ಅತಿ ಪ್ರಾಚೀನ ತನುವೆನಿಸಿದ, ಹಂಪೆ, ಗೋಕರ್ಣ, ಮಹಾಕೂಟ, ಗಜಾ ರಣ್ಯ ಮೊದಲಾದ ಕ್ಷೇತ್ರಗಳು ಇಂದಿಗೂ ಕಂಗೊಳಿಸುತ್ತವೆ.

ಈ ಕ್ಷೇತ್ರಮಾಲೆಯಲ್ಲಿಯೇ ಜಾಗ್ರತ ಸ್ಥಾನಗಳೆನಿಸಿದ, ಬೆಟ್ಟದ ಮಾದೇಶ್ವರ, ರಾಘವೇಂದ್ರಸ್ವಾಮಿಗಳ ಮಂತ್ರಾಲಯ, ಗದ್ದಿಗೆ ಮರ ಗಳ ಸಿದ್ದ" ಕೊಟ್ಟೂರು ಬಸವೇಶ್ವರ, ಎಡೆಯೂರು ಸಿದ್ಧಲಿಂಗೇಶ್ವರ, ಸೊನ್ನಲಿಗೆ ಸಿದ್ಧರಾಮೇಶ್ವರ, ಬೆಟ್ಟದ ರೇವಣಸಿದ್ಧೇಶ್ವರ, ಗುಬ್ಬಿ ಚೆನ್ನಬಸವೇಶ್ವರ, ಕಲ್ಬುರ್ಗಿ ಶರಣ ಬಸವೇಶ್ವರ ಮೊದಲಾದ ಜಾಗ್ರತ ಸ್ಥಾನಗಳೂ, ಶ್ರೀ ಕಂಠನ ನಂಜನಗೂಡು, ಶ್ರೀ ಕೃಷ್ಣನ ಉಡುಪಿ, ವೀರಭದ್ರನ ನಿಜಗಲ್ಲು, ಕಾರ್ತಿಕೇಯನ ಸೊಂಡೂರು, ಆದಿಶಕ್ತಿಯ ಚಾಮುಂಡಿ, ಕೊಲ್ಲೂರು, ಸವದತ್ತಿ, ಶೃಂಗೇರಿ, ಬನಶಂಕರಿ ಮೊದಲಾದ ಸುಕ್ಷೇತ್ರಗಳೂ ಕಂಗೊಳಿಸುತ್ತಿವೆ. ಈ ಎಲ್ಲ ಕ್ಷೇತ್ರಗಳಲ್ಲಿಯೂ ಧರ್ಮ ಸ್ಥಳ ಕ್ಷೇತ್ರವು ವಿಶೇಷವಾದ ಗುಣಗಳಿಂದ ತಾನೇ ತಾನಾಗಿ ಕಂಗೊಳಿ ಸುತ್ತಿದೆ.

ಧರ್ಮಸ್ಥಲವು ಮೈಸೂರು ರಾಜ್ಯದ ದಕ್ಷಿಣ ಕನ್ನಡ ಜಿಲ್ಲೆಯ ನೇತ್ರಾವತೀ ನದಿಯ ತೀರದಲ್ಲಿ ಪ್ರಕೃತಿ ಸೌಂದರ್ಯದ ಮಡಲಿನಲ್ಲಿದೆ. ಇದರ ಮೊದಲ ಹೆಸರು 'ಕುಡುಮ' ಎಂದು. ಅಲ್ಲಿ ಸಾವಿರಾರು ವರ್ಷ ಗಳ ಹಿಂದೆ 'ನೆಲ್ಯಾಡಿ ಬೀಡು, ಎಂಬ ಜೈನರ ವಸತಿಸ್ಥಾನವಿತ್ತು. ಸತ್ಯ

ವಂತರಾದ ಬರಮಣ್ಣ ಹೆಗ್ಗಡೆ, ಅಂಬುದೇವಿ ಬಲ್ಲಾಳತಿ ಎಂಬ ದಂಪತಿ ಗಳು ವಾಸ ಮಾಡುತ್ತಿದ್ದರು. ಕೈಲಾಸದಿಂದ ಬಂದು ಭೂಲೋಕದಲ್ಲಿ ಸಂಚರಿಸುತ್ತಿದ್ದ ನಾಲ್ವರು ಧರ್ಮದೇವತೆಗಳು, (ಕಾಳರಾಹು, ಕಳ ರ್ಪಾಯಿ, ಕುಮಾರಸ್ವಾಮಿ, ಕನ್ಯಾಕುಮಾರಿ ಎಂಬುವರು) ಆ ದಂಪತಿ ಗಳ ಭಕ್ತಿಗೆ ಮೆಚ್ಚಿ ಅಲ್ಲಿಯೇ ನೆಲೆಸಿದರು. ಇವರ ಸಹಾಯಕ್ಕಾಗಿ ಅವರ ದೂತನಾದ ಅಣ್ಣಪ್ಪನೆಂಬ ದೇವತೆಯು (ಧರ್ಮದೇವತೆಗಳ ನೆರವಿಗಾಗಿ) ಬಂದು ಅಲ್ಲಿಯೇ ಇರತೊಡಗಿದನು. ಅಲ್ಲಿಗೆ ಬರುವ ಬ್ರಾಹ್ಮಣರ, ಜಂಗಮರ, ಸಾಧುಸಂತರ ಪೂಜೆಗಾಗಿ, ಧರ್ಮ ದೇವತೆಗಳ ಪ್ರೇರಣೆಯಂತೆ ಭೂತಪತಿಯಾದ ಅಣ್ಣಪ್ಪನು ಒಂದು ಶಿವಲಿಂಗವನ್ನು ಕಾಶಿಯಿಂದ ಧರ್ಮಸ್ಥಳಕ್ಕೆ ತಂದನು. ಈಗ ಧರ್ಮಸ್ಥಳದಲ್ಲಿರುವ ಶ್ರೀಮಂಜುನಾಥಸ್ವಾಮಿಯು ಅಣ್ಣಪ್ಪ ದೇವರು ತಂದ ಶಿವಲಿಂಗವೇ ಆಗಿದೆ. ಅಂದಿನಿಂದ ಶ್ರೀ ಧರ್ಮಸ್ಥಳವು 'ಮಂಜು ನಾಥ ಕ್ಷೇತ್ರ' ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಹೆಗ್ಗಡೆಯವರು ಸ್ವಾಮಿಗೆ ದಿವ್ಯವಾದ ದೇವಾಲಯವನ್ನು ಭಕ್ತಿಯಿಂದ ಕಟ್ಟಿಸಿದರು. ಈ ಮಂಜುನಾಥ ಸ್ವಾಮಿಯ ಅರ್ಚನೆಯನ್ನು ಒಮ್ಮೆ ಸ್ವಾದಿಯ ವಾದಿ ರಾಜ ಸ್ವಾಮಿಗಳು ಮಾಡಿದಂತೆ ಐತಿಹ್ಯವಿದೆ. 'ಧರ್ಮಸ್ಥಳ' ಎಂಬ ಹೆಸರು ಅವರಿಂದಲೇ ಬಂದಿತೆಂದು ಕೆಲವರು ಹೇಳುತ್ತಾರೆ. ಶ್ರೀ ಕ್ಷೇತ್ರ ಧರ್ಮಸ್ಥಲದಲ್ಲಿ ವರ್ಷಕ್ಕೊಮ್ಮೆ ಕಾರ್ತೀಕದ ಕಡೆಯಲ್ಲಿ ಲಕ್ಷ ದೀಪೋ ತ್ಸವ ನಡೆಯುತ್ತದೆ. ಆಗ ಅಲ್ಲಿ ಧರ್ಮಸಮ್ಮೇಳನ, ಸಾಹಿತ್ಯ ಸಮ್ಮೇ ಳನ ಮತ್ತು ಕಲಾಪ್ರದರ್ಶನಗಳನ್ನು ಹೆಗ್ಗಡೆಯವರು ನಡೆಸುತ್ತಾರೆ. ಯಾತ್ರಿಗೆ ಬಂದ ಜನಗಳ ಊಟ ಮತ್ತು ವಸತಿ ಸೌಕರ್ಯವನ್ನು ಮಾನ್ಯ ಹೆಗ್ಗಡೆಯವರೇ ನಡೆಸುತ್ತಾರೆ. ದಿವಂಗತ ಧರ್ಮಾತ್ಮ ಮಂಜಯ್ಯ ಹೆಗ್ಗಡೆಯವರ ಕಾಲದಲ್ಲಿ ಈ ಕ್ಷೇತ್ರಸರ್ವತೋಮುಖನಾದು

ಏಳಿಗೆಯನ್ನು ಪಡೆಯಿತು. ಈಗಿನ ಹೆಗ್ಗಡೆಯವರಾದ ಮಾನ್ಯರತ್ನ ವರ್ಮ ಹೆಗ್ಗಡೆಯವರು ಕೂಡ ವಿಶ್ವಬಂಧುಗಳೂ ವಿಶಾಲ ಮನಸ್ಕರೂ ಆಗಿ ಕ್ಷೇತ್ರದ ಅಭಿವೃದ್ಧಿಗೂ, ಯಾತ್ರಾರ್ಥಿಗಳ ಹಿತ ಚಿಂತನೆಗೂ ಮಿಗಿಲಾದ ಏರ್ಪಾಡುಗಳನ್ನು ಮಾಡುತ್ತಿದ್ದಾರೆ.

ಈ ಕ್ಷೇತ್ರಕ್ಕೆ ಬಂದು ಹೋಗುವ ಜನ ಶ್ರೀ ಮಂಜುನಾಥೇಶ್ವರ ದೇವಾಲಯಕ್ಕೆ ಅನತಿ ದೂರದಲ್ಲಿರುವ ತೀರ್ಥಂಕರ ಚಂದ್ರಪ್ರಭ ಸ್ವಾಮಿಯವರ ಬಸದಿಯನ್ನು ಸಂದರ್ಶಿಸುವುದು ಅಗತ್ಯ. ಏಕೆಂದರೆ, ಈ ದೇವನು ಅನಾದಿಕಾಲದಿಂದ ಅಲ್ಲಿ ನೆಲಸಿದ್ದಾರೆ. ಚಂದ್ರನಾಥನ ಸಂದರ್ಶನ, ನೇತ್ರಾವತಿಯ ಸ್ನಾನ, ಶ್ರೀ ಮಂಜುನಾಥನ ಪೂಜೆ, ಧರ್ಮದೇವತೆಗಳ ಅನುಗ್ರಹ, ಅಣ್ಣಪ್ಪದೇವರ ಕೃಪೆ ಇವನ್ನೆಲ್ಲಾ ಪಡೆಯಲು ಧರ್ಮಸ್ಥಳದ ಯಾತ್ರೆ ಅತಿ ಅಗತ್ಯವಾದುದು.

ಕ್ಷೇತ್ರಮಾಹಾತ್ಮ್ಯೆಯನ್ನು ನೋಡಬೇಕೆನ್ನುವವರು ಧರ್ಮಸ್ಥಳಕ್ಕೆ ಹೋಗಿ ನೋಡಬೇಕು. ಅಲ್ಲಿ, ಸುಳ್ಳು, ಕಳ್ಳತನ, ಮೋಸಗಳಿಗೆ ಎಡೆಯಿಲ್ಲ, ಹಿಂಸೆ, ಅತ್ಯಾಚಾರಗಳಿಗೆ ಆಸ್ಪದವಿಲ್ಲ, ನಿಜಕ್ಕೂ 'ಧರ್ಮಸ್ಥಳ' ಎಂಬ ಹೆಸರು ಅನ್ವರ್ಥ, ಕರ್ನಾಟಕವು ಪುಣ್ಯಭೂಮಿ ಎಂಬುದಕ್ಕೆ ಧರ್ಮಸ್ಥಳವು ಸಾಕ್ಷಿ. ಧರ್ಮಸ್ಥಳದ ಅಧಿದೇವತೆ ಮಂಜುನಾಥ ಶಿವ, ಅರ್ಚಕರು ವೈಷ್ಣವ ಬ್ರಾಹ್ಮಣರು, ಯಜಮಾನರು ಜೈನ ಹೆಗ್ಗಡೆಯವರು ಎಂಬಲ್ಲಿಯೇ ನಾವು ಧರ್ಮಸಮನ್ವಯನ್ನು ಕಾಣಬಹುದು.



# ಜೋಗದ ಜಲಪಾತ

೧

ಹರನ ಶಿರದಿಂ ಗಂಗೆ ಧರೆಗಿಳಿವ ತೆರನಂತೆ
ವರ ಕವಿಯ ಹೃದಯದಿಂ ಪೊರಮಡುವ ರಸದಂತೆ ।
ಸರಸತಿಯ ಕೈವೀಣೆಯಿಂಚರವೊ ಎಂಬಂತೆ
ವರ ಶರಾವತಿ ಗರ್ತ ಕುರುಳುತಿರ್ದಪಳಲ್ಲಿ ।

೨

ಪ್ರಕೃತಿಸೌಂದರ್ಯದಿಂ ಶೋಭಿಸುವ ಜೋಗದೊಳು
ಸುಕೃತಿಯ ನೈರ್ಮಲ್ಯಜೀವನವೊ ಎಂಬವೊಲು ।
ಸತ್ಕೃತಿಗಳೊಳಗಿರ್ಪ ಗಾಂಭೀರ್ಯದಂದದೊಳು
ಶ್ರೀ ಶರಾವತಿಯ ಜಲಪಾತ ಮೋಹಿಸೆದಪುದು ।

೩

ಗರು ವಿದ್ಯುದಾಗಾರಕಾಶ್ರಯವು ತಾನೆನಿಸಿ
ಸರಸಕವಿ ರಸಿಕರಿಗೆ ಸ್ಫೂರ್ತಿದಾಯಕವೆನಿಸಿ ।
ಧರಣಿಯೊಳು ಜಲಪಾತಗಳ ರಾಣಿಯೆಂದೆನಿಸಿ
ಪರಮಪಾವನೆ ಶರಾವತಿಯು ರಂಜಿಪಳಲ್ಲಿ

೪

ಕರ್ಣಾಟಕದ ಕೀರ್ತಿಗಿದುವೆ ಕಾರಣವೆನಿಸಿ
ಕರ್ಣಾರಿವರದನದ್ಭುತದ ಸೃಷ್ಟಿಯು ಎನಿಸಿ ।
ನಿರ್ಣೈಸಲಳೆಯೊಳಿದಕೆಣೆಯಿಲ್ಲವೆಂದೆನಿಸಿ
ಅರ್ಣವಾವೃತ ಮಹಿಯೊಳಿದುವೆ ಶೋಭಿಸುತಿಹುದು ।

೫

ಶ್ರೀರಾಮಚಂದ್ರಮನ ಬಾಣದಿಂದುದಿಸಿಹುದು
ಆ ರಾಮಬಾಣದಿಂದದಿ ಕೀರ್ತಿಯಾಂತಿಹುದು ।
ಆರಾಮವನು ಬಯಸುತಿರ್ಪ ಸುಜನರಿಗಿಲ್ಲಿ
ಶ್ರೀರಾಮಚರಿತೆಯೊಲು ಸುಖಶಾಂತಿ ಲಭಿಸುವುದು ।

೬

ರಾಜನಾರೀವಿಯನು ರಾಣಿಯಾತಿ ವಿನಯವನು
ಭೂಜನರ ಬೆದರಿಸುವ ಆರ್ಭಟದ ರೀತಿಯನು ।
ತೇಜದಿಂಕೂಡಿರುವ ಬಾಣದಾ ಪೌರುಷವ
ಈ ಜಗದಿ ಜೋಗದೊಳು ಜಲಪಾತ ತೋರ್ದಪುದು

೭

ಆಗಸದಿ ರಂಜಿಸುವ ಏಳು ಬಣ್ಣದ ಬಿಲ್ಗಳೀ—
ಜೋಗ ಜಲಪಾತದಲ್ಲಿ ಮೇಣ್ ತೋರ್ದಪವು ।
ಮೇಗೆ ಕಾಣಿಸುವ ತುಂತುರು ಹನಿಯು ಭಾವಿಸಲು
ಆ ಗಗನ ಚುಂಬಿತದ ಹಿಮಗಿರಿಯ ಹೋಲುವುದು ।

೮

ಕಾನನದ ಮಧ್ಯದೊಳು ಸ್ವಚ್ಛಂದದಿಂ ಹರಿದು
ಭಾಮಿನಿ ಶರಾವತಿಯು ಮಿಂಚುಶಕ್ತಿಯನಿಳೆಗೆ ।
ತಾನೆ ತಾನಾಗಿತ್ತು ದೇಶವನು ರಕ್ಷಿಪಳು
ಭೂಮಿಯೊಳು ಮಿಗಿಲಾದ ಗೌರವವ ಗಳಿಸಿಹಳು

ತಾ॥ ೮-೫-೧೯೬೨ ‘ ಶೂಲಪಾಣಿ ’

(ಜೋಗದ ಮಂದಿರ)



# ಲೇಪಾಕ್ಷಿ ಕ್ಷೇತ್ರ

ಆಂಧ್ರ ಕರ್ಣಾಟಕಗಳ ಗಡಿಯಲ್ಲಿರುವ ಒಂದು ಕ್ಷೇತ್ರ ಲೇಪಾಕ್ಷಿ. 'ಲೇಪಾಕ್ಷಿ ನೋಡದ್ದು ಪಾಪಾಕ್ಷಿ' ಎಂಬ ಗಾದೆಯೂ ಉಂಟು. ಈಗ ಲೇಪಾಕ್ಷಿ ಸಣ್ಣ ಹಳ್ಳಿ. ಇದು ಅನಂತಪುರ ಜಿಲ್ಲೆಯ ಹಿಂದೂಪುರದಿಂದ ಪೂರ್ವಕ್ಕೆ ೯ ಮೈಲಿ ದೂರದಲ್ಲಿದೆ. ಈ ಗ್ರಾಮದ ಪಕ್ಕದಲ್ಲಿ 'ಕುಮಾರ ಪರ್ವತ' ಎಂಬ ಸಣ್ಣ ಬೆಟ್ಟವಿದೆ. ಊರೊಳಗೆ ತಿರುಮಲಸ್ವಾಮಿ ದೇವಾ ಲಯವೊಂದಿದೆ. ಈ ಲೇಪಾಕ್ಷಿಯನ್ನು ನೋಡಿ ತಣಿಯಬೇಕು. ಅಲ್ಲಿರುವ ವೀರಭದ್ರಸ್ವಾಮಿಯ ದೇವಸ್ಥಾನದ ಶಿಲ್ಪ ವೈಭವವನ್ನು ಕಂಡು ಆನಂದಿಸ ಬೇಕು. ಇದನ್ನು ಕಟ್ಟಿಸಿದವನು 'ವಿರುಪಣ್ಣ' ಎಂಬ ವಿಜಯ ನಗರದ ದಂಡನಾಯಕನು. ಇವನು ವೀರಶೈವನು. ಇವನ ತಂದೆಯ ಹೆಸರು ಲಕ್ಕಶೆಟ್ಟಿ. ೧೬ನೆಯ ಶತಮಾನದಲ್ಲಿ ಕೃಷ್ಣದೇವರಾಯನು ವಿಜಯನಗರ ಸಾಮ್ರಾಜ್ಯ ಚಕ್ರವರ್ತಿಯಾಗಿದ್ದಾಗ ಈ ವಿರುಪಣ್ಣನು ಮಂಡಲಾಧಿಕಾರಿ ಯಾಗಿ ಪೆನುಗೊಂಡೆಯಲ್ಲಿದ್ದನು. ಪರಮ ಶಿವಭಕ್ತ ವಿರುಪಣ್ಣನ ಮನೆಯ ದೇವರು ವೀರಭದ್ರಸ್ವಾಮಿ. ಲೇಪಾಕ್ಷಿ ಅವನ ಆಡಳಿತಕ್ಕೆ ಸೇರಿದ್ದಿತು. ಇಲ್ಲಿನ ಪ್ರಕೃತಿ ಸೌಂದರ್ಯ ಮನಮೋಹಕವಾಗಿದೆ. ಒಂದು ದಿನ ಅವನು ರಾಜಕಾರ್ಯಕ್ಕಾಗಿ ಈ ಪ್ರಾಂತಕ್ಕೆ ಬಂದಿದ್ದಾಗ ಇಲ್ಲಿನ ಕುಮಾರಪರ್ವತ ದಲ್ಲಿ ವೀರಭದ್ರ ದೇವಾಲಯವನ್ನು ಕಟ್ಟಿಸಬೇಕೆಂದು ಸಂಕಲ್ಪಿಸಿ ಕುಶಲರಾದ ಶಿಲ್ಪಿಗಳನ್ನು ಕರೆಯಿಸಿದನು. ಕಾರ್ಯಾರಂಭ ಮಾಡಿಯೇ ಬಿಟ್ಟನು. ತನ್ನ ಭಂಡಾರದ ಹಣವನ್ನು ಧಾರಾಳವಾಗಿ ವ್ಯಯಮಾಡಿದನು. ಚಕ್ರವರ್ತಿ ಕೃಷ್ಣದೇವರಾಯನಿಗೆ ದೂರು ಬಂತು. ಅರಸರ ಅಪ್ಪಣೆಯಿಲ್ಲದೆ ವಿರು ಪಣ್ಣನು ಸಾಹಸದ ಕೆಲಸಮಾಡಿದನೆಂದು ಪ್ರಭುವಿಗೆ ಅರಿಕೆಯಾಯಿತು. ಪ್ರಭುವಿನ ಕೋಪಕ್ಕೆ ಪಾತ್ರನಾದ ವಿರುಪಣ್ಣನ ಈ ಅಪರಾಧಕ್ಕಾಗಿ ಅವನ ಎರಡು ಕಣ್ಣುಗಳನ್ನೂ ಕೀಳಿಸಬೇಕೆಂದು ರಾಜಾಜ್ಞೆಯಾಯಿತು.

ಮಾಂಡಲಿಕ ವಿರುಪಣ್ಣನು ನಿಸ್ಸೀಮ ರಾಜಭಕ್ತನು; ಅಂತೆಯೇ ಅನನ್ಯ ದೈವಭಕ್ತನು. ಈ ನಿರೂಪವನ್ನು ನೋಡಿದ ವಿರುಪಣ್ಣ ಹೆದರಲಿಲ್ಲ! ಅಳುಕಲಿಲ್ಲ. ಕೂಡಲೇ ತನ್ನ ಕೈಯಾರೆ ತನ್ನ ಎರಡು ಕಣ್ಣುಗಳನ್ನೂ ಕಿತ್ತು ಹಾಕಿಕೊಂಡನು. ಆ ಕಣ್ಣುಗಳು ಬಿದ್ದ ಸ್ಥಳದಲ್ಲಿ ಈಗಲೂ ಎರಡು ಸಣ್ಣ ಗುಣಿಗಳಿವೆ. ಒಂದು ಕೆಂಪಗಿದೆ: ಇನ್ನೊಂದು ಬೂದು ಬಣ್ಣವಾಗಿದೆ. ಇದು ಒಂದು ರೀತಿಯ ಕಥೆ. ಈ ವಿಚಾರವಾಗಿ ಮತ್ತೊಂದು ದಂತ ಕಥೆ ಇದೆ. ಈ ದೇವಸ್ಥಾನದಲ್ಲಿ ಹೊರಗಡೆ ಒಂದು ದೊಡ್ಡ ನಾಗಲಿಂಗವಿದೆ. ಏಳು ಹೆಡೆಗಳ ಸರ್ಪ; ಅದರಡಿಯಲ್ಲಿ ದೊಡ್ಡ ಶಿವಲಿಂಗ; ಪಾಣಿವಟ್ಟಲು ಇದನ್ನು ಕಡೆದ ಶಿಲ್ಪಿ ಸುತ್ತಲೂ ತೆರೆಯನ್ನು ಹಾಕಿಕೊಂಡು ತನ್ನ ಕೆತ್ತನೆಯ ಕೆಲಸ ವನ್ನು ನಡೆಯಿಸುತ್ತಿದ್ದನಂತೆ. ಇತರರ ದೃಷ್ಟಿ ತಾಕೀತೆಂಬುದೇ ಅವನಿಗಿದ್ದ ಭಯ. ಎಂದಿನಂತೆ ಶಿಲ್ಪಿಯ ತಾಯಿ ಮಧ್ಯಾಹ್ನಕಾಲಕ್ಕೆ ಸರಿಯಾಗಿ ಮನೆಯಿಂದ ಅವನಿಗೆ ಊಟ ತಂದಳು. ಮಗನಿಗಾಗಿ ಕಾದು ನೋಡಿದಳು. ದಿನದಂತೆ ಮಗ ಊಟಕ್ಕೆ ಬರಲಿಲ್ಲ. ಹೊತ್ತಾಯಿತಲ್ಲಾ ಎಂದು ತಾಯಿ ಮಗನನ್ನು ಕರೆಯಬೇಕೆಂದು ನೂರು ಹೆಜ್ಜೆ ದೂರದಲ್ಲಿದ್ದ ಆ ಸ್ಥಳಕ್ಕೆ ಹೋಗಿ ತೆರೆಯನ್ನು ಓರೆ ಮಾಡಿ ಮಗನನ್ನು ಕರೆದಳು. ಇನ್ನೇನು ನಾಗಾ ಭರಣವನ್ನು ಮಾಡಿ ಮುಗಿಸಿಯೇ ಬಿಟ್ಟಿದ್ದನು. ತಾಯಿಯ ದೃಷ್ಟಿ ಬಿದ್ದ ಕೂಡಲೇ ಆ ನಾಗಾಭರಣ ಸೀಳಿಹೋಯಿತಂತೆ. ಈಗಲೂ ಅದು ಸೀಳಾಗಿಯೇ ನಿಂತಿದೆ. ಎಂತಹ ಅಚಾತುರ್ಯವಾಯಿತೆಂದು ಶಿಲ್ಪಿ ಕುಪಿತ ನಾಗಿ ತನ್ನ ತಾಯಿಯ ಕಣ್ಣುಗಳನ್ನು ಕಿತ್ತೆಸೆದನಂತೆ. ಕಲ್ಯಾಣಮಂಟಪದ ಗೋಡೆಯ ಮೇಲೆ ಬಿದ್ದ ಆ ಎರಡು ಕಣ್ಣುಗಳ ಗುರುತುಗಳು ಈಗಲೂ ಇವೆ. ಇವೇ ಮೇಲೆ ಹೇಳಿದ ಎರಡು ಗುಣಿಗಳು. ಐತಿಹಾಸಿಕ ದೃಷ್ಟಿಯಿಂದ ನೋಡಿದರೆ, ವಿರುಪಣ್ಣ ಕೃಷ್ಣದೇವರಾಯನ ಕಾಲಾನಂತರ ಅಚ್ಯುತ ರಾಯನ ಕಾಲದಲ್ಲಿಯೂ ಅಧಿಕಾರಿಯಾಗಿದ್ದನೆಂದು ಖಚಿತವಾಗಿ ಶಾಸನ ಗಳಿಂದ ತಿಳಿದು ಬರುತ್ತದೆ. ಇದರಿಂದ ಕೃಷ್ಣದೇವರಾಯನ ಕೋಪಕ್ಕೆ ಒಳಗಾದ ಸಂಗತಿ ನಿಜವಿರಲಾರದು. ಇದು ಶಿವಭಕ್ತರ ವಿರೋಧಿಗಳು ಕಟ್ಟಿದ ಕಥೆಯಿರಬೇಕು. ಈ ದೇವಸ್ಥಾನದ ಎಡಭಾಗದಲ್ಲಿ ಕಲ್ಯಾಣ

ಮಂಟಪದ ಹತ್ತಿರದಲ್ಲಿ ಉಯ್ಯಾಲೆ ಕಲ್ಲುಗಳಿವೆ. ಇದರ ಮುಂಭಾಗದಲ್ಲಿ ಬಂಡೆಯ ಮೇಲೆ ಒಂದು ದೊಡ್ಡ ಹೆಜ್ಜೆಯ ಗುರುತಿದೆ. ದುರ್ಗಾದೇವಿಯು ಒಂದು ದಿನ ಇಲ್ಲಿ ಉಯ್ಯಾಲೆಯಾಡುತ್ತಿದ್ದು ಥಟ್ಟನೆ ಹಾರಿದಳೆಂದೂ, ಬಲಗಾಲ ಹೆಜ್ಜೆಯ ಗುರುತೇ ಇದೆಂದೂ, ಎಡಗಾಲ ಹೆಜ್ಜೆಯ ಗುರುತು ಪೆನಗೊಂಡೆ ಬೆಟ್ಟದ ಮೇಲಿದೆಯೆಂದೂ ಹೇಳುತ್ತಾರೆ. ಪೆನುಗೊಂಡೆ ಇಲ್ಲಿಂದ ಉತ್ತರಕ್ಕೆ ಸುಮಾರು ೧೮ ಮೈಲಿ ದೂರದಲ್ಲಿದೆ. ವಿಜಯನಗರ ಸಾಮ್ರಾಜ್ಯ ಕಾಲದಲ್ಲಂತೂ ದುರ್ಗಾದೇವಿಯ ಪೂಜೆ ವಿಶೇಷವಾಗಿ ನಡೆಯು ತ್ತಿತ್ತು ಎಂಬುದು ನಿಜ. ವಿರುಪಣ್ಣ ಆ ದೇವಿಯ ಪೂಜೋತ್ಸವಗಳನ್ನು ಭಕ್ತಿಯಿಂದ ನಡೆಸುತ್ತಿದ್ದನು. ರಂಗಮಂಟಪದ ಚಾವಣಿಯಲ್ಲಿ ಆ ಕಾಲದಲ್ಲಿ ಬರೆದ ಚಿತ್ರಗಳಿವೆ. ಧರ್ಮ ಚೋಳನ ಕಾಲದ ಕಥೆಯೊಂದು ಅಲ್ಲಿದೆ. ಈ ಚಿತ್ರಗಳು ಅಜಂತೆಯ ಚಿತ್ರಕಲೆಯನ್ನು ನೆನಪಿಗೆ ತರುತ್ತದೆ. ದೇವಾಲಯವು ಅಪೂರ್ಣವಾಗಿದೆ. ಲೇಪಾಕ್ಷಿಯಲ್ಲಿರುವ ದೊಡ್ಡ ಬಸವಣ್ಣ ಭಾರತದಲ್ಲಿಯೇ ಹಿರಿಯದೆನಿಸಿದೆ. ನಾಡು ನುಡಿಗಳ ಅಭಿಮಾನಿಗಳು ನೋಡಬೇಕಾದಕ್ಷೇತ್ರವಿದು. ಶಿಲ್ಪಕಲೆ ಗಮನಾರ್ಹವಾಗಿದೆ.

ಕೃಷ್ಣದೇವರಾಯನು ವೈಷ್ಣವಕ್ಕೆ ಒಲಿದ ಮೇಲೆ, ಆಸಾಮ್ರಾಜ್ಯ ದಲ್ಲಿನ ಶೈವರು ಅಸಮಾಧಾನವಾದಂತೆ ಕಾಣುತ್ತದೆ. ಈ ಶೈವ ವೈಷ್ಣವ ಪಂಥಗಳ ಅಸಮಾಧಾನವೇ ೧೫೬೫ ರಲ್ಲಿ ತಾಳೀಕೋಟೆ ಹತ್ತಿರ ರಕ್ಕಸತಂಗಡಗಿ ಯುದ್ಧದಲ್ಲಿ ವಿಜಯ ನಗರಕ್ಕೆ ಸೋಲಾಗಲು ಕಾರಣವೆಂದು ಕೆಲವರು ತರ್ಕಿಸುತ್ತಾರೆ. ಇದರ ನಿದರ್ಶನವಾಗಿ ಹಂಪೆ ಯಲ್ಲಿನ ವೈಷ್ಣವ ಗುಡಿಗಳನ್ನು ಮಾತ್ರ ಒಡೆದು, ಶೈವ ಗುಡಿಗಳನ್ನು ಮುಸಲ್ಮಾನರು ಬಿಟ್ಟು ಹೋಗಲು ಕಾರಣವೇನು ಎಂಬ ಪ್ರಶ್ನೆಗೆ ಉತ್ತರ ಸಿಗುವುದಿಲ್ಲ. ರಾಜನು ಧರ್ಮಾಂಧನಾದರೆ ರಾಜ್ಯದ ಗತಿ ಏನಾಗುತ್ತ ದೆಂಬುದಕ್ಕೆ ಇದು ನಿದರ್ಶನವಾಗಿದೆ. ಆದುದರಿಂದಲೇ ವಿವೇಕಿಗಳಾದ ರಾಜರು ಎಲ್ಲ ಧರ್ಮದವರನ್ನೂ ಸಮಾನವಾಗಿ ಗೌರವಿಸಿದ ನಿದರ್ಶನಗಳು ಚರಿತ್ರೆಯಲ್ಲಿವೆ.



# ತಲಕಾವೇರಿ

೧

ಬ್ರಹ್ಮಗಿರಿ ಶಿಖರದಲಿ ಅಮ್ಮ ಕಾವೇರಿಯು
ಸುಮ್ಮಾನದಿಂದ ಕಾಣಿಸಿ ಕೊಂಬಳು ।
ಬ್ರಹ್ಮದೇವನ ಮುಖದಿ ವೇದ ವುದಿಸಿದ ತೆರದಿ
ನಮ್ಮ ಕಾವೇರಿ ದೇವಿಯು ಜನಿಸಳು ॥

೨

ಕನ್ನಡಾಂಬೆಯ ಹಣೆಯ ಕುಂಕುಮದ ವೋಲಿರುವ
ಚೆನ್ನ ಕೊಡಗಿನ ಬ್ರಹ್ಮಗಿರಿ ಮಧ್ಯದಿ ।
ಸನ್ನುತಳು ಕಾವೇರಕನ್ಯೆ ಜನಿಸೈದಿಹಳು
ಕನ್ನಡರನುದ್ಧರಿಸೆ ಕರುಣೆಯಿಂದ ॥

೩

ಭೂಮಿಗಿಳಿದಿಹ ಸಗ್ಗವೆಂಬವೊಲು ಶೋಭಿಪುದು
ರಾಮಣೀಯಕ ಸೃಷ್ಟಿಸೌಂದರ್ಯದಿ ।
ಈ ಮಹಿಯೊಳಿದಕೆ ಯೆಣೆ ಮುನ್ನಿಲ್ಲವೆಂದೆನಿಸಿ
ಆ ಮಹಾ ಮಹಿಮನಿಧಿ ಬ್ರಹ್ಮಗಿರಿಯು ॥

೪

ಗಿರಿಶಿಖರದಿಂದಿಳಿದು ಭಾಗಮಂಡಲಕೊಲಿದು
ಹರಿಯುವಳು ಜುಳುಜುಳು ಧ್ವನಿಯಿಂದಲಿ !
ಧರೆಯ ಪಾವನಗೊಳಿಸೆ ಮೈಸೂರಿಗೈ ತಂದು
ಹಿರಿಯ ಕನ್ನಂಬಾಡಿಯೊಳು ನಿಲುವಳು ॥

೫

ಶ್ರೀರಂಗಪಟ್ಟಣವ ಬಳಸಿ ಶ್ರೀಹರಿಯನೊಲಿಸಿ
ಶಿವಸಮುದ್ರದಿ ಧುಮುಕಿ ಧರೆಯ ಬೆಳಗಿ ।
ಶ್ರೀರಂಗಕೈತಂದು ಮೆಟ್ಟೂರಿನೊಳು ನಿಂದು
ಭೂರಿ ನಂದನವೆನಿಸಿ ತಮಿಳುನಾಡ ॥

೬

ತಿರುಚನಾಪಳ್ಳಿ ತಂಜಾವೂರುಗಳ ತಣಿಸಿ
ತಿರೆಯ ನಂದನವೆನಿಸಿ ಸಿರಿಯನೊಲಿಸಿ ।
ತೆರಳುವಳು ಸಾಗರಕೆ ಒರಿಕ್ಕೈಯೊಳೀ ತಾಯಿ
ಪರಮ ಪಾವನೆಯಹಳು ಕಾವೇರಿಯು ॥

೭

ಭುಕ್ತಿಮುಕ್ತಿಗಳಿಂಗೆ ಮಾತೃಸ್ಥಾನವು ಎನಿಸಿ
ತೀರ್ಥಕ್ಷೇತ್ರಗಳಿಂದ ಕಂಗೊಳಿಸುತೆ ।
ಶಕ್ತಿ ರೂಪಿಣಿಯೆನಿಸಿ ಮಿಂಚುಶಕ್ತಿಯ ಜನಿಸಿ
ರಾಜ್ಯಗಳನುದ್ಧರಿಸಿ ಪೊರೆಯುತಿಹಳು ॥

೮

ವರ ಮಹಾಕವಿಗಳಿಂ ಸಂಸ್ತುತ್ಯಳೆನಿಸುತ್ತೆ
ಧರೆಯನುದ್ಧರಿಸುತ್ತೆ ಶೋಭಿಸುತ್ತೆ ।
ಕರುನಾಡಿನೈಸಿರಿಯೆ ಕಾವೇರಿಯೆಂಬಂತೆ
ಹರಿಯುವಳು ಸರಿಯುವಳು ಶರಧಿಯೆಡೆಗೆ

೯

ಬೆಂಕಿಯೊಳು ಕರ್ಪೂರ ಕಂಡು ಮರೆಯಪ್ಪವೊಲು
ಶಾಂಕರಿಯು ಶಿವನೊಳಗೆ ಬೆರೆಯುವಂತೆ ।

ಭೋಂಕನಾಮಿಂಚು ಬಾನಿನಲಿ ಮರೆಯಪ್ಪಂತೆ
ಬಂಗಾಳ ಸಾಗರದಿ ಬೆರೆಯುತಿಹಳು ॥

೧೦

ಪಾವನಳು ಕಾವೇರಿ ಪಾಪಹರೆ ಕಾವೇರಿ
ಪುಣ್ಯನದಿ ಕಾವೇರಿ ಕರ್ಣಾಟದಿ ।
ಆ ಶಿವನ ದಯೆಯಿಂದ ಬ್ರಹ್ಮಗಿರಿಯೊಳು ಜನಿಸಿ
ಸಾವಧಾನದೊಳೆಲ್ಲರನು ಪೊರೆವಳು ॥

ತಾ॥ ೨೬-೫-೧೯೬೨ ಭಾಗಮಂಡಲ

‘ಶೂಲಪಾಣಿ’

# ಶ್ರೀ ಕ್ಷೇತ್ರ ಶೃಂಗೇರಿ

(ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ತಾ. ೧೬-೬-೫೮ರ ಸಂಜೆ ಬೆಂಗಳೂರು ಆಕಾಶವಾಣಿ ಗ್ರಾಮಮಂದಿರದ ಕಾರ್ಯಕ್ರಮದಲ್ಲಿ ಶ್ರೀ ಕ್ಷೇತ್ರ ಶೃಂಗೇರಿಯ ಪರಿಚಯವನ್ನು ಕುರಿತು ಹಳ್ಳಿಗರ ಕೂಡೆ ನಡೆಸಿದ ಮಾತುಕತೆಗಳು)

ಶಾಸ್ತ್ರಿಗಳು—ಈ ದಿವಸ ನಾನು ನಮ್ಮ ಕರ್ಣಾಟಕ ರಾಜ್ಯದಲ್ಲಿ ಸುಪ್ರಸಿದ್ಧವೆನಿಸಿರುವ ಶೃಂಗೇರಿಯ ವಿಚಾರವಾಗಿ ಕೆಲವು ಮಾತುಗಳನ್ನು ಗ್ರಾಮನಿವಾಸಿಗಳಾದ ನಿಮಗೆ ಹೇಳಲು ಬಂದಿದ್ದೇನೆ.

ಹಳ್ಳಿಗರು—ತುಂಬಾ ಸಂತೋಷ ಸ್ವಾಮಿ, ಶೃಂಗೇರಿ ಅಂದರೆ ಎಲ್ಲಿದೆ? ಅದೇನು ಊರೋ? ಕಾಡೋ? ಬೆಟ್ಟವೋ ಅದರ ಸಮಾಚಾರ ಏನು ಸ್ವಾಮಿ?

ಶಾಸ್ತ್ರಿಗಳು—ಶೃಂಗೇರಿ ಅಂದರೆ ಅದು ಒಂದು ಊರು. ಅದ ದೊಡ್ಡ ಕಾಡಿನ ಮಧ್ಯದಲ್ಲಿದೆ. ಅದು ಪಶ್ಚಿಮ ಸಮುದ್ರಕ್ಕೆ ೫೦ ಮೈಲು ದೂರದಲ್ಲಿದೆ. ಅಲ್ಲಿ ತುಂಗಾ ನದಿ ಹರಿಯುತ್ತದೆ. ಅಲ್ಲಿ ಒಂದು ಚಿಕ್ಕ ಬೆಟ್ಟವೂ ಇದೆ. ಅಲ್ಲಿ ಶ್ರೀ ಜಗದ್ಗುರು ಶಂಕರಾಚಾರ್ಯರಿಂದ ಸುಮಾರು ಹದಿಮೂರು ನೂರು ವರ್ಷಗಳ ಹಿಂದೆ ಸ್ಥಾಪನೆಯಾದ ಶಾರದಾಪೀಠ ಎಂಬ ಮಠವಿದೆ. ಈ ಎಲ್ಲ ಕಾರಣಗಳಿಂದ ಅದು ನಮ್ಮ ಭಾರತ ದೇಶದಲ್ಲೇ ಪ್ರಖ್ಯಾತವಾದ ಸುಕ್ಷೇತ್ರವೆನಿಸಿದೆ.

ಹಳ್ಳಿಗರು—ಅಲ್ಲಿ ಏನಾದರೂ ಗುಡಿ, ಗೋಪುರಗಳು ಇವೆಯೋ ಸ್ವಾಮಿ?

ಶಾಸ್ತ್ರಿಗಳು—ಓಹೋಹೋ! ಬೇಕಾದಷ್ಟು ಗುಡಿಗಳಿವೆ. ಶ್ರೀ ಜಗದ್ಗುರು ಶಂಕರಾಚಾರ್ಯರಿಂದ ಸ್ಥಾಪಿಸಲ್ಪಟ್ಟ ಶಾರದಾದೇವಿ ಗುಡಿಯಿದೆ. ಶ್ರೀ ವಿದ್ಯಾರಣ್ಯಸ್ವಾಮಿಗಳಿಂದ ಕಟ್ಟಿಸಲ್ಪಟ್ಟ ವಿದ್ಯಾಶಂಕರ ದೇವಾಲಯ ವಿದೆ. ಇದನ್ನು ಕ್ರಿ. ಶ. ೧೩೩೮ರಲ್ಲಿ ವಿಜಯ ನಗರದ ಅರಸರ ಸಹಾಯ ದಿಂದ ಕಟ್ಟಿಸಿದರು. ಈ ಗುಡಿ ಲೋಕಪ್ರಸಿದ್ಧವಾಗಿದೆ. ಬೆಟ್ಟದ ಮೇಲೆ ಶ್ರೀ ಮಲ್ಲಿಕಾರ್ಜುನ ಸ್ವಾಮಿ ಗುಡಿಯಿದೆ. ಜೈನರ ಬಸತಿ ಇದೆ. ಜನಾರ್ದನ ಸ್ವಾಮಿ ಗುಡಿಯಿದೆ. ಇನ್ನೂ ಸಣ್ಣ ಪುಟ್ಟ ಹಲವಾರು ದೇವಾಲಯಗಳಿವೆ. ಇವನ್ನೆಲ್ಲಾ ಕಣ್ಣಾರ ನೋಡಿ ಸಂತೋಷಪಡುವವರೇ ಭಾಗ್ಯಶಾಲಿಗಳು.

ಹಳ್ಳಿಗರು—ಕ್ಷೇತ್ರ ಕ್ಷೇತ್ರ ಅಂತ ಹೇಳ್ತಾ ಇದ್ದೀರಿ, ಅಲ್ಲಿ ಏನೇನು ಇರುತ್ತೆ? ಯಾತಕ್ಕಾಗಿ ಅದನ್ನು ಕ್ಷೇತ್ರ ಅಂತಾ ಕರೀತಾರೆ? ಇದನ್ನೆಲ್ಲಾ ಸ್ವಲ್ಪ ವಿವರವಾಗಿ ಹೇಳಿ ಸ್ವಾಮಿ.

ಶಾಸ್ತ್ರಿಗಳು—ಮಹಾತ್ಮರು ತಪಸ್ಸುಮಾಡಿದ, ದೇವರು ಪ್ರತ್ಯಕ್ಷ ವಾದ, ಸಂತರು, ಶರಣರು ವಾಸಮಾಡಿದ, ಪವಿತ್ರವಾದ ತೀರ್ಥಗಳು ಇರುವ ಸ್ಥಳಗಳನ್ನು 'ಕ್ಷೇತ್ರ' ಎಂದು ಕರೆಯುತ್ತಾರೆ. ಎಲ್ಲಿ ಕ್ಷೇತ್ರವೋ ಅಲ್ಲಿ ತೀರ್ಥವೂ ಇರುತ್ತದೆ. ಕಾಶೀ, ರಾಮೇಶ್ವರ, ಪ್ರಯಾಗ, ಶ್ರೀ ಶೈಲ, ಗೋಕರ್ಣ, ಗಯಾ, ಜಗನ್ನಾಥ, ಕಂಚಿ, ಕಾಳಹಸ್ತಿ, ಉಡುಪಿ, ತಿರುಪತಿ, ಧರ್ಮಸ್ಥಲ, ಮಹಾಕೂಟ, ನಂಜನಗೂಡು ಇವೆಲ್ಲಾ ನಮ್ಮ ದೇಶದಲ್ಲಿ ಪ್ರಖ್ಯಾತವಾದ ಕ್ಷೇತ್ರಗಳು.

ಹಳ್ಳಿಗರು—ಶೃಂಗೇರಿಯಲ್ಲಿ ಯಾವ ಮಹಾತ್ಮರು ತಪಸ್ಸು ಮಾಡಿ ದರು? ಅಲ್ಲಿ ಏನೇನು ಮಹಿಮೆ ನಡೀತಾ ಇವೆ?

ಶಾಸ್ತ್ರಿಗಳು—ಶ್ರೀ ಕ್ಷೇತ್ರ ಶೃಂಗೇರಿಯಲ್ಲಿ ರಾಮಾಯಣದ ಕಾಲದಲ್ಲಿ ಬ್ರಹ್ಮದೇವರ ಮೊಮ್ಮಗ ವಿಭಾಂಡಕ ಎಂಬ ಋಷಿ ತಪಸ್ಸು ಮಾಡಿದನು. ಅವನ ಮಗ ಋಷ್ಯಶೃಂಗನು ಕೂಡ ಇದೇ ಸ್ಥಳದಲ್ಲಿ ಜನಿಸಿದನು ಹಾಗೂ

ತಪಸ್ಸು ಮಾಡಿದನು. ಅವನ ಹೆಸರಿನಿಂದಲೇ ಇದನ್ನು ಋಷ್ಯಶೃಂಗಗಿರಿ –ಶೃಂಗೇರಿ ಎಂದು ಕರೆಯುತ್ತಾರೆ. ಶೃಂಗೇರಿಯ ಪಕ್ಕದ 'ಕಿಗ್ಗ' ಎಂಬ ಗ್ರಾಮದಲ್ಲಿ ಶೃಂಗೇಶ್ವರ ದೇವಾಲಯವಿದೆ. ಅಲ್ಲಿ ಋಷ್ಯಶೃಂಗನ ಕಥೆಗೆ ಸಂಬಂಧಪಟ್ಟ ವಿಷಯಗಳನ್ನು ಚಿತ್ರರೂಪದಲ್ಲಿ ಕಲ್ಲಿನಲ್ಲಿ ಕೆತ್ತಿದ್ದಾರೆ. ಅದು ಒಂದು ನೋಡತಕ್ಕ ಸ್ಥಳವೆನಿಸಿದೆ. ಅಲ್ಲದೆ ಕಲಾಪೂರ್ಣವಾಗಿಯೂ ಇದೆ; ಐತಿಹಾಸಿಕವಾಗಿಯೂ ಇದೆ.

ಹಳ್ಳಿಗರು—ಈ ಋಷ್ಯಶೃಂಗ ಮುನಿಗೂ ರಾಮಾಯಣಕ್ಕೂ ಏನು ಸಂಬಂಧ ಸ್ವಾಮಿ ?

ಶಾಸ್ತ್ರಿಗಳು—ಋಷ್ಯಶೃಂಗನ ಕಥೆ ಬಂದಿರುವುದು ಮೊದಲು ರಾಮಾಯಣದಲ್ಲಿ. ರಾಮಾಯಣ ಕಾಲದಲ್ಲಿ 'ರೋಮಪಾದನ' ಎಂಬ ರಾಜನ ರಾಜ್ಯದಲ್ಲಿ ದೊಡ್ಡ ಕ್ಷಾಮ ಪ್ರಾಪ್ತವಾಯಿತು. ಆಗ ರಾಜನು ಕಾಲಜ್ಞಾನಿಗಳ ಮಾತುಗಳ ಪ್ರಕಾರ ಈ ಋಷ್ಯಶೃಂಗ ಮುನಿಯನ್ನು ನಾನಾ ಉಪಾಯಗಳಿಂದ ತನ್ನ ರಾಜ್ಯಕ್ಕೆ ಬರಮಾಡಿ ಅವನನ್ನು ಉಪ ಚರಿಸಿದನು. ಆಗ ಆ ರಾಜ್ಯದಲ್ಲಿ ಮಳೆ ಬೆಳೆಗಳು ಬಂದು ದೇಶ ಸುಭಿಕ್ಷ ವಾಯಿತು. ಇದರಿಂದ ಸಂತೋಷಗೊಂಡ ರಾಜನು ತನ್ನ ಮಗಳಾದ 'ಶಾಂತಾ' ಎಂಬುವಳನ್ನು ಋಷ್ಯಶೃಂಗನಿಗೆ ಕೊಟ್ಟು ಲಗ್ನಮಾಡಿದನು. ದಶರಥ ಮಹಾರಾಜನು ನಡೆಸಿದ ಪುತ್ರಕಾಮೇಷ್ಟಿ ಯಜ್ಞವನ್ನು ಋಷ್ಯ ಶೃಂಗನ ಸನ್ನಿಧಾನದಲ್ಲೇ ನಡೆಸಿದಂತೆ ರಾಮಾಯಣದಲ್ಲಿ ಹೇಳಿದೆ. ಈ ವಿಚಾರವನ್ನೆಲ್ಲಾ ರಾಮಾಯಣ, ಸ್ಕಾಂದಪುರಾಣ, ಭವಿಷ್ಯೋತ್ತರ ಪುರಾಣ ಮೊದಲಾದವುಗಳಲ್ಲಿ ಹೇಳಿದೆ.

ಹಳ್ಳಿಗರು—ಶೃಂಗೇರಿಯಲ್ಲಿ ಇನ್ನೇನು ಮಹತ್ವದ ವಿಷಯಗಳಿವೆ.

ಶಾಸ್ತ್ರಿಗಳು—ಶೃಂಗೇರಿಯ ಮಧ್ಯದಲ್ಲಿ ಶಾರದಾ ಪೀಠ ಮತ್ತು ದೇವಾಲಯಗಳಿವೆ. ತುಂಗಾನದಿಯ ತೀರದಲ್ಲಿಯೇ ಲೋಕಪ್ರಸಿದ್ಧವಾದ ವಿದ್ಯಾಶಂಕರ ದೇವಾಲಯವಿದೆ. ನದಿಯ ಇನ್ನೊಂದು ಪಕ್ಕದಲ್ಲಿ ನೃಸಿಂಹ

ವಸವಿದೆ. ಶೃಂಗೇರಿಯ ಶಾರದಾಪೀಠದಲ್ಲಿ ಶ್ರೀ ಶಾರದಾದೇವಿ, ಶ್ರೀ ಚಂದ್ರಮೌಳೀಶ್ವರ ಮತ್ತು ರತ್ನಗರ್ಭ ಗಣಪತಿ ಎಂಬ ದೇವರುಗಳಿವೆ. ಇವುಗಳಿಗೆಲ್ಲ ದಿನವೂ ತ್ರಿಕಾಲ ಪೂಜೆ ವಿಧ್ಯುಕ್ತವಾಗಿ ನಡೆಯುತ್ತದೆ. ಇದೂ ಅಲ್ಲದೆ ಶೃಂಗೇರಿಯಲ್ಲಿ ಪ್ರತಿವರ್ಷ ನವರಾತ್ರಿಯಲ್ಲಿ ದೊಡ್ಡ ಜಾತ್ರೆ ನಡೆಯುತ್ತದೆ. ಆಗ ನಾನಾ ದೇಶಗಳಿಂದ ಇಲ್ಲಿಗೆ ಲಕ್ಷಗಟ್ಟಲೆ ಭಕ್ತರು ಬರುತ್ತಾರೆ. ದಿನವೂ ಬೇರೆ ಬೇರೆ ಉತ್ಸವಗಳು ನಡೆಯುತ್ತವೆ. ಬಂದ ಎಲ್ಲಾ ಯಾತ್ರಿಕರಿಗೂ ಶ್ರೀ ಮಠದಿಂದ ದಾಸೋಹ ನಡೆಯುತ್ತದೆ.

ಶೃಂಗೇರಿಯು ಪುರಾಣ ಪ್ರಸಿದ್ಧವೂ ಇತಿಹಾಸ ಪ್ರಸಿದ್ಧವೂ ಆದ ಕ್ಷೇತ್ರ. ಈ ಕ್ಷೇತ್ರದ ಪೂರ್ವಕ್ಕೆ, ಕಾಲಭೈರವ, ಪಶ್ಚಿಮಕ್ಕೆ ಆಂಜನೇಯ, ಉತ್ತರಕ್ಕೆ ಕಾಳಿಕಾದೇವಿ, ದಕ್ಷಿಣಕ್ಕೆ ದುರ್ಗಾದೇವಿ ದೇವಾಲಯಗಳಿವೆ. ಇಲ್ಲಿನ ತುಂಗಾನದಿಯಲ್ಲಿ ಸ್ನಾನಮಾಡುವುದು ಪವಿತ್ರ. 'ತುಂಗಾ ಪಾನ, ಗಂಗಾ ಸ್ನಾನ' ಎಂಬ ಗಾದೆ ನಮ್ಮ ದೇಶದಲ್ಲಿ ಪ್ರಸಿದ್ಧವಾಗಿದೆ. ಈಗ ಈ ನದಿಗೆ ಶಿವಮೊಗ್ಗೆಯ ಹತ್ತಿರ ಅಣೆಕಟ್ಟು ಕಟ್ಟಿ ಜಲಾಶಯ ನಿರ್ಮಿಸಿ ಸರ್ಕಾರದವರು ಜನರಿಗೆ ಉಪಕಾರ ಮಾಡಿದ್ದಾರೆ.

ಹಳ್ಳಿಗರು—ಶಂಕರಾಚಾರ್ಯರು ಜಗದ್ಗುರುಗಳೆಂದು ಹೇಳಿದಿರಲ್ಲ ಅವರ ವಿಷಯ ಕೊಂಚ ಹೇಳಿ ದೇವ್ರು?

ಶಾಸ್ತ್ರಿಗಳು—ಇದು ಬಹಳ ಒಳ್ಳೇ ಪ್ರಶ್ನೇನಪ್ಪ. ಶ್ರೀ ಶಂಕರಾಚಾರ್ಯರು ಭಾರತದಲ್ಲಿ ಬಹಳ ಪ್ರಖ್ಯಾತ ಪುರುಷರು, ದೊಡ್ಡ ಮಹಾತ್ಮರು. ಇವರನ್ನು "ಜಗದ್ಗುರುಗಳು" ಎಂದು ಲೋಕ ಗೌರವಿಸಿದೆ. ಹಿಂದೂಧರ್ಮದ ಉದ್ಧಾರಕ್ಕೆ ಇವರಿಂದ ತುಂಬಾ ಉಪಕಾರವಾಗಿದೆ. ಇವರ ಕೀರ್ತಿ ಹಿಮಾಲಯದಿಂದ ರಾಮೇಶ್ವರದವರೆಗೂ ಹಬ್ಬಿದೆ. ಇವರ ವಿಷಯವನ್ನು ತಿಳಿಯುವುದು ಪ್ರತಿಯೊಬ್ಬ ಭಾರತೀಯನ ಕರ್ತವ್ಯವಾಗಿದೆ.

ಶ್ರೀ ಶಂಕರಾಚಾರ್ಯರು ಕೇರಳ ರಾಜ್ಯದ 'ಕಾಲಟಿ' ಎಂಬ ಊರಿನಲ್ಲಿ ಬ್ರಾಹ್ಮಣ ಮನೆತನದಲ್ಲಿ ಜನಿಸಿದರು. ಬಾಲ್ಯದಲ್ಲಿಯೇ ಸಕಲ ವೇದ ಶಾಸ್ತ್ರ ಪುರಾಣಗಳನ್ನೂ ಅಭ್ಯಾಸಮಾಡಿದರು. ಅತ್ಯಂತ ಸೂಕ್ಷ್ಮ ಬುದ್ಧಿಯುಳ್ಳವರೂ ಪ್ರಭಾವಶಾಲಿಗಳೂ ಪ್ರತಿಭಾಶಾಲಿಗಳೂ ಆದ ಇವರನ್ನು ಆಗಿನ ಜನರು ಪರಮೇಶ್ವರನ ಅವತಾರವೆಂದು ಭಾವಿಸಿದರು. ಅಂತಹ ಮಹತ್ವದ ಗುಣಗಳನ್ನು ಇವರು ಅಳವಡಿಸಿಕೊಂಡಿದ್ದರು.

ಹಳ್ಳಿಯವರು—ಈ ಮಹಾತ್ಮರು ಏನೇನು ದೊಡ್ಡ ದೊಡ್ಡ ಕಾರ್ಯಗಳನ್ನು ಮಾಡಿದ್ದಾರೆ ದೇವ್ರು?

ಶಾಸ್ತ್ರಿಗಳು—ಇವರು ಇಳಿಮುಖವಾಗಿದ್ದ ಹಿಂದೂ ಧರ್ಮದ ರಕ್ಷಣೆಗಾಗಿ ಉತ್ತರಮೀಮಾಂಸೆ, ಭಗವದ್ಗೀತೆ ಮತ್ತು ದಶೋಪನಿಷತ್ತುಗಳಿಗೆ ಭಾಷ್ಯಗಳನ್ನು ಬರೆದರು. ಇವು ಪ್ರಸ್ಥಾನತ್ರಯ ಎಂದು ಲೋಕದಲ್ಲಿ ಪ್ರಸಿದ್ಧವಾಗಿವೆ. ವೇದಾಂತ ಚೂಡಾಮಣಿ, ಶತಶ್ಲೋಕಿ, ಶಿವಾನಂದಲಹರಿ, ಸೌಂದರ್ಯಲಹರಿ, ಭಜಗೋವಿಂದ ಸ್ತೋತ್ರಂ ಮೊದಲಾದ ಗ್ರಂಥಗಳನ್ನು ಸಂಸ್ಕೃತ ಭಾಷೆಗಳಲ್ಲಿ ಬರೆದಿದ್ದಾರೆ. ಈ ಗ್ರಂಥಗಳು ಇಡೀ ಭಾರತದಲ್ಲೆಲ್ಲಾ ಪ್ರಸಿದ್ಧವಾಗಿವೆ. ಹಾಗೂ ಜನಪ್ರಿಯವಾಗಿವೆ.

ಶ್ರೀ ಜಗದ್ಗುರು ಶಂಕರಾಚಾರ್ಯರು "ಅದ್ವೈತ" ಎಂಬ ಒಂದು ಸಿದ್ಧಾಂತವನ್ನು ಸ್ಥಾಪಿಸಿದರು. "ಜೀವನೇ ದೇವನು, ಜಗತ್ತು ಸುಳ್ಳು, ಜ್ಞಾನದಿಂದಲೇ ಮೋಕ್ಷ" ಎಂಬುದು ಈ ಮತದ ಮುಖ್ಯ ತತ್ವ. ಈ ಸಿದ್ಧಾಂತದ ಪ್ರಚಾರಕ್ಕಾಗಿ, ದ್ವಾರಕಿ, ಬದರಿ, ಜಗನ್ನಾಥ, ಶೃಂಗೇರಿ ಎಂಬ ನಾಲ್ಕು ಸ್ಥಳಗಳಲ್ಲಿ ಚತುರಾಮ್ನಾಯ ಮಠಗಳನ್ನು ಸ್ಥಾಪಿಸಿದರು. ಆ ನಾಲ್ಕು ಪೀಠಗಳಲ್ಲಿ ತಮ್ಮ ಸುಪ್ರಸಿದ್ಧ ಶಿಷ್ಯರಾದ, ಸುರೇಶ್ವರ, ಪದ್ಮಪಾದ, ತ್ರೋಟಕ ಮತ್ತು ಹಸ್ತಾಮಲಕ ಎಂಬ ನಾಲ್ಕು ಮಂದಿ ಶಿಷ್ಯರನ್ನು ನೇಮಿಸಿದರು. ಇವರೆಲ್ಲರೂ ಶ್ರೀ ಶಂಕರಾಚಾರ್ಯರ ಮತವನ್ನು ಭಾರತ ದೇಶದಲ್ಲಿ ಪ್ರಸಿದ್ಧಗೊಳಿಸಿದರು.

ಶ್ರೀ ಶಂಕರಾಚಾರ್ಯರ ಗುರುಪರಂಪರೆಯಲ್ಲಿ ಸುರೇಶ್ವರಾಚಾರ್ಯರ ಅನಂತರ ವಿದ್ಯಾತೀರ್ಥರು, ವಿದ್ಯಾರಣ್ಯರು, ನರಸಿಂಹಭಾರತಿಗಳು, ಸಚ್ಚಿದಾನಂದ ಶಿವಾಭಿನವ ಭಾರತಿಗಳು, ಚಂದ್ರಶೇಖರ ಭಾರತಿಗಳು ಮೊದಲಾದ ಮಹಾ ತಪಸ್ವಿಗಳೂ, ವಿದ್ವಾಂಸರೂ ಆದ ಸ್ವಾಮಿಗಳು ಶೃಂಗೇರಿಯಲ್ಲಿ ಆಗಿ ಹೋಗಿದ್ದಾರೆ. ಶೃಂಗೇರಿಯ ಶ್ರೀ ಶಾರದಾಪೀಠಕ್ಕೆ ವಿಜಯನಗರದ ಚಕ್ರವರ್ತಿಗಳು, ಕೆಳದಿಯರಾಜರು ಬೇಕಾದಷ್ಟು ಸೇವೆಯನ್ನು ಸಲ್ಲಿಸಿದ್ದಾರೆ. ಹಾಗೂ ಶ್ರೀ ಮಠಕ್ಕೆ ಭೂಮಿ ಕಾಣಿಕೆಗಳನ್ನು ಕೊಟ್ಟು ಮಿಗಿಲಾದ ಐಶ್ವರ್ಯಗಳನ್ನು ಕೊಟ್ಟು ಭಕ್ತಿಯಿಂದ ನಡೆದುಕೊಂಡಿದ್ದಾರೆ. ಮೈಸೂರು ಮಹಾರಾಜರು ಈ ಶೃಂಗೇರಿ ಮಠಕ್ಕೆ ಜಹಗೀರಿಯನ್ನು ಕೊಟ್ಟಿದ್ದಾರೆ. ಮೈಸೂರಿನ ನವಾಬ್ ಹೈದರಲ್ಲಿಖಾನ್ ಮತ್ತು ಟಿಪ್ಪು ಸುಲ್ತಾನರು ಸಹ ಈ ಶೃಂಗೇರಿಗೆ ಭಕ್ತಿಯಿಂದ ನಡೆದುಕೊಂಡು ಬಿನ್ನಹಗಳನ್ನು ಬರೆದಿದ್ದಾರೆ.

ಹಳ್ಳಿಗರು—ಆಹಹಾ ! ಏನು ಸ್ವಾಮಿ, ಶೃಂಗೇರಿ ಕ್ಷೇತ್ರದ ಮಹಿಮೆ ಬಹಳ ದೊಡ್ಡದು. ಎಂತೆಂತಹ ದೊಡ್ಡ ದೊಡ್ಡ ಸಮಾಚಾರ ಹೇಳ್ತಾ ಇದೀರಿ. ಶಂಕರಾಚಾರ್ಯರು ನಿಜವಾಗಿಯೂ ದೊಡ್ಡ ಗುರುಗಳು ಅನ್ನೋದು ಈಗ ನೀವು ಹೇಳುವ ಮಾತುಗಳಿಂದ ನಮಗೆ ಮನದಟ್ಟಾಗಿದೆ ಸ್ವಾಮಿ.

ಶಾಸ್ತ್ರಿಗಳು—ಹೌದಪ್ಪ, ಇದು ನಿಜವಾಗಿಯೂ ಬಹಳ ದೊಡ್ಡ ವಿಚಾರ. ಶೃಂಗೇರಿ ಬಹು ದೊಡ್ಡ ಕ್ಷೇತ್ರ. ಶಂಕರಾಚಾರ್ಯರು ನಿಜಕ್ಕೂ ಪ್ರಖ್ಯಾತ ಜಗದ್ಗುರುಗಳು. ಅಲ್ಲಿರುವ ದೇವಾಲಯಗಳು ಮಹಿಮಾನ್ವಿತವಾದುವು. ವರಾಹ ಪರ್ವತದಲ್ಲಿ ಹುಟ್ಟಿ, ಶೃಂಗೇರಿಯಲ್ಲಿ ಹರಿಯುತ್ತಿರುವ ತುಂಗಾನದಿಯು ಪರಮ ಪವಿತ್ರವಾದ ತೀರ್ಥ. ಅಲ್ಲಿರುವ ವಿದ್ಯಾಶಂಕರ ದೇವಾಲಯವು ಲೋಕವಿಖ್ಯಾತವಾದ ಶಿಲ್ಪಕಲೆಯಿಂದ ಕೂಡಿದ ದೇಗುಲ. ಅಂತಹ ದೇವಾಲಯವು ಭಾರತ ದೇಶದಲ್ಲಿ ಮತ್ತೆಲ್ಲಿಯೂ ಇಲ್ಲವೆಂದು ಹೇಳುತ್ತಾರೆ. ಯುರೋಪ್ ಖಂಡದ ಇಟಲಿ ದೇಶದ ರಾಜಧಾನಿ ರೋಂ ನಗರದಲ್ಲಿ ಈ ಮಾದರಿಯ ಒಂದು ಕಟ್ಟಡ ಇದೆಯೆಂದು ಹೇಳುತ್ತಾರೆ.

ಜಗನ್ಮಾತೆಯಾದ ಶಾರದಾದೇವಿಯು ಶೃಂಗೇರಿಯಲ್ಲಿ ನೆಲೆಸಿದ್ದಾಳೆ. ಜಗದ್ಗುರು ಶಂಕರಾಚಾರ್ಯರು ತಮ್ಮ ತಪಶ್ಶಕ್ತಿಯಿಂದ ಆ ಶಾರದಾದೇವಿಯನ್ನು ಅಲ್ಲಿ ಸ್ಥಾಪಿಸಿದ್ದಾರೆ. ಆ ಪೀಠದಲ್ಲಿ ಮಹಾಮಹಿಮರೂ ತಪಸ್ವಿಗಳೂ ಆದ ಸ್ವಾಮಿಗಳು ಒಬ್ಬರಾದ ಮೇಲೊಬ್ಬರು ಅಲ್ಲಿ ಕಂಗೊಳಿಸುತ್ತಿದ್ದಾರೆ. ಆದ್ದರಿಂದಲೇ ಆ ಪೀಠದ ಘನತೆ ಗೌರವಗಳು ಒಂದೇ ಸಮನೆ ನಡೆದುಕೊಂಡು ಬಂದಿವೆ. ಅದರಿಂದ ಸನಾತನ ಧರ್ಮದ ಸಂರಕ್ಷಣೆಯಾಗಿದೆ.

ಹಳ್ಳಿಗರು—ಈಗ ಅಲ್ಲಿನ ಸ್ವಾಮಿಗಳು ಯಾರು? ಆ ಕ್ಷೇತ್ರಕ್ಕೆ ನಾವು ಹೋಗಿಬರುವುದು ಹೇಗೆ?

ಶಾಸ್ತ್ರಿಗಳು—ಈಗ ಅಲ್ಲಿ ಶ್ರೀ ಜಗದ್ಗುರುಗಳು ಅಭಿನವ ವಿದ್ಯಾತೀರ್ಥ ಸ್ವಾಮಿಗಳು ಪೀಠಾರೋಹಣವನ್ನು ಮಾಡಿದ್ದಾರೆ. ಇವರು ಒಳ್ಳೆಯ ತಪಸ್ವಿಗಳೂ ವಿದ್ವಾಂಸರೂ ಆಗಿದ್ದಾರೆ. ಶ್ರೀ ಮಠದ ಪರಂಪರೆಯನ್ನು ಸಂರಕ್ಷಿಸಿಕೊಂಡು ಬರುತ್ತಿದ್ದಾರೆ. ನಿಜವಾಗಿಯೂ ಇವರ ಸಂದರ್ಶನ ಪುಣ್ಯಪ್ರದ. ಬೆಂಗಳೂರಿನಿಂದ ಶೃಂಗೇರಿಗೆ ತಲುಪಬಹುದು. ಮಂಗಳೂರು, ಉಡುಪಿ, ಗೋಕರ್ಣ, ಶಿವಮೊಗ್ಗಗಳಿಗೂ ಶೃಂಗೇರಿಗೂ ಬಸ್ಸಿನ ಸಂಪರ್ಕವಿದೆ. ಅಲ್ಲಿ ಇಳಿದುಕೊಳ್ಳಲು ಧರ್ಮಶಾಲೆಗಳಿವೆ. ಶ್ರೀ ಮಠದ ಅಧಿಕಾರಿಗಳು ಬಂದ ಯಾತ್ರಿಕರ ಯೋಗಕ್ಷೇಮವನ್ನು ಚೆನ್ನಾಗಿ ನೋಡಿಕೊಳ್ಳುತ್ತಾರೆ.

ಹಳ್ಳಿಗರು—ಶೃಂಗೇರಿಗೆ ಹೋಗಿ ಬರುವುದರಿಂದ ನಮಗೇನು ಲಾಭ ಸ್ವಾಮಿ?

ಶಾಸ್ತ್ರಿಗಳ—ನಿಮ್ಮ ಪ್ರಶ್ನೆಯನ್ನು ನಾನು ಒಪ್ಪಿಕೊಂಡೆ. ಲಾಭವಿಲ್ಲದ ಕೆಲಸ ಯಾರೂ ಮಾಡಬಾರದು. ಆದ್ದರಿಂದ ಶೃಂಗೇರಿಯ ಸಂದರ್ಶನದ ಲಾಭವನ್ನು ನೀವುಗಳು ಪಡೆದುಕೊಳ್ಳುವುದು ಬಹುಮುಖ್ಯ. ಜನ್ಮಸಾಫಲ್ಯ ಮಾಡಿಕೊಳ್ಳುವುದು ಅಗತ್ಯ.

ಶೃಂಗೇರಿಗೆ ಹೋಗಿಬರುವ ದಾರಿ ಪ್ರಕೃತಿ ಸೌಂದರ್ಯದಿಂದ ಕೂಡಿದೆ. ಅದು ಮಲೆನಾಡಿನ ಮಧ್ಯದಲ್ಲಿದೆ. ಪ್ರಯಾಣಿಕರು ಸಹ್ಯಾದ್ರಿಯ ಮತ್ತು ಅರಣ್ಯದ ಸೌಂದರ್ಯ ಸುಖವನ್ನು ಸವಿಯಬಹುದು. ಶ್ರೀ ಕ್ಷೇತ್ರಕ್ಕೆ ಹೋದ ಮೇಲೆ ಅಲ್ಲಿನ ಮಹತ್ವದಿಂದ ಯಾತ್ರಿಕರ ಮನಸ್ಸಿನ ಮೈಲಿಗೆ ಕಳೆಯುತ್ತದೆ. ತುಂಗಾನದಿಯ ಸ್ನಾನದಿಂದ ಪಾಪ ಪರಿಹಾರವಾಗುತ್ತದೆ. ಗುರುಗಳ ಆಶೀರ್ವಾದದಿಂದ ಜನ್ಮ ಸಾಫಲ್ಯವಾಗುತ್ತದೆ. ಈ ನಿಮಿತ್ತವಾದ ದೇಶಾಟನದಿಂದ ಮನುಷ್ಯನಿಗೆ ಲೋಕಾನುಭವ ಉಂಟಾಗುತ್ತದೆ. ಇದಕ್ಕಿಂತ ಮನುಷ್ಯನಿಗೆ ಇನ್ನೇನು ಲಾಭ ಬೇಕು ಹೇಳ್ರಪ್ಪ?

ಹಳ್ಳಿಗರು—ಬಹಳ ಸಂತೋಷವಾಯಿತು ಸ್ವಾಮಿ. ತಮ್ಮ ಸಂಭಾಷಣೆಯಿಂದ ನಮಗೆ ಅನೇಕ ವಿಷಯಗಳು ಗೊತ್ತಾದುವು. ಶೃಂಗೇರಿ ಕ್ಷೇತ್ರದ ವಿಚಾರ ಚೆನ್ನಾಗಿ ತಿಳಿಯಿತು. ಇದರಿಂದ ನಾವು ಒಮ್ಮೆ ಯಾರೂ ಶೃಂಗೇರಿ ಕ್ಷೇತ್ರವನ್ನು ನೋಡಬೇಕು ಅನ್ನಿಸಿದೆ ಮನಸ್ಸಿನಲ್ಲಿ.



# ಶ್ರೀ ಕ್ಷೇತ್ರ-ಪಂಪಾ

ಶಾಸ್ತ್ರಿಗಳು:—ಈ ದಿನ ನಾನು ನಮ್ಮ ವಿಶಾಲಮೈಸೂರು ರಾಜ್ಯದಲ್ಲಿ ಬಹಳ ಪ್ರಾಚೀನ ಕ್ಷೇತ್ರವೆನಿಸಿರುವ ಹಂಪೆಯ ವಿಷಯವನ್ನು ಕುರಿತು ಕೆಲವು ಸಂಗತಿಗಳನ್ನು ನಿಮಗೆ ತಿಳಿಸಲು ಬಂದಿದ್ದೇನೆ.

ಮಕ್ಕಳು:—ನಮಸ್ಕಾರ ಶಾಸ್ತ್ರಿಗಳೆ; ಹಂಪೆ ಎಂದರೆ ಅದು ಎಲ್ಲಿದೆ? ಅಲ್ಲೇನೇನು ಗುಡಿ ಗೋಪುರಗಳಿವೆ ? ತೀರ್ಥಗಳಿವೆ ? ಅದರ ಸಮಾಚಾರ ಕೊಂಚ ಹೇಳ್ತೀರಾ ?

ಶಾಸ್ತ್ರಿಗಳು:—ಹಂಪೆ ಒಂದು ದೊಡ್ಡ ಕ್ಷೇತ್ರ. ಅದು ನಮ್ಮ ರಾಜ್ಯದ ಬಳ್ಳಾರಿ ಜಿಲ್ಲೆಯಲ್ಲಿ ಪೂರ್ವ ಘಟ್ಟಗಳ ಮಧ್ಯೆ ರಮಣೀಯವಾದ ಪ್ರದೇಶದಲ್ಲಿದೆ. ರಾಮಾಯಣ ಕಾಲದಿಂದ ಅದು ನಮ್ಮ ನಾಡಿನಲ್ಲಿ ಪ್ರಸಿದ್ಧಿಯನ್ನು ಪಡೆದಿದೆ. ಅಲ್ಲಿ ಹೇಮಕೂಟ, ಋಷ್ಯಮೂಕ, ಮಾಲ್ಯವಂತ, ಮತಂಗ, ಕಿಷ್ಕಿಂಧ ಎಂಬ ಐದು ಬೆಟ್ಟಗಳಿವೆ. ತುಂಗಭದ್ರೆ ಹರಿಯುತ್ತಿದೆ. ರಾಮಾಯಣದಲ್ಲಿ ಕಂಗೊಳಿಸುವ ಪಂಪಾಸರೋವರವಿದೆ.

ಮಕ್ಕಳು:—ರಾಮಾಯಣಕ್ಕೂ ಹಂಪೆಗೂ ಏನು ಸಂಬಂಧ ?

ಶಾಸ್ತ್ರಿಗಳು:—ರಾಮಾಯಣಕ್ಕೂ ಹಂಪೆಗೂ ಬಹಳ ಹೆಚ್ಚಿನ ಸಂಬಂಧವಿದೆ. ರಾಮಾಯಣದಲ್ಲಿ ನೀವು ಕೇಳಿರುವ ಹನುಮಂತ, ಸುಗ್ರೀವ, ವಾಲಿ, ನಳ, ನೀಲ, ಅಂಗದ ಮೊದಲಾದ, ಪ್ರಾಚೀನ ಕನ್ನಡಿಗರಾದ ವಾನರಕುಲದ ವೀರರೆಲ್ಲರೂ ಈ ಪಂಪಾಕ್ಷೇತ್ರದ ಮೂಲನಿವಾಸಿಗಳೇ ಆಗಿದ್ದಾರೆ. ರಾಮಾಯಣದಲ್ಲಿ ನೀವು ಕೇಳಿರುವ, ಕಿಷ್ಕಿಂಧೆ, ಪಂಪಾಸರೋವರ, ಸಪ್ತತಾಳವೃಕ್ಷ; ಶಬರಿ ಆಶ್ರಮ ಮೊದಲಾದವುಗಳೆಲ್ಲಾ ಇಲ್ಲಿಯೇ ಇವೆ. ರಾಮಾಯಣದ ಏಳು ಕಾಂಡಗಳಲ್ಲಿ 'ಕಿಷ್ಕಿಂಧಾ ಕಾಂಡ'

ವಿದೆ. ಅದರ ಕತೆಯೆಲ್ಲ ನಡೆದುದು ಈ ಕ್ಷೇತ್ರದಲ್ಲಿಯೇ. ರಾಮ ಲಕ್ಷ್ಮಣರು ವಾಸವಾಗಿದ್ದ ಸ್ಥಳಗಳನ್ನೂ ಕೂಡ ನಾವು ಇಲ್ಲಿ ನೋಡಬಹುದು. ಆ ಸ್ಥಳ ಗಳಲ್ಲಿ ಹಿಂದಿನವರು ಯೋಗರಾಮ, ಭೋಗರಾಮ ಎರಬೆರಡು ಗುಡಿ ಗಳನ್ನು ಕಟ್ಟಿದ್ದಾರೆ. ವಾಲಿ, ಸುಗ್ರೀವರ ರಾಜಧಾನಿ ಕಿಷ್ಕಿಂಧೆ ಇಲ್ಲಿಯೇ ಇದೆ. ಅದನ್ನು ಈಗ ಆನೆಗೊಂದಿ ಎನ್ನುತ್ತಾರೆ. ಸೀತಾರಾಮರು ಸ್ನಾನ ಮಾಡಿದ ಪಂಪಾಸರೋವರವೆಂಬ ತೀರ್ಥ ಇಲ್ಲಿಯೇ ಇದೆ. ರಾಮ ಲಕ್ಷ್ಮಣ ರಿಗೆ ಬೋರೆಹಣ್ಣುಗಳನ್ನು ಕೊಟ್ಟು ಅವರ ಆಶೀರ್ವಾದ ಪಡೆದ ಭಕ್ತೆ ಶಬರಿ ವಾಸಮಾಡಿದ ಆಶ್ರಮ ಇಲ್ಲಿಯೇ ಇದೆ. ವೀರನಾದ ಆಂಜನೇಯನು ಹುಟ್ಟಿದ ಸ್ಥಳವೂ ಇಲ್ಲಿನ ಆಂಜನೇಯ ಬೆಟ್ಟದಲ್ಲಿದೆ.

ಮಕ್ಕಳು:—ರಾಮಲಕ್ಷ್ಮಣರು ಅಯೋಧ್ಯಾನಗರದವರೆಂದು ಕೇಳಿ ದ್ದೇವೆ. ಅವರು ನಮ್ಮ ಕರ್ಣಾಟಕದ ಹಂಪೆಗೇಕೆ ಬಂದರು?

ಶಾಸ್ತ್ರಿಗಳು:—ತಂದೆಯಾದ ದಶರಥನು ಕಿರಿಯ ಹೆಂಡತಿ ಕೈಕೆಗೆ ಕೊಟ್ಟ ಮಾತಿನಂತೆ ರಾಮಚಂದ್ರನು ಸೀತಾಲಕ್ಷ್ಮಣ ಸಮೇತನಾಗಿ ಅರಣ್ಯಕ್ಕೆ ಬಂದನು. ಅವರು ದಕ್ಷಿಣ ಭಾರತಕ್ಕೆ ಬಂದು ಈಗಿನ ಮಹಾರಾಷ್ಟ್ರ ರಾಜ್ಯದ 'ಪಂಚವಟಿ' ಅಥವಾ 'ನಾಸಿಕ್' ಎಂಬಲ್ಲಿ ಆಶ್ರಮ ಕಟ್ಟಿಕೊಂಡು ವಾಸಿಸುತ್ತಿದ್ದರು. ಲಂಕಾದ್ವೀಪದ ಅರಸನಾದ ರಾವಣನೆಂಬ ರಾಕ್ಷಸನು ಶ್ರೀ ರಾಮನ ಧರ್ಮಪತ್ನಿಯಾದ ಸೀತಾಮಾತೆಯನ್ನು ಮೋಸದಿಂದ ಆಕಾಶಮಾರ್ಗದಲ್ಲಿ ಕೊಂಡೊಯ್ದನು. ಆಗ ಆ ವಿಮಾನವು ಈ ಹಂಪೆಯ ಮೇಲೆಯೇ ಹಾರಿಹೋಯಿತು. ಆಗ ಸೀತಾದೇವಿಯು ತಾನು ಹೋದ ದಾರಿ ಶ್ರೀ ರಾಮನಿಗೆ ಗೊತ್ತಾಗಲಿ ಎಂದು ತನ್ನ ಆಭರಣಗಳ ಗಂಟನ್ನು ದಾರಿಯಲ್ಲಿ ಹಾರಿದಳು. ಅದು ಹಂಪೆಯ ಋಷ್ಯಮೂಕದಲ್ಲಿದ್ದ ಆಂಜ ನೇಯನ ಕೈಯಲ್ಲಿ ಸಿಕ್ಕಿತು. ಅದರ ಆಧಾರದಿಂದ ಸೀತಾದೇವಿಯನ್ನು ಪತ್ತೆ ಹಚ್ಚಲಾಯಿತು. ರಾಮಲಕ್ಷ್ಮಣರು ಕನ್ನಡ ವೀರರಾದ ಸುಗ್ರೀವ, ಆಂಜನೇಯಾದಿಗಳ ಸಹಾಯದಿಂದ ದಕ್ಷಿಣ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ ಲಂಕೆಯನ್ನು ಜಯಿಸಿ ರಾವಣನನ್ನು ಸಂಹರಿಸಿ ಸೀತಾದೇವಿಯನ್ನು

ತಂದರು. ಈ ಪ್ರಸಂಗದಲ್ಲಿ ರಾಮಲಕ್ಷ್ಮಣರು ಕೆಲವು ಕಾಲ ಹಂಪೆಯಲ್ಲಿ ವಾಸಿಸಿದರು. ಪಂಪಾಪತಿ, ಪಂಪಾಂಬಿಕಾ, ಪಂಪಾಸರೋವರ, ಪಂಪಾ ಕ್ಷೇತ್ರ ಇವು ರಾಮ ಲಕ್ಷ್ಮಣರಿಗೆ ತುಂಬಾ ಪರಿಚಿತವಾದ ವಿಷಯಗಳು. ಆ ಕಾಲದಲ್ಲಿ ಇಲ್ಲಿ ಹರಿಯುತ್ತಿರುವ ತುಂಗಭದ್ರೆಗೆ "ಪಂಪಾನದಿ" ಎಂಬ ಹೆಸರಿದ್ದಿತು.

ಮಕ್ಕಳು—ಓಹೋ ! ಹಾಗಾದರೆ ಪಂಪಾಕ್ಷೇತ್ರದಲ್ಲಿ ಯಾವ ಯಾವ ದೇವಾಲಯಗಳಿವೆ? ಯಾವ ಮಠಮಾನ್ಯಗಳಿವೆ?

ಶಾಸ್ತ್ರಿಗಳು—ಹಂಪೆಯಲ್ಲಿ ಬಹಳ ದೇವಾಲಯಗಳಿವೆ. ಅಲ್ಲಿ ಅತಿ ಪ್ರಾಚೀನವಾದುದು ಮತ್ತು ಪ್ರಮುಖವಾದುದು ಪಂಪಾವಿರೂಪಾಕ್ಷನ ಗುಡಿ. ಅಲ್ಲಿ ಪಂಪಾವಿರೂಪಾಕ್ಷಲಿಂಗ, ಪಂಪಾಂಬಿಕಾ, ಭುವನೇಶ್ವರಿ, ಗುಲಗಂಜಿಮಾಧವ ಮೊದಲಾದ ದೇವರುಗಳಿವೆ. ಈ ಗುಡಿಯು ತುಂಗ ಭದ್ರೆಯ ಪಕ್ಕದಲ್ಲಿ ಹೇಮಕೂಟ ಬೆಟ್ಟದ ಮೇಲಿದೆ. ಹಂಪೆಗೆ ಬಂದವರು ಮೊದಲು ತುಂಗಭದ್ರೆಯಲ್ಲಿ ಸ್ನಾನಮಾಡಿ ಪಂಪಾವಿರೂಪಾಕ್ಷನ ದರ್ಶನ ಮಾಡುತ್ತಾರೆ. ಪ್ರತಿವರ್ಷ ಚೈತ್ರ ಹುಣ್ಣಿಮೆಯಲ್ಲಿ ಇಲ್ಲಿ ಒಂದು ದೊಡ್ಡ ಜಾತ್ರೆಯಾಗುತ್ತದೆ. ಆಗ ವಿರೂಪಾಕ್ಷನ ತೇರು ವೈಭವದಿಂದ ಹರಿ ಯುತ್ತದೆ. ಲಕ್ಷಾಂತರ ಜನರು ಸೇರುತ್ತಾರೆ. ಈ ದೇವಾಲಯವೇ ಅಲ್ಲದೆ ಶಿಲ್ಪಕಲೆಯಿಂದ ಪ್ರಸಿದ್ಧವಾದ ವಿಜಯವಿಠಲ, ಹಜಾರರಾಮ, ಕೃಷ್ಣ ಸ್ವಾಮಿ, ಕೋದಂಡರಾಮ, ವೀರಭದ್ರ, ಸಾಸಿವೆಕಾಳು ಗಣಪತಿ, ಕಡಲೆ ಕಾಳು ಗಣಪತಿ, ಉಗ್ರನರಸಿಂಹ, ಬಡವಿಯಲಿಂಗ, ರಂಗನಾಥ, ವರಾಹ ಸ್ವಾಮಿ ಮೊದಲಾದ ಪ್ರಖ್ಯಾತ ಗುಡಿಗಳಿವೆ. ಇವೇ ಅಲ್ಲದೆ ಹಂಪೆಯ ಸಮೀಪದಲ್ಲಿಯೇ ಅನಂತಶಯನ ಗುಡಿ, ಜಂಬುನಾಥಗುಡಿ ಮೊದಲಾದುವು ಗಳೂ ಪ್ರಖ್ಯಾತವಾಗಿವೆ. ಇವೆಲ್ಲವೂ ಪ್ರತಿಯೊಬ್ಬ ಕನ್ನಡಿಗನೂ, ಭಾರತೀ ಯನೂ ನೋಡತಕ್ಕ ಸ್ಥಳಗಳೆನಿಸಿವೆ. ವಿಜಯ ವಿಠಲ ಗುಡಿಯಲ್ಲಿ ಕಲ್ಲಿನ ತೇರಿದೆ. ಅದು ನೋಡತಕ್ಕಂಥದು. ಇವಲ್ಲದೆ ದೇವಾಂಗಮಠ, ವೀರ ಶೈವರ ಮಠ ಮೊದಲಾದ ಪವಿತ್ರ ಮಂದಿರಗಳಿವೆ.

ಮಕ್ಕಳು—ಅಬ್ಬಬ್ಬಾ ! ಇಲ್ಲಿ ಎಷ್ಟೊಂದು ಗುಡಿಗೋಪುರಗಳನ್ನು ಕಟ್ಟಿಸಿದ ಪುಣ್ಯಾತ್ಮರು ಯಾರು ಸ್ವಾಮಿ ?

ಶಾಸ್ತ್ರಿಗಳು—ಇದು ಒಳ್ಳೆಯ ಪ್ರಶ್ನೆ. ನೀವು ತಿಳಿದುಕೊಳ್ಳಬೇಬೇಕಾದ್ದು. ಇಲ್ಲಿ ಈಗ್ಗೆ ೬೦೦ ವರ್ಷಗಳ ಹಿಂದೆ (೧೩೩೬)ಇಲ್ಲಿ ವಿಜಯನಗರ ರಾಜ್ಯ ಸ್ಥಾಪನೆಯಾಯಿತು. ಅದನ್ನು ಹುಕ್ಕ-ಬುಕ್ಕರೆಂಬ ವೀರರು ಕಟ್ಟಿದರು. ಅವರ ಅನಂತರ ಇಮ್ಮಡಿ ಹರಿಹರ ಇಮ್ಮಡಿ ಬುಕ್ಕ, ವಿರೂಪಾಕ್ಷ, ದೇವರಾಯ, ಮಲ್ಲಿಕಾರ್ಜುನರಾಯ, ವೀರನರಸಿಂಹ, ಕೃಷ್ಣದೇವರಾಯ, ಸದಾಶಿವರಾಯ ಮೊದಲಾದವರು ವೈಭವದಿಂದ ಆಳಿ ಬಾಳಿದರು. ಅವರ ಕಾಲದಲ್ಲಿ ಲೋಕಪ್ರಸಿದ್ಧವಾದ ಈ ಗುಡಿಗೋಪುರಗಳು ನಿರ್ಮಾಣವಾದುವು. ವಿಜಯನಗರ ಸಾಮ್ರಾಜ್ಯವು ಕ್ರಿ. ಶ. ೧೩೩೬ ರಿಂದ ೧೫೬೫ ವರೆಗೆ, ಅಂದರೆ ರಾಕ್ಷಸ ತಂಗಡಗಿ ಯುದ್ಧದವರೆಗೆ ವೈಭವದಿಂದ ನಡೆಯಿತು. ಈ ರಾಜರುಗಳು ಹಿಂದೂಧರ್ಮ, ಸಾಹಿತ್ಯ, ಸಂಸ್ಕೃತಿಗಳನ್ನು ಬಹಳವಾಗಿ ರಕ್ಷಿಸಿದರು. ಉತ್ತರದಿಂದ ಮುಸಲ್ಮಾನರು ದಕ್ಷಿಣ ಭಾರತಕ್ಕೆ ಮೇಲಿಂದ ಮೇಲೆ ದಂಡೆತ್ತಿ ಬರುವುದನ್ನು ತಮ್ಮ ಪರಾಕ್ರಮದಿಂದ ತಡೆಗಟ್ಟಿದರು. ಈ ಕಾಲದಲ್ಲಿ ಪಂಪಾಕ್ಷೇತ್ರದ ವೈಭವವು ಬಹಳವಾಗಿ ಬೆಳೆಯಿತು. ಆಗ ದೇಶವಿದೇಶಗಳಿಂದ ಇಲ್ಲಿಗೆ ಪ್ರಖ್ಯಾತ ಜನರು ಬಂದು ಹೋದರು. ಆ ಕಾಲದಲ್ಲಿ ಇದು ದಕ್ಷಿಣ ಭಾರತದಲ್ಲಿ ವ್ಯಾಪಾರ ಮತ್ತು ರಾಜಕೀಯ ಕೇಂದ್ರವೆನಿಸಿದ್ದಿತು. ಇಲ್ಲಿ ಅತ್ಯಂತ ಪ್ರಖ್ಯಾತರಾದ ಕಲಾವಿದರೂ ಕವಿಗಳೂ ಆಗಿ ಹೋದರು.

ಮಕ್ಕಳು:—ಈ ಹಂಪೆಯಲ್ಲಿ ಯಾವ ಯಾವ ಕವಿಗಳು ಇದ್ದರು? ಏನೇನು ಕಥೆ, ಪುರಾಣ ಬರೆದರು?

ಶಾಸ್ತ್ರಿಗಳು:—ಇಲ್ಲಿ ಕ್ರಿ. ಶ. ೧೨೦೦ರಲ್ಲಿ—ವಿಜಯನಗರ ಸಾಮ್ರಾಜ್ಯ ಸ್ಥಾಪನೆಗಿಂತ ಮೊದಲು-ಹರೀಶ್ವರ ಮತ್ತು ರಾಘವಾಂಕ ಎಂಬಿಬ್ಬರು ಮಹಾಕವಿಗಳಿದ್ದರು. ಅವರು ಗಿರಿಜಾ ಕಲ್ಯಾಣ, ರಘಟಾಕಾವ್ಯ, ಪಂಪಾ

ಶತಕ, ರಕ್ಷಾಶತಕ, ಹರಿಶ್ಚಂದ್ರಕಾವ್ಯ, ಸಿದ್ಧರಾಮ ಪುರಾಣ, ವಿದೇಶ ಚರಿತೆ ಮೊದಲಾದ ಪ್ರಖ್ಯಾತ ಕಾವ್ಯಗಳನ್ನು ಕನ್ನಡದಲ್ಲಿ ಬರೆದು ನಮ್ಮ ಸಾಹಿತ್ಯಕ್ಕೆ ಬಹಳ ಉಪಕಾರ ಮಾಡಿದರು. ಅವರ ಕಾಲದಲ್ಲಿ ದೇವ ರಾಯನೆಂಬ ರಾಜ ಇಲ್ಲಿ ಆಳುತ್ತಿದ್ದನೆಂದು ಹೇಳಿದೆ. ಆ ಮೇಲೆ ಹುಕ್ಕ ಬುಕ್ಕರ ಕಾಲದಲ್ಲಿ ವಿದ್ಯಾರಣ್ಯರು, ಸಾಯಣಾಚಾರ್ಯರು ಎಂಬ ಇಬ್ಬರು ಮಹಾತ್ಮರು ಸಂಸ್ಕೃತದಲ್ಲಿ ವೇದಗಳಿಗೆ ವಿಸ್ತಾರವಾದ ಭಾಷ್ಯವನ್ನು ಬರೆದರು. ಸರ್ವದರ್ಶನ ಸಂಗ್ರಹ, ಪಂಚದಶಿ ಮೊದಲಾದ ಗ್ರಂಥಗಳನ್ನು ಬರೆದು ಲೋಕೋಪಕಾರ ಮಾಡಿದರು. ಅನಂತರ ಇಮ್ಮಡಿ ದೇವರಾಯನ ಕಾಲದಲ್ಲಿ (೧೪೨೪ ರಿಂದ ೪೬) ಈ ರಾಜ್ಯದಲ್ಲಿ ಸಾಹಿತ್ಯವು ಬಹಳವಾಗಿ ಬಳೆ ಯಿತು. ಇವನ ಕಾಲದಲ್ಲಿ ಲಕ್ಕಣಾಮಾತ್ಯ, ಜಕ್ಕಣಾಚಾರ್ಯ, ಕುಮಾರ ವ್ಯಾಸ, ಕಲ್ಲುಮಠದಪ್ರಭುದೇವ, ಕಲ್ಯಾಣಕೀರ್ತಿ, ಗೋಪರಾಜ, ಶ್ರೀನಾಥ, ಚಂದ್ರಶೇಖರ, ಸಪ್ತಕಾವ್ಯದ ಗುರುಬಸವ, ಮೊಗ್ಗೆಯ ಮಾಯಿ ದೇವ ಮೊದಲಾದ ಕವಿಗಳು ಕನ್ನಡ ಸಂಸ್ಕೃತ ಮತ್ತು ತೆಲುಗು ಭಾಷೆಗಳಲ್ಲಿ ಅನೇಕ ಮಹತ್ವದ ಗ್ರಂಥಗಳನ್ನು ರಚಿಸಿದರು. ಅನಂತರ ಕೃಷ್ಣದೇವ ರಾಯನ ಕಾಲದಲ್ಲಿ (೧೫೦೯ ರಿಂದ ೩೦) ವೈಷ್ಣವ ಕವಿಗಳು ಬಹಳ ಪ್ರಖ್ಯಾತಿ ಪಡೆದರು. ಅದರಲ್ಲಿ ವ್ಯಾಸರಾಯರು, ವಾದಿರಾಜರು, ಪುರಂದರದಾಸರು, ಕನಕದಾಸರು, ವೇಂಕಟ ತಾತಾಚಾರ್ಯರು, ಅಲಸಾನಿ ಪೆದ್ದನ್ನ, ನಂದಿ ತಿಮ್ಮಯ್ಯ, ಮಾದಯ್ಯಗಾರಿ ಮಲ್ಲಣ್ಣ ಕವಿ ಮೊದಲಾದವರು ಶ್ರೇಷ್ಠವಾದ ಕಾವ್ಯಗಳನ್ನು ಸಂಸ್ಕೃತ, ತೆಲುಗು, ಕನ್ನಡಗಳಲ್ಲಿ ರಚಿಸಿದರು. ಹೀಗೆ ಪಂಪಾಕ್ಷೇತ್ರವು ಒಂದು ದೃಷ್ಟಿಯಿಂದ ಸಾಹಿತ್ಯ ಕ್ಷೇತ್ರವೂ, ಇನ್ನೊಂದು ದೃಷ್ಟಿಯಿಂದ ಶಿಲ್ಪಕಲಾ ಕ್ಷೇತ್ರವೂ ಎನಿಸಿಕೊಂಡಿದೆ.

ಮಕ್ಕಳು;—ನಾವು ಹಂಪೆಗೆ ಹೋದರೆ ಅಲ್ಲಿ ಇನ್ನೂ ಏನೇನು ನೋಡತಕ್ಕ ಸಮಾಚಾರವಿದೆ ಸ್ವಾಮಿ ?

ಶಾಸ್ತ್ರಿಗಳು:—ವಿಜಯನಗರ ಸಾಮ್ರಾಜ್ಯವನ್ನು ಅಭಿವೃದ್ಧಿ ಪಡಿಸಿದ ವಿದ್ಯಾರಣ್ಯರ ವಿಗ್ರಹವನ್ನು ನೋಡಬಹುದು. ಬಂಡೆ ಬಸವಣ್ಣ

ನನ್ನು ಕಾಣಬಹುದು. ಯಂತ್ರೋದ್ಧಾರ ಹನುಮಪ್ಪನನ್ನು ಸಂದರ್ಶಿಸ ಬಹುದು. ರಾಜರ ಅರಮನೆಯ ಪ್ರದೇಶ, ಮಾನೋವಿ: ದಿಬ್ಬ, ಕಮಲ ಮಹಲ್, ರಾಯರ ತುಲಾಭಾರ, ನೆಲಮನೆಯ ಗುಡಿ, ಆನೆಯ ಸಾಲು, ರಾಣಿ ಸ್ನಾನದ ಗೃಹ, ಗಾಣಗಿತ್ತಿ ಬಸದಿ, ಆನೆಗೊಂದಿ ರಾಜರ ಅರಮನೆ, ಅಲ್ಲದೆ, ತುಂಗ-ಭದ್ರಾ ನದಿಯಲ್ಲಿರುವ ಮನ್ಮಥಕುಂಡ, ಚಕ್ರತೀರ್ಥ, ತೇರು ಬೀದಿ ಇತ್ಯಾದಿಗಳನ್ನು ನೋಡಬಹುದು.

ಮಕ್ಕಳು:—ಹಂಪೆಯ ವಿಚಾರ ಬಹು ದೊಡ್ಡದು. ತಮ್ಮ ಮಾತನ್ನು ಕೇಳಿದ ಮೇಲೆ ನಾವು ಒಮ್ಮೆಯಾದರೂ ಅದನ್ನು ನೋಡಬೇಕೆಂದು ಆಸೆಯಾಗಿದೆ.

ಶಾಸ್ತ್ರಿಗಳು:—ಹಂಪೆಯ ಮಹಿಮೆ ಇಷ್ಟಕ್ಕೇ ಮುಗಿಯಲಿಲ್ಲ. ಈ ಪ್ರಪಂಚಕ್ಕೇ ಒಡೆಯನಾದ ಪರಶಿವನು ಕೃತಯುಗದಲ್ಲಿ ಅಲ್ಲಿ ತಪಸ್ಸು ಮಾಡಿದನೆಂದೂ, ಕಾಮರಾಜನು ಬಂದು ಅಲ್ಲಿ ಶಿವನ ಮೇಲೆ ಬಾಣ ಪ್ರಯೋಗಿಸಿ ತಪಸ್ಸು ಕೆಡಿಸಲು ಯತ್ನಿಸಿದನೆಂದೂ ಆಗ ತಪೋನಿಷ್ಠ ಶಿವನು ಕೋಪದಿಂದ ಹಣೆಗಣ್ಣು ಬಿಟ್ಟು ಅವನನ್ನು ಸುಟ್ಟುಬಿಟ್ಟನೆಂದೂ ಅನಂತರ-ಕಾಮನ ಹೆಂಡತಿ ರತೀದೇವಿಯ ದುಃಖವನ್ನು ನೋಡಲಾರದೆ ಅಲ್ಲಿಯೇ ಶಿವನನ್ನು ಕುರಿತು ತಪಸ್ಸು ಮಾಡುತ್ತಿದ್ದ ಪಾರ್ವತಿಯು ತನ್ನ ಉಗ್ರವಾದ ತಪಸ್ಸಿನಿಂದ ಶಿವನನ್ನು ಪ್ರತ್ಯಕ್ಷಮಾಡಿಕೊಂಡು ಕಾಮನನ್ನು ಬದುಕಿಸಿ-ಅನಂಗನನ್ನಾಗಿ ಮಾಡಿ-ತಾನು ಶಿವನನ್ನು ಲಗ್ನವಾದಳೆಂದೂ ಪುರಾಣದಲ್ಲಿ ಕಥೆಯಿದೆ. ಅಲ್ಲದೆ ಸತ್ಯಹರಿಶ್ಚಂದ್ರನು ಇಲ್ಲಿಗೆ ಬಂದು ಪಂಪಾ ವಿರೂಪಾಕ್ಷನನ್ನು ಪೂಜಿಸಿದನು. ಶ್ರೀ ರಾಮಚಂದ್ರನು ಲಂಕೆಗೆ ಹೋಗು ವಾಗ ಮತ್ತು ಬರುವಾಗ ಇಲ್ಲಿ ವಾಸಿಸಿದನು. ಹಾಗೂ ಪಂಪಾಪತಿಯನ್ನು ಅರ್ಚಿಸಿ ಪೂಜಿಸಿದನು. ಸ್ಯಮಂತಕ ಮಣಿಯನ್ನು ಕದ್ದನೆಂಬ ಅಪಖ್ಯಾತಿ ಯನ್ನು ಹೋಗಲಾಡಿಸಿಕೊಳ್ಳಲು ಶ್ರೀ ಕೃಷ್ಣನು ಈ ಹಂಪೆಯಲ್ಲಿ ನಿಂತು ತಪಸ್ಸುಮಾಡಿ ಕೃತಾರ್ಥನಾದನು. ಆ ಮೇಲೆ ವಿದ್ಯಾರಣ್ಯರೆಂಬ ಮಹಾ ತಪಸ್ವಿಗಳು ಇಲ್ಲಿ ತಪಸ್ಸುಮಾಡಿ ಹೊನ್ನಿನ ಮಳೆ ಕರೆಸಿದರು. ಆದರಿಂದ

ವಿಜಯನಗರ ರಾಜ್ಯವನ್ನು ಅಭಿವೃದ್ಧಿಪಡಿಸಿದರು ಎಂದು ಮೊದಲಾಗಿ ಇತಿಹಾಸ ಪುರಾಣಗಳಲ್ಲಿ ಕಥೆಗಳಿವೆ. ಇದಕ್ಕೆ 'ದಕ್ಷಿಣ ಕಾಶಿ' ಎಂಬ ಹೆಸರೂ ಇದೆ.

ಮಕ್ಕಳು—ಅಹ್ಹಹ್ಹಾ ! ಈ ಪಂಪಾ ಕ್ಷೇತ್ರದ ವಿಚಾರ ಚೆನ್ನಾಗಿದೆ. ಬಹಳ ಚೆನ್ನಾಗಿದೆ. ನಾವೂ ಹೋಗಿ ನೋಡುತ್ತೇವೆ, ಸ್ವಾಮಿ.

---

ತಾ॥ ೪-೯-೫೮ ರಂದು ಶ್ರೀ ಜಿ. ಶಿವಮೂರ್ತಿಶಾಸ್ತ್ರಿಗಳು ಬೆಂಗಳೂರು ಆಕಾಶವಾಣಿಯಲ್ಲಿ ಮಕ್ಕಳ ಕೂಡ ನಡೆಸಿದ ಮಾತುಕತೆಗಳ ಸಾರವಿದು.

# ಕೂಡಲ ಸಂಗಮ ಕ್ಷೇತ್ರ

ಶಾಸ್ತ್ರಿಗಳು—ಈ ದಿನ ನಿಮ್ಮ ಗ್ರಾಮಮಂದಿರದಲ್ಲಿ ಕರ್ಣಾಟಕದ ಸುಪ್ರಸಿದ್ಧ ಧಾರ್ಮಿಕ ಪುರುಷರಾದ ಶ್ರೀ ಬಸವೇಶ್ವರ ಮತ್ತು ಆತನ ತಪೋಭೂಮಿಯಾದ ಕೂಡಲ ಸಂಗಮ ಕ್ಷೇತ್ರ-ಇವುಗಳ ವಿಷಯವಾಗಿ ಮಾತನಾಡಲು ಬಂದಿದ್ದೇನೆ. ನೀವುಗಳು ಅತ್ಯಂತ ಪ್ರೀತಿಯಿಂದ ಈ ವಿಚಾರವನ್ನು ಕೇಳುವಿರೆಂದು ನಂಬಿದ್ದೇನೆ.

ಹಳ್ಳಿಗರು—ಬಸವೇಶ್ವರ ಅಂದರೆ ಯಾರು? ಕೂಡಲ ಸಂಗಮ ಕ್ಷೇತ್ರ ಅಂದರೆ ಎಲ್ಲಿದೆ? ಅದರ ಮಹತ್ವ ಏನು ಕೊಂಚ ಹೇಳಿ ಸ್ವಾಮಿ?

ಶಾಸ್ತ್ರಿಗಳು—ಇಲ್ಲಿಗೆ ೮೦೦ ವರ್ಷಗಳ ಹಿಂದೆ ನಮ್ಮ ಈಗಿನ ಮೈಸೂರು.ರಾಜ್ಯದ ಬಿಜಾಪುರ ಜಿಲ್ಲೆಯ ಇಂಗಳೇಶ್ವರ ಬಾಗೆವಾಡಿಯಲ್ಲಿ ಈ ಮಹಾತ್ಮನಾದ ಬಸವೇಶ್ವರನು ಅವತರಿಸಿದನು. ಆತನ ಜನನ ಕ್ರಿ. ಶ. ೧೧೩೨. ಮರಣ ೧೧೬೮. ಆತನ ಜೀವಿತ ಸುಮಾರು ೩೬ ವರ್ಷಗಳು. ಈತನು ನಂದೀಶ್ವರನ ಅವತಾರ, ಕನ್ನಡ ಭಾಷೆಯ ಉದ್ಧಾರಕ, ವೀರಶೈವ ಧರ್ಮದ ಸುಧಾರಕ ಎಂದು ಮೊದಲಾಗಿ ಪುರಾಣಗಳಲ್ಲಿ ಹೇಳಲಾಗಿದೆ. ಈತನು ನಮ್ಮ ದೇಶದಲ್ಲಿ ಬಡವರ, ಪತಿತರ, ಸ್ತ್ರೀಯರ ಉದ್ಧಾರಕ್ಕಾಗಿ ಬಹಳ ಶ್ರಮಿಸಿದ್ದಾನೆ. ಚರಿತ್ರಕಾರರು ಈತನನ್ನು ಹಿಂದಿನ ಬುದ್ಧದೇವನಿಗೂ, ಇಂದಿನ ಗಾಂಧೀಜಿಗೂ ಹೋಲಿಸುತ್ತಾರೆ. ಈತನ ತಂದೆ ಮಾದರಸ, ತಾಯಿ ಮಾದಲಾಂಬಿಕೆ, ಗುರು ಜಾತವೇದಸ್ವಾಮಿ, ಮತ್ತು ಪ್ರಭುದೇವರು. ಈತನು ಕಲ್ಯಾಣದ ಬಿಜ್ಜಳನ ಮುಖ್ಯಮಂತ್ರಿಯಾಗಿದ್ದನು (೧೧೫೬-೬೮). ಈತನು ಅನೇಕ ಮುಖ್ಯ ಕಾರ್ಯಗಳನ್ನು ಮಾಡಿದನು. ಅದರಿಂದ ನಮ್ಮ ಕರ್ಣಾಟಕ ದೇಶಕ್ಕೂ ಭರತಖಂಡಕ್ಕೂ ಬಹಳ ಒಳ್ಳೆಯದಾಯಿತು. ಈತನನ್ನು ಕುರಿತು ಕನ್ನಡ, ತೆಲುಗು,

ತಮಿಳು, ಸಂಸ್ಕೃತ ಮೊದಲಾದ ಭಾಷೆಗಳಲ್ಲಿ ಪುರಾಣಗಳನ್ನು ಕವಿಗಳು ಬರೆದಿದ್ದಾರೆ. ಈತನು ಕನ್ನಡದಲ್ಲಿ ಷಟ್‌ಸ್ಥಳವಚನ, ಮಂತ್ರಗೋಪ್ಯ, ಶಿಖಾರತ್ನವಚನ, ಕಾಲಜ್ಞಾನ ವಚನ ಎಂಬ ಗ್ರಂಥಗಳನ್ನು ಬರೆದಿದ್ದಾನೆ.

ಹಳ್ಳಿಗರು—ಈ ಕೂಡಲ ಸಂಗಮಕ್ಷೇತ್ರ ಎಂದು ಹೇಳಿದಿರಲ್ಲ, ಅದು ಎಲ್ಲಿದೆ? ಅಲ್ಲಿ ಏನು ವಿಶೇಷ ಕೊಂಚ ಹೇಳಿ ದೇವ್ರು?

ಶಾಸ್ತ್ರಿಗಳು—ಬಹಳ ಸಂತೋಷವಪ್ಪ. ನೀವು ಗ್ರಾಮಸ್ಥರು ಒಳ್ಳೆಯ ಜನ. ನಿಮ್ಮ ಸದ್ಗುಣಗಳ ಫಲವಾಗಿ 'ಹಳ್ಳಿಯವರು ಒಳ್ಳೆಯವರು' ಎಂಬ ಗಾದೆಯು ಮಾತು ಇದೆ. ನಿಮಗೆ ಧಾರ್ಮಿಕ ವಿಚಾರಗಳಲ್ಲಿ ಬಹಳ ಆಸಕ್ತಿ ಇರುವುದು ನೋಡಿ ನನಗೆ ಸಂತೋಷವಾಯಿತು. ಇದು ಬಹಳ ಒಳ್ಳೆಯ ಗುಣ. ಶ್ರೀ ಕೂಡಲ ಸಂಗಮ ಕ್ಷೇತ್ರವು ವಿಶಾಲ ಮೈಸೂರು ರಾಜ್ಯದ ಬಿಜಾಪುರ ಜಿಲ್ಲೆಯಲ್ಲಿದೆ. ಅಲ್ಲಿ ಕೃಷ್ಣಾ ಮತ್ತು ಮಲಪ್ರಭಾ ಎಂಬ ಎರಡು ನದಿಗಳು ಸೇರುತ್ತವೆ. ಸುಪ್ರಸಿದ್ಧವಾದ 'ಸಂಗಮೇಶ್ವರ' ಎಂಬ ದೇವಸ್ಥಾನವಿದೆ. ನೂರಾರು ವರ್ಷಗಳ ಹಿಂದೆ ಹಳೆಯಬೀಡಿನಲ್ಲಿ ರಾಜ್ಯಭಾರ ಮಾಡುತ್ತಿದ್ದ ಹೊಯ್ಸಳ ರಾಜರು ತಮ್ಮ ರಾಜ್ಯದ ಉತ್ತರದ ಗಡಿಯಾದ ಈ ಕ್ಷೇತ್ರದಲ್ಲಿ ಶಿವದೇವಾಲಯವನ್ನು ಬಹು ಸುಂದರವಾಗಿ ಕಟ್ಟಿಸಿದ್ದಾರೆ. ಶ್ರೀ ಬಸವೇಶ್ವರನು ೧೨ ನೆಯ ಶತಮಾನದ ಮಧ್ಯದಲ್ಲಿ ಈ ಕ್ಷೇತ್ರದಲ್ಲಿ ಶ್ರೀ ಜಾತವೇದಸ್ವಾಮಿ ಎಂಬ ಗುರುಗಳಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದನು. ಈತನ ಜತೆಯಲ್ಲಿ ಈತನ ಅಕ್ಕ ನಾಗಮ್ಮ, ಇವಳ ಗಂಡ ಶಿವಸ್ವಾಮಿ, ಇವರ ಮಗ ಚೆನ್ನಬಸವಣ್ಣ ಇವರೂ ಸಹ ಇಲ್ಲಿಯೇ ಇದ್ದರು. ಸುಮಾರು ಹತ್ತುವರ್ಷಗಳಕಾಲ ಶ್ರೀ ಬಸವೇಶ್ವರನು ಇಲ್ಲಿನ ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದನು.

ಹಳ್ಳಿಗರು—ಬಸವೇಶ್ವರನ ಗುರು ಎಂದು ಹೇಳಿದಿರಲ್ಲ, ಅವರ ಸಮಾಚಾರವೇನು? ಅವರ ಮಹಿಮಾವಳಿ ಏನು? ಕೊಂಚ ಹೇಳಿ ದೇವ್ರು?

ಶಾಸ್ತ್ರಿಗಳು—ಬಸವೇಶ್ವರನ ಗುರುಗಳ ಹೆಸರು ಜಾತವೇದ ಎಂಬ ಸ್ವಾಮಿಗಳು. ಇವರಿಗೆ ಈಶಾನ್ಯಗುರು, ಕಪ್ಪಡಿಸಂಗಮೇಶ್ವರ ಎಂಬ ಹೆಸರುಗಳೂ ಉಂಟು. ಇವರು ಬಹಳ ದೊಡ್ಡ ತಪಸ್ವಿಗಳು, ತ್ರಿಕಾಲ ಜ್ಞಾನಿಗಳು. ಇವರ ಮಠ ಈಗಲೂ ಕಪ್ಪಡಿ ಸಂಗಮದಲ್ಲಿದೆ. ಅದನ್ನು 'ಸಾರಂಗಪಾಣಿಮಠ' ಎಂದು ಹೇಳುತ್ತಾರೆ. ಸಾಂಗದೇವರ ಪುರಾಣ ಸಿಂಗಿರಾಜ ಪುರಾಣ, ಮೊದಲಾದ ವೀರಶೈವ ಪುರಾಣಗಳಲ್ಲಿ ಇವರ ವಿಷಯವಾಗಿ ಬಹಳವಾಗಿ ಬರೆದಿದ್ದಾರೆ.

ಹಳ್ಳಿಯವರು—ಈ ಕೂಡಲ ಸಂಗಮಕ್ಷೇತ್ರ ಎಂತ ಹೇಳಿದಿರಲ್ಲ. ಅಲ್ಲಿ ಇನ್ನೇನು ವಿಶೇಷ ವಿಚಾರಗಳು ಇವೆ ಸ್ವಾಮಿ? ಇದಕ್ಕೆ 'ಕೂಡಲ ಸಂಗಮ' ಎಂದು ಯಾಕೆ ಹೆಸರು ಬಂತು ಸ್ವಾಮಿ?

ಶಾಸ್ತ್ರಿಗಳು—ನೀವು ಗ್ರಾಮಸ್ಥರು ಬಹಳ ಬುದ್ಧಿವಂತರಾಗಿ ಪ್ರಶ್ನೆಗಳನ್ನು ಚೆನ್ನಾಗಿ ಕೇಳುತ್ತೀರಿ. ಶ್ರದ್ಧೆಯಿಂದ ಕೇಳಿರಿ. ಕನ್ನಡ ಭಾಷೆಯಲ್ಲಿ 'ಕೂಡಲು, ಎಂದರೆ ಎರಡು ಹೊಳೆಗಳು ಸೇರುವ ಸ್ಥಳ. ಸಂಸ್ಕೃತದಲ್ಲಿ 'ಸಂಗಮ, ಎಂದರೆ ಎರಡು ನದಿಗಳು ಸೇರುವ ಸ್ಥಳ. ಈ ಕ್ಷೇತ್ರದಲ್ಲಿರುವ ದೇವರಿಗೆ 'ಸಂಗಮೇಶ್ವರ, ಎಂದು ಹೆಸರಿದೆ. ಎರಡು ನದಿಗಳು ಕೂಡುವ ಈ ಸ್ಥಳದಲ್ಲಿ ಈ ದೇವಾಲಯವು ಇರುವುದರಿಂದ ಇಲ್ಲಿನ ಶಿವಲಿಂಗಕ್ಕೆ "ಸಂಗಮೇಶ್ವರ" ಎಂಬ ಹೆಸರು ಬಂದಿರಬೇಕು. ಎರಡು ನದಿಗಳು ಕೂಡುವ ಸ್ಥಳದಲ್ಲಿ ಈ ಸಂಗಮೇಶ್ವರ ಇರುವುದರಿಂದ ಇದನ್ನು 'ಕೂಡಲ ಸಂಗಮ, ಎಂದು ಸಂಗ್ರಹವಾದ ಹೆಸರಿನಿಂದ ಕರೆಯುತ್ತಾರೆ. ಕರ್ನಾಟಕ ದೇಶದ ಹಿರಿಯ ಹೊಳೆಯಾದ ಕೃಷ್ಣಾನದಿಯೂ ಅದರ ಉಪನದಿಯಾದ ಮಲಪ್ರಭಾ ನದಿಯೂ ಈ ಸ್ಥಳದಲ್ಲಿ ಕೊಡುತ್ತವೆ. ಆ ಎರಡು ನದಿಗಳೂ ಕೂಡುವ ಕಡೆ ಒಂದು ಮಂಟಪವನ್ನು ಕಟ್ಟಿದ್ದಾರೆ. ಈ ಪ್ರದೇಶವು ನೋಡುವುದಕ್ಕೆ ಬಹಳ ರಮಣೀಯವಾಗಿದೆ. ಈ ಗುಡಿಯ ಪಕ್ಕದಲ್ಲಿ ಒಂದು ಊರು ಕೊಡ ಇದೆ. ಅಲ್ಲಿ ಸಾವಿರಾರು ಮಂದಿ ವಾಸಿಸುತ್ತಾರೆ. ವರ್ಷಕ್ಕೊಮ್ಮೆ ಚೈತ್ರಶುದ್ಧ ಪಂಚಮಿಯಂದು ಇಲ್ಲಿ ಜಾತ್ರೆಯಾಗುತ್ತದೆ. ಆಗ ಲಕ್ಷಾಂತರ.



ಕಪ್ಪಡಿ ಸಂಗಮದಲ್ಲಿರುವ ಸಂಗಮೇಶ್ವರ ದೇವಾಲಯ

ಜನ ಈ ಕ್ಷೇತ್ರಕ್ಕೆ ಬಂದು ಹೋಗುತ್ತಾರೆ. ಇದನ್ನು 'ಕಪ್ಪಡಿ ಸಂಗಮ ಕ್ಷೇತ್ರ' ಎಂದು ಕೂಡ ಕರೆಯುತ್ತಾರೆ. ಇಲ್ಲಿನ ಗುಡಿಯನ್ನು ಕ್ರಿ. ಶ. ೧೧೧೧ ರಿಂದ ೧೧೪೧ ಆಳುತ್ತಿದ್ದ ಹೊಯ್ಸಳ ವಿಷ್ಣುವರ್ಧನನು ಕಟ್ಟಿಸಿದ ನೆಂದು ಹೇಳುತ್ತಾರೆ. ಗುಡಿಯು ಶಿಲ್ಪಕಲೆಯು ಬಹಳ ಚೆನ್ನಾಗಿದೆ. ಈ ಗುಡಿಯಲ್ಲಿ ಎರಡು ಶಿಲಾ ಶಾಸನಗಳಿವೆ. ಈ ಕೂಡಲ ಸಂಗಮ ಕ್ಷೇತ್ರದ ಪಕ್ಕದಲ್ಲಿ ಬಸವಣ್ಣನವರ ಧರ್ಮಪತ್ನಿಯಾದ ನೀಲಾಂಬಿಕೆ, ಗಂಗಾಂಬಿಕೆ ಯರ ಗುಡಿಗಳಿವೆ. ಆದಕ್ಕೆ ಸಮೀಪದಲ್ಲಿ ವಿಜಯನಗರದ ರಾಜರಿಗೂ ಬಹಮನಿ ಸುಲ್ತಾನರಿಗೂ ೧೪೯೫ ರಲ್ಲಿ ಕಾಳಗ ನಡೆದ ಯುದ್ಧಭೂಮಿ ಪ್ರದೇಶವಿದೆ. ಇದನ್ನು 'ರಾಕ್ಷಸ ತಂಗಡಗಿ' ಎಂದು ಕರೆಯುತ್ತಾರೆ. ಕಪ್ಪಡಿ ಸಂಗಮಕ್ಕೆ ಬಂದ ಯಾತ್ರಿಕರು ಈ ನೀಲಾಂಬಿಕೆ-ಗಂಗಾಂಬಿಕೆಯರ ಗುಡಿಗಳು ಮತ್ತು ರಾಕ್ಷಸ ತಂಗಡಗಿ ರಣಭೂಮಿ ಪ್ರದೇಶವನ್ನೂ ನೋಡಿ ಕೊಂಡು ಹೋಗುವ ವಾಡಿಕೆಯಿದೆ.

ಹಳ್ಳಿಗರು—ಈ ಕೂಡಲ ಸಂಗಮ ಕ್ಷೇತ್ರ ಎಂದು ಹೇಳುತ್ತಾರಲ್ಲ, ಇದಕ್ಕೆ ಇಷ್ಟೊಂದು ಮಹತ್ವ ಏಕೆ ಬಂತು ಸ್ವಾಮಿ ?

ಶಾಸ್ತ್ರಿಗಳು—ನಮ್ಮ ಹಿಂದೂ ದೇಶದಲ್ಲಿ ಸಮುದ್ರ ನದಿ ಪರ್ವತ ಅರಣ್ಯ ಮೊದಲಾದ ಸೃಷ್ಟಿ ಸೌಂದರ್ಯದ ಪ್ರದೇಶಗಳಲ್ಲಿ ತೀರ್ಥಕ್ಷೇತ್ರ ಗಳನ್ನು ನಿರ್ಮಿಸುವ ವಾಡಿಕೆ ಬಹಳ ದಿನಗಳಿಂದಲೂ ಬಂದಿದೆ. ಉತ್ತರ ಭಾರತದಲ್ಲಿ ಹಿಮಾಲಯದಲ್ಲಿ 'ಕೈಲಾಸ ಪರ್ವತ' ಮತ್ತು 'ಮಾನಸ ಸರೋವರ' ಎಂಬ ತೀರ್ಥಕ್ಷೇತ್ರಗಳಿವೆ. ಉತ್ತರ ಭಾರತದಲ್ಲಿ ಕೇದಾರ, ಹರಿದ್ವಾರ, ಕುರುಕ್ಷೇತ್ರ, ಕಾಶಿ, ಪ್ರಯಾಗ, ಗಯೆ ಮೊದಲಾದ ಕ್ಷೇತ್ರ ಗಳಿವೆ. ದಕ್ಷಿಣದಲ್ಲಿ ಕಂಚಿ, ಕಾಳಹಸ್ತಿ, ಚಿದಂಬರ, ತಿರುವಣ್ಣಾಮಲೆ, ರಾಮೇಶ್ವರ, ಮಧುರ ಮುಂತಾದ ಕ್ಷೇತ್ರಗಳಿವೆ. ನಮ್ಮ ಕರ್ಣಾಟಕ ರಾಜ್ಯದಲ್ಲಿಯೇ ಹಂಪೆ, ಗೋಕರ್ಣ, ಶ್ರವಣಬೆಳುಗೊಳ, ಉಡುಪಿ, ಧರ್ಮ ಸ್ಥಳ, ನಂಜನಗೂಡು, ಶ್ರೀರಂಗಪಟ್ಟಣ, ಮಾದೇಶ್ವರ, ಎಡೆಯೂರು, ಮೇಲುಕೋಟೆ, ರೇವಣಸಿದ್ಧ, ಹರಿಹರ, ಉಳವಿ ಮೊದಲಾದ ಕ್ಷೇತ್ರಗಳಿವೆ. ಇಲ್ಲೆಲ್ಲಾ ಒಳ್ಳೆಯ ದೇವಸ್ಥಾನಗಳೂ ಪುಣ್ಯ ನದಿಗಳೂ ತೀರ್ಥಗಳೂ ಇವೆ.

ಈ ಕ್ಷೇತ್ರಗಳಲ್ಲಿ ಮೂಲಸ್ಥಾಪಕರ ಮಂತ್ರಶಕ್ತಿಯಿಂದ ಅನೇಕ ಮಹಿಮೆ ಗಳು ಈಗಲೂ ನಡೆಯುತ್ತಿದೆ. ನಮ್ಮ ಧರ್ಮಶಾಸ್ತ್ರದಲ್ಲಿ ಹಿಂದುವಾಗಿ ಹುಟ್ಟಿದವನು ಒಮ್ಮೆಯಾದರೂ ಕಾಶಿ, ರಾಮೇಶ್ವರಾದಿ ಕ್ಷೇತ್ರಗಳನ್ನು ಸಂದರ್ಶಿಸಬೇಕೆಂದು ಶಾಸ್ತ್ರ ನಿಯಮವಿದೆ. ಕಾಶೀಯಾತ್ರೆಯನ್ನು ಮಾಡಿದವರಿಗೆ ಮಾತ್ರ ಮದುವೆಯಾಗುವ ಹಕ್ಕಿದೆ ಎಂಬ ಸಮಾಜನಿಯಮ ವುಂಟು. ಇದೆಲ್ಲವೂ ನಮ್ಮ ಜನಗಳಿಗೆ ತೀರ್ಥಕ್ಷೇತ್ರಗಳಲ್ಲಿರುವ ಶ್ರದ್ಧಾ ಭಕ್ತಿಗೆ ನಿದರ್ಶನಗಳೆಂದು ಹೇಳಬಹುದು.

ಹಳ್ಳಿಗರು—ಶ್ರೀಬಸವೇಶ್ವರನು ಈ ಸಂಗಮೇಶ್ವರ ದೇವರನ್ನು ಕುರಿತು ಏನಾದರೂ ಹೇಳಿದ್ದಾನೆಯೇ ಸ್ವಾಮಿ?

ಶಾಸ್ತ್ರಿಗಳು—ಬಸವಣ್ಣನವರ ಪ್ರತಿಯೊಂದು ವಚನದಲ್ಲಿಯೂ "ಕೂಡಲ ಸಂಗಮ" ಎಂಬ ಅಂಕಿತವಿದೆ. ಬಸವೇಶ್ವರನು ಈ ಸಂಗಮ ಕ್ಷೇತ್ರಕ್ಕೆ ಬಂದಾಗ ಶ್ರೀ ಸಂಗಮೇಶ್ವರನನ್ನು ಭಕ್ತಿಯಿಂದ ಪ್ರಾರ್ಥಿಸಿ ಅರ್ಚಿಸಲು, ಭಕ್ತಿ ಭಂಡಾರಿಯಾದ ಆತನ ಭಕ್ತಿಗೆ ಮೆಚ್ಚಿದ ಸಂಗ ಮೇಶ್ವರನು ಆ ಮಹಾತ್ಮನಿಗೆ ಪ್ರತ್ಯಕ್ಷನಾಗಿ "ಅಂಜದಿರಂಜದಿರ್ ಮಗನೆ, ಭವದ ಮಾಲೆಯುಲಿ ಹೊದ್ದಲೀಯದೆ ಸಲಹಿದಪೆಂ, ನೆಲಂಮೆಚ್ಚೆ ಮೆರೆ ದಪೆಂ," ಎಂದು ಆಶೀರ್ವದಿಸಿದನೆಂದು ಹರೀಶ್ವರ ಮಹಾಕವಿಯು ತನ್ನ ಬಸವರಾಜ ದೇವರ ರಗಳೆ ಎಂಬ ಕಾವ್ಯದಲ್ಲಿ ಹೇಳಿದ್ದಾನೆ. ಅಲ್ಲದೆ ಅದೇ ಕವಿಯು "ಸಂಗನಬಸವಂ ಬಸವಿದೇವಂ ಕಪ್ಪಡಿ ಸಂಗಮದೊಳು ಕೂಡಲ ಸಂಗಮೇಶ್ವರ ಶ್ರೀಪಾದಕಮಳ ಮಕರಂದ ಮಧುಕರಾಯಮಾನ ನಾಗಿರ್ದಂ." ಎಂದು ಸಹ ಹೇಳಿದ್ದಾನೆ-ಅಂದರೆ ಶ್ರೀ ಬಸವೇಶ್ವರನು ಶ್ರೀ ಸಂಗಮೇಶ್ವರನ ಪೂಜೆ, ಭಜನೆ ಮೊದಲಾದ ಕಾರ್ಯಗಳಲ್ಲಿ ನಿರತನಾಗಿ ಇದ್ದನೆಂದು ಹರೀಶ್ವರ ಕವಿ ಹೇಳುತ್ತಾನೆ. ಬಸವೇಶ್ವರನು ಕಡೆಗೆ ಸಂಗ ಮೇಶ್ವರನಲ್ಲಿ ಐಕ್ಯನಾದನೆಂದು ಭೀಮಕವಿ, ಷಡಕ್ಷರ ಕವಿ ಮೊದಲಾದವರು ತಮ್ಮ ತಮ್ಮ ಕಾವ್ಯಗಳಲ್ಲಿ ಹೇಳಿದ್ದಾರೆ.

ಹಳ್ಳಿಗರು—ನೀವು ಬಸವೇಶ್ವರನ ವಿಚಾರ ಹೇಳುವಾಗ ಅಕ್ಕ ನಾಗಮ್ಮ, ಚೆನ್ನಬಸವಣ್ಣ, ಶಿವಸ್ವಾಮಿ ಎಂದು ಹೇಳಿದಿರಲ್ಲ-ಇವರುಗಳ ವಿಚಾರ ಕೊಂಚ ಹೇಳಿ ಸ್ವಾಮಿ ಕೇಳೋಣ?

ಶಾಸ್ತ್ರಿಗಳು—ಅಕ್ಕನಾಗಮ್ಮನು ಬಸವೇಶ್ವರನ ಸಹೋದರಿ. ಇವಳು ದೊಡ್ಡ ಯೋಗಿಣಿಯಾಗಿದ್ದಳೆಂದು ತೋರುತ್ತದೆ. ಇಂಗಳೇಶ್ವರದಲ್ಲಿಯೂ, ಕಲ್ಯಾಣದಲ್ಲಿಯೂ ಇವಳ ಹೆಸರಿನ ಗವಿಗಳಿವೆ. ಇವಳ ಮಹತ್ವಕ್ಕೆ ಇದೊಂದು ನಿದರ್ಶನ. ಇವಳ ಗಂಡ ಶಿವಸ್ವಾಮಿ. ಈತನು ಕೂಡಲ ಸಂಗಮದ ಜಾತವೇದಸ್ವಾಮಿಗಳ ಶಿಷ್ಯ. ಈತನು ಒಳ್ಳೆಯ ವಿದ್ವಾಂಸನೂ ಅನುಭಾವಿಯಾಗಿಯೂ ಆಗಿದ್ದನು. ಇವರ ಮಗನೇ ಸುಪ್ರಸಿದ್ಧನಾದ ಶ್ರೀ ಚೆನ್ನಬಸವೇಶ್ವರನು.

ಶ್ರೀ ಚೆನ್ನಬಸವೇಶ್ವರನು ಬಸವೇಶ್ವರನಷ್ಟೇ ಪ್ರಸಿದ್ಧನಾದವನು. ಮತ್ತು ಬಹಳ ವಿದ್ವಾಂಸನು. ಈತನು ಅನೇಕ ಗ್ರಂಥಗಳನ್ನು ಬರೆದಿದ್ದಾನೆ. ಕನ್ನಡ, ಸಂಸ್ಕೃತ, ತೆಲುಗು ಭಾಷೆಗಳಲ್ಲಿ ಈತನ ಬಗ್ಗೆ ಪುರಾಣಗಳಿವೆ. ಈತನು ಬಸವೇಶ್ವರನ ಅನುಭವ ಮಂಟಪ ಸ್ಥಾಪನೆಯಲ್ಲಿ ಮುಖ್ಯ ಸ್ಥಾನವನ್ನು ಪಡೆದಿದ್ದನು. ಬಸವಣ್ಣನವರ ಅನಂತರ ಬಿಜ್ಜಳರಾಜ್ಯಕ್ಕೆ ಕೊಂಚಕಾಲ ಮಂತ್ರಿಯಾಗಿದ್ದನು. ಪ್ರಭುದೇವರ ಅನಂತರ ಶೂನ್ಯ ಸಿಂಹಾಸನದ ಅಧ್ಯಕ್ಷನಾಗಿದ್ದನು. ಕಲ್ಯಾಣದ ಕ್ರಾಂತಿಯಲ್ಲಿ ಈತನ ಕೈವಾಡ ಬಹಳವಾಗಿದೆ. ಕಾರವಾರ ಜಿಲ್ಲೆ ಉಳವಿಯಲ್ಲಿ ಈತನ ಸಮಾಧಿ ಇದೆ. ಪ್ರತಿವರ್ಷ ಮಾಘ ಶುದ್ಧ ಹುಣ್ಣಿಮೆಯ ದಿನ ಉಳವಿಯಲ್ಲಿ ಶ್ರೀ ಚೆನ್ನಬಸವೇಶ್ವರನ ಜಾತ್ರೆಯಾಗುತ್ತದೆ.

ಹಳ್ಳಿಗರು—ಬಸವಣ್ಣನವರು ಅಂದಿರಲ್ಲಾ, ಅವರ ಕೆಲವು ವಚನ ಹೇಳಿರಿ ದೇವ್ರು ಕೇಳೋಣ ಅನ್ನಿಸುತ್ತದೆ?

ಶಾಸ್ತ್ರಿಗಳು—ಕೇಳಿರಪ್ಪ, ಅವು ಕನ್ನಡದ ಉಪನಿಷತ್ತುಗಳು; ಆದರಕ್ಕೆ ಕಹಿ: ಉದರಕ್ಕೆ ಸಹಿ.

೧. ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಅನ್ಯರ ನಿಂದಿಸಬೇಡ, ತನ್ನ ಬಣ್ಣಿಸಬೇಡ, ಇದೇ ಅಂತರಂಗ ಶುದ್ಧಿ, ಇದೇ ಬಹಿ ರಂಗ ಶುದ್ಧಿ, ಇದೇ ನಮ್ಮ ಕೂಡಲ ಸಂಗನ ಒಲಿಸುವಪರಿ.

೨. ದಯೆಯಿಲ್ಲದ ಧರ್ಮವಾವುದಯ್ಯ ದಯವಿರಬೇಕು ಸಕಲ ಪ್ರಾಣಿ ಗಳಲ್ಲಿ, ದಯೆಯೇ ಧರ್ಮದಮೂಲವು, ಕೊಲ್ಲುವವನು ಮಾದಿಗ, ಹೊಲಸು ತಿನ್ನುವವನು ಹೊಲೆಯ ಕೂಡಲಸಂಗಮದೇವ.

೩. ಶೆಟ್ಟಿಎಂಬೆನೆ ಸಿರಿಯಾಳನ, ಮಡಿವಳನೆಂಬೆನೆ ಮಾಚಯ್ಯನ, ಡೋಹರನೆಂಬೆ ನೆಕಕ್ಕಯ್ಯನ, ಮಾದಾರನೆಂಬೆನೆ ಚನ್ನಯ್ಯನ ಆನು ಹಾರುವನೆಂದಡೆ ಕೂಡಲ ಸಂಗಮ ದೇವ ನಗುವನಯ್ಯಾ.

೪. ಕಾಯಕವೇ ಕೈಲಾಸ, ಎನಗಿಂತ ಕಿರಿಯರಿಲ್ಲ, ಸತ್ಯವ ನುಡಿ ವುದೇ ದೇವಲೋಕ, ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ ಇತ್ಯಾದಿ.

ಹಳ್ಳಿಗರು—ವಚನಗಳು ಬಹಳ ಚೆನ್ನಾಗಿವೆ. ಹಾಲುಅನ್ನ ಉಂಡಂತಿವೆ. ಕಿವಿಗೆ ಇಂಪಾಗಿದೆ ಅಲ್ಲದೆ ನೀವು ಇದುವರೆಗೂ ಹೇಳಿದ ಕೂಡಲ ಸಂಗಮ ಕ್ಷೇತ್ರ ಹಾಗೂ ಬಸವೇಶ್ವರನ ವಿಚಾರಗಳು ಬಹಳ ಚೆನ್ನಾಗಿವೆ ಸ್ವಾಮಿ, ನೀವು ಹೀಗೆ ಮೇಲಿಂದ ಮೇಲೆ ಬಂದು ನಮಗೆ ಮಹತ್ವದ ಸ್ಥಾನಗಳ ಬಗ್ಗೆ ಮಹಾಪುರುಷರ ಹೇಳುತ್ತಿರಿ ಸ್ವಾಮಿ. ನಮಗೆ ಬಹಳ ಸಂತೋಷವಾಗುತ್ತದೆ.

ಶಾಸ್ತ್ರಿಗಳು—ಒಳ್ಳೇದಪ್ಪ, ತುಂಬ ಸಂತೋಷ. ನಾನು ಹೇಳಿದ ವಿಷಯ ಚೆನ್ನಾಗಿ ಕೇಳುತ್ತಿದ್ದೀರಿ, ಕೀಟ ಭೃಂಗನ್ಯಾಯದಂತೆ ಇದರಿಂದ ನಿಮಗೆ ಶುಭವಾಗುತ್ತದೆ. ಭಾರತದಲ್ಲಿ ಅರ್ಜುನನು ಕುರುಕ್ಷೇತ್ರಕ್ಕೆ ಯುದ್ಧ ಕ್ಕಾಗಿ ಬಂದು ನಿಂತಾಗ ಅವನಿಗೆ ಸಾತ್ವಿಕ ಗುಣ ಹುಟ್ಟಿ ಯುದ್ಧ ಬೇಡ ವೆಂದು ಬಿಲ್ಲು ಕೆಳಗಿಟ್ಟ ಕಥೆ ನೀವು ಕೇಳಿರುವಿರಿ. ಇದು ಆ ಕ್ಷೇತ್ರದ ಮಹತ್ವ ಎಂದು ತಿಳಿಯಿರಿ. ಅವಕಾಶ ಸಿಕ್ಕಾಗ ನಾನು ಬಂದು ಇಲ್ಲಿ ಇಂತಹ ಉತ್ತಮ ವಿಚಾರಗಳ ಬಗ್ಗೆ ನಿಮಗೆ ಹೇಳುತ್ತಿರುತ್ತೇನೆ.



ಆಸ್ಥಾನ ಮಹಾ ವಿದ್ವಾನ್, ಕರ್ನಾಟಕ ಭಾಷಾರತ್ನಂ
ಕೈ॥ಕರಿಬಸವ ಶಾಸ್ತ್ರಿಗಳು, ಮೈಸೂರು



'ತಿರುಳ್ಗನ್ನಡ ತಿರುಳ'
ದಿ॥ ಚೆನ್ನಪ್ಪ ಉತ್ತಂಗಿ, 'ಧಾರವಾಡ

## ದಿ|| ಉತ್ತಂಗಿಯವರನ್ನು ನೆನೆದು

ಉತ್ತಂಗಿ ಚೆನ್ನಪ್ಪನುತ್ತಮಗುಣಾನ್ವಿತನು ।
ಮಿತ್ತುವನು ಮೀರಿ ಸಾರ್ಥಕದೆ ಬಾಳಿದನು ।
ಅತ್ತರೇನಹುದು ಸರ್ವಜ್ಞ? ॥ ೧ ॥

ಕ್ರಿಸ್ತಮತ ಸಂಭವನು ಉತ್ತುಂಗ ಗುಣಯುತನು ।
ಸಿಸ್ತಿನಿಂ ಸಾಹಿತ್ಯ ಸೇವೆಯನು ಗೈದನು ಪ್ರ ।
ಶಸ್ತಿಯನು ಹರಹಿ ಸರ್ವಜ್ಞ ॥ ೨ ॥

ಸರ್ವಜ್ಞ ವಚನಗಳನುರ್ವಿಯೊಳು ಕಳೆಗೊಳಿಸಿ ।
ಸರ್ವರಿಗು ಸುಲಭವಪ್ಪಂತೆ ಮಾಡಿದನು ।
ಗರ್ವವನು ತೊರೆದು ಸರ್ವಜ್ಞ ॥ ೩ ॥

ಆದಯ್ಯ ವಚನಗಳ ಮೋದದಿಂ ಸರಿಪಡಿಸಿ ।
ಮೇದಿನಿಯ ಜನಕೆ ಓದಲನುಗೊಳಿಸಿದನು ।
ಭೇದವಿಲ್ಲದೆಯೆ ಸರ್ವಜ್ಞ ॥ ೪ ॥

ಸಿದ್ಧರಾಮನ ಕೃತಿಯನುದ್ಧರಿಸಿ ಭಕುತಿಯೊಳು ।
ಬುದ್ಧಿವಂತರನು ಬೆರಗುಗೊಳಿಸಿದನಿವನು ।
ಸಿದ್ಧಹಸ್ತದಲಿ ಸರ್ವಜ್ಞ ॥ ೫ ॥

ಅನುಭವದ ಮಂಟಪವ ಭುವನ ವಿಸ್ತೃತಗೊಳಿಸಿ ।
ಅನುಭವಿಗಳಹುದು ಅಹುದೆಂಬ ರೀತಿಯಲಿ ।
ಅನುವರಿತು ಬರೆದ ಸರ್ವಜ್ಞ ॥ ೬ ॥

ಬಸವನಸ್ಪೃಶ್ಯರನು ವಸುಧೆಯೊಳಗುದ್ಧರಿಸಿ ।
ಹೊಸತಪ್ಪ ಕ್ರಾಂತಿಯನು ಎಸಗಿದಾ ಪರಿಯನ್ನು ।
ದೆಸೆದೆಸೆಯೊಳೊರೆದ ಸರ್ವಜ್ಞ ॥ ೭ ॥

ಗೀತೆಗಂ ಟಿಪ್ಪಣಿಯ ನೋತು ಮಾಡಿದನಿವನು ।
ಆತುಮದ ದಿವ್ಯ ತತ್ವಗಳ ತಿಳಿಸಿದನು ।
ಮಾತರಿದನಿವನು ಸರ್ವಜ್ಞ ॥ ೮ ॥

ಹಿಂದುಗಳ ಹಿತವನ್ನು ಮುಂದಾಗಿ ಯೋಚಿಸುತೆ ।
ಬಂಧುರದ ಹಿತಚಿಂತನೆಯ ಪುಸ್ತಕವ ಬರೆದ ।
ವಂದಿತನು ಇವನು ಸರ್ವಜ್ಞ ॥ ೯ ॥

ವೀರಶೈವರಿಗಾಗಿ ಭೂರಿ ಸೇವೆಯಗೈದ ।
ಯಾರಿದರಗುಟ್ಟನರಿದಿಹರೋ ನಾ ಕಾಣೆ ।
ಮಾರಾರಿಯರಿವ ಸರ್ವಜ್ಞ ॥ ೧೦ ॥

'ತಿರುಳುಗನ್ನಡ ತಿರುಕ' ಅರಿತವರೊಳಗ್ಗಳನು ।
ಧರೆಯೊಳಗೆ ಕನ್ನಡದ ಸೇವೆಗಾಗಿಯೆ ತನ್ನ ।
ಶರಿರವಿತ್ತಿಹನು ಸರ್ವಜ್ಞ ॥ ೧೧ ॥

ಎಂಭತ್ತು ವರ್ಷಗಳು ತುಂಬುಬಾಳನು ನಡೆಸಿ ।
ಕುಂಭಿಣಿಯೊಳಮರನೆನಿಸಿದನು ಚೆನ್ನಪ್ಪ ।
ಶಂಭು ಮೆಚ್ಚಿಹನು ಸರ್ವಜ್ಞ ॥ ೧೨ ॥

ತಾ॥ ೨೮-೮-೧೯೬೨ — ನೆನೆದವನು
ಬೆಂಗಳೂರು-೧೮. — ಬಿ. ಶಿವಮೂರ್ತಿಶಾಸ್ತ್ರೀ.

# ದಿವಂಗತ ಎಂ. ವಿ. ಸುಬ್ಬಯ್ಯನಾಯ್ಡು

೧

ನಾಡುನುಡಿಗಳಸೇವೆಗಾಗಿ ಜೀವನವಿತ್ತೆ ।
ನಾಯ್ಡು ನೀ ಧನ್ಯನೀ ಧಾರಿಣಿಯೊಳು ॥
ರಂಗಭೂಮಿಯ ಸೇವೆಗಾಗಿ ನೀನೊಪ್ಪಿಸಿದೆ ।
ಅಂಗವಂ ಕರ್ಮಯೋಗದ ಮಾರ್ಗದಿಂದ ॥

೨

ಕನ್ನಡದ ಚಿತ್ರಗಳ ನಿರ್ಮಾಪಕನು ನೀನು ।
ಉನ್ನತದ ರಂಗಭೂಮಿಯ ನಟನು ನೀನು ॥
ಸನ್ನುತನು ಸಂಗೀತ ಸಾಹಿತ್ಯವಿದನೀನು ।
ಮನ್ನಣೆಯ ದೇಶಭಕ್ತನು ಧನ್ಯನೀನು ॥

೩

ಸಾಹಿತ್ಯಸಾಮ್ರಾಜ್ಯ ಮಂಡಲಿಯಸ್ಥಾಪಕನು ।
ಭಾವೈಕ್ಯಕಾಗಿ ಶ್ರಮಿಸಿದ ಮಾನ್ಯ ನೀನು ॥
ಕೋವಿದರ ಸೇವೆಯನು ಮನಸಾರಮಾಡಿದನು ।
ಭೂವಿನತ ತತ್ವಗಳಪಾಲಕನು ನೀನು ॥

೪

ನಶ್ವರನ ದೇಹವನು ತ್ಯಜಿಸಿ ನೀ ನಡೆದಿರುವೆ ।
ಶಾಶ್ವತದ ಭಗವಂತನೆಡೆಗೆ ನೀನಿಂದು ॥
ಪರಮಾತ್ಮನೀಯಲ್ಲೈ ನಿನ್ನಾನಿಗೆ ಶಾಂತಿ ।
ಧರಣಿಯೊಳು ಮೆರೆಯಲ್ಲೈ ನಿನ್ನಮಲಕೀರ್ತಿ

೫

ಸತಿಯು ಸಹಗಮನದಿಂ ಮಿಗಿಲಾದ ಯಶವನೀ ।
ಕ್ಷಿತಿಯೊಳಗೆ ಪಡೆದೆಯೈ ಸುಬ್ಬಯ್ಯನಾಯ್ಡು ॥
ಮತಿವಂತರೆಲ್ಲರೂ ನಿನ್ನ ಪೊಗಳುತ್ತಿಹರು ।
ಅತಿಶಯದ ಶರಣಜೀವನ ಪಡೆದನೆಂದು ॥

ತಾ॥ ೨೧-೭-೧೯೬೨ — 'ಶೂಲಪಾಣಿ'

# ಕನ್ನಡ ಜನರ ಹಬ್ಬ ಹುಣ್ಣಿಮೆಗಳು

ಪ್ರಪಂಚದ ಮಾನವ ಸಮಾಜದಲ್ಲಿ ಹಿರಿಯ ಜನತೆಯೆನಿಸಿದ ಭಾರತೀಯರಲ್ಲಿ ಹಾಗೂ ಕನ್ನಡಿಗರಲ್ಲಿ ಪ್ರಾಚೀನ ಕಾಲದಿಂದ ಹಲವಾರು ಹಬ್ಬ ಹುಣ್ಣಿಮೆಗಳ ಆಚರಣೆಗಳು ಇಂದಿಗೂ ನಡೆದುಕೊಂಡು ಬಂದಿವೆ. ಈ ಆಚರಣೆಗಳಲ್ಲಿ ಪ್ರಾಚೀನ ಭಾರತೀಯರ ಹಾಗೂ ಕನ್ನಡಿಗರ ಧರ್ಮ ದರ್ಶನಗಳು, ನಡೆನುಡಿಗಳು, ಗುಪ್ತಗಾಮಿನಿಯಾಗಿ ಸೇರಿ ಬಂದಿವೆ. ಭಾರತೀಯ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳಬೇಕೆಂಬ ಜನ ಈ ಹಬ್ಬ ಹುಣ್ಣಿಮೆಗಳ ಉದ್ದೇಶವನ್ನು ತಿಳಿದುಕೊಳ್ಳಬೇಕು. ಶಾಸ್ತ್ರವಾಕ್ಯಗಳಂತೆಯೇ ಜನತೆಯ ಆಚರಣೆಗಳೂ ವಿಚಾರಪರರಿಗೆ ವಿಮರ್ಶಾರ್ಹ ಸಂಗತಿಗಳು. ಈ ಪುಣ್ಯದಿನಾಚರಣೆಗಳಲ್ಲಿ ಪರ್ವದಿನಗಳು, ಮಹಾಪುರುಷರ ಜಯಂತಿಗಳು ಎಂದು ಎರಡು ಭಾಗಗಳನ್ನು ಮಾಡಬಹುದು. ಯುಗಾದಿ, ಶಿವರಾತ್ರಿ, ನವರಾತ್ರಿ, ಸಂಕ್ರಾಂತಿ, ದೀಪಾವಳಿ, ಏಕಾದಶಿ, ಗೌರೀ ಹಬ್ಬ, ಗಣೇಶ ಚತುರ್ಥಿ, ರಥ ಸಪ್ತಮಿ, ಕಾಮ ದಹನ, ನಾಗರ ಪಂಚಮಿ, ವ್ಯಾಸ ಪೂರ್ಣಿಮಾ ಮೊದಲಾದುವುಗಳನ್ನು ಪರ್ವದಿನಗಳೆಂದು ಹೇಳಬಹುದು.

ಮಹಾ ಪುರುಷರ ಜಯಂತಿಗಳಲ್ಲಿ ಶ್ರೀರಾಮನವಮಿ, ಕೃಷ್ಣಾಷ್ಟಮಿ, ಬುದ್ಧಜಯಂತಿ, ಶಂಕರ ಜಯಂತಿ, ರೇಣುಕ ಜಯಂತಿ, ಬಸವ ಜಯಂತಿ, ಮಧ್ವ ನವಮಿ, ಶ್ರೀರಾಮಾನುಜ ತಿರುನಕ್ಷತ್ರ, ಪರಮ ಹಂಸರ ಜಯಂತಿ, ಶಿವಾಜಿ ಜಯಂತಿ, ಗಾಂಧಿ ಜಯಂತಿ, ತ್ಯಾಗರಾಜರ ಜಯಂತಿ ಮೊದಲಾದವುಗಳನ್ನು ಹೇಳಬಹುದು.

ಮೇಲೆ ಕಂಡ ಈ ಎಲ್ಲ ಹಬ್ಬ ಹುಣ್ಣಿಮೆಗಳನ್ನೂ ಆಚರಿಸುವಲ್ಲಿ ಭಾರತೀಯರು ಒಂದು ದೊಡ್ಡ ಸಮಾಜ ಸಂಸ್ಕೃತಿಯನ್ನು ಸಂರಕ್ಷಿಸಿಕೊಂಡು ಬರುತ್ತಿದ್ದಾರೆ. ಇಂತಹ ಹಬ್ಬ ಹುಣ್ಣಿಮೆಗಳ ಆಚರಣೆಯಿಂದ ಜನರಿಗೆ



**ಶ್ರೀ ಪ್ರಭುದೇವರ ಗುಡಿ, ತೇರದಾಳ**

ಇದು ಪ್ರಭುಸ್ವಾಮಿಗಳೆಂಬ ಮಹಾತ್ಮರ ಗದ್ದಿಗೆ.
ಇಲ್ಲಿ ನಡೆಯುವ ಹರಿವಾಣ ಪೂಜೆ ಮಹಿಮಾನ್ವಿತವಾಗಿದೆ.
ಪ್ರತಿವರ್ಷವೂ ಇಲ್ಲಿ ಜಾತ್ರೆಯು ನಡೆಯುತ್ತದೆ.
ಕನ್ನಡ ನಾಡಿನ ಒಂದು ಸುಕ್ಷೇತ್ರವಿದು.

ಫಲಪ್ರಾಪ್ತಿಯುಂಟೆಂದು ಪ್ರಾಚೀನಪುರಾಣಗಳಲ್ಲಿ ಹೇಳಿದೆ. ಉದಾಹರಣೆ ಗಾಗಿ ಶಿವರಾತ್ರಿಯ ಮಹಿಮೆಯನ್ನು ಕುರಿತು ವೇದವ್ಯಾಸ ಮಹರ್ಷಿಗಳು ಸ್ಕಾಂದ ಪುರಾಣದಲ್ಲಿ "ರಾತ್ರಿಃ ಶಿನಾಕಾಚನ ಸನ್ನಿಥತ್ರೀ ವಿಲೋಚನೇ ಜಾಗ್ರತಮಪ್ರಮತ್ತೇ॥ ಸಮಾನಧರ್ಮಾ ಯುವಯೋಸಕಾಶೇಸಖಾ ಭವಿಷ್ಯತ್ಯಚಿರೇಣ ಕಶ್ಚಿತ್." ಅಂದರೆ ಶ್ರದ್ಧೆಯಿಂದ ಶಿವರಾತ್ರಿಯನ್ನು ಆಚರಿಸಿ ಆ ರಾತ್ರಿ ಜಾಗರಣೆಯನ್ನು ಮಾಡಿದರೆ ಅಂಥವರಿಗೆ ಲೋಕದಲ್ಲಿ ಸಮಾನ ಧರ್ಮದ ಸ್ನೇಹಿತನು ದೊರೆಯುತ್ತಾನೆಂದು ಹೇಳಿದ್ದಾರೆ. ಇದರ ಹಾಗೆಯೇ ಏಕಾದಶಿಯ ದಿನ ಉಪವಾಸಮಾಡಿ ಜಾಗರಣೆ ಮಾಡಿದವರಿಗೆ ಭುಕ್ತಿ ಮುಕ್ತಿಗಳು ಲಭಿಸುತ್ತವೆ ಎಂದು ಸಹ ಪುರಾಣಗಳು ಹೇಳುತ್ತವೆ. ಈ ರೀತಿಯಾಗಿ ಒಳ್ಳೆಯ ಉದ್ದೇಶದಿಂದ ಧರ್ಮಶ್ರದ್ಧೆ, ಮತ್ತು ಪುಣ್ಯಪ್ರಾಪ್ತಿಯ ನಿಮಿತ್ತದಿಂದ ಇಂತಹ ಪರ್ವದಿನಗಳ ಆಚರ ಣೆಯು ನಮ್ಮ ಭಾರತ ಸಮಾಜದಲ್ಲಿ ಪ್ರಾಚೀನಕಾಲದಿಂದ ನಡೆದುಕೊಂಡು ಬರುತ್ತಿದೆ. ಇದೇ ತೆರದ ಹಬ್ಬ ಹುಣ್ಣಿಮೆಗಳ ಆಚರಣೆಯು, ಕೇವಲ ಹಿಂದುಗಳೇ ಅಲ್ಲ, ಬೌದ್ಧ, ಜೈನ, ಮಹಮ್ಮದೀಯ, ಕ್ರೈಸ್ತ, ಯಹೂದಿ ಮೊದಲಾದ ವಿಶ್ವದ ಇತರ ಸಮಾಜದವರಲ್ಲಿಯೂ ಅವರವರ ನಂಬಿಕೆಗಳಿ ಗನುಗುಣವಾಗಿ ನಡೆದು ಬರುತ್ತಿದೆ.

**ಯುಗಾದಿ, ಶ್ರೀರಾಮ ನವಮಿ :** ಭಾರತ ದೇಶದಲ್ಲಿ ವರ್ಷದ ಮೊದಲನೆಯ ದಿನವನ್ನು ಉತ್ಸಾಹದಿಂದ ಆಚರಿಸುವ ಪದ್ಧತಿ ಯುಂಟು. ಸೌರಮಾನ ಪದ್ಧತಿಯ ಉತ್ತರ ಭಾರತೀಯರು ಕಾರ್ತೀಕದ ಮೊದಲನೆಯ ದಿನವನ್ನೂ, ಚಾಂದ್ರಮಾನ ಪದ್ಧತಿಯ ದಾಕ್ಷಿಣಾತ್ಯರು ಚೈತ್ರ ಶುದ್ಧ ಪಾಡ್ಯಮಿಯ ದಿನವನ್ನೂ ವರ್ಷದ ಮೊದಲನೆಯ ದಿನವೆಂದು ಹುರುಪಿನಿಂದ ಆಚರಿಸುತ್ತಾರೆ. ಈ ಹಬ್ಬವನ್ನೇ 'ಯುಗಾದಿ' ಎಂದು ಹೇಳುತ್ತಾರೆ. ಇದರ ಅರ್ಥ 'ಯುಗ' ಅಂದರೆ ವರ್ಷ, 'ಆದಿ' ಅಂದರೆ ಮೊದಲ ದಿನ ಎಂದು. ಈ ಸಾಂಪ್ರದಾಯವು ಮಹಮದೀಯರಲ್ಲಿಯೂ, ಕ್ರೈಸ್ತರಲ್ಲಿಯೂ ಉಂಟೆಂಬುದನ್ನು ನಾವು ಪ್ರತ್ಯಕ್ಷವಾಗಿ ನೋಡುತ್ತಿದ್ದೇವೆ. ನಮ್ಮ ಕರ್ನಾಟಕ ದೇಶದಲ್ಲಿ, ಎರಡುವರೆ ಕೋಟಿ ಕನ್ನಡ ಜನರು ಈ ಯುಗಾ

ದಿಯ ಹಬ್ಬವನ್ನು ವೈಭವದಿಂದ ಆಚರಿಸುತ್ತಿದ್ದಾರೆ. ಜನಸಾಮಾನ್ಯರು ಇದನ್ನು 'ಉಗಾದಿ'ಯೆಂದೂ ಕೂಡ ಕರೆಯುತ್ತಾರೆ. ಈ ದಿನ ಜನರು ಬೆಳಿಗ್ಗೆ ಎದ್ದು ಅಭ್ಯಂಗನ ಸ್ನಾನವನ್ನು ಮಾಡಿ, ಹೊಸಬಟ್ಟೆಗಳನ್ನು ಉಟ್ಟುಕೊಂಡು ದೇವಾಲಯಗಳಿಗೆ ಹೋಗಿ ಬಂದು, ಸವಿಕಟ್ಟಾದ ಊಟಗಳಿಂದ ಸಂತುಷ್ಟರಾಗಿ ಇಡಿಯ ದಿನವನ್ನೆಲ್ಲಾ ಸಡಗರದಿಂದ ಕಳೆಯುತ್ತಾರೆ. ಹೆಣ್ಣುಮಕ್ಕಳು ಪೀತಾಂಬರಗಳನ್ನು ಉಟ್ಟುಕೊಂಡು ಹರ್ಷದಿಂದ ಮನೆ ಮನೆಗೆ ಹೋಗಿ ಬೆಳ್ಳಿ ಬಂಗಾರದ ತಟ್ಟೆಗಳಲ್ಲಿ ಬೇವುಬೆಲ್ಲವನ್ನು ಹಂಚುತ್ತಾರೆ. ಈ ಬೇವುಬೆಲ್ಲವನ್ನು ಜನರು ಯುಗಾದಿಯ ಪ್ರಸಾದವೆಂದು ಶ್ರದ್ಧೆಯಿಂದ ಸೇವಿಸುತ್ತಾರೆ. ಈ ಆಚರಣೆಯಲ್ಲಿ ಜೀವನದಲ್ಲಿ ಬರುವ ಸುಖದುಃಖಗಳನ್ನು ಜನರು ಬೇವುಬೆಲ್ಲದಂತೆ ಸಮನಾಗಿ ಸ್ವೀಕರಿಸಬೇಕೆನ್ನುವ ಒಂದು ಒಳ್ಳೆಯ ತತ್ವಾರ್ಥವಿದೆಯೆಂದು ನಾವು ತಿಳಿಯಬಹುದು. ಯುಗಾದಿಯನ್ನು ಕಳೆದು ಕೂಡಲೇ ಸನ್ನಿಹಿತವಾದ ಸುಗ್ಗಿಯ ನಿಮಿತ್ತವಾಗಿ ಚೈತ್ರ ಶುದ್ಧ ನವಮಿಯ ದಿನ ಶ್ರೀರಾಮನವಮಿ ನಮ್ಮನ್ನು ಎದುರುಗೊಳ್ಳುತ್ತದೆ. ಆ ಕಾಲದಲ್ಲಿ ಜನರು ಆಸೇತು ಹಿಮಾಚಲ ಪರ್ಯಂತವಾಗಿ ರಾಮಾಯಣ ಪಾರಾಯಣ, ಭಜನೆ ಕೀರ್ತನೆಗಳನ್ನು ಶ್ರದ್ಧೆಯಿಂದ ನಡೆಸುತ್ತಾರೆ. ಈ ಕಾಲದಲ್ಲಿ ರಾಮಾಯಣದ ಸಂಸ್ಕೃತಿಯು ಸಮಗ್ರ ಭಾರತೀಯರ ಜೀವನದಲ್ಲಿ ಪ್ರಕಾಶಗೊಳ್ಳುತ್ತದೆ. ಅಲ್ಲಿಂದ ಮುಂದೆ ಮತ್ಸ್ಯ ಜಯಂತಿ, ವರಾಹ ಜಯಂತಿ ಮತ್ತು ಪರಶುರಾಮ ಜಯಂತಿಗಳು ನಮ್ಮ ಮುಂದೆ ನಿಲ್ಲುತ್ತವೆ. ಈ ಜಯಂತಿಗಳು ಭಗವಂತನು ಲೋಕದ ಉದ್ಧಾರಕ್ಕಾಗಿ ಅವತರಿಸಿದ ಕಥೆಗಳನ್ನು ನಮ್ಮ ನೆನಪಿಗೆ ತರುತ್ತವೆ. ಈ ದಶಾವತಾರದ ಕಥೆಗಳು—ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ-ಮಾನವನ ಸೃಷ್ಟಿಯ ಸಂಕೇತದಂತಿವೆ ಎಂಬುದು ಇಲ್ಲಿ ಗಮನಾರ್ಹ. ಅದೇ ಚೈತ್ರಮಾಸ ಹುಣ್ಣಿಮೆಯ ದಿನ ತಮಿಳುನಾಡಿನಲ್ಲಿಯೂ, ಕರ್ನಾಟಕದ ರಾಜಧಾನಿಯಾದ ಬೆಂಗಳೂರಿನಲ್ಲಿಯೂ 'ಧರ್ಮರಾಯನ ಕರಗ' ಎಂಬ ಉತ್ಸವವು ವಿಶಿಷ್ಟ ಸಂಪ್ರದಾಯದವರಿಂದ ನಡೆಯುತ್ತದೆ. ಇದನ್ನು 'ತಿಗುಳರು' ಆಚರಿಸುತ್ತಾರೆ.

ಬಸವ—ಶಂಕರ ಜಯಂತಿಗಳು:—ಅಲ್ಲಿಂದ ಮುಂದೆ ವೈಶಾಖ ಮಾಸವು ಪ್ರಾರಂಭವಾದ ಕೂಡಲೇ ಶುದ್ಧ ತೃತೀಯೆಯ ದಿನ ಬಸವ ಜಯಂತಿ, ಪಂಚಮಿಯದಿನ ಶ್ರೀ ಶಂಕರ ಜಯಂತಿ ಮತ್ತು ಶ್ರೀ ರಾಮಾನುಜ ತಿರುನಕ್ಷತ್ರಗಳು ನಮ್ಮ ಮುಂದೆ ಬರುತ್ತವೆ. ಈ ಜಯಂತಿಗಳು ಶ್ರೀ ಶಂಕರಾಚಾರ್ಯರು ಸನಾತನ ಧರ್ಮದ ಉದ್ಧಾರಕ್ಕಾಗಿ ಮಾಡಿದ ಎಲ್ಲ ಮಹತ್ಕಾರ್ಯಗಳನ್ನೂ, ಶ್ರೀ ಬಸವೇಶ್ವರನು ಸಮಾಜದ ಉದ್ಧಾರಕ್ಕಾಗಿ ಮಾಡಿದ ವಿಚಾರಕ್ರಾಂತಿ ಮತ್ತು ಪವಾಡಗಳನ್ನೂ, ಶ್ರೀರಾಮಾನುಜರು ಲೋಕಕಲ್ಯಾಣಕ್ಕಾಗಿ ಮಾಡಿದ ಮಹತ್ಕಾರ್ಯಗಳನ್ನೂ ಜನತೆಯ ಗಮನಕ್ಕೆ ತರುತ್ತವೆ. ಈ ಮಹಾಪುರುಷರ ಜಯಂತಿಯ ಕಾಲದಲ್ಲಿ ಜನರು ಅವರವರ ಚರಿತ್ರೆ, ಉಪದೇಶಗಳನ್ನು ಭಕ್ತಿಯಿಂದ ಲಾಲಿಸಿ ಪಾಲಿಸುತ್ತಾರೆ. ಈ ಎಲ್ಲ ಕಾರಣಗಳಿಂದ ಭಾರತೀಯ ಸಂಸ್ಕೃತಿಯು ಉಜ್ಜೀವನವನ್ನು ಹೊಂದಲು ಸಾಧ್ಯವಾಗುತ್ತದೆ.

ಇದೇ ಪರಂಪರೆಯಲ್ಲಿ ಕನ್ನಡ ಜನರು ಗೌರೀವ್ರತ, ಅರ್ಧನಾರೀಶ್ವರ ವ್ರತ, ನಮ್ಮಾಳ್ವಾರ್ ತಿರುನಕ್ಷತ್ರ, ವಟಸಾವಿತ್ರೀವ್ರತ, ಮೊದಲಾದುವುಗಳನ್ನು ಆಚರಿಸುತ್ತಾರೆ. ಅಲ್ಲಿಂದ ಮುಂದೆ ಆಷಾಢ ಶುದ್ಧ ಪ್ರಥಮೈಕಾದಶಿ ನಮ್ಮನ್ನು ಎದುರುಗೊಳ್ಳುತ್ತದೆ.

ಪ್ರಥಮೈಕಾದಶಿ—ಈ ಏಕಾದಶಿ ದಿನವು ಒಳ್ಳೆಯ ಪುಣ್ಯದಿನವೆಂದು ಭಾವಿಸಲ್ಪಟ್ಟಿದೆ. ಈ ದಿವಸ ಹಗಲು ಉಪವಾಸಮಾಡಿ ರಾತ್ರಿ ಜಾಗರಣೆ ಮಾಡುವುದು, ಭಗವಂತನ ಭಜನೆಯನ್ನು ಮಾಡುವದು ಬಹಳ ಪುಣ್ಯಪ್ರದವೆಂದು ಭಾವಿಸಲ್ಪಟ್ಟಿದೆ. ಹಿಂದೂ ಸಂನ್ಯಾಸಿಗಳು ಈ ದಿನದಿಂದ ಚಾತುರ್ಮಾಸ ವ್ರತವನ್ನು ಕೈಗೊಂಡು ಒಂದೇ ಸ್ಥಳದಲ್ಲಿ ಕುಳಿತು ಧ್ಯಾನ, ಜಪ, ತಪ ಮುಂತಾದುವುಗಳಲ್ಲಿ ತೊಡಗುತ್ತಾರೆ. ಈ ದಿನ ಪಂಢರಾಪುರ, ಉಡುಪಿ, ವಿಷ್ಣು ಕಂಚಿ, ಶ್ರೀರಂಗ ಮೊದಲಾದ ವೈಷ್ಣವ ಕ್ಷೇತ್ರಗಳಲ್ಲಿ ಉತ್ಸವಗಳು ನಡೆಯುತ್ತವೆ. ಈ ಏಕಾದಶಿಯನ್ನು ಕುರಿತಾಗಿ ಪುರಾಣಗಳಲ್ಲಿ ಅಂಬರೀಷ, ಪ್ರಹ್ಲಾದ, ಚಂದ್ರಹಾಸ, ಮಯೂರಧ್ವಜ, ಪುಂಡಲೀಕ ಮೊದಲಾದ ಭಾಗವತರ ಕಥೆಗಳು ಪ್ರಸಿದ್ಧವಾಗಿವೆ.

ಹೀಗೆ ಏಕಾದಶಿಯನ್ನು ಆಚರಿಸಿದ ಮೇಲೆ ವ್ಯಾಸಪೌರ್ಣಿಮೆ ನಮ್ಮ ಮುಂದೆ ಬಂದು ನಿಲ್ಲುತ್ತದೆ. ಇದು ವೇದವ್ಯಾಸ ಮಹರ್ಷಿ ಹುಟ್ಟಿದ ದಿನವೆಂದು ಹಲವರು ಭಾವಿಸಿದ್ದಾರೆ. ವೇದವ್ಯಾಸರು ಮಹಾಭಾರತ ಮತ್ತು ಉತ್ತರ ಮೀಮಾಂಸೆ ಮುಂತಾದ ಗ್ರಂಥಗಳನ್ನು ಬರೆದಿದ್ದಾರೆ. ಅಲ್ಲದೆ ವೇದವಾಙ್ಮಯವನ್ನು ಋಗ್, ಯಜುರ್, ಸಾಮ, ಮತ್ತು ಅಥರ್ವ ಎಂದು ನಾಲ್ಕು ಭಾಗ ಮಾಡಿ ಪ್ರಸಿದ್ಧರಾಗಿದ್ದಾರೆ. ಅಲ್ಲಿಂದ ಮುಂದೆ ದಕ್ಷಿಣಾಯನ ಪುಣ್ಯಕಾಲವು ನಮ್ಮನ್ನು ಸ್ವಾಗತಿಸುತ್ತದೆ. ಸೂರ್ಯನ ಗತಿಯು ಉತ್ತರದಿಂದ ದಕ್ಷಿಣಕ್ಕೆ ವಾಲುವ ಈ ಪರ್ವದಿನವನ್ನು ಹಿಂದುಗಳು ಪುಣ್ಯದಿನವೆಂದು ಭಾವಿಸುತ್ತಾರೆ. ಮುಂದೆ ಟೀಕಾಚಾರ್ಯರ ಪುಣ್ಯದಿನ, ನಾಗಚತುರ್ಥಿ, ಗರುಡ ಪಂಚಮಿ, ವರಲಕ್ಷ್ಮೀ ವ್ರತ, ಅನಂತ ಪದ್ಮನಾಭ ವ್ರತ,ಉಪಾಕರ್ಮ,ರಾಘವೇಂದ್ರ ಸ್ವಾಮಿಗಳ ಪುಣ್ಯದಿನ, ಕಲ್ಕಿ ಜಯಂತಿ ಮೊದಲಾದ ಪವಿತ್ರದಿನಗಳು ಕನ್ನಡಜನರಿಂದ ಆಚರಿಸಲ್ಪಡುತ್ತವೆ.

## ಶ್ರೀ ಕೃಷ್ಣಾಷ್ಟಮಿ

ಕರ್ನಾಟಕದಲ್ಲಿ ಆಚರಿಸುತ್ತಿರುವ ಹಬ್ಬಗಳಲ್ಲಿ ಶ್ರಾವಣ ಬಹುಳ ಅಷ್ಟಮಿಯ ದಿನ ನಡೆಯುವ ಕೃಷ್ಣಾಷ್ಟಮಿಯ ಹಬ್ಬವು ಬಹಳ ಮಹತ್ವ ಪೂರ್ಣವಾದುದು. ಈ ಪುಣ್ಯದಿನವು ಭಗವದ್ಗೀತೆಯ ಆಚಾರ್ಯನಾದ ಹಾಗೂ ಮಹಾಭಾರತದ ಸೂತ್ರಧಾರನಾದ ಶ್ರೀ ಕೃಷ್ಣನ ನೆನಪನ್ನು ನಮಗೆ ತರುತ್ತದೆ.

"ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಂ। ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ" ಎಂಬ ಗೀತಾ ವಾಕ್ಯದಂತೆ ದುಷ್ಟನಿಗ್ರಹ ಶಿಷ್ಟಪರಿಪಾಲನಕ್ಕಾಗಿ ಈ ಲೋಕದಲ್ಲಿ ಅವತರಿಸಿದ ಶ್ರೀ ಕೃಷ್ಣ ಪರಮಾತ್ಮನ ಅವತಾರವು ನಿಜವಾಗಿಯೂ ಶ್ರೇಷ್ಠ ವಾದುದೇ ಸರಿ. ಭಾರತದಲ್ಲಿ ಹುಟ್ಟಿರುವ ಮಹಾಪುರುಷರಲ್ಲಿ ಶ್ರೀ ಕೃಷ್ಣನು ಪೂರ್ಣಾವತಾರಿ ಎಂದೂ, ಮಹಾನುಭಾವನೆಂದೂ ಡಾ॥ ಅನಿಬೆಸೆಂಟ್ ಹೇಳಿರುವ ಮಾತು ಅರ್ಥಪೂರ್ಣವಾಗಿದೆ. ಒಟ್ಟಿನಲ್ಲಿ ಶ್ರೀ ಕೃಷ್ಣಾಷ್ಟಮಿಯು

ಮಹಾಭಾರತ, ಭಾಗವತ, ಭಗವದ್ಗೀತೆ ಮೊದಲಾದ ಗ್ರಂಥಗಳನ್ನು ನಮ್ಮ ಕಣ್ಣು ಮುಂದೆ ನಿಲ್ಲಿಸುತ್ತದೆ.

## ಗ ಣ ಪ ತಿ ಯ ಹ ಬ್ಬ

ಕನ್ನಡಿಗರು ಆಚರಿಸುವ ಹಬ್ಬಗಳಲ್ಲಿ ಭಾದ್ರಪದ ಶುದ್ಧ ತೃತೀಯಾ ದಿನ ಗೌರೀ ಹಬ್ಬವೂ ಚತುರ್ಥಿಯ ದಿನ ಗಣಪತಿಯ ಹಬ್ಬವೂ ಬರುತ್ತವೆ. ಹೆಣ್ಣುಮಕ್ಕಳು ತಮ್ಮ ಸೌಂಗಲ್ಯದ ಪುಣ್ಯ ವೃದ್ಧಿಗಾಗಿ—ಮುತ್ತೈದೆ ತನದ ಸಂರಕ್ಷಣೆಗಾಗಿ ಗೌರೀ ಹಬ್ಬವನ್ನು ಆಚರಿಸುತ್ತಾರೆ. ಈ ಕಾಲದಲ್ಲಿ ಹೆಣ್ಣುಮಕ್ಕಳು ತವರು ಮನೆಗೆ ಬಂದು ಮನ್ನಣೆಯನ್ನು ಪಡೆಯುತ್ತಾರೆ. ಭಾದ್ರಪದ ಶುದ್ಧ ಚತುರ್ಥಿಯ ದಿನ ಗಣಪತಿಯ ಹಬ್ಬವು ಆಸೇತು ಹಿಮಾ ಚಲ ಪರ್ಯಂತವಾಗಿ ವೈಭವದಿಂದ ಆಚರಿಸಲ್ಪಡುತ್ತದೆ. ಪರಮೇಶ್ವರನ ಹಿರಿಯ ಮಗನೂ, ಚತುರ್ಮುಖ ಬ್ರಹ್ಮನ ಅಳಿಯನೂ ಆದ ಶ್ರೀ ಗಣಪತಿಯು ಸಮಸ್ತರ ಪೂಜೆಗೂ ಅರ್ಹನಾಗಿದ್ದಾನೆ. ಈ ಹಬ್ಬದಲ್ಲಿ ಜನರು ಭಕ್ತಿಯಿಂದ ಗಣಪತಿಯನ್ನು ಪೂಜಿಸಿ ಸಮಸ್ತರ ಶುಭವನ್ನು ಕೋರುತ್ತಾರೆ. ವಿದ್ಯಾಭಿಮಾನಿಯಾದ ಗಣಪತಿಯನ್ನು ವಿದ್ಯಾರ್ಥಿಗಳು ಭಕ್ತಿಯಿಂದ ಪೂಜಿಸುವುದು ಸಹಜವಾಗಿಯೇ ಇದೆ. ಇಲ್ಲಿಂದ ಮುಂದೆ ಋಷಿ ಪಂಚಮಿ, ವಾಮನ ಜಯಂತಿ ಮೊದಲಾದ ಶುಭದಿನಗಳೂ ಪರ್ವ ದಿನಗಳೂ ಆಚರಿಸಲ್ಪಡುತ್ತವೆ.

## ವಿಜಯದಶಮಿ ಅಥವಾ ನಾಡಹಬ್ಬ

ಇನ್ನು ಮುಂದೆ ಬರುವ ಹಬ್ಬಗಳಲ್ಲಿ ಕನ್ನಡಿಗರ ನಾಡಹಬ್ಬವೆಂದು ಹೆಸರಾಗಿರುವ, ನವರಾತ್ರಿ, ವಿಜಯದಶಮಿ, ದಸರಾ ಮೊದಲಾದ ಹೆಸರು ಗಳಿಂದ ಕರೆಯಿಸಿಕೊಳ್ಳುತ್ತಿರುವ ಈ ಪುಣ್ಯ ದಿನವು ನಮ್ಮ ಕಣ್ಣು ಮುಂದೆ ಕಾಣಿಸಿಕೊಳ್ಳುತ್ತದೆ. ಪಾಂಡವರು ಅಜ್ಞಾತವಾಸದಲ್ಲಿದ್ದಾಗ ವಿರಾಟನಗರದಲ್ಲಿ ವಾಸವಾಗಿದ್ದರು. ಆಗ ಕೌರವರು ಪಾಂಡವರ ಗುಪ್ತ ವೇಷವನ್ನು ಬೈಲಿಗೆ ತರುವ ಹಂಚಿಕೆಯಿಂದ ವಿರಾಟನ ಗೋವುಗಳನ್ನು

ಹಿಡಿದರು. ಆ ಗೋಗ್ರಹಣವನ್ನು ಬಿಡಿಸುವುದರ ಸಲುವಾಗಿ ಬೃಹನ್ನಳಿಯ ವೇಷದಲ್ಲಿದ್ದ ಅರ್ಜುನನು ವಿರಾಟ ಪುತ್ರನಾದ ಉತ್ತರನು ಸಹಿತವಾಗಿ ಆಶ್ವಯುಜ ಶುದ್ಧ ದಶಮಿಯ ದಿನ, ಸೈನ್ಯ ಸಹಿತನಾಗಿ ಹೋಗಿ ಕೌರವರು ಹಿಡಿದಿದ್ದ ಗೋವುಗಳನ್ನು ಯುದ್ಧಮುಖದಿಂದ ಬಿಡಿಸುತ್ತಾನೆ. ಆಶ್ವಯುಜ ಶುದ್ಧ ದಶಮಿಯ ದಿನ ವಿಜಯವನ್ನು ಪಡೆದದ್ದರಿಂದ ಈದಿವಸಕ್ಕೆ 'ವಿಜಯ-ದಶಮಿ' ಎಂಬ ಹೆಸರು ಪ್ರಾಪ್ತವಾಗಿದೆ. ವಿಜಯ ದಶಮಿಗೆ ಮೊದಲು ಮಹಾನವಮಿ ಬರುತ್ತದೆ. ಅದರ ಮೊದಲು ಬರುವ ದುರ್ಗಾಷ್ಟಮಿಯು ಶಕ್ತಿಪೂಜೆಯ ದಿನ. ಇದು ಬಂಗಾಳ ದೇಶದಲ್ಲಿ ಬೃಹದಾಕಾರವಾಗಿ ಆಚರಿಸಲ್ಪಡುತ್ತದೆ. ಮಹಾನವಮಿಯು ವೀರಪೂಜೆಯ ಕುರುಹು. ಅದಕ್ಕಾಗಿಯೇ ಬಸವಣ್ಣನವರು ತಮ್ಮದೊಂದು ವಚನದಲ್ಲಿ 'ಮರಣವೇ ಮಹಾನವಮಿ' ಎಂದಿದ್ದಾರೆ. ಹಿಂದುಗಳಲ್ಲಿ ಆಚರಿಸುವ ಹಬ್ಬಗಳಲ್ಲಿ ಪುರುಷ ಪ್ರಧಾನ ಹಬ್ಬಗಳು ಮತ್ತು ಸ್ತ್ರೀ ಪ್ರಧಾನ ಹಬ್ಬಗಳು ಎಂದು ಎರಡು ಭಾಗಗಳುಂಟು. ನವರಾತ್ರಿ, ದೀಪಾವಳಿ, ಸಂಕ್ರಾಂತಿ, ಗಣಪತಿ ಚೌತಿ ಮೊದಲಾದುವುಗಳು ಪುರುಷ ಪ್ರಧಾನವಾದವುಗಳು. ಗೌರೀಹಬ್ಬ, ವರಲಕ್ಷ್ಮೀವ್ರತ, ವಟಸಾವಿತ್ರೀ ವ್ರತ, ಅಕ್ಕನ ಹುಣ್ಣಿಮೆ ಮೊದಲಾದುವು ಸ್ತ್ರೀ ಪ್ರಧಾನವಾದುವು. ಈ ಪುರುಷ ಪ್ರಧಾನವಾದ ಹಬ್ಬಗಳಲ್ಲಿ ವಿಜಯ ದಶಮಿಯು ಅಗ್ರಗಣ್ಯವಾದುದು. ಕನ್ನಡನಾಡು ಗಂಡುಗಲಿಗಳಬೀಡು ಎಂಬುದಕ್ಕೆ ಚರಿತ್ರೆಯಲ್ಲಿ ಆಧಾರಗಳಿವೆ. ಈ ದೇಶದಲ್ಲಿರುವ ವೀರಗಲ್ಲುಗಳು, ಮಹಾಸತಿ ಕಲ್ಲುಗಳು ಈ ನಮ್ಮ ಮಾತಿಗೆ ನಿದರ್ಶನಗಳಾಗಿವೆ. "ಜಿತೇನ ಪ್ರಾಪ್ಯತೇ ಲಕ್ಷ್ಮೀಃ ಮೃತೇನಾಪಿ ಸುರಾಂಗನಾ । ಕ್ಷಣವಿಧ್ವಂಸಿನೀಕಾಯೇ ಕಾ ಚಿಂತಾ ಮರಣೇರಣೇ॥ ಎಂಬುದು ವೀರಗಲ್ಲುಗಳಲ್ಲಿರುವ ಕನ್ನಡಿಗರ ಅಮರಸಂದೇಶ. ಅದಕ್ಕಾಗಿ ಪೌರುಷ ಪ್ರಧಾನವಾದ ನಾಡ ಹಬ್ಬವು ನಮ್ಮ ಜನಕ್ಕೆ ಹೆಚ್ಚು ಪ್ರಿಯವೆನಿಸಿದೆ ಎಂದು ಹೇಳಬಹುದು. "ಅಡಿಯ ಮುಂದಿಡೆ ಸ್ವರ್ಗ, ಅಡಿಯ ಹಿಂದಿಡೆ ನರಕ, ಅಡಿಗಶ್ವಮೇಧಫಲವಕ್ಕು ಸ್ವಾಮಿ ಕಾರ್ಯಕ್ಕೆ ಮಡಿಯಲೇಬೇಕು." ಎಂಬುದು ಕರ್ನಾಟಕದ ರಾಷ್ಟ್ರ ಕವಿಯಾದ ಸರ್ವಜ್ಞನ ಸಂದೇಶ. ಈ ವಿಜಯ ದಶಮಿಯು ಆದ ಮೇಲೆ ಧನ್ವಂತರೀ ಜಯಂತಿ, ಚಾಮುಂಡೇಶ್ವರೀ ಉತ್ಸವ ಮೊದಲಾದುವು

ನಮ್ಮನ್ನು ಸ್ವಾಗತಿಸುತ್ತವೆ. ಅಲ್ಲಿಂದ ಮುಂದೆ ಭಾರತದ ಬಹುದೊಡ್ಡ ಹಬ್ಬವೆನಿಸಿದ ದೀಪಾವಳಿಯು ನಮ್ಮ ಕಣ್ಣಿನ ಮುಂದೆ ಕಾಣಿಸಿಕೊಳ್ಳುತ್ತದೆ.

## ದೀಪಾವಳಿ ಹಬ್ಬ

ಆಶ್ವಯುಜ ಬಹುಳ ಚತುರ್ದಶಿಯು ದಿನ ನರಕ ಚತುರ್ದಶಿ ದಿನಾಚರಣೆ. ಮರುದಿನ ಬಲೀಂದ್ರ ಪೂಜೆ. ಆಮೇಲೆ ಬಲಿಪಾಡ್ಯಮಿಯು ದೀಪಾವಳಿಯು ಕಾರ್ತೀಕ ಶುದ್ಧ ಪಾಡ್ಯದ ದಿನ ಪ್ರಾಪ್ತವಾಗುತ್ತದೆ. ಮಹಾವಿಷ್ಣುವು ನರಕಾಸುರನನ್ನು ಪಾತಾಳಕ್ಕೆ ತುಳಿದ ದಿನ ನರಕ ಚತುರ್ದಶಿ ಎಂದೂ, ಅಹಂಕಾರದಿಂದ ವರ್ತಿಸುತ್ತಿದ್ದ ಬಲಿಚಕ್ರವರ್ತಿಯನ್ನು ದಮನ ಮಾಡಿದ ದಿನವು ಬಲೀಂದ್ರ ಪೂಜೆಯದಿನವೆಂದೂ ಹೆಸರುಗೊಂಡಿವೆ. ಲೋಕ ಕಂಟಕರೂ, ದುರಹಂಕಾರಿಗಳೂ ದೇವರ ಪ್ರೀತಿಗೆ ದೂರವಾಗುವರೆಂಬುದೇ ಇಲ್ಲಿ ನಾವು ತಿಳಿದುಕೊಳ್ಳಬೇಕಾದ ನೀತಿ. ಈ ಕಾಲದಲ್ಲಿ ನಾಡಿನ ಗುಡಿ ಗೋಪುರಗಳಲ್ಲಿ ದೀಪಾಲಂಕಾರವಾಗಿ ಎಲ್ಲೆಲ್ಲೂ ಸಂತೋಷವು ಉಕ್ಕಿ ಬರುತ್ತದೆ. ಕರ್ಣಾಟಕದ ಧರ್ಮಸ್ಥಳ, ಗುರುಪುರ ಮೊದಲಾದ ಕ್ಷೇತ್ರಗಳಲ್ಲಿ ದೀಪೋತ್ಸವವು ವೈಭವದಿಂದ ನಡೆಯುತ್ತದೆ. ಅನಂತರ ಗೀತಾಜಯಂತಿ ಮೊದಲಾದ ಪುಣ್ಯದಿನಗಳು ಕನ್ನಡ ಜನರಿಂದ ಆಚರಿಸಲ್ಪಡುತ್ತವೆ. ಅನಂತರ ಉತ್ತರಾಯಣ ಪುಣ್ಯಕಾಲವು ಬಹು ಮುಖ್ಯವಾದ ಪರ್ವದಿನವೆನಿಸಿದೆ.

## ಉತ್ತರಾಯಣ ಪುಣ್ಯಕಾಲ

ಪುಷ್ಯ ಶುದ್ಧ ತ್ರಯೋದಶಿಯು ದಿನ ಈ ಉತ್ತರಾಯಣ ಕಾಲವು ಸಂಭವಿಸುತ್ತದೆ. ಈ ಹಬ್ಬಕ್ಕೆ ಕರ್ನಾಟಕದಲ್ಲಿ 'ಸಂಕ್ರಾಂತಿ' ಎಂದೂ ತಮಿಳು ನಾಡಿನಲ್ಲಿ ಪೊಂಗಲ್ ಎಂದೂ ಹೆಸರಿದೆ. ಆಗ ಸೂರ್ಯಗತಿಯು ದಕ್ಷಿಣದಿಂದ ಉತ್ತರಕ್ಕೆ ಬದಲಾಗುತ್ತದೆ. ತಂಡಿಯು ಕಾಲ ಹೋಗಿ ಬೇಸಿಗೆಯು ಕಾಲ ಪ್ರಾರಂಭವಾಗುತ್ತದೆ. ಅಲ್ಲಿಂದ ಮುಂದೆ ತ್ಯಾಗರಾಜರ ಜಯಂತಿ, ಪುರಂದರದಾಸರ ಪುಣ್ಯದಿನ, ಮಧ್ವನವಮಿ, ಭೀಷ್ಮೈಕಾದಶಿ

ಮೊದಲಾದ ಪುಣ್ಯದಿನಗಳು ಪ್ರಾಪ್ತವಾಗುತ್ತದೆ. ತ್ಯಾಗರಾಜರು ದಕ್ಷಿಣ ಭಾರತದ ಸುಪ್ರಸಿದ್ಧ ಸಂಗೀತಗಾರರು ಹಾಗೂ ಬ್ರಹ್ಮಜ್ಞಾನಿಗಳು. ಪುರಂದರದಾಸರು ಕರ್ನಾಟಕದ ಸಂತಶ್ರೇಷ್ಠರು ಹಾಗೂ ಹಾಡುಗಬ್ಬಕಾರರು ಮಧ್ವಾಚಾರ್ಯರು ಹುಟ್ಟು ಕನ್ನಡಿಗರು ಮಹಾಪ್ರತಿಭಾಶಾಲಿಗಳು ಮತ್ತು ದ್ವೈತಮತ ಸ್ಥಾಪನಾಚಾರ್ಯರು. ಈ ಮಹಾತ್ಮರುಗಳ ಜಯಂತಿಯ ಆಚರಣೆಯಿಂದ ಭಕ್ತಿ ವೈರಾಗ್ಯಗಳು ಪ್ರಕಟವಾಗಲು ಕಾರಣವಾಗುತ್ತವೆ. ಪುರಂದರದಾಸರ ಪುಣ್ಯದಿನವಾದ ಪುಷ್ಯಮಾಸ ಅಮವಾಸ್ಯೆ ದಿನವೇ ಗಾಂಧಿಜಿಯ ನಿರ್ಯಾಣ ದಿನವೂ ಪ್ರಾಪ್ತವಾಗಿರುವುದು ಅಪೂರ್ವಯೋಗ ವೆನ್ನಬಹುದು. ಆಚಾರ್ಯ ಭೀಷ್ಮನು ಮಹಾಭಾರತದ ವೀರಪುರುಷ ಪರಮ ವೈಷ್ಣವ ಶಿಖಾಮಣಿ. ಅವನ ಸ್ಮಾರಕ ಭೀಷ್ಮೈಕಾದಶಿ ದಿನವೆನಿಸಿದೆ.

## ಮಹಾ ಶಿವರಾತ್ರಿ

ಹಿಂದುಗಳು ಆಚರಿಸುವ ಹಬ್ಬಗಳಲ್ಲಿ ಈ ಮಹಾಶಿವರಾತ್ರಿ ಪ್ರಖ್ಯಾತ ವಾದುದು. ಇದು ಮಾಘಶುದ್ಧ ತ್ರಯೋದಶಿಯ ದಿನ ಬರುತ್ತದೆ. ಭಾರತದ ಪ್ರಖ್ಯಾತ ಕ್ಷೇತ್ರಗಳಾದ ಕಾಶಿ, ಕೇದಾರ, ರಾಮೇಶ್ವರ, ಪಂಪಾ, ಶ್ರೀಶೈಲ, ಕಂಚಿ, ಕಾಳಹಸ್ತಿ, ಸೋಮನಾಥ ಮೊದಲಾದ ಕಡೆಗಳಲ್ಲಿ ಈ ಹಬ್ಬವನ್ನು ವೈಭವದಿಂದ ಆಚರಿಸಲಾಗುತ್ತದೆ. ಈ ದಿನ ಜನರು ಹಗಲು ಉಪವಾಸವನ್ನೂ, ರಾತ್ರಿ ಜಾಗರಣೆಯನ್ನೂ ವ್ರತನಿಯಮಗಳನ್ನೂ ಪಾಲಿಸುತ್ತಾರೆ. ಪರಮೇಶ್ವರನ ೨೫ ಲೀಲೆಗಳಲ್ಲಿ ಮಹಾಲಿಂಗೋದ್ಭವವು ಈ ದಿನ ನಡೆಯಿತೆಂದು ಶಿವಪುರಾಣಗಳಲ್ಲಿ ಹೇಳಿದೆ. ಇದನ್ನು ಕೋಟಿ ಕೋಟಿ ಭಾರತೀಯರು ಭಕ್ತಿಯಿಂದ ಆಚರಿಸುತ್ತಾರೆ.

## ಕಾಮನ ಹಬ್ಬ ಅಥವಾ ಕಾಮ ದಹನ

ಫಾಲ್ಗುಣ ಶುದ್ಧ ಚತುರ್ದಶಿಯ ದಿನ 'ಕಾಮ ದಹನ' ಅಥವಾ ಹೋಳೀ ಹಬ್ಬ ಪ್ರಾಪ್ತವಾಗುತ್ತದೆ. ಇದು ಗಿರಿಜಾ ಕಲ್ಯಾಣಕ್ಕೆ ಸಂಬಂಧ ಪಟ್ಟ ಕಥೆ. ಅಂತರ್ಮುಖಿಯಾಗಿ ಹಂಪೆಯಲ್ಲಿ ತಪಸ್ಸಿನಲ್ಲಿದ್ದ ಪರಮೇಶ್ವ

ರನನ್ನು ದೇವತೆಗಳ ಪ್ರೇರಣೆಯಂತೆ ಕಾಮರಾಜನು ತನ್ನ ಪಂಚ ಬಾಣ ಗಳಿಂದ ಹೊಡೆದು ಅವನ ತಪಸ್ಸನ್ನು ಭಂಗಪಡಿಸಿದಾಗ ಆ ಪರಶಿವನು ತನ್ನ ಫಾಲನೇತ್ರದಿಂದ ಕಾಮನನ್ನು ಸುಟ್ಟ ಕಥೆ ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಈ ಕೃತ್ಯವು ನಡೆದ ಸ್ಥಳ ಹಿಮಾಲಯದಲ್ಲಿದೆ ಎಂದು ಸ್ಕಾಂದಪುರಾಣದಲ್ಲಿ ಹೇಳಿದೆ. ಇದು ಕರ್ನಾಟಕದ ಪಂಪಾ ಕ್ಷೇತ್ರದಲ್ಲಿ ಎಂದು ಹರೀಶ್ವರನ ಗಿರಿಜಾ ಕಲ್ಯಾಣದಲ್ಲಿ ಹೇಳಿದೆ. ಅಲ್ಲಿಂದ ಮುಂದೆ ವಾದಿರಾಜರು ಮತ್ತು ವ್ಯಾಸ ರಾಜರ ಜಯಂತಿಗಳು ಬರುತ್ತವೆ. ಈ ಇಬ್ಬರು ಮಹಾತ್ಮರು ಕರ್ನಾಟ ಕದ ದಾಸಕೂಟದ ವಿದ್ವಾಂಸರು ಮತ್ತು ಮಹನೀಯರು. ಈ ರೀತಿ ಯುಗಾದಿಯಿಂದ ಪ್ರಾರಂಭವಾದ ಹಬ್ಬ ಹುಣ್ಣಿಮೆಗಳು ಕಾಮದಹನದಲ್ಲಿ ಪರ್ಯವಸಾನ ಗೊಳ್ಳುತ್ತವೆ.

ಮಹಾಕವಿ ರಾಘವಾಂಕನು ತನ್ನ ಹರಿಶ್ಚಂದ್ರ ಕಾವ್ಯದಲ್ಲಿ "ಬಂದ ಕಾಲ ಗುಣವೋ, ಸಿಂದ ನೆಲದ ಗುಣವೋ ಎಂಬ ಒಂದು ನಾಣ್ನುಡಿ ಯನ್ನು ಹೇಳಿದ್ದಾನೆ. ಈ ಮಾತಿನಲ್ಲಿ ನಮಗೆ 'ಕಾಲಕ್ಕೆ ಮಹತ್ವವಿದೆ' ಎಂಬುದು ಮುಖ್ಯವಾದ ಸಂಗತಿ. ಅಮವಾಸ್ಯೆ, ಹುಣ್ಣಿಮೆ, ಏಕಾದಶಿ, ಶಿವರಾತ್ರಿ, ವಿಜಯದಶಮಿ ಮೊದಲಾದ ಪರ್ವದಿನಗಳಲ್ಲಿ ಕನ್ನಡ ದೇಶದ ಜನರು ಶುಭಕಾರ್ಯಗಳನ್ನು, ಧರ್ಮಕಾರ್ಯಗಳನ್ನು ನಡೆಸುವುದುಂಟು. ಶ್ರಾವಣ ಮಾಸ, ಕಾರ್ತೀಕ ಮಾಸಗಳನ್ನು ಶುಭಪ್ರದ ತಿಂಗಳೆಂದು ಜನ ತಿಳಿಯುತ್ತಾರೆ. ಸೂರ್ಯಗ್ರಹಣ, ಚಂದ್ರಗ್ರಹಣಗಳು ಇಂತಹ ಪರ್ವ ದಿನಗಳೆಂದೇ ಭಾವಿಸಲ್ಪಟ್ಟಿವೆ. ಜೈನಧರ್ಮದಲ್ಲಿ ಕಾಲಕ್ಕೆ ಅನಾದಿತ್ವ ಹೇಳಿದೆ. ಪ್ರಾಚೀನ ಗ್ರಂಥಕಾರರು 'ಕಾಲಾಯ ತಸ್ಮೈ ನಮಃ' ಎಂದು ಹೇಳಿದ್ದಾರೆ. ಈ ಕಾಲದ ಶಕ್ತಿಯನ್ನು ಅರಿತೇ ನಮ್ಮ ನಾಡಿನ ಜನರು ಹಬ್ಬ ಹುಣ್ಣಿಮೆಗಳನ್ನೂ, ಪರ್ವ ದಿನಗಳನ್ನೂ ಆಚರಿಸುತ್ತಾರೆ. ಈ ಆಚರಣೆಯಲ್ಲಿ ಭಾರತೀಯ ಸಂಸ್ಕೃತಿಯು ಅಂತರ್ಭೂತವಾಗಿ ನಮ್ಮ ಕಣ್ಣಿಗೆ ಕಾಣಿಸುತ್ತದೆ. ಭಾರತೀಯ ಸಂಸ್ಕೃತಿಯ ಸಾರಸಂಗ್ರಹವೇ ನಮ್ಮ ಕನ್ನಡಿಗರ ಸಂಸ್ಕೃತಿ ; ಇದರ ಪರಿಣಾಮವೇ ನಮ್ಮ ಹಬ್ಬಹುಣ್ಣಿಮೆಗಳು.

# ಕರ್ನಾಟಕದ ಸೌಂದರ್ಯ

ಕರ್ನಾಟಕಕ್ಕೂ ಸೌಂದರ್ಯಕ್ಕೂ ನಿಕಟವಾದ ಬಾಂಧವ್ಯವಿದೆ ಎಂಬ ವಿಷಯ ಕನ್ನಡ ನಾಡಿನ ಹಾಗು ಸಾಹಿತ್ಯ ಸಂಸ್ಕೃತಿಗಳ ಪರಿಚಯ ಉಳ್ಳವರಿಗೆ ಮಾತ್ರ ತಿಳಿದಿರುವ ಸಂಗತಿ. ವಿಶಾಲ ಮೈಸೂರು ಅಥವಾ ಕರ್ನಾಟಕ ರಾಜ್ಯೋದಯವಾಗಿರುವ ಈ ಸಂದರ್ಭದಲ್ಲಿ ಕನ್ನಡ ನಾಡು ನುಡಿಗಳ ಅಭಿಮಾನಿಗಳೆಲ್ಲರೂ ಕರ್ನಾಟಕ ರಾಜ್ಯದಲ್ಲಿ ಬಹುಮುಖ ಗಳಿಂದ ಕಂಗೊಳಿಸುತ್ತಿರುವ ಸೌಂದರ್ಯ ಶಕ್ತಿಯನ್ನು ಅರಿದು ಅನು ಭವಿಸಿ ಆನಂದಿಸುವುದು ಅಗತ್ಯ. ಅಂತಹ ಒಂದು ಪ್ರಯತ್ನದ ಫಲವೇ ಈ ಲೇಖನ. ಈ ಸೌಂದರ್ಯಾನುಭವ.

'ಕರ್ನಾಟಕ' ಎಂಬ ಶಬ್ದದ ವ್ಯುತ್ಪತ್ತಿಯನ್ನು ಹೇಳಿರುವ ವಿದ್ವಾಂಸ ರೆಲ್ಲರೂ, ಈ ನಾಡಿನಲ್ಲಿ ಹೂವಿನಲ್ಲಿ ವಾಸನೆ, ಹಾಲಿನಲ್ಲಿ ರುಚಿ, ಬೆಳು ದಿಂಗಳಿನಲ್ಲಿ ಕಂಪು, ಶಬ್ದದಲ್ಲಿ ಅರ್ಥ, ರತ್ನದಲ್ಲಿ ಕಾಂತಿ, ಸಂಗೀತದಲ್ಲಿ ಸಂತೋಷ, ವಸಂತ ಋತುವಿನಲ್ಲಿ ಉತ್ಸಾಹ, ಶಿವನಲ್ಲಿ ಶಕ್ತಿ ಬೆರೆದಿರು ವಂತೆ 'ಕರ್ನಾಟಕ ಮತ್ತು ಸೌಂದರ್ಯ' ಎಂಬ ಈ ಉಭಯ ಶಬ್ದದಲ್ಲಿಯೂ ಅವಿನಾಭಾವವಾದ ಬಾಂಧವ್ಯವು ಅಡಗಿದೆಯೆಂದು ಅಭಿಪ್ರಾಯಪಟ್ಟಿದ್ದಾರೆ. ಕರುನಾಡು ಎತ್ತರವಾದ ಭೂಮಿ, ಕಮ್ಮಿತುನಾಡು ಸುಗಂಧಮಯವಾದ ದೇಶ, ಕರಿಯನಾಡು ಫಲವತ್ತಾದ ಕರಿಯ ಮಣ್ಣಿನಿಂದ ಕೂಡಿದದೇಶ- "ಕರ್ಣಯೋಃ ಅಟತಿ ಇತಿ ಕರ್ಣಾಟಃ" ಅಂದರೆ ಎಲ್ಲರ ಕವಿಗಳಲ್ಲಿಯೂ ನಲಿದಾಡುವ ಹಿರಿಮೆಗರಿಮೆಗಳುಳ್ಳ ಕೀರ್ತಿಶಾಲಿ ದೇಶ ಎಂಬ ಈ ನಿರೂ ಪಣೆಗಳು ಕರ್ನಾಟಕದ ಸೌಂದರ್ಯವನ್ನು ನಮ್ಮ ಕಣ್ಣಿಗೆ ಕಟ್ಟಿದಂತೆ ಸ್ಪಷ್ಟಪಡಿಸುತ್ತಿವೆ. ಸಮಗ್ರ ಭಾರತವನ್ನು ಸುತ್ತಿಬಂದ ಜನ ಕಾಶ್ಮೀರ ದೇಶವು ಪ್ರಕೃತಿ ಸೌಂದರ್ಯದ ಆಗರ ಎಂದು ಹೇಳುವುದನ್ನು ನಾವು ಕೇಳಿದ್ದೇವೆ. ಆದರೆ ಸಹೃದಯರಾದ ಭಾರತೀಯ ಪ್ರವಾಸಿಗಳನ್ನೇಕರು

ಕರ್ನಾಟಕದ ಸೌಂದರ್ಯ ನಿಧಿಗಗಳೆನಿಸಿದ ಪಶ್ಚಿಮಘಟ್ಟದ ಪ್ರದೇಶಗಳು, ಕಾರವಾರ, ಕುಮಟ, ಭಟ್ಕಲ್, ಮಾಲ್ಪೆ, ಹೊನ್ನಾವರ, ಉಡುಪಿ, ಮಂಗಳೂರು, ಕಾಸರಗೋಡು ಮೊದಲಾದ ಸಮುದ್ರ ತೀರ ಪ್ರದೇಶಗಳು, ಆ ಗುಂಬೆ, ಮಡಕೇರಿ, ಬಾಬಾಬುಡ್ಗಗಿರಿ, ಭವನಗಿರಿದುರ್ಗ, ನೀಲಗಿರಿ, ಶೃಂಗೇರಿ, ಪಂಪಾಕ್ಷೇತ್ರ, ನಂದಿಬೆಟ್ಟ, ಕೃಷ್ಣರಾಜಸಾಗರ, ತುಂಗಭದ್ರಾ ಜಲಾಶಯ, ಮಾರಿಕಣಿವೆ ಕೆರೆ, ಶಿವಸಮುದ್ರ, ಗೇರುಸೊಪ್ಪೆ, ಮಾದೇಶ್ವರಬೆಟ್ಟ, ಚಾಮುಂಡೀಬೆಟ್ಟ, ತಲಕಾವೇರಿ ಇತ್ಯಾದಿ ಸುಂದರ ಪ್ರದೇಶಗಳನ್ನು ಸಂದರ್ಶಿಸಿ, ಕರ್ನಾಟಕವು ಪ್ರಕೃತಿ ಸೌಂದರ್ಯದಿಂದಲೂ, ಸಂಗೀತ ಸಾಹಿತ್ಯ ಶಿಲ್ಪಚಿತ್ರ ನೃತ್ಯ ಮೊದಲಾದ ಕಲಾವೈಭವದಿಂದಲೂ, ಉಜ್ವಲವಾದ ಹಾಗೂ ಮಹೋನ್ನತವಾದ ಐತಿಹಾಸಿಕ ಸಂಪತ್ತಿನಿಂದಲೂ, ಭಾರತವನ್ನೇ ಬೆರಗುಗೊಳಿಸುವಂತಹ ತತ್ತ್ವಜ್ಞಾನ ಮತ್ತು ಅನುಭವ ಸಾಹಿತ್ಯದ ಪ್ರಭಾವದಿಂದಲೂ ಮಿಗಿಲಾದ ಸ್ಥಾನಮಾನಗಳನ್ನು ಪಡೆದಿದೆಯೆಂದು ಅಭಿಪ್ರಾಯ ಪಟ್ಟಿರುತ್ತಾರೆ. ಕರ್ನಾಟಕದ ಸೌಂದರ್ಯವನ್ನು ನಾವು ಹಲವು ಮುಖಗಳಿಂದ ಅನ್ವೇಷಣೆ ಮಾಡಬೇಕಾಗುತ್ತದೆ.

೧. ಪ್ರಕೃತಿ ಸೌಂದರ್ಯ : ಯಾವುದೇ ಒಂದು ದೇಶದ ವೈಶಿಷ್ಟ್ಯತೆವನ್ನು ಅರಿಯಲು ಅದರ ಪ್ರಕೃತಿ ಸೌಂದರ್ಯವು ಮೊದಲು ನಮ್ಮ ಕಣ್ಣ ಮುಂದೆ ನಿಲ್ಲುತ್ತದೆ. ಕರ್ನಾಟಕವು ಈ ದೃಷ್ಟಿಯಿಂದ ಅತ್ಯಂತ ಭಾಗ್ಯಶಾಲಿ ರಾಜ್ಯವೆಂದು ರಾಜ್ಯ ಪುನರ್ವಿಂಗಡನಾ ಸಮಿತಿಯವರು ಅಭಿಪ್ರಾಯ ಪಟ್ಟಿರುತ್ತಾರೆ. ಸುಮಾರು ೩೫೦ ಮೈಲಿ ಉದ್ದವಾದ ಪಶ್ಚಿಮ ಸಮುದ್ರ ತೀರ, ಭಾರತಮಾತೆಯ ಸೌಭಾಗ್ಯ ಸರ್ವಸ್ವವೆಂಬಂತೆ ಕಂಗೊಳಿಸುತ್ತಿರುವ ವಿಸ್ತಾರವಾದ ಮಲೆನಾಡಿನ ಪ್ರದೇಶ, ಭೂದೇವಿಗೆ ಅಲಂಕಾರ ಪ್ರಾಯವೆನಿಸಿರುವ, ಮುಳ್ಳಯ್ಯನಗಿರಿ, ಸೊಂಡೂರುಗುಡ್ಡ, ಹಂಪೆಯ ಪಂಚ ಪರ್ವತಗಳು, ಗೇರುಸೊಪ್ಪೆ, ಶಿವಸಮುದ್ರ, ಘಟಪ್ರಭಾ ಮೊದಲಾದ ಜಲಪಾತಗಳು, ಕನ್ನಡಿಗರ ಪುಣ್ಯಪ್ರಭಾವವೆಂಬಂತೆ ಸದಾ ನಲಿನಲಿದು ಪ್ರವಹಿಸುತ್ತಿರುವ ಕೃಷ್ಣಾ, ತುಂಗಭದ್ರಾ, ಕಾವೇರಿ, ಘಟಪ್ರಭಾ, ಮಲಪ್ರಭಾ, ಭೀಮಾ, ವರದಾ, ವೇದಾವತೀ, ಕಧಂಬ, ಕಪಿಲಾ, ಅರ್ಕಾವತೀ,

ಲೋಕಪಾವನೀ ಮೊದಲಾದ ನದಿಗಳು ವಿಶಾಲವಾದ ಎರೆಮಣ್ಣಿನಿಂದ ಕೂಡಿದ ಕರ್ಣಾಟಕದ ಬಯಲು ಸೀಮೆಯೆನಿಸಿದ ಬೆಳವಲನಾಡು, ಪ್ರಪಂಚವನ್ನೇ ಆಕರ್ಷಿಸಿರುವ ಮಲೆನಾಡಿನ ಬೆಲೆಬಾಳುವ ಮೆಣಸು, ಏಲಕ್ಕಿ, ಕಾಫಿ, ಚಾ, ಅಡಿಕೆ ಮೊದಲಾದ ಬೆಳೆಗಳು, ತೇಗ, ಹೊನ್ನೆ, ಮತ್ತಿ, ನಂದಿ, ಬಿದಿರು ಮೊದಲಾದ ವೃಕ್ಷಸಂಪತ್ತೂ, ಜನರ ಪ್ರಾಣಾಧಾರವೆನಿಸಿದ ರಾಗಿ, ಭತ್ತ, ಜೋಳ, ಗೋಧಿ, ಅವರೆ, ತೊಗರಿ, ಹುರುಳಿ, ಎಣ್ಣೆಯ ಬೀಜಗಳು ಮೊದಲಾದ ಬಯಲು ಸೀಮೆಯ ಬೆಳೆಗಳು, ಮೈಸೂರು ರಾಜ್ಯದಲ್ಲಿ ಮಿಗಿಲಾಗಿ ಲಭಿಸುತ್ತಿರುವ, ಬಾಳೆ, ಮಾವು, ಸೇವು, ನೇರಿಳೆ, ದಾಳಿಂಬೆ, ಸೀತಾಫಲ, ರಾಮಫಲ, ಹಲಸು ಮೊದಲಾದ ಫಲಸಂಪತ್ತುಗಳು, ಮಲ್ಲಿಗೆ, ಸಂಪಿಗೆ, ಸೇವಂತಿಗೆ, ಜಾಜಿ, ಪಾರಿಜಾತ ಮೊದಲಾದ ಸೌರಭಯುಕ್ತ ಪುಷ್ಪಗಳು, ಕರ್ನಾಟಕದ ಜೀವಂತ ಸೌಂದರ್ಯಕ್ಕೆ ನಿದರ್ಶನವೆನಿಸಿವೆ. ಒಟ್ಟಿನಲ್ಲಿ ಸಮುದ್ರತೀರ, ಮಲೆನಾಡು ಮತ್ತು ಬಯಲುಸೀಮೆ ಎಂಬ ಮೂರು ಪ್ರಾಕೃತಿಕ ವಿಭೇದಗಳಿಂದ ಕೂಡಿರುವ ಕರ್ಣಾಟಕವು ಪ್ರಕೃತಿ ಸೌಂದರ್ಯದ ಖನಿಯೆನಿಸಿಕೊಂಡಿದೆ. ಹಾಗೂ ಭರತ ಖಂಡಕ್ಕೆ ಅಲಂಕಾರ ಪ್ರಾಯವೆನಿಸಿದೆ.

ಕರ್ನಾಟಕವು ಕೇವಲ ಬಾಹ್ಯದಲ್ಲಿಯೇ ಅಲ್ಲ; ಅಂತರಂಗದಲ್ಲಿಯೂ ಭಾಗ್ಯಶಾಲಿಯೆಂಬುದಕ್ಕೆ ಭೂಗರ್ಭದಲ್ಲಿ ನಿದರ್ಶನಗಳಿವೆ. ಕೋಲಾರದ ಚಿನ್ನ, ಕಲ್ಲತ್ತಗಿರಿ ಮತ್ತು ಸೊಂಡೂರಿನ ಕಬ್ಬಿಣ, ಅಲ್ಲಲ್ಲಿ ಸಿಕ್ಕುವ ಮ್ಯಾಂಗನೀಸ್, ಕೆಂಪು-ಕಪ್ಪು-ಬಿಳುಪು ಮತ್ತು ನುಣುಪು ಕಲ್ಲುಗಳು, ಮಿತವಾಗಿ ಸಿಗುವ ನವರತ್ನಗಳು; ಇವೆಲ್ಲವೂ ಕನ್ನಡ ತಾಯಿಯ ಭೂಗರ್ಭದ ಸೌಂದರ್ಯಕ್ಕೆ ನಿದರ್ಶನಗಳೆನಿಸಿವೆ.

೨. ಸಾಹಿತ್ಯ ಸೌಂದರ್ಯ:—ಕನ್ನಡ ಭಾಷೆಯು 'ಸುಲಿದ ಬಾಳೆಯ ಹಣ್ಣಿನಂದದಿ, ಕಳೆದ ಸಿಗುರಿನ ಕಬ್ಬಿನಂದದಿ, ಅಳಿದ ಉಷ್ಣದ ಹಾಲಿನಂದದಿ ಲಲಿತವೂ ಮೃದುಮಧುರವೂ ಆಗಿದೆಯೆಂದು ಹೇಳಿದ ಕವಿಯು ಬಹುಮಟ್ಟಿಗೆ ಸತ್ಯವನ್ನೇ ಹೇಳಿದ್ದಾನೆ. ಇನ್ನೊಬ್ಬ ಪ್ರಾಚೀನ ಕವಿಯು ತನ್ನ ಮುಖದ ಆಕೃತಿಯನ್ನು ಕನ್ನಡಿಯಿಂದ ತಿಳಿದುಕೊಳ್ಳುವಹಾಗೆ,

ಕನ್ನಡ ನುಡಿಯಿಂದ ಚತುರನಾದ ವ್ಯಕ್ತಿಯು ತನ್ನಗುಣದೋಷಗಳನ್ನು ಸುಲಭವಾಗಿ ತಿಳಿಯಬಹುದು ಎಂದು ಹೇಳಿದ್ದಾನೆ. ಕನ್ನಡ ಭಾಷೆಯು ದ್ರಾವಿಡ ಮತ್ತು ಸಂಸ್ಕೃತ ಶಬ್ದಗಳಿಂದ ಹದವರಿತು ಕೂಡಿ ತನ್ನದೇ ಆದ ಮೃದು ಮಧುರ ಸಂಪತ್ತಿನಿಂದ ಕಂಗೊಳಿಸುತ್ತಿದೆ.

ಸುಮಾರು ೨೦೦೦ ವರ್ಷಗಳಷ್ಟು ಪ್ರಾಚೀನತೆಯುಳ್ಳ ಕನ್ನಡ ಸಾಹಿತ್ಯದಲ್ಲಿ, ಆದಿ ಪಂಪನ ಗಂಭೀರಕೃತಿಗಳು, ಕವಿರನ್ನನ ಗಂಡು ಶೈಲಿಯ ವೀರ ರಸದ ಕಬ್ಬಗಳು, ಹರಿಹರನ ಭಕ್ತಿಗಂಗೆಯ ಪ್ರವಾಹವನ್ನು ಹರಿಸುವ ಕೃತಿಗಳು, ರಾಘವಾಂಕನ ಕರುಣರಸದ ಮಡುವಿನಂತಿರುವ ಕಾವ್ಯಗಳು, ಕುಮಾರ ವ್ಯಾಸ, ಲಕ್ಷ್ಮೀಶರ ನವರಸಭರಿತವಾದ ಕಾವ್ಯರತ್ನಗಳು, ಷಡಕ್ಷರ ಕವಿಯ ಶೃಂಗಾರ ಪ್ರಧಾನವಾದ ಮಹೋನ್ನತ ಕೃತಿಗಳು, ಶಿವಶರಣರ ವಚನಗಳ ಅನುಭಾವ ಸಂಪತ್ತು, ದಾಸವರ್ಯರ ಭಕ್ತಿಜ್ಞಾನ ಬೋಧಗಳು, ಸರ್ವಜ್ಞನ ಸವಿನುಡಿಗಳು, ಬಸವಪ್ಪ ಶಾಸ್ತ್ರಿಗಳ ಪ್ರತಿಭಾಸ್ವಿತ ಕಾವ್ಯಗಳು, ಹಾಗೂ ನಾಟಕಗಳು, ಮುದ್ದಣನ ಮನೋಹರ ಕೃತಿಗಳು, ಆಧುನಿಕ ಕವಿ ಲೇಖಕರ ಪ್ರತಿಭಾಸ್ವಿತ ಗ್ರಂಥಗಳು, ಇವುಗಳಲ್ಲೆಲ್ಲಾ ನಾವು ಅಪೂರ್ವವಾದ ಕಾವ್ಯ ಸೌಂದರ್ಯವನ್ನು ಕಾಣಬಹುದು. ನವರಸದ ಭಂಡಾರದಂತಿರುವ ಭಕ್ತಿ ಜ್ಞಾನ ವೈರಾಗ್ಯಗಳ ತವನಿಧಿಯಂತಿರುವ ಕನ್ನಡ ಕಾವ್ಯಗಳ ಅಧ್ಯಯನದಿಂದ ತಜ್ಜನ್ಯವಾದ ಕಾವ್ಯಾಮೃತಪಾನದಿಂದ ನಾವು ಸ್ವರ್ಗ ಸದೃಶವಾದ ಸೌಂದರ್ಯಾನುಭೂತಿಯನ್ನು ಪಡೆಯಬಹುದು. ಕನ್ನಡ ಲಿಪಿಯು ಭಾರತದ ಲಿಪಿಗಳ ಮಾಲೆಯಲ್ಲಿ ಅತ್ಯಂತ ಸುಂದರ ತಮವಾದುದೆಂದು ಲಿಪಿಶಾಸ್ತ್ರಜ್ಞರು ಹೇಳಿರುವುದನ್ನು ನಾವಿಲ್ಲಿ ಸ್ಮರಿಸಿಕೊಳ್ಳಬಹುದು.

೩ ಲಲಿತ ಕಲೆಗಳ ಸಂಪತ್ತು :—ಮನುಷ್ಯನ ಆತ್ಮೋನ್ನತಿಗೆ ಹಾಗೂ ಅಭ್ಯುದಯಕ್ಕೆ, ಜನಜೀವನದ ಪ್ರಗತಿಗೆ, ಸಂಗೀತ, ನಾಟಕ, ನೃತ್ಯ, ಚಿತ್ರ, ಶಿಲ್ಪ ಮೊದಲಾದ ಕಲೆಗಳು ಒಹುಮುಖ್ಯ ಸಾಧನಗಳು. ಕರ್ನಾಟಕ ಸಂಗೀತದ ಮಾತೃಸ್ಥಾನ ಕನ್ನಡನಾಡು. ಸಾರಂಗದೇವ, ನಿಜಗುಣ ಶಿವಯೋಗಿ, ಪುರಂದರ ದಾಸರು, ವೆಂಕಟಮಖಿ

ಮೊದಲಾದ ಕನ್ನಡಿಗರು ಸಂಗೀತ ಶಾಸ್ತ್ರದ ಅಮರ ಕೃತಿಗಳನ್ನು ರಚಿಸಿದ್ದಾರೆ. ನಾಟಕಗಳ ನೆಲೆಗಟ್ಟೆನಂತಿರುವ ಬೈಲಾಟಗಳು ಕನ್ನಡನಾಡಿನಲ್ಲಿ ಸಾವಿರಾರು ವರ್ಷಗಳಿಂದ ಜನಜೀವನದ ಉತ್ಸಾಹವನ್ನು ಹೆಚ್ಚಿಸಲು ನೆರವಾಗಿವೆ. ಅಜಂತೆಯ ಚಿತ್ರಗಳಲ್ಲಿ ಕನ್ನಡಿಗರ ಕೈವಾಡವಿದೆಯೆಂಬುದಕ್ಕೆ ಮೊದಲನೇ ಗವಿಯಲ್ಲಿರುವ ಚಾಲುಕ್ಯ ಪುಲಿಕೇಶಿಯ ಒಡ್ಡೋಲಗವೇ ನಿದರ್ಶನವಾಗಿದೆ. ಭಾರತದಲ್ಲಿಯೇ ಪ್ರಖ್ಯಾತ ಕಲಾಕ್ಷೇತ್ರವೆನಿಸಿದ ಎಲ್ಲೋರ, ಅಜಂತ, ಬಾದಾಮಿ, ಕನ್ಹೇರಿ, ಕಾರ್ಲೆ ಮತ್ತು ಎಲಿಫೆಂಟ ಗುಹಾಂತರ್ಗತ ದೇವಾಲಯಗಳು, ಹಳೆಯಬೀಡು, ಬೇಲೂರು, ಸೋಮನಾಥಪುರ, ಲೇಪಾಕ್ಷಿ, ಹಂಪೆ, ಐಹೊಳೆ, ಪಟ್ಟದಕಲ್ಲು, ಶೃಂಗೇರಿ, ಮೇಲುಕೋಟೆ, ಕೆಳದಿ, ಇಕ್ಕೇರಿ, ಸ್ವಾದಿ, ಮೊದಲಾದಲ್ಲಿನ ದೇವಾಲಯಗಳು, ಬಿಜಾಪುರದ ಗೋಳಗುಮ್ಮಟ ಮತ್ತು ಇಬ್ರಾಹಿಂರೋಸ, ಶ್ರೀರಂಗಪಟ್ಟಣದ ದರಿಯಾದೌಲತ್ ಮತ್ತು ಹೈದರ್ ಟೀಪೂ ಸಮಾಧಿಗಳು, ಕಾರ್ಕಳ ಮತ್ತು ಮೂಡಬಿದರೆಯ ಬಸ್ತಿಗಳು, ಶ್ರವಣಬೆಳಗೊಳ ಕಾರ್ಕಳ ಮತ್ತು ವೇಣೂರುಗಳಲ್ಲಿರುವ ಗೊಮ್ಮಟಮೂರ್ತಿಗಳು, ಮೈಸೂರಿನ ಅರಮನೆ ಮತ್ತು ಬೆಂಗಳೂರಿನ ವಿಧಾನಸೌಧ ಕನ್ನಡಿಗರ ಸೌಂದರ್ಯಾಭಿರುಚಿಗೂ ಶಿಲ್ಪಕಲಾನೈಪುಣ್ಯಕ್ಕೂ ನಿದರ್ಶನವೆನಿಸಿವೆ.

### ೪. ಕರ್ನಾಟಕದ ಜನಜೀವನದಲ್ಲಿನ ಸೌಂದರ್ಯಶಕ್ತಿ:

ಕರ್ನಾಟಕದ ಜನಜೀವನವು ಭಾರತದ ಸಮಗ್ರ ಜನ ಜೀವನದಲ್ಲಿಯೇ ಉನ್ನತವಾದ ಸ್ಥಾನಮಾನಗಳನ್ನು ಗಳಿಸಿದೆ. ಆರ್ಯದ್ರಾವಿಡರ ಮೊಟ್ಟಮೊದಲ ಸಮಾಗಮ ಆದುದು ಕರ್ನಾಟಕದಲ್ಲಿ, ಇದಕ್ಕೆ ನಿದರ್ಶನ ರಾಮಾಯಣದ ಕಿಷ್ಕಿಂಧಾಕಾಂಡ. ಆರ್ಯರ ತತ್ವಜ್ಞಾನ, ದ್ರಾವಿಡರ ಭಕ್ತಿಮಾರ್ಗ, ಜೈನರ ಅಹಿಂಸೆ, ಬೌದ್ಧರ ಅನುಕಂಪ, ವೀರಶೈವರ ಅನುಭಾವ, ಶಂಕರಾಚಾರ್ಯರ ಅದ್ವೈತ, ಶ್ರೀರಾಮಾನುಜರ ವಿಶಿಷ್ಟಾದ್ವೈತ, ಶ್ರೀ ಆನಂದ ತೀರ್ಥರ ದ್ವೈತ ಸಿದ್ಧಾಂತ, ವಿದ್ಯಾರಣ್ಯಸ್ವಾಮಿಗಳ ಸರ್ವಧರ್ಮ ಸಮನ್ವಯ, ಶ್ರೀ ನಿಜಗುಣ ಶಿವಯೋಗಿಗಳ ಇಹಪರ ಸಾಧನೋಪಾಯ, ಹರಿದಾಸರ ಭಕ್ತಿ ಜ್ಞಾನ. ವೈರಾಗ್ಯ, ಸರ್ವಜ್ಞನ

ಸತ್ಯಸಿದ್ಧಾಂತ, ಮಹಲಿಂಗರಂಗನ ಅನುಭವಾಮೃತ ಇತ್ಯಾದಿ ತತ್ವಗಳ ಸಮರಸವನ್ನು ನಾವು ಕನ್ನಡ ನಾಡಿನಲ್ಲಿ ಕಾಣುವಷ್ಟು ಚೆನ್ನಾಗಿ ಇನ್ನೆಲ್ಲಿಯೂ ನೋಡಲಾಗುವುದಿಲ್ಲ. ಹಿಂದೂ, ಮುಸ್ಲಿಂ, ಕ್ರೈಸ್ತ ಮೊದಲಾದ ವಿಭಿನ್ನಮತ ಸಮನ್ವಯ ಕೂಡ ಈ ನಾಡಿನಲ್ಲಿ ಚೆನ್ನಾಗಿ ನಡೆದಿವೆಯೆಂಬುದಕ್ಕೆ ಬಾಬಾಬುಡನ್‌ಗಿರಿ, ಶಿರಹಟ್ಟಿ ಮೊದಲಾದ ಸ್ಥಳಗಳಲ್ಲಿ ಪ್ರತ್ಯಕ್ಷ ನಿದರ್ಶನಗಳಿವೆ.

ಶ್ರೀರಾಮಚಂದ್ರನಿಗೆ ಬೆಂಬಲವಿತ್ತವರು ಕಿಷ್ಕಿಂಧೆಯ ವಾನರ ಧ್ವಜರೆನಿಸಿದ ಕನ್ನಡಿಗರು. ಪಂಚಪಾಂಡವರಿಗೆ ಅಜ್ಞಾತವಾಸದಲ್ಲಿ ಆಶ್ರಯ ವಿತ್ತವರು ಹಾನಗಲ್ಲಿನ ವಿರಾಟರಾಜ ಮೊದಲಾದ ಕನ್ನಡಿಗರು. ಶ್ರೀ ಶಂಕರಾಚಾರ್ಯರು, ಶ್ರೀರಾಮಾನುಜಾಚಾರ್ಯರು ಮೊದಲಾದವರಿಗೆ ಆಶ್ರಯ ವಿತ್ತವರು ಕನ್ನಡಿಗರು. ಶ್ರೀರಾಮನಿಗೆ ಬೋರೇಹಣ್ಣುಗಳನ್ನು ಇತ್ತು ಸತ್ಕರಿಸಿದ ಭಕ್ತೆ ಶಬರಿ ಕನ್ನಡಿತಿ.[೧] ರಾಮಾಯಣದ ಮಹಾವೀರ ಆಂಜನೇಯ ಕನ್ನಡಿಗ ಎಂಬಿವೇ ಮೊದಲಾದ ಪುರಾಣ ಪ್ರಸಿದ್ಧ ಕಥೆಗಳಲ್ಲಿಯೂ ನಾವು ಕನ್ನಡಿಗರ ಸೌಂದರ್ಯವನ್ನು ಮನಗಾಣಬಹುದು.

೫. ಕರ್ನಾಟಕದ ಐತಿಹಾಸಿಕ ಸೌಂದರ್ಯ : ಕರ್ಣಾಟಕವು ಪ್ರಕೃತಿ ಸೌಭಾಗ್ಯ, ಸಾಹಿತ್ಯ ಸಂಪತ್ತು, ತತ್ವಜ್ಞಾನ ವೈಭವ, ಲಲಿತಕಲಾ ಪ್ರಾಗಲ್ಭ್ಯಗಳಲ್ಲಿ ಮಿಗಿಲಾದ ಸೌಂದರ್ಯಗಳನ್ನು ಸಾಧಿಸಿರುವಂತೆಯೇ ಇತಿಹಾಸ ಪ್ರಪಂಚದಲ್ಲಿಯೂ ತನ್ನದೇ ಆದ ವಿಶಿಷ್ಟ ಸೌಂದರ್ಯವನ್ನು ಗಳಿಸಿದೆ. ಸುಮಾರು ೨೦೦೦ ವರ್ಷಗಳ ಕರ್ನಾಟಕದ ಚರಿತ್ರೆಯಲ್ಲಿ ಗಂಗರು, ಕದಂಬರು, ಚಾಲುಕ್ಯ, ರಾಷ್ಟ್ರಕೂಟರು, ಹೊಯ್ಸಳರು, ಯಾದವರು, ಕಾಕತೀಯರು, ಕೆಳದಿಯವರು, ಮೈಸೂರಿನವರು ಮೊದಲಾದ ರಾಜರುಗಳ ಚರಿತ್ರೆಯಲ್ಲಿ ಈ ನಮ್ಮ ಮಾತಿಗೆ ಬೇಕಾದಷ್ಟು ನಿದರ್ಶನಗಳಿವೆ. ರಾಷ್ಟ್ರಕೂಟರ ನೃಪತುಂಗನ ಅಪಾರವಾದ ವೈದುಷ್ಯ, ಇಮ್ಮಡಿ ಪುಲಿಕೇಶಿಯ ಮಿಗಿಲಾದ ಪರಾಕ್ರಮ, ಹೊಯ್ಸಳ ವಿಷ್ಣುವರ್ಧನನ

---

[೧] ಈ ಶಬರಿಯ ಆಶ್ರಮ ಪಂಪಾಕ್ಷೇತ್ರದಲ್ಲಿ ಪಂಪಾ ಸರೋವರದ ಪಕ್ಕದಲ್ಲಿದೆ.

ಅಸದೃಶ ದಿಟ್ಟತನ ಮತ್ತು ಕಲಾಪ್ರೇಮ, ಕಲ್ಯಾಣ ವಿಕ್ರಮಾದಿತ್ಯನ ಮಹೋನ್ನತ ಧೈರ್ಯಸ್ಥೈರ್ಯಗಳು ಹಾಗೂ ಸಾಹಸಕಾರ್ಯಗಳು, ವಿಜಯನಗರದ ಇಮ್ಮಡಿ ದೇವರಾಯನ ಉದಾರ ಗುಣಗಳು, ಕೆಳದಿಯ ಶಿವಪ್ಪನಾಯಕ ಮತ್ತು ಮೈಸೂರಿನ ಚಿಕ್ಕದೇವರಾಜರ ಆದರ್ಶ ಜೀವನಗಳು, ಕೆಳದಿಯ ಚೆನ್ನಮ್ಮಾಜಿ, ಕಾಕತೀಯ ರುದ್ರಮ್ಮಾಂಬೆ, ಕಿತ್ತೂರು ಚೆನ್ನಮ್ಮ, ಬೆಳವಡಿಯ ಮಲ್ಲಮ್ಮ ಮೊದಲಾದವರ ಸಾಹಸ ಕಾರ್ಯಗಳು ಹಲವಾರು ಮಂದಿ ಪಾಳೆಯಗಾರರ ಮಹದರ್ಶಿಗಳು ಹಿರಿಯ ಕನ್ನಡಿತಿಯರ ಹದಿಬದೆತನದ ನಿದರ್ಶನವೆನಿಸುವ ಮಹಾಸತಿಕಲ್ಲುಗಳು, ಕನ್ನಡಿಗರ ರಾಜಭಕ್ತಿ, ದೇಶಭಕ್ತಿಗೆ ಗುರುತಾದ ವೀರಗಲ್ಲುಗಳು ನಮ್ಮ ಜನರ ತ್ಯಾಗಕ್ಕೆ ನಿದರ್ಶವಾದ ನಿಷದಿಗಲ್ಲುಗಳು, ಶಿಲಾತಾಮ್ರ ಶಾಸನಗಳು ಇವುಗಳಲ್ಲೆಲ್ಲಾ ನಾವು ಉಜ್ವಲವಾದ ಕರ್ನಾಟಕದ ಸೌಂದರ್ಯ ಶಕ್ತಿಯನ್ನು ಮನಗಾಣಬಹುದು.

ಪ್ರಾಚೀನ ಕನ್ನಡ ಕವಿಗಳು ಕನ್ನಡಿಗರನ್ನೂ ಕನ್ನಡನಾಡನ್ನೂ ಕುರಿತು ಬಹುಬೆಲೆ ಬಾಳುವ ಮಾತನ್ನು ಹೇಳಿದ್ದಾರೆ.

ರಾಜಕವಿ ನೃಪತುಂಗನು "ಕನ್ನಡಿಗರು ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತ ಮತಿಗಳ್" ಎಂದೂ, ಆದಿಪಂಪನು "ಸೊಗಯಿಸಿ ಬಂದ ಮಾನುರನೆ ತಳ್ತ ಎಲೆವಳ್ಳಿಯೆ, ಪೂತ ಜಾತಿ ಸಂಪಗೆಯೆ, ಕುಕಿಲ್ವ ಕೋಗಿಲೆಯೆ, ಪಾಡುವ ತುಂಬಿಯೆ ಕನ್ನಡನಾಡಲ್ಲಿ ಕಂಗೊಳಿಸುತ್ತಿವೆ" ಎಂದೂ ಹೇಳುತ್ತಾರೆ. ಅಚ್ಚ ಕನ್ನಡಿಗ ಆಂಡಯ್ಯನು "ಪಲವುಂ ನಾಲಗೆಯುಳ್ಳವಂ ಬಗೆವೊಡೆ ಎಂದುಂ ಬಣ್ಣಿಸಲ್ಕೆ ಆರನ್ ಆನೆಲನಂ, ಮಾನಿಸರ್ ಪೊಗಳಲ್ ಏನಂ ಬಲ್ಲರ್ ಕನ್ನಡವೆನಿಪ್ಪಾನಾಡು ಚೆಲ್ವಾಯ್ತು" ಎಂದು ಬಣ್ಣಿಸಿದ್ದಾನೆ. ವಿರೂಪಾಕ್ಷ ಪಂಡಿತನು "ಅಲ್ಲಿಗಲ್ಲಿಗೆ ಬೆಳೆದ ಬೆಳೆಗಳಿಂ ಮೊಳೆಗಳಿಂ, ವನಸ್ಥಳಗಳಿಂ ಕೊಳಗಳಿಂ, ರನ್ನದರೆಗಳಿಂ, ಕೆರೆಗಳಿಂ, ಗಿರಿಗಳಿಂ, ಕರಿಗಳಿಂ, ಶುಕಗಳಿಂ, ಪಿಕಗಳಿಂ, (ಕರ್ನಾಟಕ ದೇಶಂ) ಒಪ್ಪಿದುದು" ಎಂದು ಬಣ್ಣಿಸಿದ್ದಾನೆ. ಆಧುನಿಕ ಕವಿಯೊಬ್ಬನು "ಪೂಗಳ ಕಂಪು, ಮಾರುತನ ತಂಪು, ಗಿಡಂಗಳ ಗುಂಪು, ಕೋಕಿಲಾ ರಾಗದ ಅಲಂಪು, ನೀರೆಯರ ಪೆಂಪು, ವನಂಗಳ ಸೊಂಪು, ಭೋಗದ ಗೊತ,

ಯೋಗಿಗಳ ಬಿತ್ತು, ವಿಲಾಸಿನಿ ಭಾರತಾಂಬೆಯಾ ಮೂಗುತಿ ನತ್ತು ಕನ್ನಡ ನಾಡು ಇದು ವೈಭವಾನ್ವಿತಂ" ಎಂದು ಬಣ್ಣಿಸಿದ್ದಾನೆ. "ಕನ್ನಡಂ ಕತ್ತುರಿಯಲ್ತೆ" ಎಂದು ಹೇಳಿದ ಮುದ್ದಣನು ಕರ್ನಾಟಕದ ಸೌಂದರ್ಯವನ್ನು ಮನಗಂಡೇ ತನ್ನ ಹೃದಯಾಂತರಾಳದಿಂದ ಆ ಮಾತನ್ನು ಹೊರಗೆಡೆಹಿದ್ದಾನೆ.

ನಾವು ಇದುವರೆಗೆ ಸಮೀಕ್ಷಿಸಿದ ಎಲ್ಲ ಕ್ಷೇತ್ರಗಳಲ್ಲೂ ಕನ್ನಡಿಗರು ತಮ್ಮ ಮಿಗಿಲಾದ ಜೀವನ ಸೌಂದರ್ಯ ಮತ್ತು ಶಕ್ತಿ ಸಾಮರ್ಥ್ಯಗಳನ್ನು ನಾವು ಮನಗಾಣಬಹುದು. ಕನ್ನಡಿಗರ ಸೌಂದರ್ಯಾಭಿರುಚಿಯನ್ನು ಅವರ ನಿತ್ಯ ಜೀವನದಲ್ಲಿ, ಅವರು ಬರೆದ ಗ್ರಂಥಗಳಲ್ಲಿ, ಅವರು ಆಳಿಬಾಳಿದ ರಾಜ್ಯಗಳಲ್ಲಿ, ಅವರು ಕಟ್ಟಿದ ಗುಡಿಗೋಪುರಗಳಲ್ಲಿ, ಅವರು ಬರೆದ ಚಿತ್ರಗಳಲ್ಲಿ, ಅವರು ನಿರೂಪಿಸಿದ ತತ್ವಜ್ಞಾನಗಳಲ್ಲಿ ನಾವು ನೋಡಿ ಹರ್ಷಿಸಲು ಅವಕಾಶವಿದೆ.

ಕನ್ನಡಿಗರ ಐವತ್ತು ವರ್ಷಗಳ ಶ್ರಮದಫಲವಾಗಿ ಈಗ ವಿಶಾಲ ಮೈಸೂರು ಅಥವಾ ಕನ್ನಡ ರಾಜ್ಯಸ್ಥಾಪನೆಯಾಗಿದೆ. ನಾಡಿನ ಮುಖಂಡರು, ಕೇಂದ್ರದಲ್ಲಿಯೂ ನಾಡಿನಲ್ಲಿಯೂ ಜನತೆಯ ಹೊಣೆಯನ್ನು ಹೊತ್ತು ಜಾಣ್ಮೆಯಿಂದ ಅಧಿಕಾರವನ್ನು ನಡೆಸುತ್ತಿದ್ದಾರೆ. ರಾಜ್ಯದಲ್ಲಿ ಕೈಗಾರಿಕೆ, ವ್ಯವಸಾಯ, ಶಿಕ್ಷಣ ಮತ್ತು ಸಂಸ್ಕೃತಿಗಳ ಉನ್ನತಿಗಾಗಿ ಸರ್ಕಾರದವರು ಬೇಕಾದಷ್ಟು ಕಾರ್ಯಕ್ರಮಗಳನ್ನು ಕೈಗೊಂಡು ನಡೆಸುತ್ತಿದ್ದಾರೆ. ಈ ಕಾರ್ಯದಲ್ಲಿ ಮೈಸೂರಿನ ರಾಜ್ಯಪಾಲರು, ದಿ॥ ಭಾರತ ರತ್ನ ಸರ್ ವಿಶ್ವೇಶ್ವರಯ್ಯನವರು, ದಿವಂಗತ ಸರ್ ಮಿರ್ಜಾರವರು, ಮೈಸೂರು ಸರ್ಕಾರದವರು, ನಾಡಿನ ಕವಿಗಳು, ಕಾದಂಬರಿಕಾರರು, ವಿದ್ವಾಂಸರು, ಕಲಾವಿದರು, ವ್ಯಾಪಾರಿಗಳು, ರೈತರು, ಕಾರ್ಮಿಕರು, ಎಲ್ಲರೂ ಯಥಾಶಕ್ತಿಯಾಗಿ ಪ್ರಯತ್ನಗಳನ್ನು ನಡೆಸುತ್ತಿದ್ದಾರೆ. ಮೈಸೂರಿನ ದಸರಾ ಇಂದು ಸಮಗ್ರ ಭಾರತದ ಹಬ್ಬವಾಗಿ ಆಚರಿಸಲ್ಪಡುತ್ತಿದೆ. ಆದರೆ ಈ ಎಲ್ಲ ಕಾರ್ಯಗಳು ಕರ್ನಾಟಕದ ನಿಸರ್ಗರಮಣೀಯವಾದ ಸೌಂದರ್ಯದಿಂದ ಸ್ಫೂರ್ತಿಯನ್ನು ಪಡೆದು ನಡೆಯುವುದರಲ್ಲಿ ತುಂಬ ಪ್ರಯೋಜನವಿದೆ.

# ಪೊಟ್ಟಲಕೆರೆಯ ಶಾಸನ ವಿಮರ್ಶೆ

"ಹೈದರಾಬಾದು ಸೀಮೆಯಲ್ಲಿ ಹೈದರಾಬಾದಿನಿಂದ ಜೈರಾಬಾದಿಗೆ ಹೋಗುವ ದಾರಿಯಲ್ಲಿ ಬಲಗಡೆ ಸುಮಾರು ೨೦ ಮೈಲು ದೂರದಲ್ಲಿ 'ಪೊಟ್ಟಲಕೆರೆ' ಎಂಬ ಊರಿದೆ. ಈಗ ಅಲ್ಲಿ ಪ್ರಬಲವಾಗಿರುವ ತೆಲುಗಿನಲ್ಲಿ ಅದರ ಹೆಸರು 'ಪೊಟ್ಲಚರು' ಎಂದು ಮಾರ್ಪಟ್ಟಿದೆ. ಇಂಗ್ಲೀಷಿನಲ್ಲಿ Petamcharu (!) ಎಂದಾಗಿದೆ. ಅಲ್ಲಿಯ ಪ್ರಾಚೀನ ಗುಡಿ ಗೋಪುರಗಳು ಈಗ ನಾಶವಾಗಿವೆ. ಹಲವು ದೇವಾಲಯಗಳು ಈಗ ಮಸೀದಿಗಳಾಗಿವೆ. ಹಿಂದೂ ವಿಗ್ರಹಗಳು ಚೂರುಚೂರಾಗಿ ಬೀದಿಬೀದಿಯಲ್ಲಿ ಬಿದ್ದಿವೆ. ದೇವರ ದಾಸಿಮಯ್ಯನು ಸ್ಥಾಪಿಸಿದ ನಾಗಲಿಂಗೇಶ್ವರ ದೇವಾಲಯವೂ ಅದರ ಮುಂದಣ ನಂದಿಯೂ ಅತ್ಯಂತ ದುಃಸ್ಥಿತಿಯಲ್ಲಿವೆ. ಪಡುವಣ ಚಾಳುಕ್ಯರ ಕಾಲದ ಎರಡು ಕೆರೆಗಳು ಮಾತ್ರ ಇಂದಿಗೂ ಇವೆ.

ಪೊಟ್ಟಲಕೆರೆಯ ಹೆಸರು ಕನ್ನಡ ಬಸವಪುರಾಣದಲ್ಲಿ (ಕ್ರಿ. ಶ. ೧೩೬೯) ಹೊಟಲಕೆರೆ (ಸಂಧಿ ೫೧: ೧, ೩, ೫೨) ಎಂದಿದೆ. ಪಡುವಣ ಚಾಳುಕ್ಯ ಸಮ್ರಾಜನಾದ 1 ಜಗದೇಕಮಲ್ಲ ಜಯಸಿಂಹನ (ಕ್ರಿ. ೧೦೧೫–೪೨) ಶಾಸನಗಳಿಂದ ಪೊಟ್ಟಲಕೆರೆ ಆತನ ಉಪರಾಜಧಾನಿಗಳಲ್ಲಿ ಒಂದಾಗಿತ್ತು ೧* ಎಂದು ತಿಳಿಯುತ್ತದೆ. ಡಾ|| ಫ್ಲೀಟರಾದರೆ (Dr.Fleet) ಆ ಪೊಟ್ಟಲಕೆರೆಯನ್ನು ಎಷ್ಟೋ ಹಿಂದೆ ಬಳ್ಳಾರಿ ಜಿಲ್ಲೆಯ 'ದಣ್ಣಾಯಕನಕೆರೆ' ಎಂಬ ಊರಿನೊಂದಿಗೆ ಸಮೀಕರಿಸಿದುದು ೨* ಮಾತ್ರ ಸರಿಯಲ್ಲ. ಅದು ಹೈದರಾಬಾದು ರಾಜ್ಯದಲ್ಲಿಯ ಈ ಪೊಟ್ಟಲಕೆರೆ ತಾನೆ ಎಂದು ಈಗ ಕಂಡಿತವಿದೆ.

ಪೊಟ್ಟಲಕೆರೆಯಿಂದ ತಂದ ಒಂದು ಕಲ್ಲುಕಂಬವು ಹೈದರಾಬಾದಿನ ಪ್ರಾಚೀನ ಶಾಸನ ಇಲಾಖೆಯ ಮಂದಿರದಲ್ಲಿದೆ. ಅದನ್ನು ನಾನು ಸ್ವತಃ

ಕಂಡಿಲ್ಲದ ಕಾರಣ, ಅದರ ಉದ್ದ, ಅಗಲ, ಎತ್ತರ ಎಷ್ಟೆಂದು ಅರಿಯೆ. ಅದರ ೩ ಬದಿಗಳಲ್ಲಿ ಕನ್ನಡ ಬರೆಹದಲ್ಲಿ ಒಂದು ಶಾಸನವಿದೆ. ಅದು ಈ 'ಶರಣಸಾಹಿತ್ಯ'ದ ಕಳೆದ ೯ ನೆಯ ಸಂಪುಟದ ೧೧ (ದಿಶಂಬರ್ ೧೯೪೬) ನೆಯ ಸಂಚಿಕೆಯ (೫೨೨ ರಿಂದ ೫೩೫ ವರೆಗಣ ಪುಟಗಳಲ್ಲಿ) ಅಚ್ಚಾಗಿದೆ. ಆ ಅಚ್ಚಾದ ಪ್ರತಿಯಲ್ಲಿ ಪ್ರಾಯಶಃ ಕೆತ್ತುಗನಿಂದಾದ ಹಲವು ಕೆಯ್ತಪ್ಪು ಗಳನ್ನು ಬಲ್ಲಷ್ಟರಮಟ್ಟಿಗೆ ತಿದ್ದಿ, ಆ ಶಾಸನವನ್ನು ಆ ಕಂಬದಲ್ಲಿರುವಂತೆ ಪಂಕ್ತಿ ಪಂಕ್ತಿಯಾಗಿ ಇಲ್ಲಿ ಕೊಡದೆ ಅದರಲ್ಲಿಯ ಆರ್ಯೆ, ವೃತ್ತ, ಕಂದಾದಿ ಪದ್ಯಗಳನ್ನು ಯಥಾಚ್ಛಂದವಾಗಿಯೂ, ಗದ್ಯ, ವಚನವನ್ನು ತಥಾ ರೂಪವಾಗಿಯೂ ಇಲ್ಲಿ ಕೊಟ್ಟಿದೆ.

## ೧ ನೆಯ ಬದಿ

ಬಂತಿ ೧—೪: ಆರ್ಯೆ—

ಯಸ್ಯೋದಯಾಸ್ತ ಸಮಯೇ ಸುರಮಕುಟ ನಿಘೃಷ್ಟ ಚರಣ ಕಮಳೋಪಿ ।
ಕುರುತೇಽಂಜಲಿಂ ತ್ರಿಣೇತ್ರ ಸ್ಸಜಯತು ಧಾಮ್ನಾಂ ನಿಧಿಸ್ಸೂರ್ಯಃ ॥ ॥ ೧ ॥ ೨*

( = ದೇವತೆಗಳ ಕಿರೀಟಗಳಿಂದ ಒರಸಲ್ಪಟ್ಟ ಅಡಿದಾವರೆಗಳುಳ್ಳ ತ್ರಿಣೇತ್ರನಾದ ಶಿವನಾದರೂ ಯಾವಾತನ ಉದಯಕಾಲದಲ್ಲೂ ಅಸ್ತಕಾಲ ದಲ್ಲೂ ಬದ್ಧಾಂಜಲಿಯಾಗಿರುತ್ತಾನೊ, ಆ ತೇಜಸ್ಸುಗಳ ನಿಧಿಯಾದ ಸೂರ್ಯನು ಜಯಿಸಲಿ!)

ಬಂತಿ—೧೨: ಸ್ರಗ್ಧರೆ—

ಶ್ರೀಮಚ್ಚಾಳುಕ್ಯ ವಂಶೋದ್ಭವನನುಪಮಿತೋದ್ಯದ್ಭುಜಾದಂಡ ಶೌರ್ಯೋ

ದ್ದಾಮಂ (ಘೋ?) ರಾರಿ ಭೂಭೃತ್ಪ್ರಕರ ನಿಶಿತ ವಜ್ರಾಯುಧಂ ಕ್ಷತ್ರವಿದ್ಯಾ ।
ಧಾಮಂ ರಟ್ಟಾನ್ವವಾಯ ೩* ಪ್ರಬಳತರ ತಮಃ ಸ್ತೋಮ ಮಾರ್ತಾಂಡ ತೇಜಃ
ಸ್ತೋಮಂ ತಾನೆಂಬಿನಂ ಮಿಂತೆಸೆದನಸದಳಂ ತೈಲಪ ಕ್ಷೋಣಿ ಪಾಳಂ ॥ ೨ ॥

೩* ಪಡುವಣ ಚಾಳುಕ್ಯರ ಮೂಲಪುರುಷನಾದ ತೈಲಪನು 'ರಟ್ಟಾನ್ವವಾಯು'ದ ಅಂದರೆ ರಾಷ್ಟ್ರಕೂಟ ವಂಶದ, II ಕಕ್ಕನನ್ನು ಗೆದ್ದು ತಾನು ಕರ್ಣಾಟಕದ ಚಕ್ರವರ್ತಿಯಾದನೆಂದು ಇಲ್ಲಿ ಹೇಳಿದೆ.

ಬಂತಿ ೧೨-೧೮: ಶಾರ್ದೂಲ ವಿಕ್ರೀಡಿತ

ಅಂತಾ ತೈಲಪ ಭೂಭುಜಂಗೆ ತನಯಂ ಸತ್ಯಾಶ್ರಯೋರ್ವೀಶನಾ
ದಂ ತತ್ಪುತ್ರನಪಾರವಾರಿಧಿ ಪರೀತಾಶೇಷ ವಿಶ್ವಂಭರಾ ।
ಕಾಂತೇಶಂ ಜಯಸಿಂಹದೇವ ವಸುಧಾಧೀಶಂ ತದೀಯಾತ್ಮಜಾ
ತಂ ತಾನಾಹವಮಲ್ಲ ವಲ್ಲಭನಿಳಾ ಲಕ್ಷ್ಮೀಮನೋವಲ್ಲಭಂ ॥ ೩ ॥

ಬಂತಿ ೧೮-೨೧; ಕಂದ-

ಎನೆ ನೆಗಜ್ದಾಹವಮಲ್ಲಾ
ವನಿಪನ ತನಯಂ ವಿರೋಧಿ ಭೂಭುಜ ಸೈನ್ಯೇಂ ।

---

೨* ಈ ಆರ್ಯೆಯ ಕೊನೆಯ ಪಾದದ ಅಪಪಾಠವನ್ನು ತಿದ್ದಿದ ಬಗ್ಗೆ ಬೆಂಗಳೂರು ಇಂಟರ್‌ಮೀಡಿಯೆಟ್ ಕಾಲೇಜಿನ ಸಂಸ್ಕೃತ ಅಧ್ಯಾಪಕರಾದ ಶ್ರೀ ಎಂ. ಎ. ಕೃಷ್ಣಸ್ವಾಮಿಯವರಿಗೂ ಅವರಿಂದ ಆ ತಿದ್ದನ್ನು ನನಗೆ ಒದಗಿಸಿ ಕೊಟ್ಟ ಬಗ್ಗೆ ಶ್ರೀ ಜಿ. ಪಿ. ರಾಜರತ್ನಂ ಅವರಿಗೂ ಅತ್ಯಂತ ಕೃತಜ್ಞನಾಗಿರುತ್ತೇನೆ.

ಧನದಾಹ ಪಾವಕಂ ಜಯ
ವನಿತಾಪ್ರಿಯನೆನಿಪ ವಿಕ್ರಮಾದಿತ್ಯ ನೃಪಂ ॥ ೪ ॥

ಬಂತಿ ೨೧-೨೮ ಮತ್ತೇಭವಿಕ್ರೀಡಿತ—

೪೫ ಸಕಥಾಳಾಪದಿನಾನೆ (?) ಪೇಳದೊಡದೇಂದ (?) ಪೃಥ್ವಿಗೆಲ್ಲೆಂಬ
ಚೋಳ ಕಳಿಂಗಾಂಗ ವರಾಳ ಮಾಳವ ಮರುನ್ನೇಪಾಳ
ಪಾಂಚಾಳರಾ।
ಪ್ಪ ಕದಂಬಂಗಳೊಳುಣ್ಮೆ ಪೊಣ್ಮುವ ಮಹತ್ಪ್ರೋಧಾನಳೋದ್ಯ
ಚ್ಛಿಖಾ
ಪ್ರಕರಂ ಪೇಳದೆ ವಿಕ್ರಮೋನ್ನತಿಕೆಯಂ ಶ್ರೀ ವಿಕ್ರಮಾದಿತ್ಯನಾ
॥ ೫ ॥

ಬಂತಿ ೨೮-೩೨ ಕಂದ—

ಆ ವಿಕ್ರಮಾಂಕ ಸಕಳ ಮ
ಹೀ ವಲ್ಲಭನಾತ್ಮ ಜಾತನತುಳಿತ ಭುಜಶಾ।
ಯ್ಯೋರ್ಯವಷ್ಟಂಭೋದ್ಧರಣ ಧ
ರಾವಳಯಂ ನೆಗಳ್ದ ವೀರ ಸೋಮೇಶ ನೃಪಂ ॥ ೬ ॥

## ೨ ನೆಯ ಬದಿ

ಬಂತಿ ೧-೭: ಮಹಾಸ್ರಗ್ಧರೆ—

ಕದನಕ್ರೀಡಾಭಿರಾಮಂ ದ್ವಿಷದವನಿಪತಿವ್ರಾತಮಂ ಗೆಲ್ದು ಸತ್ಯಾ
ಭ್ಯುದಯಂ ಶ್ರೀ ಬಾಹುವಿಂದಂ ತಳೆದನಖಿಳ ಪಾಠೀನಯಾನಾಭಿ
ಪಾಕೋ।

---

೪೫ ಈ ಚರಣದ ಪಾಠದಲ್ಲಿ ಸಂಶಯ ತೋರುತ್ತದೆ. 'ದಪ್ಪ' ಎಂಬಲ್ಲಿ ಪ್ರಸ್ತಾರಕ್ಕೂ ತೊಡಕಾಗುತ್ತದೆ.

ದ್ಮದವಂ ನೀರೇಭಸಂಘಕ್ಷುಭಿತ ಜಳಧಿಕಲ್ಲೋಳರಂಗತ್ತರಂಗಾ
ಸ್ಪದ ವೇಳಾವೇಷ್ಟಿತೋರ್ವೀವಲಯನೆಸವ ಭೂಲೋಕಮಲ್ಲ ಕ್ಷಿತೀಶಂ
॥ ೭ ॥

ಬಂತಿ ೮–೧೩ ಮತ್ತೇಭವಿಕ್ರೀಡಿತ—

ಮೊಳೆವೆತ್ತೆತ್ತಿದ ತೋಳ ಬಾಳಜಳದಿಂ ಮೆಯ್ಗೊಂಡಮಿತ್ರಾಂಗನಾ
ಕುಳ ಭಾಷ್ಪದ್ರವದಿಂ ತಳಿತ್ತುರ್ವಿ ರಿಪುಸೇನಾಚಕ್ರ ರಕ್ತಾಂಬುವಿಂ ।
ಬಳೆದತ್ತೀಗಳುಪಾಹಿತಾಹಿತ ಶಿಳೀ ಗಳತ್ಕಾಳಿಂಗ ಮಾತಂಗಸಂ
ಕುಳ ದಾನಸ್ರವದಿಂ ಪರಾಕ್ರಮವನಂ ಭೂಲೋಕಮಲ್ಲಾಂಕನಾ
॥ ೮ ॥

ಬಂತಿ ೧೪–೩೩: ವಚನ—

ಸ್ವಸ್ತಿ ಶ್ರೀಮಚ್ಚಾಳುಕ್ಯ ವಿಕ್ರಮ ವರ್ಷದ ೫೧ ನೆಯ ಪರಾ
ಭವ ಸಂವತ್ಸರದ ಕಾರ್ತಿಕ ಬಹುಳ ೨ ಬೃಹಸ್ಪತಿವಾರದಂದು
ಜೋಯಿಸಿಗಂ ನನ್ನಿಯಭಟ್ಟರು ವಿಜಯಯಾತ್ರೆಗೆ ಲಗ್ನಮಂ ಕೊಟ್ಟ
ನಿಮಿತ್ತದಿಂದಾ ಪಾಲ್ಗುಣ ಶುದ್ಧ ೭ ಆದಿವಾರದಂದು ಪಟ್ಟಬಂಧೋ
ತ್ಸವ ಸಮಯದ ೬ ಆಯಯ್ಯಾನಂ ನೆನೆದು ಸಮಸ್ತ ಭುವನಾಶ್ರಯ
ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕಂ
ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾಭರಣಂ ಶ್ರೀಮದ್ಭೂಲೋಕಮಲ್ಲ
ದೇವರು ಮಹಾಮಂಡಲೇಶ್ವರಂ. ಕರಿತುರಗ ಪಟ್ಟಸಾಹಣಿ ಮಲ್ಲಿಯಂ
ಣನ ಮಹಾಪ್ರಧಾನಂ ಕಂಚಿ (?) ಗೊಂಡಪುರದ ಹೆಗ್ಗಡೆ, ದಂಡ
ನಾಯಕಂ ವಚ್ಚಪಯ್ಯಂಗಳ, ಸರ್ವಾಧ್ಯಕ್ಷಂ ಶ್ರೀಕರಣಂ ದಂಡ
ನಾಯಕಂ ಮಲ್ಲಣ್ಣಭಟ್ಟರ

# ೩ ನೆಯ ಬದಿ

ಬಂತಿ ೧–೫: ಅದೇ ವಚನದ ಮುಂದರಿಕೆ—

ಅಂತಃಪುರವೆರ್ಗ್ಗಡೆ ಪಸಾಯಿತಂ ದಂಡನಾಯಕಂ ಅಡಪದ ಬಂಮ್ಮಣಯ್ಯಂಗಳ ಸಮುಖಾದೇಶದಿಂ ಕಾರುಣ್ಯಂಗೆಯ್ದು ಸರ್ವ್ವ ನಮಸ್ಯ ಮಾಗೆಯ್ದು ಧಾರಾಪೂರ್ವಕಂ ಮಾಡಿ ||

೬* 'ಆಯಯ್ಯಾನಂ' ಎಂದರೆ ಯಾರು? ಅಥವಾ ಏನು? ಎಂದು ತಿಳಿಯುವುದಿಲ್ಲ.

ಬಂತಿ ೫–೯: ಕಂದ—

ನರನಾಥಂ ನನ್ನಿಯ ಭ
ಟ್ಟರಿಗೆ ಮನೋಮುದದಿ ನೊಸೆದು ಪೊಟ್ಟಳಕೆಳೆಯೊಳ್ |
ಕರಮೊಪ್ಪುವ ಚಿಂತಾಮಣಿ
ಪುರದಲ್ಲಿಯ ಕೊಳಗದಾಯುವಂ ಸಲೆ ಕೊಟ್ಟರ್ || ೯ ||

ಬಂತಿ ೯–೧೬: ವಚನ—

ಈ ಧರ್ಮ್ಮಕ್ಕೆ ಪ್ರಭು ಪಂಚಪುಟಸ್ಥಾನ ನಗರ ನಾಲ್ವತ್ತೊಕ್ಕಲುಂ ನಾಲ್ಕೂರ ಸೆಟ್ಟಿ (?) ಕಾಳರು ಸಮಯಂಗಳು ಬೆಂಬಳಿಯಾಗಿ ಪ್ರತಿಪಾಳಿಸುವರು (||) ಈ ಧರ್ಮ್ಮಕಾರೊರ್ವ್ವರು ಪ್ರತಿಕೂಳರಾಗಿ ನಡೆದವರ್ಗ್ಗೆ ಶ್ರೀವಾರಣಾಸಿಯುಲು ಸಾಯಿರ ಕವಿಲೆಯುಂ ಸಾವಿರ ಬ್ರಾಹ್ಮಣರುಮನಳಿದ ಪಾತಕವಕ್ಕುಂ ||

---

೫* ಉಪಾಹಿತ = ದಳ್ಳುರಿ. ಅಗ್ನ್ಯುತ್ಪಾತ ಉಪಾಹಿತಃ (ಅಮರಕೋಶ ) (1–೪.೧೧); ಉಪಾಹಿತಃ ಪುನಃ | ಆರೋಪಿತೇಽನಲೋತ್ಪಾತೇ| (ಹೇಮಚಂದ್ರನ ಅನೇಕಾರ್ಥ ಸಂಗ್ರಹ, ಶ್ಲೋ. ೧೪೭೨).

ಬಂತಿ ೧೭–೨೦: ಶಾಲಿನೀ—

ಸಾಮಾನ್ಯೋಯಂ ಧರ್ಮಸೇತುನೃಪಾಣಾಂ
ಕಾಲೇ ಕಾಲೇ ಪಾಲನೀಯೋ ಭವದ್ಭಿಃ ।
ಸರ್ವಾನೇತಾನ್ ಭಾವಿನಃ ಪಾರ್ಥಿವೇಂದ್ರಾನ್
ಭೂಯೋ ಭೂಯೋ ಯಾಚತೇ ರಾಮಚಂದ್ರಃ ॥ ೧೦ ॥

ಬಂತಿ ೨೧–೨೪: ಅನುಷ್ಟುಪ್—

ಸ್ವದತ್ತಾಂ ಪರದತ್ತಾಂ ವಾ ಯೋ ಹರೇತ ವಸುಂಧರಾಮ್ ।
ಷಷ್ಟಿ ವರ್ಷ ಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ ॥ ೧೧ ॥

ಬಂತಿ ೨೫–೨೮: ಕಂದ—

ನಿರತಿಶಯೋನ್ನತಮತಿ ಭಾ
ಸ್ಕರ ಸರಸಕವೀಂದ್ರ ರಚಿತ ಶಾಸನಮಂ ಬಿ ।
ತ್ತರದಿಂ ಪ್ರತಿಕಂಟಂ ಸಾ
ಕ್ಷರನಿಳಯಂತಿರ್ದಿ ಭಾಸ್ಕರಯ್ಯಂ ಬರೆದಂ ॥ ೧೨ ॥ ಶ್ರೀ ಶ್ರೀ

ಬಂತಿ ೨೯–೩೨; ವಚನ—

ಸ್ವಸ್ತಿ ಶ್ರೀಮಜ್ಜೋಯಿಸಿಗಂ ನನ್ನೆಯಭಟ್ಟರು ಕೊಳಗದಾಯ ದಲು ಚತುರ್ತ್ಥಾಂಶಮಂ ನಗರೇಶ್ವರ ದೇವರಿಗೆ ಕೊಟ್ಟರ್ ॥

ಇದು ಪಡುವಣ ಚಾಳುಕ್ಯಾನ್ವಯದ ಅತ್ಯಂತ ಪ್ರತಾಪಿ ಹಾಗೂ ಶ್ರೇಷ್ಠ ಅರಸನಾದ ತ್ರಿಭುವನಮಲ್ಲ VI ವಿಕ್ರಮಾದಿತ್ಯನ ಮಗನೂ ಉತ್ತರಾಧಿಕಾರಿಯೂ ಆದ ಭೂಲೋಕಮಲ್ಲ ಎಂದೂ ಸರ್ವಜ್ಞ ಚಕ್ರವರ್ತಿ ಎಂದೂ ಬಿರುದುಗಳಿದ್ದ III ಸೋಮೇಶ್ವರನ ಶಿಲಾಶಾಸನ. ಇದರಲ್ಲಿ ಹೆಸರಿರುವ ಹಾಗೂ ಹೆಸರಿಸಿದ ಆತನ ಪೂರ್ವಜನರನ್ನು ಕುರಿತು ಹೀಗೆ ಎರಡೆರಡು ಮಾತುಗಳನ್ನು ಹೇಳಬಹುದು.

(೧) ಆಹವಮಲ್ಲ ತೈಲಪ (ಕ್ರಿ. ಶ. ೯೭೩-೯೯೭) ಈತನು ರಟ್ಟರೆಂಬ ರಾಷ್ಟ್ರಕೂಟ ವಂಶದ ಅರಸನಾದ II ಕಕ್ಕನನ್ನು ಗೆದ್ದು ಆತನ ಕರ್ಣಾಟಕ ಸಿಂಹಾಸನವನ್ನು ಸೆಳಕೊಂಡು ತಾನು ಅರಸನಾದನು. ಅತಏವ ಈತನು ಪಡುವಣ ಚಾಳುಕ್ಯರ ಮೂಲಪುರುಷನು.

(೨) ಆಹವಮಲ್ಲ ಸತ್ಯಾಶ್ರಯ (ಕ್ರಿ. ಶ. ೯೯೭-೧೦೦೮) ತೈಲಪನ ಮಗ ಹಾಗೂ ಉತ್ತರಾಧಿಕಾರಿ. ಈತನೇ ರನ್ನನ ಗದಾಯುದ್ಧದ ಕಥಾನಾಯಕ.

(೩) ತ್ರಿಭುವನಮಲ್ಲ V ವಿಕ್ರಮಾದಿತ್ಯ (ಕ್ರಿ. ಶ. ೧೦೦೮-೧೪), ಹಾಗೂ (೪) ಅಯ್ಯಣ (ಕ್ರಿ. ಶ. ೧೦೧೪-೧೦೧೫) ಇವರು ಸತ್ಯಾಶ್ರಯನ ತಮ್ಮನಾದ ದಶ (ಯಶೋ) ವರ್ಮನ ಮಕ್ಕಳು. ಆದರೆ ಇವರಲ್ಲಿ ಅಯ್ಯಣನು ಆಳರಸನಾಗಿದ್ದನೊ ಎಂಬುದು ಸಂಶಯಾಸ್ಪದವೆಂದಾದರೂ, ಶಾ. ಶ. ೧೦೬೦ ಕಾಳಯುಕ್ತ ಸಂ| ಮಾಘ ಶು| ೧೧ ಬೃಹಸ್ಪತಿವಾರ = ಕ್ರಿ. ಶ. ೧೧೩೯ ಜನವರಿ ೧೨ ನೆಯ ತಾರೀಕು ಗುರುವಾರದಂದಿನ ಉದ್ರಿಯ ಶಿಲಾಶಾಸನದಲ್ಲಿ (ಬಂತಿ ೩-೪) ೭* ಈ ಚಾಳುಕ್ಯರ ಆಳಸರಲ್ಲಿ ಅಯ್ಯಣ್ಣನ ಹೆಸರೂ ಇದೆ ಎಂಬುದನ್ನು ಗಮನಿಸಬಹುದು.

ಧುರದೊಳ್ ಚಾಳುಕ್ಯ ಚಕ್ರೇಶ್ವರನಧಿಕಬಳಂ ತೈಲಪಂ ಸತ್ಯರತ್ನಾಕರನಾ ಸತ್ಯಾಶ್ರಯಂ ವಿಕ್ರಮ ಭುಜಬಳದಿಂ ವಿಕ್ರಮಾದಿತ್ಯಭೂಪಂ|

ವರತೇಜಂ ಅಯ್ಯಣಂ....||

ಇವರಿಬ್ಬರ ಹೆಸರುಗಳನ್ನು ಪೊಟ್ಟಲಕೆರೆಯ ಶಾಸನದಲ್ಲಿ ಹೇಳಿಲ್ಲ.

(೫) I ಜಗದೇಕಮಲ್ಲ ಜಯಸಿಂಹ (ಕ್ರಿ. ಶ. ೧೦೧೫-೪೨): ಈತನೂ ದಶ (ಯಶೋ) ವರ್ಮನ ಮಗ, ಹಾಗೂ ಮೇಲಣವರ ತಮ್ಮ. ಈ ಶಾಸನದಲ್ಲಿ ಈತನನ್ನು ಸತ್ಯಾಶ್ರಯನ ಮಗನೆಂದಿರುವುದಾದರೆ (ಸತ್ಯಾಶ್ರಯೋರ್ವೀಶನಾದಂ ತತ್ಪುತ್ರ........ಜಯಸಿಂಹ'—ಪದ್ಯ ೩) ಸರ್ವಥಾ ಸರಿಯಲ್ಲ.

(೬) ತ್ರೈಲೋಕ್ಯಮಲ್ಲ—ಆಹವಮಲ್ಲ I ಸೋಮೇಶ್ವರ (ಕ್ರಿ. ಶ. ೧೦೪೨–೬೮) ; ಜಯಸಿಂಹನ ಮಗ.

(೭) ಭುವನೈಕಮಲ್ಲ II ಸೋಮೇಶ್ವರ [ಕ್ರಿ. ಶ. ೧೦೬೮–೭೬) I ಸೋಮೇಶ್ವರನ ಮಗ. ಇವನನ್ನೂ ಈ ಶಾಸನದಲ್ಲಿ ಹೆಸರಿಸಿಲ್ಲ.

(೮) ತ್ರಿಭುವನಮಲ್ಲ VI ವಿಕ್ರಮಾದಿತ್ಯ ಕ್ರಿ. ಶ. ೧೦೭೬–೧೧೨೬ ಅಥವಾ ೧೧೨೭); ಈತನು ಆವಹಮಲ್ಲ I ಸೋಮೇಶ್ವರನ ಮಗ ಹಾಗೂ ಭುವನೈಕಮಲ್ಲ II ಸೋಮೇಶ್ವರನ ತಮ್ಮ. ಇವನು ತನ್ನ ಅಣ್ಣನ ರಾಜ್ಯ ಪಟ್ಟವನ್ನು ಕಿತ್ತುಕೊಂಡು ತಾನು ಅರಸಾದನು. ಇವನೇ ಈ ಪೊಟ್ಟಲ ಕೆರೆಯ ಶಾಸನದ ಭೂಲೋಕಮಲ್ಲನ ತಂದೆ ಹಾಗೂ ಪೂರ್ವಾಧಿಕಾರಿ.

ಈ ಶಾಸನದಲ್ಲಿ ಭೂಲೋಕಮಲ್ಲನ ಪಟ್ಟಬಂಧದ ತೇದಿಯನ್ನೂ ಆತನ ಪ್ರಾಯಶಃ ಅಂದಿನದೇ ದತ್ತಿಯನ್ನೂ ಕುರಿತದೆ. ಜೋಯಿಸಿಗ ನನ್ನಿಯ ಭಟ್ಟರು ಆತನ ವಿಜಯಯಾತ್ರೆಗೆ ಲಗ್ನವಿತ್ತರೆಂದು ಇಲ್ಲಿ ಹೇಳಿರುವ ಚಾಳುಕ್ಯ ವಿಕ್ರಮ ವರ್ಷದ ೫೧ನೆಯ ಪರಾಭವ ಸಂ॥ ಕಾರ್ತಿಕ ಬಹುಳ ೨ ಬೃಹಸ್ಪತಿವಾರದ ಆ ತೇದಿ, ಆತನ ತಂದೆಯಾದ ತ್ರಿಭುವನಮಲ್ಲ VI ವಿಕ್ರಮಾದಿತ್ಯನಿಂದ ಪ್ರವರ್ತಿಸಲ್ಪಟ್ಟ ಚಾಳುಕ್ಯ ವಿಕ್ರಮ (ಚಾ. ವಿ.) ವರ್ಷ ಎಂಬ ಆ ನೂತನ ಶಕವು ಕ್ರಿ. ಶ. ೧೦೭೬–೭೭ ರಲ್ಲಿ ಆರಂಭಿಸಿದುದ ರಿಂದ, ೮* ಕ್ರಿ. ಶ. ೧೧೨೬ ನವೆಂಬರ್ ೪ನೆಯ ತಾರೀಖು ಗುರುವಾರ ವಾಗುತ್ತದೆ. ಆ ಮುಂದೆಯೇ ಈ ಶಾಸನದಲ್ಲಿ ಆತನ ಪಟ್ಟಬಂಧೋತ್ಸವವು ಅದೇ (ಚಾ. ವಿ. ೫೧ ನೆಯ ವರ್ಷದ) ಫಾಲ್ಗುಣ ಶುದ್ಧ ೭ ಆದಿ (ತ್ಯ) ವಾರದಂದು ಆಯಿತೆಂದಿರುವ ಆ ಮತ್ತೊಂದು ತೇದಿ ಕ್ರಿ. ಶ. ೧೧೨೭ನೆಯ ಫೆಬ್ರವರಿ ೨೦ನೆಯ ತಾರೀಕು ಆದಿತ್ಯವಾರವಾಗುತ್ತದೆ. ೯* ಹೀಗೆ ಆತನ ವಿಜಯಯಾತ್ರೆಗೂ ಪಟ್ಟಾಭಿಷೇಕಕ್ಕೂ ನಡುವೆ ೩ ತಿಂಗಳು ೧೬ ದಿನ ಗಳೇನೋ ಸಂದಿವೆ.

---

೭* Epigraphia Carnatica (EC) VIII ಸೊರಬ ೨೩೩.

ಈ ಶಾಸನದ ಕೊನೆಯಲ್ಲಿ ಭೂಲೋಕಮಲ್ಲನು ಪೊಟ್ಟಲಕೆರೆಯ ಚಿಂತಾಮಣಿಪುರದಲ್ಲಿ ತನಗೆ ಬಿಟ್ಟ ಆ ಕೊಳಗದಾಯದ ದತ್ತಿಯ ಚತುರ್ಥಾಂಶವನ್ನು ಆ ನನ್ನೆಯಭಟ್ಟರು ನಗರೇಶ್ವರ ದೇವರ ವಿನಿಯೋಗಕ್ಕೆ ಕೊಟ್ಟರೆಂದು ಹೇಳಿರುವುದರಿಂದ, ಈ ಶಾಸನವು ಸ್ವಯಂ ಭೂಲೋಕಮಲ್ಲನದಲ್ಲ, ನನ್ನೆಯ ಭಟ್ಟರದೆಂದು ಪ್ರಥಮ ದೃಷ್ಟಿಗೆ ತೋರಿಬಹುದಾದರೂ ಚನ್ನಾಗಿ ವಿಚಾರಿಸಿದರೆ ಭೂಲೋಕಮಲ್ಲನು ತನ್ನ ದತ್ತಿಯನ್ನು ಕುರಿತ ಶಾಸನವನ್ನು ಕೆತ್ತಿಸಿದ ಕಂಬದಲ್ಲೇ ಆ ಭಟ್ಟರೂ ಪ್ರಾಯಶಃ ಆತನ ಅನುಜ್ಞೆ ಪಡೆದೇ ತಮ್ಮ ದತ್ತಿಯ ವಿಷಯವನ್ನು ಕೂಡಿಸಿರಬೇಕೆಂದು ತಿಳಿಯುವುದರಿಂದ, ಇದು ಆತನದೇ ಶಾಸನ ಹಾಗೂ ಆತನ ಪಟ್ಟಾಭಿಷೇಕವೆಂದು ತಿಳಿಯುವುದರಿಂದ, ಇದು ಆತನದೇ ಶಾಸನ ಹಾಗೂ ಆತನ ಪಟ್ಟಾಭಿಷೇಕದಂದೇ ಇದು ಹುಟ್ಟಿತೆಂಬ ಕಾರಣ ಇದು ಆತನ ಆಳಿಕೆಯ ಬಹುಶಃ ಮೊತ್ತಮೊದಲನೆಯ ಶಾಸನವೂ ಸರಿ. ಇದನ್ನು ಆತನ ಆಜ್ಞೆಯ ಮೇರೆಗೆ ಪೊಟ್ಟಲಕೆರೆಯ ಆ ನಗರೇಶ್ವರ ದೇವರ ಗುಡಿಯ ಕಂಬದಲ್ಲಿ ಕೆತ್ತಿಸಿರಬೇಕು; ಕ್ರಮೇಣ ಆ ಗುಡಿ ಹಾಳುಬಿದ್ದ ಮೇಲೆ ಕೊನೆಗೆ ಆ ಕಂಬವನು ಅಲ್ಲಿಂದ ಹೈದರಾಬಾದು ಸರಕಾರದ ಪ್ರಾಚೀನ ಇಲಾಖೆಯ ಮಂದಿರಕ್ಕೆ ಒಯ್ದಿರಬೇಕು.

ಭೂಲೋಕಮಲ್ಲನ ತಂದೆಯಾದ ತ್ರಿಭುವನಮಲ್ಲ VI ವಿಕ್ರಮಾದಿತ್ಯನ ಆಳಿಕೆಯ ಕೊಟ್ಟಕೊನೆಯ ಶಾಸನಗಳ ತೇದಿಗಳು ಹೀಗಿವೆ—

(೧) ಚಾ. ವಿ. ೫೨ ನೆಯ ವರ್ಷದ ವಿಶ್ವಾವಸು ಸಂ॥ ಮಾಘ ಶುಕ್ಲ ೭ = ಕ್ರಿ. ಶ. ೧೧೨೬ ಜನವರಿ ೩ ನೆಯ ತಾರೀಕಿನ ನರೇಗಲ್ಲದ ಶಾಸನ. ೧೦*

(೨) ಚಾ. ವಿ. ೫೦ ನೆಯ ವರ್ಷ ವಿಶ್ವಾವಸು ಸಂ॥ ಮಾಘದ ಹುಣ್ಣಿಮೆ ಸೋಮವಾರ ಚಂದ್ರಗ್ರಹಣ = ಕ್ರಿ. ಶ. ೧೧೨೬ ಜನವರಿ ೧೦

೮* FKD, ಪು. ೪೪೭.

೯* ಆತ ಏವ ಭೂಲೋಕಮಲ್ಲನು ಕ್ರಿ. ಶ. ೧೧೨೬ನೆಯ ಜುಲೈ ೨೪ ನೆಯ ತಾರೀಕಿನಿಂದ ಅಕ್ಟೋಬರ್ ೫ನೆಯ ತಾರೀಕಿನೊಳಗೆ ಪಟ್ಟವೇರಿದನೆಂಬ (Historical Inscriptions of southern India, ಪು. ೯೯) ಹೇಳಿಕೆಯನ್ನು ಒಪ್ಪಲಾಗುವುದಿಲ್ಲ.

ನೆಯ ತಾರೀಕು ಆದಿತ್ಯವಾರದ ರಾತ್ರಿಯ ಚಂದ್ರಗ್ರಹಣದ ಮಾರನೆಯ ೧೧ ನೆಯ ತಾರೀಕು ಸೋಮವಾರದಂದು ಹುಟ್ಟಿವಮೂಡಿಯುದ ಶಿಲಾ ಶಾಸನ ೧೧*

(೩) ಬಳ್ಳಾರಿ ಜಿಲ್ಲೆಯ ಬಾಗಲಿ ಎಂಬಲ್ಲಿಯ ಚಾ. ವಿ. ೫೧ ನೆಯ ಪರಾಭವ ಸಂ॥ ದ॥ (ಯಾವ ತೇದಿ?) ಶಾಸನ. ೧೨* ಆ ಪರಾಭವ ಸಂ॥ ಕ್ರಿ. ಶ. ೧೧೨೬ ನೆಯ ಫೆಬ್ರವರಿ ತಿಂಗಳ (೨೪ ನೆಯ ತಾರೀಕಿನಲ್ಲಿ) ಆರಂಭಿಸಿತು.

ಅತಏವ ತ್ರಿಭುವನಮಲ್ಲನು ೫೦-೫೧ ವರ್ಷ ಆಳಿ, ಕ್ರಿ. ಶ. ೧೧೨೬ ನೆಯ ಮಾರ್ಚ ತಿಂಗಳಿಂದ ಭೂಲೋಕಮಲ್ಲನು ಪಟ್ಟವೇರಿದ ಕ್ರಿ. ಶ. ೧೧೨೭ ನೆಯ ಫೆಬ್ರವರಿಯೊಳಗಿನ ಕಾಲವಾಗಿರಬೇಕು. (ಅನುಬಂಧವನ್ನು ನೋಡಿ.)

ಈಗ ಈ ಪೊಟ್ಟಲಕೆರೆಯ ಶಾಸನದಲ್ಲಿ ಭೂಲೋಕಮಲ್ಲನ ವಿಜಯ ಯಾತ್ರೆಯನ್ನು ಕುರಿತು ಪ್ರಸ್ತಾಪಿಸಿದೆಯಷ್ಟೆ. ಆ ವಿಜಯಯಾತ್ರೆ ಎಂದ ರೇನು? ಯಾರ ಮೇಲೆ?

ತ್ರಿಭುವನಮಲ್ಲ VI ವಿಕ್ರಮಾದಿತ್ಯನಿಗೆ ಭೂಲೋಕಮಲ್ಲನೆಂಬ ಬಿರುದಿದ್ದ III ಸೋಮೇಶ್ವರನಲ್ಲದೆ, ಪ್ರಾಯಶಃ ಜ್ಯೇಷ್ಠ ಪುತ್ರನಾದ ಜಯಕರ್ಣ ಎಂಬ ಬೇರೊಬ್ಬ ಮಗನೂ ಇದ್ದನು. ಆತನು ತನ್ನ ತಂದೆಯ ಆಳಿಕೆಯಲ್ಲಿ ಮಹಾ ಮಂಡಳೇಶ್ವರನಾಗಿ ಆಳುತ್ತಿದ್ದನು. ೧೩* ತಮ್ಮ ತಂದೆಯ ವೃದ್ಧಾಪ್ಯದಲ್ಲಿ, ಅಥವಾ ಆತನು ಕಾಲವಾದ ಈಷತ್ಕಾಲಾನಂತರ, ಜಯಕರ್ಣನಿಗೂ ಭೂಲೋಕಮಲ್ಲನಿಗೂ ಆತನ ಸಿಂಹಾಸನಕ್ಕೋಸ್ಕರ (ಹಿಂದೆ ಕ್ರಿ. ಶ ೧೦೬೬ ರಲ್ಲಿ ತ್ರಿಭುವನಮಲ್ಲನಿಗೂ ಆವನ ಅಣ್ಣ ಭುವನೈಕ ಮಲ್ಲನಿಗೂ ಆದಂತೆ) ಕಾದಾಟವಾಗಿರಬಹುದೇ ? ಎಂದರೆ, ಜಯಕರ್ಣನು ಮಹಾಮಂಡಳೇಶ್ವರನಾಗಿದ್ದಂದಿನ ಈವರೆಗೆ ದೊರೆತ ಆತನ ೩ ಶಾಸನಗಳಲ್ಲಿ ಕೊನೆಯದರ ವರ್ಷ ಕ್ರಿ. ಶ. ೧೧೨೧, ೧೩* ಅಂದರೆ ತ್ರಿಭುವನಮಲ್ಲನು

---

೧೦* FKD, ಪು. ೪೪೬-೪೭.

೧೧* EC, VIII, ಸೊರಬ ೧೭೦,

೧೨* Historical Inspections of Southern India (Hist) ಪು. ೯೯. ೧೩* FKD, ಪು. ೪೫೫.

ಮೃತನಾಗುವ ೫-೬ ವರ್ಷಗಳ ಮುಂಚೆ, ಹೀಗಾಗಿ ಜಯಕರ್ಣನು ತನ್ನ ತಂದೆಯ ಮುಂಚೆಯೇ ಕಾಲವಾಗಿರಬೇಕೆಂದು ಊಹಿಸಲ್ಪಟ್ಟಿದೆ. ಆ ಊಹೆಯನ್ನು ಅಲ್ಲಗಳೆದರೆ, ಅಥವಾ ಜಯಕರ್ಣನಿಗೆ ಅಲ್ಲವಾದರೆ ಬೇರೆ ಯಾರೊಬ್ಬ ರಾಜಪುತ್ರನಿಗೂ ಭೂಲೋಕಮಲ್ಲನಿಗೂ ರಾಜಪಟ್ಟದ ಬಗ್ಗೆ ಸಾಪತ್ನ್ಯವಿದ್ದು, ಅವರೊಳಗೆ ಯುದ್ಧವಾಗಿರಬಹುದೇ? ಎಂದರೆ ಭೂಲೋಕ ಮಲ್ಲನು ಪಟ್ಟಾಭಿಷಿಕ್ತನಾಗುವ ೩ ತಿಂಗಳ ಮುಂಚೆ ಮಾಡಿದ ಈ ವಿಜಯ ಯಾತ್ರೆಯನ್ನು ಉದ್ದೇಶಿಸಿ ತಾನೆ ಆತನನ್ನು ಬಣ್ಣಿಸುವೆನೆಂದು ತೋರುವ ಈ ಪೊಟ್ಟಲಕೆರೆಯ ಶಾಸನದ ಆ ೭ ಮತ್ತು ೮ ನೆಯ ವೃತ್ತಗಳನ್ನು ನೋಡಿದರೆ, ಆತನ ಆ ವಿಜಯಯಾತ್ರೆ ತನ್ನ ಯಾವ ಸೋದರರಿಗೆ ಪ್ರತಿ ಕೂಲವಾಗಿಯೂ ಅಲ್ಲ, ಪ್ರಸ್ತುತ ಶತ್ರುರಾಜರ ಮೇಲೆ ಮಾಡಿದ ದಂಡ ಯಾತ್ರೆ ಎಂದು ಪ್ರತ್ಯಕ್ಷವಿದೆ. ಇದರೊಂದಿಗೆ ಭೂಲೋಕಮಲ್ಲ ವರ್ಷ ೩ ನೆಯ ಕೀಲಕ ಸಂ॥ ಮಾಘದಮಾವಾಸ್ಯೆ ಬ್ರಹಸ್ಪತಿವಾರ, ಅಂದರೆ ಕ್ರಿ. ಶ. ೧೧೨೮ ನೆಯ ಫೆಬ್ರವರಿ ೨ ನೆಯ ತಾರೀಕು ಗುರುವಾರದಂದಿನ ಭೂಲೋಕ ಮಲ್ಲನ ಆಳಿಕೆಯದೇ ಬೆಳಗಾವಿಯ ಶಿಲಾಶಾಸನದಲ್ಲಿ ೧೪೫ (ಬಂ ೩೦-೩೨) 'ಚಾಳುಕ್ಯ ಚಕ್ರವರ್ತಿ ಸೋಮೇಶ್ವರೋರ್ವೀಶ್ವರಂ ಭೂಲೋಕಮಲ್ಲಂ ದಿಗ್ವಿಜಯಂ ಗೆಯ್ಯಲೆನ್ದು ದಕ್ಷಿಣಾಭಿಮುಖನಾಗಿ ಬನ್ದು' ಎಂಬುದನ್ನು ಮನವರಿಸಿದರೆ, ಆತನಿಗೆ ದಿಗ್ವಿಜಯದಲ್ಲಿ, ಅಂದರೆ ವಿಜಯಯಾತ್ರೆಯಲ್ಲಿ, ಹೆಚ್ಚಿನ ಮೆಚ್ಚಿಗೆ ಇದ್ದಂತೆಯೂ ತೋರುವುದರಿಂದ, ಈ ಪೊಟ್ಟಲಕೆರೆಯ ಶಾಸನದ ವಿಜಯಯಾತ್ರೆ ಎಂದರೆ ಶತ್ರುರಾಜರ ಮೇಲೆ ಮಾಡಿದ ದಂಡ ಯಾತ್ರೆ ತಾನೆ ಎಂದು ಸಾಕಷ್ಟು ಖಂಡಿತವಾಗುತ್ತದೆ. ತನ್ನ ತಂದೆಯಾದ ತ್ರಿಭುವನಮಲ್ಲನ ಜೀವಮಾನದಲ್ಲೇ ಭೂಲೋಕಮಲ್ಲನು ಆ ವಿಜಯ ಯಾತ್ರೆಗೆ ಹೊರಟಿದ್ದರೆ, ತ್ರಿಭುವನಮಲ್ಲನೇ ಆತನನ್ನು ಆ ಬಗ್ಗೆ ನಿಯಾ ಮಿಸಿರಲೂಬಹುದು. ಅಥವಾ ತ್ರಿಭುವನಮಲ್ಲನೇ ಆಗ್ಗೆ ಕಾಲವಾಗಿದ್ದರೆ, ಆತನು ಪ್ರಾಯಶಃ ದಕ್ಷಿಣಾಯನದಲ್ಲೇನೋ ಕಾಲವಾಗಿದ್ದು ಆ ಕೂಡಲೇ

---

೧೪ EC VII, ಶಿಕಾರಿಪುರ ೧೦೨.

೧೪೫ ಭೂಪಾನಾಮಭಿಷೇಚನೇ... ಭಾನುರ್ಭದ್ರಕೃದುತ್ತರಾಯಣ ಗತಃ (ವಿದ್ಯಾಮಾಧವೀಯ XI. ೬.)

ಭೂಲೋಕಮಲ್ಲನ ಪಟ್ಟಾಭಿಷೇಕವಾಗಲಿಕ್ಕೆ ಆ ಆಯನ ಅಷ್ಟು ಪ್ರಶಸ್ತವಲ್ಲ ೧೬೫ ಎಂದೇನೋ ಮುಂದಣ ಉತ್ತರಾಯಣದಲ್ಲಿ ಜರಗತಕ್ಕ ಆ ಮಹೋತ್ಸವದ ಮುಂಚಿನ ನಡುಗಾಲದಲ್ಲಿ ಭೂಲೋಕಮಲ್ಲನು ವಿಜಯ ಯಾತ್ರೆ ಮಾಡಿರಲೂ ಬಹುದು.

ಹೀಗೆ ಭೂಲೋಕಮಲ್ಲನು ಜೋಯಿಸಿಗ ನನ್ನೆಯಭಟ್ಟರೊಂದಿಗೆ ವಿಜಯಯಾತ್ರೆಗೆ ಹೊತ್ತು ಕೇಳಿ, ಅವರು ಹೇಳಿದಂದಿನ ಆ ಚಾ. ವಿ. ವರ್ಷ ೫೧ನೆಯ ಪರಾಭವ ಸಂ|| ಕಾರ್ತಿಕ ಬ|| ಬೃಹಸ್ಪತಿವಾರ = ಕ್ರಿ. ಶ. ೧೧೨೬ ನವಂಬರ ೪ ನೆಯ ತಾರೀಕಿನಂದೇ ಆ ಯಾತ್ರೆಗೆ ಹೊರಟು ಅದರಲ್ಲಿ ಜಯಶೀಲನಾಗಿ ಮರಳಿ ಬಂದು, ಅಲ್ಲಿಂದ ಕೆಲವು ತಿಂಗಳಲ್ಲಿ (ಪ್ರಾಯಶಃ ಅವರೇ ಹೊತ್ತು ಹೇಳಿರಬೇಕಾದ) ಅದೇ ಪರಾಭವ ಸಂ|| ಫಾಲ್ಗುಣ ಶು|| ೭ ಆದಿ (ತ್ಯ) ವಾರ = ಕ್ರಿ. ಶ. ೧೧೨೭ ಫೆಬ್ರುವರಿ ೨೦ ನೆಯ ತಾರೀಕು ಆದಿತ್ಯವಾರ ತಾನು ಪಟ್ಟಾಭಿಷಿಕ್ತನಾದಂದು ಆ ಭಟ್ಟರು ಹೇಳಿದ ಹೊತ್ತಿನಲ್ಲಿ ಬೆಳಸಿದ ವಿಜಯ ಯಾತ್ರೆಯನ್ನು ಗೆಲುವೊಗದಿಂದ ಮುಗಿಸಿ ಬಂದುದನ್ನು ನೆನವರಿಸಿ, ಆ ಮಹೋತ್ಸವದ ಹೊತ್ತಿಗೆ ಅವರಿಗೆ ಈ ಶಾಸನದಲ್ಲಿ ಹೇಳಿದ ದತ್ತಿಯನ್ನು ಬಿಟ್ಟನು.

ಈ ಪೊಟ್ಟಲಕೆರೆಯ ಶಾಸನವು ಭೂಲೋಕಮಲ್ಲನ ಮೊತ್ತಮೊದಲನೆಯ ಶಾಸನವಾಗಿರಬೇಕೆಂದು ಮೇಲೆ ಕಂಡಿರುವೆವಷ್ಟೆ. ಚಾ. ವಿ. ೫೨ ನೆಯ ವರ್ಷದ ಪರಾಭವ ಸಂ|| ಫಾಲ್ಗುಣ ಶುದ್ಧ ೧೪ ಸೋಮವಾರ = ಕ್ರಿ. ಶ. ೧೧೨೭ ಫೆಬ್ರುವರಿ ೨೭ ನೆಯ ತಾರೀಕು (ಸೋಮವಾರವಲ್ಲ) ಆದಿತ್ಯವಾರದ ಉದ್ರಿಯ ಶಿಲಾಶಾಸನ ೧೬೬ ಆ ಮೇಲಿನದು. ಇದರಲ್ಲಿ ಚಾ. ವಿ. ೫೧ ನೆಯ ಪರಾಭವ ಸಂ|| ವನ್ನು ೫೨ನೆಯದು ಎಂದುದೂ ನೇರಾದ ಆದಿತ್ಯವಾರವನ್ನು ಮಾರನೆಯ ಸೋಮವಾರವೆಂದುದೂ ಒಕ್ಕಣಿಗನ ತಪ್ಪು.

ಭೂಲೋಕಮಲ್ಲನ ಅಂಕಿತನಾಮ III ಸೋಮೇಶ್ವರನೆಂದು. ಪಡುವಣ ಚಾಳುಕ್ಯರೆಲ್ಲರಿಗೂ ಎಂಬಂತೆ ಮಲ್ಲ ಎಂಬ ಶಬ್ದದಿಂದ ಅಂತ್ಯ

---

೧೬. Ec. VIII, ಸೊರಬ ೧೪೧.

ವಾಗುವ (ಉದಾ. ಆಹವಮಲ್ಲ–ತ್ರೈಲಪ, ಜಗದೇಕಮಲ್ಲ–ಜಯಸಿಂಹ, ತ್ರೈಲೋಕ್ಯಮಲ್ಲ–I ಸೋಮೇಶ್ವರ, ಇ.) ಒಂದಲ್ಲ ಒಂದು ಬಿರುದು ಇದ್ದಂತೆ ಭೂಲೋಕಮಲ್ಲ ಎಂಬುದು ಆತನ ಬಿರುದಷ್ಟೆ. ಅದಲ್ಲದೆ ಆತನಿಗೆ ಸರ್ವಜ್ಞ ಚಕ್ರವರ್ತಿ ಎಂದೂ ಮತ್ತೊಂದು ಬಿರುದಿತ್ತು. ಭೂಲೋಕಮಲ್ಲನು 'ಅಭಿಲಾಷಿತಾರ್ಥ ಚಿಂತಾಮಣಿ' ಅಥವಾ ಮಾನಸೋಲ್ಲಾಸ' ಎಂಬ ಉತ್ತಮವಾದೊಂದು ಸಂಸ್ಕೃತ ಗ್ರಂಥವನ್ನು ರಚಿಸುವಂತೆ ತಿಳಿಯುತ್ತದೆ. ೧೯* ಅದರ ಆ ಮುಖದಲ್ಲಿ (ಪ್ರಕರಣ I, ಅಧ್ಯಾಯ ೧) ಹೇಗೆಂದರೆ—

ಚಾಲುಕ್ಯವಂಶತಿಲಕಃ ಶ್ರೀ ಸೋಮೇಶ್ವರ ಭೂಪತಿಃ |
ಕುರುತೇ ಮಾನಸೋಲ್ಲಾಸಂ ಶಾಸ್ತ್ರಂ ವಿಶ್ವೋಪಕಾರಕಮ್ ||೧೦||

ಅದನ್ನಾತನು (I. ೨–೬–೬೫) ಶಾ. ಶ. ೧೦೫೧ನೆಯ ಸೌಮ್ಯ ಸಂ. ದಲ್ಲಿ= ಕ್ರಿ. ಶ. ೧೧೨೯ರಲ್ಲಿ ಬರೆಯುತ್ತಿರಬೇಕು. ಅದೊಂದು ವಿಶ್ವಕೋಶದಂತಿದೆ. ಹೆಚ್ಚು ಕಡಿಮೆ ಅದರಲ್ಲಿ ಇಲ್ಲದ ವಿಷಯವಿಲ್ಲ. ಆ ಕಾವ್ಯದಲ್ಲಿರುವ (I.೧) ಈ ಆದಿತ್ಯಸ್ತುತಿಯನ್ನೂ—

ಯಸ್ಯಂತತಂ ತ್ವಿಹ ತಮಃಪಟಲಂ ನಿಗೀರ್ಯ
ಸಾರ್ವತ್ರಿಕಂ ಕರಶೈರ್ವಮತಿ ಪ್ರಕಾಶಮ್|
ತಂ ವಿಶ್ವರಕ್ಷಣ ಕೃತಕ್ಷಣಮೇಕಮೂರಾ
ದಾದಿತ್ಯಮುದ್ಭುತ ವಿಲಾಸಕರಂ ನಮಾಮಿ || ೭ ||

ಈ ಪೊಟ್ಟಲಕೆರೆಯ ಶಾಸನದ ಅವತಾರಿಕೆಯ ಸೂರ್ಯಸ್ತುತಿಯನ್ನೂ ಒಡಬಗೆವಂದು, ಭೂಲೋಕಮಲ್ಲನು ಸೂರ್ಯೋಪಾಸಕನಾಗಿದ್ದಾನೆ? ಎನಿಸುತ್ತದೆ.

---

೧೭* ಈ ಕಾವ್ಯದ ೧–೩ ಪ್ರಕರಣಗಳು ಮೈಸೂರು ವಿಶ್ವವಿದ್ಯಾಲಯದ Oriental Library Publications ನ ಸಂಸ್ಕೃತ ಗ್ರಂಥಮಾಲೆಯಲ್ಲಿ ನಂ. ೬೯ನೆಯ ಪುಸ್ತಕವಾಗಿ ಪ್ರಕಟಿತವಾಗಿವೆ. (೧೯೨೬)

೧೮* FKD, ಪು. ೩೫೭–೫೮.

ಇನ್ನು ಈ ಶಾಸನದಲ್ಲಿ ಹೆಸರಿಸಲ್ಪಟ್ಟವರಲ್ಲಿ—

(೧) 'ಜೋಯಿಸಿಗ ನನ್ನೆಯಭಟ್ಟ'—ಇವನು ಯಾರೆಂದು ತಿಳಿಯದು. ಹೇಗೂ ಇವನು ಮೂಡಣ ಚಾಳುಕ್ಯವಂಶದ ಅರಸನಾದ I ರಾಜರಾಜನರೇಂದ್ರನ (ಕ್ರಿ. ಶ. ೧೦೨೨-೬೩) ಸಮಸಾಮಯಿಕನಾದ ಹಾಗೂ ತೆಲುಗು ಮಹಾಭಾರತದ ಆದಿಪರ್ವ, ಸಭಾಪರ್ವಗಳನ್ನೂ ಅರಣ್ಯಪರ್ವದ ಆದಿಭಾಗವನ್ನೂ ರಚಿಸಿದ ಆಂಧ್ರಕವಿತ್ರಯದ ಆದ್ಯ ಕವಿಯಾದ ನನ್ನಯ ಭಟ್ಟನಲ್ಲ.

(೨) 'ದಂಡನಾಯಕಂ ಅಡಪದ ಬಂಮಣಯ್ಯ'—ಈತನ ಹೆಸರು ಭೂಲೋಕಮಲ್ಲನ ಮಗನೂ ಉತ್ತರಾಧಿಕಾರಿಯೂ ಆದ ಪೆರ್ಮ II ಜಗದೇಕಮಲ್ಲನ (ಕ್ರಿ. ಶ. ೧೧೩೮-೫೦) ಶಾಸನಗಳಲ್ಲಿ ಬರುತ್ತದೆ. ೧೯* ಅಲ್ಲಿ ಆತನನ್ನು ಅವನ ಹಿರಿಯ ದಂಡನಾಯಕನೆಂದೂ, ಈತನು ಅವನ ಕೆಯ್ಕೆಳಗೆ ಮೊದಲು ಬನವಾಸಿ ೧೨೦೦೦ ಪ್ರಾಂತ್ಯವನ್ನೂ, ಅನಂತರ ಆತನ ಮಹಾಸಾಮಂತಾಧಿಪತಿಯಾಗಿ ತರ್ದವಾಡಿ ೧೦೦೦, ಬೆಳ್ವೊಲ ೬೦೦, ಹಾನುಂಗಲ್ಲ ೫೦೦ ಮತ್ತು ಹಲಸಿಗೆ ೧೨೦೦೦ಗಳ ದೇಶವನ್ನೂ ಆಳುತ್ತಿದ್ದನೆಂದು ಅವುಗಳಲ್ಲಿ ಹೇಳಿದೆ. ಈತನು ಭೂಲೋಕಮಲ್ಲನ ಆಳಿಕೆಯ ಮೊತ್ತಮೊದಲನೆಯ ವರ್ಷದಲ್ಲೇ ಆತನ ದಂಡನಾಯಕನಾಗಿದ್ದನೆಂದು ಈ ಶಾಸನದಿಂದ ತಿಳಿಯುವುದರಿಂದ, ಪ್ರಾಯಶಃ ಅವನ ತಂದೆಯಾದ ತ್ರಿಭುವನಮಲ್ಲನ ಕಾಲದಿಂದಲೇ ಆ ಪದವಿಗೆ ಏರಿರಬೇಕು.

(೩) 'ಭಾಸ್ಕರ ಸರಸಕವೀಂದ್ರ'—ಕ್ರಿ. ಶ. ೧೪೨೪ರಲ್ಲಿ ಕನ್ನಡ 'ಜೀವಂಧರ ಚರಿತೆ' ಎಂಬ ಭಾಮಿನೀಷಟ್ಪದಿಯ ಕಾವ್ಯವನ್ನು ರಚಿಸಿದ ("ಬಸವಣಾಂಕಸುತ"ನಾದ ಭಾಸ್ಕರನೆಂಬ ಕವಿ ಇದ್ದನು. ೧೯* ಆದರೆ ಈತನು ಆತನಲ್ಲ. ಬೇರೆ ಯಾವನೋ ತಿಳಿಯದು.

---

೧೯* Descriptive Cotalogue of Kannada Manuscripts in the Government Oriental Mss. Library, Madras [೧೯೩೯], III. D. Nos. 318-476 ನಂ. ೩೪೩, ಪು. ೫೪೫-೫೫೦.

೨೦* EC. VII, ಶಿವಮೊಗ್ಗ ೯೯.

ಮಿಕ್ಕ ಮಲ್ಲಿಯಣ್ಣ, ವಜ್ಜಪಯ್ಯ, ಮಲ್ಲಣ್ಣ ಭಟ್ಟ, ಭಾಸ್ಕರಯ್ಯ—ಇವರನ್ನು ಕುರಿತು ಏನೂ ತಿಳಿಯದು.

ನಾನು ಬಲ್ಲಷ್ಟರ ಮಟ್ಟಿಗೆ ಭೂಲೋಕಮಲ್ಲನ ಆಳಿಕೆಯ ಮಿಕ್ಕ ಶಾಸನಗಳ ತೇದಿಗಳು ಹೀಗಿವೆ—

(೧) ಚಾ. ವಿ. ವರ್ಷ ೫೧ ನೆಯ ಪ್ಲವಂಗ ಸಂ|| ವೈಶಾಖ ಶು|| ೧೫ ಆದಿತ್ಯವಾರ ಚಂದ್ರಗ್ರಹಣ ೬೦* ಕ್ರಿ. ಶ. ೧೧೨೦ ರಿಂದ ೧೧೨೯ರ ವರೆಗೆ ವೈಶಾಖ ಶು|| ೧೫ ಯಂದು ಗ್ರಹಣವಿಲ್ಲದುದರಿಂದ, ಇದು ಚಾ. ವಿ. ೫೧ ನೆಯ ವರ್ಷದ ಶಾಸನವಲ್ಲ. ಇದರಲ್ಲಿ ಹೇಳಿರುವ ಸಂವತ್ಸರದ ಹೆಸರು ಸರಿಯಾದರೆ, ಇದು ಶಾ. ಶ. ವರ್ತಮಾನ ೧೦೫೦ ನೆಯ ಪ್ಲವಂಗ ಸಂ|| ಜ್ಯೇಷ್ಠ ಶು|| ೧೫ (ಆದಿತ್ಯವಾರವಲ್ಲ) ಶುಕ್ರವಾರದ, ಅಂದರೆ ಕ್ರಿ. ಶ. ೧೧೨೭ ಮೇ ೨೭ ನೆಯ ತಾರೀಕು ಶುಕ್ರವಾರದ ಚಂದ್ರಗ್ರಹಣವಾಗಿರಬೇಕು; ಅಥವಾ ಈ ಶಾಸನದಲ್ಲಿ ಹೇಳಿರುವ ವಾರದ ಹೆಸರೂ (ಚಾ. ವಿ.) ೫೨ (ನೆಯ ವರ್ಷ) ಎಂಬ ಸಂಖ್ಯೆಯೂ ಸರಿಯಾದರೆ, ಇದು ಶಾ. ಶ. ವರ್ತಮಾನ ೧೦೫೧ನೆಯ ಕೀಲಕ ಸಂ = ಜ್ಯೇಷ್ಠ ಶು|| ೧೫ ಆದಿತ್ಯವಾರದ ಚಂದ್ರಗ್ರಹಣವಾಗಿರಬೇಕು. ಹೇಗೂ ಈ ಶಾಶನದ ತೇದಿಯುಲ್ಲಿ ತುಂಬ ತೊಡಕಿದೆ.

(೨) ಚಾಳುಕ್ಯ ಚಕ್ರವರ್ತಿ ಸೋಮೇಶ್ವರದೇವ ವರ್ಷದ ೨ನೆಯ ಪ್ಲವಂಗ ಸಂ|| ಕಾರ್ತಿಕ ಬ|| ೫ ಶುಕ್ರವಾರ ೬೧* = ಕ್ರಿ. ಶ. ೧೧೨೭ ಅಕ್ಟೋಬರ ೨೭ನೆಯ ತಾರೀಕು (ಶುಕ್ರವಾರವಲ್ಲ) ಗುರುವಾರ. ಆದರೆ ಆ ಸಂವತ್ಸರದಲ್ಲಿ ಅದೇ ಮುಂದಣ ಮಾರ್ಗಶಿರ ಬ| ೫ ಅದೇ ಇಸವಿಯ ನವಂಬರ ೨೫ನೆಯ ತಾರೀಕು ಶುಕ್ರವಾರ ಬಂದಿತ್ತು. ಇದರ ತೇದಿಯಲ್ಲಿಯೂ ತೊಡಕಿದೆ.

(೩) ಚಾಳುಕ್ಯ ಭೂಲೋಕವರ್ಷದ ೩ನೆಯ ಕೀಲಕ ಸಂ| ಮಾಘದ ಮಾವಾಸ್ಯೆ ಬೃಹಸ್ಪತಿವಾರ = ಕ್ರಿ. ಶ. ೧೧೨೮ ಫೆಬ್ರುವರಿ ೨ನೆಯ ತಾರೀಕು ಗುರುವಾರ. ಇಲ್ಲಿಯೂ ತೊಡಕಿದೆ, ಏಕೆಂದರೆ ಆ ಕೀಲಕ ಸಂ|| (ಕ್ರಿ. ಶ. ೧೧೨೮-೨೯) ಮಾಘದ ಅಮಾವಾಸ್ಯೆ ಕ್ರಿ. ಶ. ೧೧೨೯ನೆಯ ಫೆಬ್ರುವರಿಯಲ್ಲಿ

ಬರಬೇಕಾದ ಕಾರಣ, ಈ ಶಾಸನದಲ್ಲಿ ಹೇಳಿರುವ ಸಂವತ್ಸರವು ನೇರಾಗಿ ಪ್ಲವಂಗವಲ್ಲದೆ ( = ಕ್ರಿ. ಶ. ೧೧೨೭-೨೮) ಕೀಲಕವಲ್ಲ.

(೪) ಭೂಲೋಕಮಲ್ಲ ವರ್ಷದ ೪ನೆಯ ಸೌಮ್ಯ ಸಂ। ಚೈತ್ರ ಶು। ೧೩ ಆದಿತ್ಯವಾರ, ಸಂಕ್ರಾಂತಿ ೨೨* = ಕ್ರಿ. ಶ. ೧೧೩೦ನೆಯ ಮಾರ್ಚಿ ೨೩ ಆದಿತ್ಯವಾರ, ಮರುದಿನ ೨೪ನೆಯ ತಾರೀಕಿನಂದು ಮೇಷ ಸಂಕ್ರಾಂತಿ ಇತ್ತು. ಇಲ್ಲಿಯೂ ತಪ್ಪಿದೆ, ಏಕೆಂದರೆ ಸೌಮ್ಯ ಸಂ। ವು, ಕ್ರಿ. ಶ. ೧೧೨೯-೩೦ ಅಲ್ಲದೆ ೧೧೩೦-೩೧ ಅಲ್ಲ.

(೫) ಭೂಲೋಕಮಲ್ಲ ವರ್ಷ ೯ನೆಯ ಸೌಮ್ಯ ಸಂ। ಮಾಘ ಬ। ೩೦ ಸೂರ್ಯಗ್ರಹಣ ೨೩* ಕ್ರಿ. ಶ. ೧೧೩೪ ಜನವರಿ ೨೬ ಶುಕ್ರವಾರ. ಇಲ್ಲಿ ಸೌಮ್ಯವೆಂದಿರುವ ಸಂ। ಸೌಮ್ಯವಲ್ಲ (ಕ್ರಿ. ಶ. ೧೧೨೯-೩೦) ಅಲ್ಲಿಂದ ೪ ವರ್ಷಗಳಿಗೆ ಈಚೆಯ ಪ್ರಮಾದೀಚ (ಕ್ರಿ. ಶ. ೧೧೩೩-೩೪), ಅದೂ ಅವನ ಆಳಿಕೆಯ ೯ನೆಯದಲ್ಲ ೮ನೆಯ ವರ್ಷ.

(೬) ಭೂಲೋಕಮಲ್ಲನ ೫ ನೆಯ ಸಾಧಾರಣ ಸಂ। ಮಾಘದ ಅಮಾವಾಸ್ಯೆ, ಸೋಮವಾರ, ಉತ್ತರಾಯಣ ಸಂಕ್ರಾಂತಿ ೨೪.* ಇದು ಪ್ರಾಯಶಃ ಕ್ರಿ. ಶ. ೧೧೩೦ ಫೆಬ್ರವರಿ ೯ನೆಯ ಆದಿತ್ಯವಾರದಂದಿನ ಮಾಘ ಬ। ಅಮಾವಾಸ್ಯೆಯ ಮಾರನೆಯ ೧೦ನೆಯ ತಾರೀಕಿನ ಸೋಮವಾರವಾಗಿರಬೇಕು. ಇಲ್ಲಿಯೂ ತಪ್ಪಿದೆ.

---

೨೧* ಅದೇ, ಶಿಕಾರಿಪುರ ೨೮೦.

೨೨* Ec VIII ಸೊರಬ ೩೫೯.

೨೩* ಅದೇ ಸೊರಬ ೩೧೦.

೨೪* South Indian Epigraphy Report (SIER) for 1926-27, Appendix F, ನಂ ೨೧೨, ಪು. ೧೬.

ಹಾಗೂ ಉತ್ತರಾಯಣ ಸಂಕ್ರಾಂತಿ ಮಾಘ ಬ|| ಯಂದು ಬರುವ ಸಂಭವ ವಿಲ್ಲ.

(೭) ಚಾ. ವಿ. ವರ್ಷ ೫೬ನೆಯ ವಿರೋಧಿಕೃತ್ ಸಂ|| ಆಷಾಢದ ಅಮಾವಾಸ್ಯೆ, ದಕ್ಷಿಣಾಯನ ಸಂಕ್ರಮಣ ೨೫* = ೧೧೩೧ ಜೂನು ೨೬ ನೆಯ ತಾರೀಕು ಶುಕ್ರವಾರದಂದಿನ ಅಧಿಕ ಆಷಾಢ ಬ| ೩೦, ಅಂದು ದಕ್ಷಿಣಾಯನ ಆರಂಭಿಸುವ ಕರ್ಕಾಟಕ ಸಂಕ್ರಾಂತಿಯೂ ಇತ್ತು.

(೮) ಶಾ. ಶ. ೧೦೫೪ ಅಲ್ಲ, (೧೦೫೩) ವಿರೋಧಿಕೃತ್ ಸಂ|. ಕಾರ್ತಿಕ ಶು| ೩ ವಡ್ಡವಾರ ೨೬* ಇದು ಪ್ರಾಯಶಃ ಅದೇ ಸಂ| ದ (ಕಾರ್ತಿಕವಲ್ಲ) ಆಶ್ವಯುಜ ಶು| ೩ ವಡ್ಡ (ಶನಿ)ವಾರ = ಕ್ರಿ. ಶ. ೧೧೩೧ ಸೆಪ್ಟೆಂಬರ್ ೨೬ ನೆಯ ತಾರೀಕು ಶನಿವಾರ ವಾಗಿರಬೇಕೆಂದು ತೋರುತ್ತದೆ.

(೯) ಚಾ. ವಿ. ವರ್ಷ ೫೧ನೆಯ (ಅಲ್ಲ, ೫೯ನೆಯ) ಆನಂದ ಸಂ| ವೈಶಾಖ ಬಹುಳ ಪಾಡಿವ ಬುಧವಾರ ೨೭* = ಕ್ರಿ. ಶ. ೧೧೩೪ ಏಪ್ರಿಲ್ ೧೧ನೆಯ ತಾರೀಕು ಬುಧವಾರ.

(೧೦) ಭೂಲೋಕಮಲ್ಲ ವರ್ಷ ೮ನೆಯ ಆನಂದ ಸಂ| ಪುಷ್ಯ ಶು| ೫ ಸೋಮವಾರ ಉತ್ತರಾಯಣ ಸಂಕ್ರಾಂತಿ ೨೮.* ಇದು ಪ್ರಾಯಶಃ ಪುಷ್ಯ (ಶುದ್ಧವಲ್ಲ) ಬಹುಳ ೫ ಸೋಮವಾರ = ಕ್ರಿ. ಶ. ೧೧೩೩ ಡಿಸೆಂಬರ್ ೧೮

---

೨೫* E. C. VII, ಶಿಕಾರಿಪುರ ೧೩೩

೨೬* E. C. VIII, ಸೊರಬ ೮೦.

೨೭* E. C. VII, ಶಿವಮೊಗ್ಗ ೩೨.

೨೮* SIER, for 1932-33, App-D. ನಂ. ೧೦೪, ಪು. ೧೦೨.

ನೆಯ ಸೋಮವಾರವೆಂದು ಕಾಣುತ್ತದೆ. ಅಂದು ಉತ್ತರಾಯಣ ಸಂಕ್ರಾಂತಿ ಇರಲಿಲ್ಲ. ಮಾತ್ರವಲ್ಲ, ಸಂ| ವೂ ಪ್ರಮಾದೀಚ ಪುಷ್ಯ ಶು| ೫" ಎಂಬುದು "ಪುಷ್ಯ ಶು| ೭" ಎಂಬುದರ ಬಗ್ಗೆ ತಪ್ಪಾಗಿ ಕೆತ್ತಿದ್ದರೆ, ಆ ಆನಂದ ಸಂ| ದ ಪುಷ್ಯ ಶು| ೭ ಕ್ರಿ. ಶ. ೧೧೩೪ನೆಯ ಡಿಶೆಂಬರ್ ೨೪ ನೆಯ ತಾರೀಕು ಸೋಮವಾರದಂದು ಬಂದಿದ್ದು ಅಂದು ಉತ್ತರಾಯಣ ಸಂಕ್ರಾಂತಿಯೂ ಇತ್ತು.

(೧೧) ಭೂಲೋಕಮಲ್ಲ ವರ್ಷದ ೯ನೆಯ ಆನಂದ ಸಂ| ಪುಷ್ಯ ಶು| ೧೧ ಸೋಮವಾರ ಉತ್ತರಾಯಣ ಸಂಕ್ರಾಂತಿ, ೫೯ ಇದಕ್ಕೆ ಸರಿಯಾದ ಇಂಗ್ಲೀಷು ತೇದಿಯನ್ನು ಗೊತ್ತುಹಚ್ಚಲಾಗುವುದಿಲ್ಲ. ಇದರ ಒಕ್ಕಣೆಯಲ್ಲಿ ತಪ್ಪಿದೆ.

(೧೨) ಭೂಲೋಕಮಲ್ಲ ವರ್ಷದ ೧೧ನೆಯ ನಳಸಂ| ಜ್ಯೇಷ್ಠ ಶು| ೩ ಸೋಮವಾರ, ಸಂಕ್ರಾಂತಿ ೩೦* = ೧೧೩೭ ಮೇ ೨೪ ಸೋಮವಾರ ಮಿಥುನ ಸಂಕ್ರಾಂತಿ. ಇಲ್ಲಿ ಸಂ| ನಳವಲ್ಲ (ಕ್ರಿ. ಶ. ೧೧೩೬-೩೭), ಅದರ ಮಾರನೆಯ ಪಿಂಗಳ (ಕ್ರಿ. ಶ. ೧೧೩೭-೩೮), ಎಂದಾಗಬೇಕು.

(೧೩) ಭೂಲೋಕನವರ್ಷದ ಕಾಳಯುಕ್ತಿ ಸಂ| ಕಾರ್ತಿಕ ಶು| ೫ ಬೃಹಸ್ಪತಿವಾರ ೩೧* = ಕ್ರಿ. ಶ. ೧೧೩೭ ಅಕ್ಟೋಬರ್ ೨೧ ಗುರುವಾರ. ಇಲ್ಲಿಯೂ ಸಂ| ಕಾಳಯುಕ್ತಿ [ಕ್ರಿ. ಶ. ೧೧೦೮-೩೯] ಅಲ್ಲ, ಅದರ ಹಿಂದಣ ಪಿಂಗಳ [ಕ್ರಿ. ಶ. ೧೧೩೭-೩೮] ಎಂದಾಗಬೇಕು.

(೧೪) ಭೂಲೋಕಮಲ್ಲ ವರ್ಷದ ೧೩ನೆಯ ಕಾಳಯುಕ್ತಿ ಸಂ| ಅಕ್ಷಯ ತದಿಗೆಯ ಅಮಾವಾಸ್ಯೆ ೩೨* = ಕ್ರಿ. ಶ. ೧೧೩೮ ಏಪ್ರಿಲ್ ೧೧ ಸೋಮವಾರದ ಚೈತ್ರ ಬ| ೩೦.

(೧೫) ಚಾಳುಕ್ಯ ಭೂಲೋಕವರ್ಷ ೧೪ ಕಾಳಯುಕ್ತ ಸಂ| ವೈಶಾಖ ಪೂರ್ಣಮಿ ಕುಜವಾರ ಚಂದ್ರಗ್ರಹಣ ೩೩* = ಕ್ರಿ. ಶ. ೧೧೩೮ ಏಪ್ರಿಲ್ ೨೬ ಕುಜ ವಾರದಂದಿನ ಚಂದ್ರಗ್ರಹಣ.

[೧೬] ಭೂಲೋಕಮಲ್ಲ ವರ್ಷದ ೧೩ ಕಾಳಯುಕ್ತಿ ಸಂ| ಆಶ್ವಯುಜ ಶು| ೧೦ ಗುರುವಾರ ೩೪* =ಕ್ರಿ. ಶ. ೧೧೩೮ ಸೆಪ್ಟೆಂಬರ್ ೧೫ ನೆಯ ತಾರೀಕು ಗುರುವಾರದಂದಿನ ಸಾಗದ್ದೆಯ ವೀರಕಲ್ಲು.

[೧೭] ಭೂಲೋಕಮಲ್ಲ ವರ್ಷದ ೧೩ನೆಯ ಶಾ. ಶ. ೧೦೬೧ ವರ್ತಮಾನ ಕೀಲಕ ಸಂ|| ದ ಮಾರ್ಗಶಿರ, ಅಂದರೆ ಕ್ರಿ. ಶ ೧೧೩೮ನೆಯ ನವೆಂಬರ್ ತಿಂಗಳಲ್ಲಿ ತೇದಿಸಲ್ಪಟ್ಟ ಆತನದೊಂದು ಶಾಸನ ಲಕ್ಷ್ಮೇಶ್ವರದ ಸೋಮೇಶ್ವರ ದೇವಾಲಯದಲ್ಲಿ ಇದೆಯಂತೆ. ೩೫*

ಇವಲ್ಲದೆ ತೇದಿಯ ಭಾಗ ಒಡೆದು ಹೋಗಿರುವ ಇನ್ನೂ ಕೆಲವು ಶಾಸನಗಳಿವೆ. ಇವೆಲ್ಲ ಶಾಸನಗಳಲ್ಲಿ ಅಥವಾ ಅವಲ್ಲಿ ಹೆಚ್ಚಿನವಲ್ಲಿ ಆಯಾ ಸಂವತ್ಸರಗಳ ಹೆಸರುಗಳೂ, ಅವಕ್ಕೆ ಸರಿಯಾದ ಶಕವರ್ಷಗಳ ಹಾಗೂ ಭೂಲೋಕಮಲ್ಲನ ಆಳಿಕೆಯ ವರ್ಷಗಳ ಸಂಖ್ಯೆಗಳೂ ಎಷ್ಟು ವಿಷಮವಾಗಿವೆ ಎಂಬುದನ್ನು ಗಮನಿಸಬಹುದು. ಆದರೆ ಇದರಲ್ಲಿ ಸೋಜಿಗ

---

೨೯* ಅದೇ, App, D. ನಂ. ೧೮, ಪು ೯೩.

೩೦* = ಅದೇ ನಂ. ೧೮೭, ಪು ೧೧೯.

೩೧* = E.C. VIII, ಸೊರಬ ೨೮೯.

೩೨* SIER for 1926-27, App. F. ನಂ. ೧೯೯, ಪು ೧೫.

೩೩ ಅದೇ, App. F, ನಂ. ೧೨೫, ಪು. ೧೦.

೩೪* EC. VIII, ಸೊರಬ ೫೧೯.

ವೇನೂ ಇಲ್ಲ; ಪಡುವಣ ಚಾಳುಕ್ಯರ ಕಾಲದ ಹೆಚ್ಚಿನ ಶಾಸನಗಳ ಅವಸ್ಥೆಯೇ ಹೀಗೆ, ಅವಲ್ಲ ತೇದಿಯ ಭಾಗಗಳು ಇದೇ ರೀತಿಯಾಗಿ ತೀರ ವಿಷಮವಾಗಿವೆ.

ರಾಯಭಾಗದ ಶಿಲಾಶಾಸನದಿಂದ ಕ್ರಿ. ಶ. ೧೧೩೯–೪೦ ನೆಯ ಸಿದ್ಧಾರ್ಥಿಸಂವತ್ಸರವು ಭೂಲೋಕಮಲ್ಲನ ಮಗನೂ ಉತ್ತರಾಧಿಕಾರಿಯೂ ಆದ ಪೆರ್ಮ ii ಜಗದೇಕಮಲ್ಲನ ಆಳಿಕೆಯ ೨ನೆಯ ವರ್ಷವೆಂದು ತಿಳಿಯುತ್ತದೆ. ೩೬* ಹಾಗೂ ಮೇಲೆ ಉದ್ಧರಿಸುವ ಶಾ. ಶ. ೧೦೬೦ ಕಾಳಯುಕ್ತ ಸಂ॥ ಮಾಘ ಶು॥ ೧೦ ಬೃಹಸ್ಪತಿವಾರ = ಕ್ರಿ. ಶ. ೧೧೩೯ ಜನವರಿ ೧೨ನೇ ತಾರೀಕು ಗುರುವಾರದ ಉದ್ರಿಯ ಶಿಲಾಶಾಸನದಲ್ಲಿಯ ೩೭* 'ಭೂಲೋಕಮಲ್ಲಂ ವಿಭುಸಲೆ ಜಗದೇಕಮಲ್ಲನಾಳ್ದಂ ಧರೆಯನ್' (ಬಂ. ೭–೮) ಎಂಬೀ ಹೇಳಿಕೆಯಿಂದ ಆಗ್ಗೆ II ಜಗದೇಕಮಲ್ಲನು ಚಾಳುಕ್ಯ ಸಿಂಹಾಸನದಲ್ಲಿದ್ದನೆಂದು ತಿಳಿಯುತ್ತದೆ. ಅತಏವ ಭೂಲೋಕಮಲ್ಲನು ಮೇಲೆ ಕಂಡಿರುವ ಸಾಗದ್ದೆಯ ವೀರಕಲ್ಲಿನ ಕ್ರಿ. ಶ ೧೧೩೮ ಸೆಪ್ಟೆಂಬರ್ ೧೫ನೆಯ ತಾರೀಕಿನ, ಅಥವಾ ಮೇಲಣ ಲಕ್ಷ್ಮೇಶ್ವರದ ಶಾಸನದ ಅದೇ ಕ್ರಿ. ಶ. ೧೧೩೮ನೆಯ ನವೆಂಬರ್ ತಿಂಗಳಿನ ಮತ್ತು ಉದ್ರಿಯ ಶಿಲಾಶಾಸನದ ಕ್ರಿ. ಶ. ೧೧೩೯ನೆಯ ಜನವರಿ ೧೨ನೆಯ ತಾರೀಕಿನ ನಡುವೆ ಕಾಲವಾಗಿ ಆತನ ಮಗನಾದ ಪೆರ್ಮ II ಜಗದೇಕಮಲ್ಲನು ಪಟ್ಟವೇರಿರಬೇಕು.

ಆದಕಾರಣ (೧) ಭೂಲೋಕಮಲ್ಲ ದೇ (ವ ವರ್ಷ ೧) ೩ನೆಯ ಕಾಳಯುಕ್ತಾಕ್ಷಿ(ಅಲ್ಲ, ಸಿದ್ಧಾರ್ಥಿ) ಸಂ॥ ಮಾಘ ಶು॥ ೭ ಆದಿ(ತ್ಯ)

---

೩೫* FKD, ಪು. ೪೫೫.

೩೬* ಅದೇ, ಪು. ೪೫೭.

೩೭* EC. VII ಶಿಕಾರಿಪುರ, ೨೬೬

ವಾರ = ಕ್ರಿ. ಶ. ೧೧೪೦ ಜನವರಿ ೨೮ ಆದಿತ್ಯವಾರ ಮಳವಳ್ಳಿಯ ಶಾಸನ ೩೭* (೨) 'ಶ್ರೀಮತು ಸೋಮೇಶ್ವರ ದೇವರು ರಾಜ್ಯಂಗೆಯ್ಯೆ ೧೩ನೆ....... ಫಾಲ್ಗುಣ ಶು|| ೫ ಆದಿ (ತ್ಯ) ವಾರದಂ'ದಿನ, ಅಂದರೆ ಕ್ರಿ. ಶ. ೧೧೩೯ ಫೆಬ್ರುವರಿ ೫ನೆಯ ತಾರೀಕು ಆದಿತ್ಯವಾರದ ಹಿರೇಮಾಗಡಿಯ ಶಿಲಾಸನ, ೩೮* ಹಾಗೂ (೩) 'ಚಾಳುಕ್ಯಾಭರಣಂ ಶ್ರೀಮದ್ಭೂಲೋಕಮಲ್ಲದೇವರ ವಿಜಯರಾಜ್ಯ...... ಸಲುತ್ತಮಿರೆ' ಎಂದಿರುವ ಸಿದ್ಧಾರ್ಥಿ ಸಂ|| ಪುಷ್ಯ ಶು|| ೧೩ ಆದಿತ್ಯವಾರ, ಉತ್ತರಾಯಣ ಸಂಕ್ರಾಂತಿ = ಕ್ರಿ. ಶ. ೧೧೪೦ ಡಿಸೆಂಬರ್ ೨೨ನೆಯ ತಾರೀಕು ಆದಿತ್ಯವಾರದ ಬೆಳಗಾಮಿಯ ಶಿಲಾಶಾಸನ ೩೯*—ಈ ಶಾಸನಗಳ ತೇದಿಗಳಲ್ಲಿ ಭೂಲೋಕಮಲ್ಲ ದೇವವರ್ಷ, ಸೋಮೇಶ್ವರ ದೇವರು ರಾಜ್ಯಂಗೆಯ್ಯೆ ಎಂದಿತ್ಯಾದಿ ಇರುವ ಒಕ್ಕಣೆಯನ್ನು ಪರಿಶೀಲಿಸುವಲ್ಲಿ ಆಗ್ಗೆ ಭೂಲೋಕಮಲ್ಲನು ಇದ್ದಿರಬೇಕೆಂದು ಪ್ರಥಮದೃಷ್ಟಿಗೆ ತೋರಿದರೂ, ಅದು ಸರ್ವಥಾ ಸರಿಯಲ್ಲ. ಈ ಶಾಸನಗಳ ಕಾಲದಲ್ಲಿ ಆತನು ಸರ್ವಥಾ ಇದ್ದಿರಲಿಲ್ಲ. ಇವಕ್ಕೆ ೧–೨ ವರ್ಷಗಳ ಹಿಂದೆಯೇ ಆತನು ಕಾಲವಾಗಿದ್ದನು. ಇವುಗಳಲ್ಲೆ ಅಲ್ಲ. ಇವಕ್ಕೆ ಮತ್ತೂ ಈಚೆಯ ಕೆಲವು ಶಾಸನಗಳಲ್ಲೂ ಆಳರಸನೆಂದು ಅವನ ಹೆಸರಿದೆ! ಉದಾ–'ಚಾಳುಕ್ಯಾಭರಣ ಶ್ರೀಮತು ಭೂಲೋಕಮಲ್ಲದೇವರ ವಿಜಯ ರಾಜ್ಯ........ಸಲುತ್ತಮಿರೆ' ದುಂದುಭಿ ಸಂ|| (ಅಲ್ಲ, ರುಧಿರೋದ್ಗಾರಿ ಸಂ||) ಪುಷ್ಯಮಾಸದ (ಶುದ್ಧ) ಏಕಾದಶೀ ಸೋಮವಾರ =ಕ್ರಿ ಶ. ೧೧೪೩ನೆಯ ಡಿಸೆಂಬರ್ ೨೦ನೆಯ ತಾರೀಕು ಸೋಮವಾರ ಆನೆಕೊಂಡದ ಶಿಲಾಶಾಸನ. ೪೦*

---

೩೮* EC. VIII, ಸೊರಬ, ೪೧೪.

೩೯* EC. VII, ಶಿಕಾರಿಪುರ, ೧೦೨.

೪೦* EC. XI, ದಾವಣಗೆರೆ, ೪.

ಭೂಲೋಕಮಲ್ಲನ ಆಳಿಕೆಯ ಹಲವು ಶಾಸನಗಳ ವರ್ಷಗಳನ್ನು ಭೂಲೋಕ (ಮಲ್ಲ) ವರ್ಷ ಎಂದಿರುವುದರಿಂದ, ಆತನೂ ತನ್ನ ತಂದೆಯಂತೆ ತನ್ನದೊಂದೇ ಶಕವನ್ನು ಸ್ಥಾಪಿಸಿರಬೇಕೆಂದು ತೋರುತ್ತದೆ. ಆದರೆ ಆ ಶಕಗಳೆರಡೂ ಹೆಚ್ಚು ಕಾಲ ಬಾಳಲಿಲ್ಲ. ತ್ರಿಭುವನಮಲ್ಲನ ಚಾ. ವಿ. ವರ್ಷದ ಶಕ ಆತನು ಆಳಿದ ೫೦–೫೧ ವರ್ಷಗಳ ಮೇಲೂ ಕೆಲವು ವರ್ಷ ನಡೆದು ಬಿದ್ದು ಹೋಯಿತಾದರೆ, ಭೂಲೋಕ ವರ್ಷವು ಭೂಲೋಕಮಲ್ಲನ ಆಳಿಕೆಯ ೧೩ ವರ್ಷಗಳ ಬಳಿಕ ಕೆಲ ವರ್ಷಗಳಲ್ಲಿ, ಆತನ ತಂದೆಯ ಶಕದ ಕಾಲುವಾಸಿ ಪ್ರಾಯದಲ್ಲೇ ಕೊನೆಗಂಡಿತು.

---

# ಅನುಬಂಧ

ಭೂಲೋಕಮಲ್ಲನ ಶಾಸನಗಳಲ್ಲಿ ಕ್ರಿ. ಶ. ೧೧೨೭–೨೮ನೆಯ ಪ್ಲವಂಗ ಸಂ|| ವನ್ನು ಅವನ ಆಳಿಕೆಯ ೨ನೆಯ ವರ್ಷವೆಂದೂ, ಆದರ ಬಳಿಕಣ ಕ್ರಿ. ಶ. ೧೧೨೮–೨೯ ನೆಯ ಕೀಲಕ ಸಂ|| ವನ್ನು ೩ನೆಯ ವರ್ಷವೆಂದೂ ಅದೇ ಕ್ರಮದಿಂದ ಮುಂದಣ ಸಂ|| ಗಳನ್ನೂ ಹೇಳಿರುವುದರಿಂದ, ಕ್ರಿ. ಶ. ೧೧೨೬–೨೭ನೆಯ ಪರಾಭವ ಸಂ|| ವು ಆತನ ಆಳಿಕೆಯ ಮೊತ್ತಮೊದಲನೆಯ ವರ್ಷವಾಗಿರಬೇಕು. ಅಂದರೆ ಆ ಪರಾಭವದಲ್ಲೇ ಆತನು ಪಟ್ಟಕ್ಕೆ ಬಂದಿರಬೇಕು. ಹಾಗಾದರೆ ಅದಕ್ಕೆ ಕೊಂಚ ಹಿಂದೆ ಅವನ ತಂದೆ ತ್ರಿಭುವನಮಲ್ಲನು ಕಾಲವಾಗಿರಬೇಕು. ಈಗ, ಮೇಲೆ ಕಂಡಿರುವ ಬಳ್ಳಾರಿ ಜಿಲ್ಲೆಯ ಬಾಗಲಿಯ ಶಾಸನದಿಂದ ೧೨* ಈಚಿಯ ಇವೆರಡು ಶಾಸನಗಳಲ್ಲೂ 'ಚಾಳುಕ್ಯಾಭರಣಂ ಶ್ರೀಮತ್ತ್ರಿಭುವನಮಲ್ಲದೇವರ ವಿಜಯರಾಜ್ಯ ಮುತ್ತರೋತ್ತರಾಭಿವೃದ್ಧಿ' ಯಾಗುತ್ತಿರೆ ಎಂದು ಆಗ್ಗೆ ತ್ರಿಭುವನಮಲ್ಲನು ಆಳುತ್ತಿದ್ದಂತೆ ಹೇಳಿದೆ—

(೧) ಚಾ. ವಿ. ೫೧ನೆಯ ವರ್ಷದ ಪರಾಭವ ಸಂ|| ಪುಷ್ಯ ಶು|| ೧೧ ಸೋಮವಾರ ಉತ್ತರಾಯಣ ಸಂಕ್ರಾಂತಿ = ಕ್ರಿ. ಶ. ೧೧೨೬ನೆಯ ತಾರೀಕು ಆದಿತ್ಯವಾರ ಉತ್ತರಾಯಣ ಸಂಕ್ರಾಂತಿಯು ಮಾರನೆಯ ೨೭

---

೩೮* EC, VIII, ಸೊರಬ. ೪೧೪.

೩೯* EC. VII, ಶಿಕಾರಿಪುರ, ೧೨

೪೦* EC. XI. ದಾವಣಗೆರೆ. ೪.

ನೆಯ ತಾರೀಕು ಸೋಮವಾರದಂದಿನ ಗುಂಜಗನೂರಿನ ಶಿಲಾಶಾಸನ, ೪೧* ಮತ್ತು

(೨) ಚಾ. ವಿ. ವರ್ಷ ೫೧ನೆಯ ಪರಾಭವ ಸಂ|| ಮಾಘ ಶು|| ೫ ಬುಧವಾರ = ಕ್ರಿ. ಶ. ೧೧೨೭ ಜನವರಿ ೧೯ನೆಯ ತಾರೀಕು ಬುಧವಾರ ದಂದಿನ ಚಿಕ್ಕದವತ್ತಿಯ ಶಿಲಾಶಾಸನ. ೪೨*

ಇವು ಕೃತಿಮವೂ ಅಲ್ಲದಿದ್ದರೆ, ಹಾಗೂ ಇವಕ್ಕೆ ಕೊಂಚ ಹಿಂದೆ ತ್ರಿಭುವನಮಲ್ಲನು ತನ್ನ ರಾಜಧಾನಿಯಲ್ಲಿ ಕಾಲವಾದುದನ್ನು ಅರಿಯದೆ ಅಲ್ಲಿಂದ ಸಾಕಷ್ಟು ದೂರದ ಈ ಶಾಸನಗಳುಳ್ಳ ಆಯಾ ಊರುಗಳಲ್ಲಿ ಆತನು ಇನ್ನೂ ಇದ್ದಾನೆಂಬ ವಿಶ್ವಾಸದಿಂದ, ಇಲ್ಲವೆ ಆತನು ಇದ್ದಾನೊ ಇಲ್ಲವೊ ಎಂದು ತಿಳಿಯಬೇಕಿಂದಿಲ್ಲ ವರ್ತಮಾನ ಪರಿಸ್ಥಿತಿಯ ಅಜ್ಞಾನದಿಂದ, ಅಥವಾ ಹಿಂದಣ ಶಾಸನಗಳ ಒಕ್ಕಣೆಯಿಂದ ತಾನೆ ಹೊಸತವನ್ನು ಬರೆವ ಹಾಗೂ ಕೊರೆವ ಆ ಅಭ್ಯಾಸದ ಬಲದಿಂದ, ಇವು ವಿರಚಿಸಲ್ಪಟ್ಟವೂ ಅಲ್ಲ ವಾದರೆ, ಆತನನ್ನು ಆಳರಸನೆಂದು ಇಷ್ಟು ಸ್ಪಷ್ಟವಾಗಿ ಹೆಸರಿರುವ ಈ

---

೪೧* EC. XI, ಹೊಳಲಕೆರೆ ೬೮. ಡಾ|| ಏ. ವೆಂಕಟ ವೆಂಕಟಸುಬ್ಬಯ್ಯನವರು ಈ ಶಾಸನದ ತೇದಿಯನ್ನು ಕ್ರಿ. ಶ. ೧೧೨೭ ಜನವರಿ ೨೪ನೆಯ ತಾರೀಕು ಸೋಮವಾರಕ್ಕೆ ಸಮೀಕರಿಸಿದುದು (Indian Antiguary, ಸಂ. ೪೮ ಜನವರಿ ೧೯೧೯, ಪು. ೨) ಸರ್ವಥಾ ಸರಿಯಲ್ಲ. ಏಕೆಂದರೆ, ಆ ತಾರೀಕು ಆದೇ ಸಂ|| ದ ಮಾಘ ಶು|| ೧೧ಯ ಹಾಗೂ ಕುಂಭಸಂಕ್ರಾಂತಿಯದಲ್ಲದೆ ಈ ಶಾಸನದಲ್ಲಿ ಹೇಳಿರುವ ದಿನದ್ದಲ್ಲ.

೪೨* SIER, for 1927-28, App. E, ನಂ. ೬೨ ಪು. ೨೪.

ಶಾಸನಗಳಿಂದ ತ್ರಿಭುವನಮಲ್ಲ VI ವಿಕ್ರಮಾದಿತ್ಯನು ಕ್ರಿ. ಶ. ೧೧೨೬ನೆಯ ಜನವರಿಯುವರೆಗೂ ಅಂದರೆ ತನ್ನ ಮಗನ ಪಟ್ಟಾಭಿಷೇಕಕ್ಕೆ ಬರುವ ಒಂದು ತಿಂಗಳವರೆಗೂ ಬದುಕಿದ್ದನೆಂದು ವ್ಯಕ್ತವಾಗುತ್ತದೆ.

ಇವಲ್ಲದೆ ಇವಕ್ಕೂ ಈಚೆಯ ಈ ಕೆಳಗಣ ಕೆಲವು ಶಾಸನಗಳಲ್ಲೂ ಅದೇ ರೀತಿ 'ಚಾಳುಕ್ಯಾಭರಣಂ ಶ್ರೀಮತ್ತ್ರಿಭುವನಮಲ್ಲ (ಪೆರ್ಮ್ಮಾಡಿ) ದೇವರ ವಿಜಯ ರಾಜ್ಯಂ... ....ಸಲುತ್ತಮಿರೆ' ಎಂದು ತ್ರಿಭುವನಮಲ್ಲನನ್ನೇ ಆಳರಸನೆಂದದೆ—

(೧) ಚಾ. ವಿ. ೫೩ನೆಯ ಕೀಲಕ ಸಂ|| ಉತ್ತರಾಯಣ ಸಂಕ್ರಾಂತಿ = ಕ್ರಿ. ಶ. ೧೧೨೮ ನೆಯ ಡಿಸೆಂಬರ್‌ನ ಕೊನೆಯ ವಾರದ ಶಾಬನೂರಿನ ಶಿಲಾಶಾಸನ, ೪೩*

(೨) ಶಕವರ್ಷ (ವರ್ತಮಾನ) ೧೦೬೦ ಪಿಂಗಳ ಸಂ|| ಪುಷ್ಯ ಶು|| ೧೦ (ಅಲ್ಲ, ೧೨) ಆದಿ[ತ್ಯ]ವಾರ, ಉತ್ತರಾಯಣ ಸಂಕ್ರಾಂತಿ ಕ್ರಿ. ಶ. ೧೧೩೭ ಡಿಸೆಂಬರ್ ೨೬ನೆಯ ತಾರೀಕು ಆದಿತ್ಯವಾರ, ಉತ್ತರಾಯಣ ಸಂಕ್ರಾಂತಿ (ತಿಥಿ ಮಾತ್ರ ೧೦ ಅಲ್ಲ, ೧೨ ಎಂದಾಗಬೇಕು) ಅಂದಿನ ಸಿಂದಗಿರಿಯ ಬಸ್ತಿಯಲ್ಲಿಯ ಶಿಲಾಶಾಸನ. ೪೪*

(೩) ಶಕ (ಗತ) ೧೦೬೦ ಕಾಲಯುಕ್ತ ಸಂ|| ವೈಶಾಖ ಶು|| ೧೦ ಬೃಹಸ್ಪತಿವಾರ = ಕ್ರಿ. ಶ. ೧೧೩೮ ಏಪ್ರಿಲ್ ೨೧ ಗುರುವಾರದಂದಿನ ಹಾರನಹಳ್ಳಿಯ ಶಿಲಾಶಾಸನ. ೪೫*

---

೪೩* EC. XI, ದಾವಣಗೆರೆ, ೯೦.

೪೪* EC. XI, ಚಿಕ್ಕಮಗಳೂರು, ೧೬೧.

೪೫* ED. V, ಅರಸಿಕೆರೆ, ೭೪.

೪೬* ಅದೇ, ಹಾಸನ, ೧೧೪.

(೪) ಶಕ ೧೦೬೧ ಸಿದ್ಧಾರ್ಥಿ ಸಂ॥ ಪುಷ್ಯ ಶು॥ ೫ ಸೋಮ (? ಸೌಮ್ಯ) ವಾರ, ಉತ್ತರಾಯಣ ಸಂಕ್ರಾಂತಿ = ಕ್ರಿ. ಶ. ೧೧೩೯ ಡಿಸೆಂಬರ್ ೨೭ನೆಯ ತಾರೀಕು ಬುಧ ( = ಸೌಮ್ಯ) ವಾರದಂದಿನ ಪೂಮಗಾವೆಯ ಶಿಲಾಶಾಸನ. ೪೬೫

ಆದರೆ ಇವಲ್ಲಿ ಯಾವೊಂದು ಶಾಸನದಲ್ಲಿಯ ಆ ಹೇಳಿಕೆಯೂ ನೇರಲ್ಲ. ಏಕೆಂದರೆ, ಕ್ರಿ. ಶ. ೧೧೨೭ನೆಯ ಫೆಬ್ರವರಿಯಲ್ಲಿ ತ್ರಿಭುವನಮಲ್ಲನ ಮಗನಾದ ಭೂಲೋಕಮಲ್ಲನು ಪಟ್ಟಾಭಿಷಕ್ತನಾದನೆಂದು ಪೊಟ್ಟಲಕೆರೆಯ ಶಾಸನದಿಂದಲೂ, ಆತನು ಕ್ರಿ. ಶ. ೧೧೨೭ ರಿಂದ ೧೧೩೮ರ ವರೆಗೂ ಆಳುತಿದ್ದನೆಂದು ಅವನ ಮಿಕ್ಕ ಎಷ್ಟೋ ಶಾಸನಗಳಿಂದಲೂ ಇಷ್ಟು ಪ್ರತ್ಯಕ್ಷವಿರುವಲ್ಲಿ, ತ್ರಿಭುವನಮಲ್ಲನು ತನ್ನ ಮಗನ ಆಳಿಕೆಯ ವರ್ಷಗಳಲ್ಲೇ ಅಲ್ಲ, ಅವನ ಕಾಲಾನಂತರದ ಕ್ರಿ. ಶ. ೧೧೩೯ರಲ್ಲೂ ಆಳುತ್ತಿದ್ದನೆಂದರೆ ಅದು ತೀರ ಅಯಥಾರ್ಥ, ತೀರ ಅಶ್ರದ್ಧೇಯ, (ಹೀಗೆಯೇ ಭೂಲೋಕಮಲ್ಲನು ಕಾಲವಾದ ಮೇಲಣ, ಅತಏವ ಆತನ ಮಗನ ಆಳಿಕೆಯಲ್ಲಿ ಹುಟ್ಟಿದವೆಂದು ವ್ಯಕ್ತವಿರುವ, ಆ ಕೆಲವು ಶಾಸನಗಳಲ್ಲಿ 'ಚಾಳುಕ್ಯಾಭರಣಂ ಶ್ರೀಮತು ಸೋಮೇಶ್ವರ ದೇವರು ರಾಜ್ಯಂಗೆಯ್ಯೆ' ಎಂದಿತ್ಯಾದಿಯಾಗಿ ಭೂಲೋಕಮಲ್ಲನ ಹೆಸರು ಇದೆ. ಅವು ಅತನ ಭೂಲೋಕವರ್ಷದಲ್ಲಿ ತೇದಿಸಲ್ಪಟ್ಟವೆ ಎಂದು ಮೇಲೆ ಕಂಡಿರುವೆವಷ್ಟೆ.) ಅತಏವ ಈ ಮೇಲಣ ನಾಲ್ವರಲ್ಲಿ ಯಾವ ಶಾಸನವೂ ತ್ರಿಭುವನಮಲ್ಲನ ಆಳಿಕೆಯಲ್ಲದ, ಇವೆಲ್ಲವೂ ಆತನ ಕಾಲಾನಂತರದವು. ಹೀಗೆಂಬುದರಿಂದ ಇವೇನೂ ಕೃತ್ರಿಮವಾಗಿರಬೇಕೆಂದಿಲ್ಲ. ಹಿಂದೆ ಹೇಳಿರುವಂತೆ ಅವನು ಕಾಲವಾದುದನ್ನು ಇನ್ನೂ ತಿಳಿಯದೆ ಸದ್ಯದ ಪರಿಸ್ಥಿತಿಯನ್ನು ಅರಿಯದ ಅಜ್ಞಾನದಿಂದಲೊ, ಅಥವಾ ಹಿಂದಣ ಶಾಸನಗಳನ್ನು ನೋಡಿ ಕಣ್ಣು ಮುಚ್ಚಿ ಹೊಸ ಶಾಸನಗಳನ್ನು ನೋಡಿ ಕಣ್ಣು ಮುಚ್ಚಿ ಹೊಸಶಾಸನಗಳನ್ನು ಒಕ್ಕಣಿಸುವ ಅಭ್ಯಾಸದಿಂದಲೊ, ತ್ರಿಭುವನಮಲ್ಲನ ಕಾಲಾನಂತರವೂ ಹಲವು ವರ್ಷಗಳಿಗೆ ಅಲ್ಲಲ್ಲಿಲ್ಲ ಅವನ ಹೆಸರೇ ನೆನವಿನಲ್ಲಿ ಎಚ್ಚರವಾಗಿದ್ದು ತಪ್ಪಾಗಿಯೋ ಆದರೂ ಅದೇ ಕೆತ್ತಿಹೋಗಿರಬೇಕೆಂದು ಊಹಿಸಬಹುದು."

ಶರಣಸಾಹಿತ್ಯದಲ್ಲಿ ೧೯೪೬ನೆಯ ಡಿಸೆಂಬರ್ ಸಂಚಿಕೆಯಲ್ಲಿ ಪ್ರಕಟವಾದ
ಈ ಮೇಲೆಕಂಡ ಶಾಸನವಿಮರ್ಶೆಯನ್ನು ನಮ್ಮ ಕೋರಿಕೆಯಂತೆ
ರಾಷ್ಟ್ರಕವಿ ಶ್ರೀ ಮಂಜೇಶ್ವರ ಗೋವಿಂದ ಪೈ ಅವರು
ಮಾಡಿಕೊಟ್ಟು ಉಪಕಾರಮಾಡಿರುತ್ತಾರೆ. ಹೈದರಾಬಾದಿನ
ಉಸ್ಮಾನಿಯಾ ವಿಶ್ವವಿದ್ಯಾನಿಲಯದ ನಿವೃತ್ತ ಪ್ರಾಧ್ಯಾ
ಪಕರಾದ ಶ್ರೀ ಡಿ. ಕೆ. ಭೀಮಸೇನರಾಯರು ಈ
ಶಾಸನ ನಮಗೆ ದೊರೆಕಲು ನೆರವಾಗಿದ್ದಾರೆ.
ಇದರಲ್ಲಿಈ ಉಭಯರಿಗೂ ನಮ್ಮ ವಂದನೆಗಳು.
ಇದರಲ್ಲಿ ' ಪೊಟ್ಟಲಕೆರೆ ' ಎಲ್ಲಿತ್ತು ಎಂಬುದು
ಬೆಳಕಿಗೆ ಬಂದುದು ಮಹತ್ವವಾದುದು.
ಅಲ್ಲದೆ ಹಲವಾರು ಮಂದಿ ಹೊಸಬರ
ಹೆಸರುಗಳೂ ಕೂಡ ಈ ಶಾಸನ
ದಿಂದ ತಿಳಿದುಬರುವುದು
ಗಮನಾರ್ಹವಾಗಿದೆ.

—ಸಂಪಾದಕ



# ಮೋಡಗಳ ಮಧ್ಯದಲ್ಲಿ!

## ಒಂದು ಹರಟೆ

ಶ್ರೀ ರಾಮಚಂದ್ರನು ಲಂಕೆಯಿಂದ ಅಯೋಧ್ಯೆಗೆ 'ಪುಷ್ಪಕ ವಿಮಾನ'ದಲ್ಲಿ ಪ್ರಯಾಣಮಾಡಿದನು ಎಂಬುದನ್ನು ನಾನು ಕೇವಲ ಬಾಲ್ಯದಲ್ಲಿ ರಾಮಾಯಣದಲ್ಲಿ ಓದಿದೆನು. ಅದೇ ರಾಮಾಯಣದಲ್ಲಿ ದಶರಥನು ಸ್ವರ್ಗಕ್ಕೆ ಹೋಗಿ ಬಂದ ರಥವು ಇಂತಹ ವಿಮಾನವೇ ಆಗಿರಬೇಕು. ಅದೇ ಕಥೆಯಲ್ಲಿ ಕನ್ನಡ ಕುಲದ ಮಾರುತಿಯು ಧನುಷ್ಕೋಟಿಯಿಂದ ಲಂಕೆಗೆ ಹಾರಿದ (?) ಸುದ್ದಿಯನ್ನೂ, ರಾವಣನು ಪಂಚವಟಿಯಿಂದ ಜಾನಕಿಯನ್ನು ವಿಮಾನದಿಂದ ಅಪಹರಿಸಿಕೊಂಡೊಯ್ದ ಕಥೆಯನ್ನೂ ಓದಿದೆನು. ಹೀಗೆ ರಾಮಾಯಣಕಾಲದಲ್ಲಿ ಆಕಾಶಗಮನ, ವಿಮಾನಗಳ ಸಂಚಾರ ಮೇಲಿಂದ ಮೇಲೆ ನಡೆಯುತ್ತಿದ್ದಿರಬೇಕೆಂದು ಆಲೋಚಿಸತೊಡಗಿದೆನು. ಕಾಲಕಳೆದಂತೆ ನಾನು ಓದಿದ ಇನ್ನೂ ಹಲವು ಗ್ರಂಥಗಳಾದ ಮಹಾ ಭಾರತ', 'ಅಭಿಜ್ಞಾನ ಶಾಕುಂತಲ', ವಿಕ್ರಮೋರ್ವಶೀಯ', ಮೊದಲಾದವುಗಳಲ್ಲಿ ಕೂಡ ಈ ವಿಮಾನ ಯಾತ್ರೆಯ ಅಥವಾ ಆಕಾಶ ಗಮನದ ವಿಷಯ ನನಗೆ ಸುಪರಿಚಯವೆನಿಸಿತು.

ಮನುಷ್ಯನು ಸಂಚರಿಸುವುದಕ್ಕೆ ಆಧಾರ ಭೂಮಿ. ಭೂಮಿಯ ಮೇಲೆ ಸಂಚರಿಸುವ, ಗಾಡಿ, ರೈಲು, ಮೋಟಾರು ಮೊದಲಾದ ವಾಹನಗಳಿಗೆ ಭೂಮಿಯು ಆಧಾರ. ಹಾಗೆಯೇ ನೀರಿನಲ್ಲಿ ಸಂಚರಸುವ ಹಡಗು, ದೋಣಿ ಮೊದಲಾದವುಗಳಿಗೆ ಜಲವು ಆಧಾರ. ಆದ್ದರಿಂದ ಭೂ ಮತ್ತು ಜಲ ಪ್ರಯಾಣಗಳಲ್ಲಿ ಆಧಾರ ಆಧೇಯ ಭಾವಗಳು ನಮಗೆ ಸ್ಪಷ್ಟವಾಗಿ ಕಾಣಿಸುತ್ತವೆ. ವಿಷಯವು ಈ ರೀತಿ ಸ್ಪಷ್ಟವಾಗಿರುವಾಗ ನಿರಾಧಾರವಾದ

ಆಕಾಶದಲ್ಲಿ ನಿರಾತಂಕವಾಗಿ ಸಂಚರಿಸುವ ವಿಮಾನಗಳಿಗೆ ಆಧಾರವಾವು ದಿರಬಹುದು ? ಎಂಬ ಯೋಚನೆ ನನಗೆ ಬಹಳ ದಿವಸಗಳಿಂದ ಗಂಟು ಬಿದ್ದಿತು. ಕರ್ಮ-ಧರ್ಮ ಸಂಯೋಗದಿಂದ ನಾನು ಇತ್ತೀಚಿಗೆ ಕರ್ನಾಟಕದ ನೂತನ ಕಲ್ಯಾಣ ಪಟ್ಟದಲ್ಲಿ ವಾಸವಾಗಿ, ಅಲ್ಲಿಯೇ ಸ್ಥಾಪಿತವಾಗಿರುವ ವಿಮಾನ ಕಾರ್ಯಾಲಯ ಮತ್ತು ವಿಮಾನ ನಿಲ್ದಾಣಗಳನ್ನು ಮೇಲಿಂದ ಮೇಲೆ ನೋಡುವ ಅವಕಾಶ ಪ್ರಾಪ್ತವಾದಂತೆಲ್ಲಾ ವಿಮಾನಗಳ ಪರಿಚಯು ನನಗೆ ಹೆಚ್ಚಾಗಿ ಅವುಗಳ ಬಗೆಗೆ ಹೆಚ್ಚು ಕುತೂಹಲವೂ, ಮಮತೆಯೂ ಉಂಟಾಯಿತು. ಪುರಾಣಗಳಲ್ಲಿ ವರ್ಣಿತವಾದ ಪುಷ್ಪಕವಿಮಾನಗಳು ಈಗಿನ ವೈಜ್ಞಾನಿಕ ವಿಮಾನಗಳಂತೆಯೇ ಇರಬೇಕೆಂದು ಆಲೋಚಿಸತೊಡಗಿದೆನು. ಒಮ್ಮೆ ಈ ವಿಮಾನದಲ್ಲಿ ಪ್ರಯಾಣಮಾಡಿ ನನ್ನ ಆಕಾಶ ಪ್ರಯಾಣದ ಆಸೆಯನ್ನು ಈ ಜನ್ಮದಲ್ಲಿಯೇ ಈಡೇರಿಸಿಕೊಂಡು ಪ್ರಸಂಗ ಬಂದರೆ ಗಗನ ಶಾಸ್ತ್ರದಲ್ಲಿಯೂ ನನಗೆ ತಕ್ಕಷ್ಟು ಪರಿಚಯವಿದೆಯೆಂಬ ಹೆಮ್ಮೆಯನ್ನು ಕೊಚ್ಚಿಕೊಳ್ಳಲು ಅವಕಾಶವನ್ನು ಕಲ್ಪಿಸಿಕೊಳ್ಳಬೇಕೆಂದು ಸಂಕಲ್ಪಿಸಿದೆನು. ಆದಕ್ಕೆ ಕಾಲವೂ ಅನುಕೂಲಿಸಿತು.

ದೇವರ ದಯೆಯಿಂದ ನಾನು ಒಮ್ಮೆ ಮೋಡಗಳ ಮಧ್ಯದಲ್ಲಿ ವಿಮಾನ ಯಾತ್ರೆ ಮಾಡುವ ದಿನ ಬಂದೇ ಬಂದಿತು. [ದಿನಾಂಕ ೨೪-೧೨-೧೯೫೦] ಅಂದು ಬೊಂಬಾಯಿ ಪಟ್ಟಣದಲ್ಲಿ ೩೪ನೇ ಕನ್ನಡ ಸಾಹಿತ್ಯ ಸಮ್ಮೇಳನ ಪ್ರಾರಂಭವಾಗಲಿತ್ತು. ಮೊದಮೊದಲು ಹೊಗೆಗಾಡಿಯ ಮೂಲಕ ಗೆಳೆಯರ ಸಂಗಡ ಮುಂಬಯಿಗೆ ಹೊರಡಬೇಕೆಂದಿದ್ದ ನಾನು ಕೆಲವು ಅನಿವಾರ್ಯಗಳಿಂದ ನಿಲ್ಲಬೇಕಾಯಿತು. ಕನ್ನಡದ ಹುಚ್ಚು ಮೆಚ್ಚು-ಕೆಚ್ಚುಗಳಿಗೆ ಎಡೆಗೊಟ್ಟ ನನಗೆ ಮಿತ್ರರೆಲ್ಲ ಮುಂಬಯಿಗೆ ಹೋದ ಮೇಲೆ ಬೆಂಗಳೂರಲ್ಲಿ ನಿಲ್ಲಲು ಮನಸ್ಸಾಗಲಿಲ್ಲ. ಇದಕ್ಕೆ ಸಹಾಯವಾಗಿ ಬೊಂಬಾಯಿನಲ್ಲಿ ಇದ್ದ ನನ್ನ ಮಾನ್ಯ ಮಿತ್ರರನೇಕರು ಈ ಸಮಯದಲ್ಲಿ ನಾನು ಅಲ್ಲಿಗೆ ಬರಲೇಬೇಕೆಂದು ಟೆಲಿಫೋನ್ ಮೂಲಕ ಒತ್ತಾಯಪಡಿಸಿದರು. ಇದರಿಂದ ಹುರಿದುಂಬಿದ ನನ್ನ ಮನಸ್ಸು ಉರಿಯುವ ಬೆಂಕಿಗೆ

ತುಪ್ಪಬಿದ್ದಂತೆ ಕಳಕಳಿಸತೊಡಗಿತು. ಇನ್ನು ಕೆಲವು ಘಂಟೆಗಳಲ್ಲಿಯೇ ಮುಂಬಯಿ ತಲುಪಬೇಕಾಗಿದ್ದ ನನಗೆ ವಿಮಾನ ಪ್ರಯಾಣದ ಹೊರತು ಮತ್ತಾವ ಮಾರ್ಗವೂ ಇರಲಿಲ್ಲ. ಪ್ರಯಾಣಕ್ಕೆ ಕೆಲ ಘಂಟೆಗಳ ಮೊದಲು ನನ್ನ ವಿಮಾನ ಯಾತ್ರೆಯ ಆಸೆಯನ್ನು ಬೇಗನೆ ಮುಗಿಸಿಕೊಂಡು ಬಿಡ ಬೇಕೆಂದು ತೀರ್ಮಾನಿಸಿದೆನು. ದಿನಾಂಕ: ೨೪೧ ಬೆಳಗಿನಲ್ಲಿ ಮುಂಬಯಿ ಪ್ರಯಾಣಕ್ಕೆ ಸಿದ್ಧನಾದೆನು. ಪ್ರಯಾಣದ ಹಿಂದಿನ ದಿನ ಕಾರ್ಯಾಲಯದ ಕೆಲಸ ಬಹಳವಾಗಿ ಅರ್ಧರಾತ್ರಿವರೆಗೆ ಕೆಲಸ ಕಾರ್ಯಗಳಲ್ಲಿ ಕಳೆದು ಹೋಯಿತು. ಮಿಕ್ಕರ್ಧರಾತ್ರಿ ಪ್ರಯಾಣದ ಯೋಜನೆಯಲ್ಲಿ ಸವೆಯಿತು. ಅಂತು ಅಂದು ಶಿವರಾತ್ರಿಯ ಜಾಗರಣೆಯಾಯಿತು. ಭಕ್ತಿಭಂಡಾರಿಗಳು "ನಿಚ್ಚ ನಿಚ್ಚ ಶಿವರಾತ್ರಿಯೆಮಗೆ" ಎಂದು ಹೇಳಿರುವುದು ನೆನಪಾಯಿತು.

ನಾನು ಪ್ರಯಾಣಮಾಡುವ ದಿನಕ್ಕೆ ಕೆಲವು ದಿನಗಳ ಮೊದಲು ಇಂಡಿಯಾದ ವಿಮಾನವೊಂದು ಆಲ್ಪ್ಸ್‌ಪರ್ವತದಲ್ಲಿ ಬಿದ್ದು ನಾಶವಾದ ಸುದ್ದಿ, ಬೆಂಗಳೂರಿನಿಂದ ಕೊಯಮತ್ತೂರಿಗೆ ಹೊರಟ ವಿಮಾನವೊಂದು ನೀಲಗಿರಿ ಜಿಲ್ಲಾ ಕೋತಗಿರಿಯಲ್ಲಿ ಬಿದ್ದು ಸಮಾಧಿಯಾದ ಸುದ್ದಿ, ಬೆಂಗಳೂರಿನಲ್ಲಿಯೇ ಒಂದು ವಿಮಾನ ಕೆಳಗೆ ಬಿದ್ದು ನಾಶವಾದ ಸುದ್ದಿ, ಡಿಲ್ಲಿಯ ವಿಮಾನವೊಂದು ಕಾಶ್ಮೀರದಲ್ಲಿ ಬಿದ್ದ ಸುದ್ದಿ ಇವೆಲ್ಲಾ ವಾರ್ತೆಗಳು ಭಯಂಕರವಾಗಿ ಪತ್ರಿಕೆಗಳಲ್ಲಿ ಪ್ರಕಟವಾಗಿ ಜನಗಳಲ್ಲಿ ವಿಮಾನ ಪ್ರಯಾಣದ ಬಗೆಗೆ ಹಾಹಾಕಾರವನ್ನು ಹಬ್ಬಿಸಿದ್ದುವು. ಜನಜನಿತವಾದ ಈ ವಾರ್ತೆ ನಮ್ಮ ಮನೆಯವರಿಗೂ ತಿಳಿದಿದ್ದಿತು. ನಾಳೆ ವಿಮಾನದಲ್ಲಿ ಮುಂಬಯಿಗೆ ಪ್ರಯಾಣಮಾಡಲಿರುವ ನನ್ನ ಗತಿಯು ಒಂದು ವೇಳೆ ಅಪಘಾತಕ್ಕೀಡಾದರೆ ನಮ್ಮ ಮನೆಯ ಸ್ಥಿತಿ ಏನಾಗುವುದೆಂಬುದನ್ನು ನನ್ನ ಹಿತಚಿಂತಕರು ಆಲೋಚಿಸತೊಡಗಿದರು. ಆ ರಾತ್ರಿ ಅವರಿಗೂ ಶಿವರಾತ್ರಿಯಾಗಿರಬೇಕು.! ಕೆಲವರು ಅತ್ತರು: ಇನ್ನೊಬ್ಬರು ಸಪ್ಪೆಮೋರೆ ಹಾಕಿಕೊಂಡರು; ಮಗದೊಬ್ಬರು ನನ್ನ ಪ್ರಯಾಣವನ್ನು ನಿಲ್ಲಿಸಲು ಪ್ರಯತ್ನಿಸಿದರು. ಆದರೆ ನನ್ನ ಕನ್ನಡದ ಹುಚ್ಚು ಅವರೆಲ್ಲರ ಬಯಕೆಗಳನ್ನೂ ವಿಫಲಗೊಳಿಸಿತು. ನಾನು

ಮುಂಬಯಿಗೆ ವಿಮಾನಯಾತ್ರೆಗೆ ಸಿದ್ಧನಾದೆನು. ಬೊಂಬಾಯಿಗೆ ವಿಮಾನ ದಲ್ಲಿ ಹೊರಡುವ ಈ ಸುದ್ದಿ ಅದು ಹೇಗೋ ಪತ್ರಿಕೆಗಳಲ್ಲೂ ಪ್ರಕಟ ವಾಯಿತು. ಕೆಲವು ಮಿತ್ರರು ವಿಮಾನ ನಿಲ್ದಾಣಕ್ಕೂ ಬೀಳ್ಕೊಡಲು ಬಂದರು. ಸುಭಾಶಯ ಕೋರಿದರು. ನನ್ನ ವಿಮಾನಯಾತ್ರೆಯನ್ನು ಪೂರೈಸಿಕೊಳ್ಳುವ ಕಾಲ ಸನ್ನಿಹಿತವಾಯಿತು. ಬಲು ದಿನದ ಆ ನನ್ನ ಆಶೆ ಈಡೇರಿತು. ನಾನು ಮೋಡಗಳ ಮಧ್ಯದಲ್ಲಿ ನಾನಾಬಣ್ಣಗಳ ಆಕಾಶದಲ್ಲಿ ಭೂಮಿಯ ಹಂಗಿಲ್ಲದೆ ಕೆಲಕಾಲ ಇರುವ ಸುಕೃತ ಪ್ರಾಪ್ತವಾಯಿತು.

ಈ ವಿಮಾನ ಯಾತ್ರಾ ಪದ್ಧತಿಯಲ್ಲಿ ಪ್ರಯಾಣಿಕರು ತಮ್ಮ ಕುಟುಂಬದ ರಕ್ಷಣೆಗಾಗಿ, ತಮ್ಮ ಪ್ರಯಾಣದ ಮುನ್ನ ತಮ್ಮ ಜೀವ ವಿಮೆ ಮಾಡುವ ಪದ್ಧತಿಯೊಂದುಂಟು. ವಿಮಾನ ಪ್ರಯಾಣವು ಅಪಾಯಕ್ಕೊಳಗಾದುದೇ ಈ ಸಂಪ್ರದಾಯವು ರೂಢಿಗೆ ಬರಲು ಕಾರಣ ವಾಗಿರಬೇಕು. ಕೆಲವು ಗೆಳೆಯರು ನನ್ನನ್ನು 'ವಿಮೆ' ಮಾಡಲು ಸಲಹೆ ಹೇಳಿದರು. ಆದರೆ ಗಾಂಧಿಜಿ ಸತ್ಯಶೋಧನವನ್ನು ಓದಿದ್ದ ನನಗೆ 'ದೇವ ರಲ್ಲಿ ನಂಬುಗೆಯುಳ್ಳವರು ವಿಮೆಯನ್ನು ನಂಬುವುದರಲ್ಲಿ ಅರ್ಥವಿಲ್ಲ' ಎಂಬ ಮಾತು ನೆನಪಾಯಿತು. ನಾನು 'ವಿಮೆ' ಮಾಡದೆಯೇ ವಿಮಾನ ವನ್ನು ಹತ್ತಿದೆನು. ವಿಮಾನವು ಸರಿಯಾಗಿ ೭-೩೦ ಘಂಟೆಗೆ ಬೆಂಗ ಳೂರನ್ನು ಬಿಟ್ಟಿತು. ಬೊಂಬಾಯಿಗೆ ಅಭಿಮುಖವಾಗಿ ಹಾರತೊಡಗಿತು. ಆಗ ನಾನು ಭೂಮಿಯಮೇಲೆ, ಆಕಾಶದ ಕೆಳಗೆ, ಸುಂದರ ಮೋಡಗಳ ಮಧ್ಯದಲ್ಲಿ ಓಡುತ್ತಿರುವುದನ್ನು ಅರಿತೆನು. ಜೀವವು ತಲ್ಲಣಿಸ ತೊಡಗಿತು. ಬೊಂಬಾಯಿಗೆ ಮುಟ್ಟುವುದರೊಳಗೆ ವಿಮಾನವು ಅಪಘಾತಕ್ಕೀಡಾದರೆ ಗತಿಯೇನು? ಎಂಬ ಆಲೋಚನೆ ಬಂದಿತು. 'ಯೋಗಕ್ಷೇಮಂ ವಹಾಮ್ಯ ಹಮ್' ಎಂಬ ಗೀತಾಚಾರ್ಯನ ಮಾತು ನೆನಪಿಗೆ ಬಂತು. 'ಒಮ್ಮೆ ಮೆಚ್ಚಿ ಕರೆದೊಡೆ, ಓ! ಎನ್ನನೇ ನಮ್ಮ ಕೂಡಲ ಸಂಗಮದೇವ' ಎಂಬ ಭಕ್ತಿಭಂಡಾರಿಯ ಮಾತು ಬಾಯಲ್ಲಿ ಬಂತು. ಹೀಗೆ ನಾನು ಆಲೋ ಚಿಸುವಾಗಲೇ ವಿಮಾನವು ಪಕ್ಷಿಯಂತೆ ಗಗನಾಂಗಣದಲ್ಲಿ ವೇಗವಾಗಿ ಹಾರುತಿತ್ತು. ವಾಯುವೇಗವನ್ನೂ ಕೂಡ ಸ್ಪರ್ಧಿಸುತ್ತಿತ್ತು. ಭೂಮಿಯು

ಮೇಲೆ ಓಡಾಡುವ ಪ್ರಾಣಿಗಳನ್ನು ವಿಮಾನವು ಕಃಪದಾರ್ಥವಾಗಿ ಕಂಡು ಗಹಗಹಿಸಿ ನಗುವಂತಿತ್ತು. ನಾನು ಆಕಾಶ ಸಾಗರದಲ್ಲಿ ಈಸಾಡುತ್ತಿದ್ದೆನು. ಆಶ್ಚರ್ಯದ ಅಲೆಗಳು, ಸಂಶಯದ ಸುಳಿಗಳು, ಚಿತ್ತಚಾಂಚಲ್ಯದ ಪ್ರವಾಹಗಳು, ಆ ಗಗನ ಸಾಗರದಲ್ಲಿ ನನಗೆ ಅಡಿಗಡಿಗೆ ಎದುರಾಗುತ್ತಿದ್ದವು. ನಾನು ಈ ಅಪಾಯಕರವಾದ ವಿಮಾನ ಪ್ರಯಾಣಕ್ಕೆ ಯಾಕಾಗಿ ಒಪ್ಪಿಕೊಂಡೆನೋ ? ಎಂಬ ಯೋಚನೆ ಕೂಡ ಬರುತ್ತಿತ್ತು. ಮೊದಲೇ ರೈಲಿನಲ್ಲಿ ಪ್ರಯಾಣಮಾಡಿದ್ದರೆ ಈ ಕಳವಳಕ್ಕೆ ಕಾರಣವಿರ ಲಿಲ್ಲವಲ್ಲಾ ! ಅಕಸ್ಮಾತ್ ವಿಮಾನ ಕೆಳಗೆ ಬಿದ್ದರೆ ಮೂಳೆಗಳು ಕೂಡ ಸಿಕ್ಕುವುದಿಲ್ಲವಲ್ಲಾ! ಎಂದುಕೊಂಡೆನು. "ಮಿಂಚಿ ಹೋದ ಕಾರ್ಯಕ್ಕೆ ಚಿಂತಿಸಿ ಫಲವೇನು ?" ಎಂಬ ಗಾದೆ ನೆನಪಿಗೆ ಬಂದಿತು. ಆಗ ನಮ್ಮ ವಿಮಾನ ಕರುಣಾಮಯಳಾದ ಭೂಮಿ ತಾಯಿಗೆ ಬಹುದೂರದಲ್ಲಿತ್ತು. ನನ್ನ ಪಂಚಪ್ರಾಣಗಳು ಆಕಾಶದಲ್ಲಿ ಹಾರಾಡುತ್ತಿದ್ದುವು. ದೇಹ ಮಾತ್ರ ವಿಮಾನದಲ್ಲಿ ತೂಕಡಿಸುತ್ತಿತ್ತು. ಮನಸ್ಸು ಚಂಚಲವಾಗಿತ್ತು.

ಅರಿಯದವರಿಗೆ ವಿಮಾನ ಯಾತ್ರೆಯು ಭಯಂಕರವಾಗಿ ಕಂಡರೂ ಅನುಭವಿಸುವವರಿಗೆ ಅದು ಸ್ವರ್ಗಸುಖಕ್ಕೆ ಸಮಾನವಾಗಿರುತ್ತದೆ. ವಿಮಾನವನ್ನು ಹತ್ತಿದ ಕೂಡಲೇ ಅಲ್ಲಿ ಪ್ರಯಾಣಿಕರಿಗೆ ಕುಳಿತು ಕೊಳ್ಳಲು ಮೆತ್ತನೆಯ ಕುರ್ಚಿಗಳು ಸಿದ್ಧವಾಗಿರುತ್ತವೆ. ರೈಲು ಮತ್ತು ಹಡಗುಗಳಲ್ಲಿದ್ದಂತೆ ಉತ್ತಮ, ಮಧ್ಯಮ, ಅಧಮ ತರಗತಿಗಳ ಭೇದ ವಲ್ಲಿ ಕಾಣುವುದಿಲ್ಲ. ಅಲ್ಲಿ ಎಲ್ಲರೂ ಸಮಾನರು. ಪ್ರಯಾಣಿಕರ ಉಳಿವು ಅಳಿವುಗಳೂ ಹಾಗೆಯೇ ಸಮಾನವಾದುವು. ವಿಮಾನ ಯಾತ್ರೆ ಈ ದೃಷ್ಟಿಯಲ್ಲಿ ಹಿರಿಯತನದ್ದೆನ್ನಬಹುದು. ಕುರ್ಚಿಗಳ ಮೇಲೆ ಕುಳಿತ ಕೂಡಲೇ ಪ್ರಯಾಣಿಕರು ಸೊಂಟಕ್ಕೆ ಕಟ್ಟಿಕೊಳ್ಳಲು ಅದಕ್ಕೆ ಹೊಂದಿ ಕೊಂಡೇ ಒಂದು ಪಟ್ಟಿ ಸಿದ್ಧವಾಗಿರುತ್ತದೆ. ವಿಮಾನವು ಮೊದಲು ನೆಲ ದಲ್ಲಿ ಕೊಂಚ ಓಡಿ ಆ ಮೇಲೆ ಮೆಲ್ಲಮೆಲ್ಲನೆ ಆಕಾಶಕ್ಕೆ ಏರುತ್ತದೆ. ಇಳಿಯುವಾಗಲೂ ಹಾಗೆಯೇ. ವಿಮಾನವು ಹೊರಟ ಕೂಡಲೇ ಅಲ್ಲಿರುವ ಪರಿಚಾರಕಿ ಪ್ರಯಾಣಿಕರ ಕಿವಿಗಳಿಗೆ ಹತ್ತಿಯನ್ನು ಇಟ್ಟುಕೊಳ್ಳಲು

ತಂದುಕೊಡುತ್ತಾಳೆ. ವಾಂತಿಯಾದರೆ ಕಾಗದದ ಚೀಲಗಳು ಅಲ್ಲಿ ಸಿದ್ಧವಾಗಿರುತ್ತವೆ. ಓದಲು ಪತ್ರಿಕೆಗಳನ್ನು ಆ ಚಲುವೆ ಒದಗಿಸುತ್ತಾಳೆ. ಕುಡಿಯಲು ಕಾಫಿಯನ್ನು ತಂದುಕೊಡುತ್ತಾಳೆ. ಕುಡಿಯದಿದ್ದರೆ ಅವಳ ಒತ್ತಾಯವಿಲ್ಲ. ಆಕೆಯು ನಡೆದುಕೊಳ್ಳುವ ನಯವಿನಯಗಳು ಪ್ರಯಾಣಿಕರಿಗೆ ಸಂತೋಷವನ್ನುಂಟುಮಾಡುತ್ತವೆ. ಪ್ರಾಯೇಣ ಸುಂದರ ಸಂಸ್ಕೃತ ತರುಣಿಯರನ್ನೇ ಈ ಕೆಲಸಕ್ಕೆ ನೇಮಿಸುತ್ತಾರೆ. ಇವಳನ್ನು ರಸಿಕರು 'ಗಗನಸಖಿ' ಎಂದೂ, ಪ್ರಯಾಣಿಕರುAir-hostess ಎಂದೂ ಕರೆಯುತ್ತಾರೆ. ಬಹುಮಟ್ಟಿಗೆ ಪ್ರಯಾಣಿಕರ ಯೋಗಕ್ಷೇಮ ಇವಳ ಪಾಲಿಗಿರುತ್ತದೆ. ವಿಮಾನಯಾತ್ರೆ ಮುಗಿದ ಮೇಲೆ ಹಲವು ಮಂದಿ ಪ್ರಯಾಣಿಕರು ಇವಳನ್ನು ನೆನಸಿಕೊಳ್ಳದಿರಲಾರರು. ಅವಳ ಒಲವು ವೈಯಾರಗಳು ಹಾಗಿರುತ್ತವೆ. 'ಸಖಾ ಸಾಪ್ತಪದಿ' ಎಂದು ಶಾಸ್ತ್ರ ಹೇಳಿದೆಯಷ್ಟೆ.

ವಿಮಾನವು ಹೊರಟ ಸ್ವಲ್ಪ ಹೊತ್ತಿನಲ್ಲಿಯೇ ಪ್ರಯಾಣಿಕರ ತಿಳಿವಿಕೆಗಾಗಿ ವಿಮಾನವು ಎಷ್ಟು ಅಡಿ ಎತ್ತರದಲ್ಲಿ? ಯಾವ ದಿಕ್ಕಿನಲ್ಲಿ? ಯಾವ ವೇಗದಲ್ಲಿ? ಹೋಗುತ್ತಿದೆ ಇತ್ಯಾದಿ ವಿಷಯಗಳನ್ನು ತಿಳಿಸುವ ವಿಮಾನಾಧಿಕಾರಿಯ ಪ್ರಕಟನೆಯ ಕಾಗದವೊಂದು ಆ 'ಗಗನ ಸಖಿ'ಯ ಮೂಲಕ ಪ್ರಯಾಣಿಕರ ಕಣ್ಣುಗಳ ಮುಂದೆ ಹಾದು ಹೋಗುತ್ತದೆ. ನನ್ನ ಕೈಲಿ ಈ ಕಾಗದ ಬಂದಾಗ ವಿಮಾನವು ೭,೦೦೦ ಅಡಿ ಎತ್ತರದಲ್ಲಿ ಹೈದ್ರಾಬಾದಿಗೆ ಅಭಿಮುಖವಾಗಿ ಅನುಕೂಲವಾದ ವಾತಾವರಣದಲ್ಲಿ ಇದೆ ಎಂಬುದನ್ನು ಅರಿತೆನು. ಕೆಲವು ವೇಳೆ ೧೦ ಸಾವಿರ ಅಡಿ ಎತ್ತರದವರೆಗೆ ವಿಮಾನ ಏರುತ್ತದೆ. ಈ ವಿಮಾನ ಪ್ರಯಾಣಿಕರಿಗೆ ವ್ಯವಸ್ಥಾಪಕರು ಕಲ್ಪಿಸುವ ಅನುಕೂಲವು ಇದುವರೆಗೆ ಕೇವಲ ರೈಲು ಮತ್ತು ಬಸ್ಸುಗಳಲ್ಲಿ ಪ್ರಯಾಣ ಮಾಡುತ್ತಿದ್ದ ನನ್ನನ್ನು ಮುಗ್ಧನನ್ನಾಗಿ ಮಾಡಿತು. ಇನ್ನು ಮುಂದೆ ಇಷ್ಟೊಂದು ವ್ಯವಸ್ಥಿತವಾದ ವಿಮಾನ ಪ್ರಯಾಣ ಹೊರತು ಮತ್ತಾವ ಮಾರ್ಗಗಳಿಂದಲೂ ಪ್ರಯಾಣಮಾಡಬಾರದೆಂದು ಅಂದು ಆಲೋಚಿಸಿದೆನು. ಆದರೆ ಘಂಟೆಗೆ ೨೦೦ ಮೈಲಿ ವೇಗದಲ್ಲಿ ಮೇಘಗಳ ಮಧ್ಯದಲ್ಲಿ ಹೋಗು

ತ್ತಿರುವ ನನಗೆ ನನ್ನ ಕಿಸೆಯೊಳಗಣ ಹಣದ ಬಲ ಎಷ್ಟೆಂಬುದನ್ನು ಅರಿಯಲು ಅವಕಾಶವಾದರೂ ಎಲ್ಲಿ? "ಮತ್ತು ಹತ್ತಿದವನಿಗೆ ಎತ್ತಣ ವಿವೇಕ" ಎಂದು ಜಾಣರು ಹೇಳುವುದಿಲ್ಲವೆ.?

ಆಕಾಶ ವಿಮಾನ ವ್ಯವಸ್ಥೆ ಬಹಳ ಉತ್ತಮವಾದುದು. ಆ ವಿಮಾನ ವನ್ನು ನಡೆಸುವ ಸಾರಥಿ [Pilot]. ವಿಮಾನ, ಕೇಂದ್ರಗಳಿಗೆ ಸುದ್ದಿಯನ್ನು ಕಳುಹಿಸುವವನಾದ ರೇಡಿಯೋ ಇಂಜನಿಯರ್, ಉಪಸಾರಥಿ [Co-pilot] ಮೊದಲಾದ ಮೂರು ನಾಲ್ಕು ಜನರು ವಿಮಾನದ ಯಂತ್ರ ಭಾಗ ದಲ್ಲಿರುತ್ತಾರೆ. ಪ್ರಯಾಣಿಕರ ಹಿತಚಿಂತಗಳಾದ 'ಗಗನ ಸಖಿ'ಯು ವಿಮಾನದ ಹಿಂಭಾಗದಲ್ಲಿರುತ್ತಾಳೆ. ಆ ವಿಮಾನದಲ್ಲಿ ಪ್ರಯಾಣಿಕರು ಜಲಬಾಧೆ, ಮಲ ಬಾಧೆಗಳನ್ನು ಪರಿಹರಿಸಿಕೊಳ್ಳಲು ರೈಲುಗಳಲ್ಲಿದ್ದಂತೆಯೇ ವ್ಯವಸ್ಥೆ ಯಿರುತ್ತದೆ. ಪ್ರಯಾಣಿಕರ ಸಾಮಾನುಗಳನ್ನು ಇಡಲು ಅಲ್ಲಿ ಸ್ಥಳವೂ ಇದೆ. ವಿಮಾನದ ರಚನೆಯು ಆಕಾರವು ಪಕ್ಷಿಗಳ ಆಕಾರವೆಂಬುದು ಎಲ್ಲರಿಗೂ ತಿಳಿದ ವಿಷಯುವೇ ಆಗಿದೆ. ವಿಮಾನವನ್ನು ರಚಿಸಿದವರು ಪಕ್ಷಿ ಯನ್ನು ನೋಡಿಯೇ ಅದನ್ನು ರಚಿಸಬೇಕೆಂದು ಕಾಣುತ್ತದೆ. ಈ ವಿಮಾನ ಯಂತ್ರವು 'ಪೆಟ್ರೋಲ್' ಎಂಬ ಎಣ್ಣೆಯ ಸಹಾಯದಿಂದ ಓಡುತ್ತದೆಂಬ ವಿಷಯ ಕೂಡ ಸುಪ್ರಸಿದ್ಧವಾಗಿದೆ. ಪೆಟ್ರೋಲ್ ಮುಗಿದರೆ, ಯಂತ್ರ ಕೆಟ್ಟರೆ ವಿಮಾನ ಕೆಳಗಿಳಿಯುತ್ತದೆ. ಅಥವಾ ಬಿದ್ದು ಹೋಗುತ್ತದೆ. ಆಗ ಹರಹರಾ ಶ್ರೀಚೆನ್ನಸೋಮೇಶ್ವರನೇ ಗತಿ.

ಈ ವಿಮಾನಯಾತ್ರೆಯ ಪ್ರಯಾಣಿಕನು ಗಮನಿಸಬೇಕಾದ ಒಂದು ಮುಖ್ಯವಾದ ವಿಷಯವುಂಟು. ಭೂಮಿಯಲ್ಲಿ ಬೃಹದಾಕಾರವಾದ ಬೆಟ್ಟ ಗಳು ಆ ವಿಮಾನದಲ್ಲಿ ಕೇವಲ ಸಣ್ಣ ಗುಡ್ಡಗಳಾಗಿ ಕಾಣುತ್ತವೆ. ಕೃಷ್ಣಾ, ಕಾವೇರೀ, ತುಂಗಭದ್ರಾ, ಗೋದಾವರೀ ಮೊದಲಾದ ನದಿಗಳು ಸಣ್ಣ ಸಣ್ಣ ಕಾಲುವೆಗಳಂತೆ ಕಾಣುತ್ತವೆ ಬೆಂಗಳೂರು, ಹೈದ್ರಾಬಾದ, ಬೊಂಬಾಯಿ ನಂತಹ ಹಿರಿಯ ಪಟ್ಟಣಗಳು ಅದೆಷ್ಟೋ ಚಿಕ್ಕಗ್ರಾಮಗಳಾಗಿ ಕಾಣುತ್ತವೆ.

ಇದಕ್ಕೆ ಮುಖ್ಯವಾದ ಕಾರಣ ಪ್ರಯಾಣಿಕನು ೭-೮ ಸಾವಿರ ಅಡಿ ಎತ್ತರ ದಲ್ಲಿ ಹೋಗುತ್ತಿರುವುದೇ ಎಂದು ಹೇಳಬಹುದು.

ವಿಮಾನ ಪ್ರಯಾಣಿಕನು ಕಾಣುವ ಸುಂದರ ದೃಶ್ಯಗಳಲ್ಲಿ ಗಗನದಲ್ಲಿ ಓಡಾಡುವ ಮೋಡಗಳ ಗುಂಪು ಮುಖ್ಯವೆನ್ನಬಹುದು. ಬಿಳಿಯ ಬಣ್ಣದ ಗುಡ್ಡೆ ಗುಡ್ಡೆಗಳಾಗಿ ಸಂಚರಿಸುವ ಆ ಸುಂದರ ಮೋಡಗಳು, ಗಗನವೆಂಬ ಸಾಗರದ ನೊರೆತೆರೆಗಳಂತೆಯೂ, ದೇವತೆಗಳ ಮನೆಗಳ ಬೆಳ್ಳಿಯ ಕಳಶ ಗಳಂತೆಯೂ, ಆಕಾಶ ಪ್ರಪಂಚದಲ್ಲಿ ವಿಹರಿಸಲು ಹೊರಟ ದೇವರಾಜನ ಸೈನ್ಯದ ಬಿಳಿಯ ಕುದುರೆಗಳ ತಂಡದಂತೆಯೂ, ಭಾರತ ಮಾತೆಯ ಸುಪುತ್ರರಾದ ತಿಲಕ-ಗಾಂಧಿ-ಪಟೇಲ್-ನೆಹರು ಪ್ರಭೃತಿಗಳ ಕೀರ್ತಿ ತರಂ ಗಿಣಿಯ ಪ್ರವಾಹಗಳಂತೆಯೂ ಕಾಣುತ್ತವೆ. ಈ ಮನೋಹರ ಮೋಡ ಗಳು ತಮ್ಮ ಶುಭ್ರವಾದ ಬಿಳಿಯ ಬಣ್ಣಗಳಿಂದಲೂ, ವಯ್ಯಾರದ ಓಡಾಟ ಗಳಿಂದಲೂ ನೂತನ ಪ್ರಯಾಣಿಕರನ್ನು ಚಕಿತಗೊಳಿಸುತ್ತವೆ. ವಿಮಾನ ಪ್ರಯಾಣದಲ್ಲಾಗುವ ಹೆಚ್ಚಿನ ಲಾಭಗಳಲ್ಲಿ ಪ್ರಯಾಣಿಕನಿಗೆ ಈ ಮೋಡ ಗಳ ಪರಿಚಯು ಬಹು ಮುಖ್ಯವೆನ್ನಬಹುದು. ಕೆಲವು ಸಮಯದಲ್ಲಿ ಈ ಮೋಡಗಳು ವಿಮಾನದ ಎಡಗಡೆ, ಮತ್ತೆ ಕೆಲವು ಸಮಯಗಳಲ್ಲಿ ಬಲಗಡೆ ಕಂಗೊಳಿಸುತ್ತವೆ. ಅನೇಕ ವೇಳೆ ವಿಮಾನವು ಮೋಡಗಳ ಅದೆಷ್ಟೋ ಮೇಲೆ ಸಂಚರಿಸುತ್ತದೆ. ಸದಾಕಾಲ ಮನುಷ್ಯರ ತಲೆಯ ಮೇಲೆ ಓಡಾಡುವ, ಮಿಂಚುಗಳ ನೆಪದಲ್ಲಿ ಅಣಕಿಸುವ, ಗುಡುಗುಗಳ ನೆಪದಲ್ಲಿ ಗರ್ಜಿಸುವ, ಸಿಡಿಲುಗಳ ನೆಪದಲ್ಲಿ ಕೆಡಕುಮಾಡುವ ಈ ಮೋಡಗಳಿಗಿಂತಲೂ ವಿಮಾನ ಪ್ರಯಾಣಿಕನಾದ ನಾನು ಅದೆಷ್ಟೋ ಎತ್ತರದಲ್ಲಿರುವೆನೆಂಬ ಅಹಂಕಾರ ಒಮ್ಮೆ ನನಗುಂಟಾಯಿತು. ಆದರೆ ವಿಮಾನದ ಬೆಳಕಿಂಡಿಯಲ್ಲಿ ನಮ್ಮ ತಲೆಯ ಮೇಲೆ ಕೂಡ ಮೋಡಗಳು ನಮ್ಮ ಅಹಂಕಾರವನ್ನು ಕಂಡು ನಗುತ್ತಿರುವುವೋ ಎಂಬಂತೆ ಇರುವುದನ್ನು ನೋಡಿ ನನಗೆ ಆಶ್ಚರ್ಯ ವೆನಿಸಿತು. ಒಟ್ಟಿನಲ್ಲಿ ವಿಮಾನ ಪ್ರಯಾಣದ ಅಕ್ಕ-ಪಕ್ಕ, ಹಿಂದೆ-ಮುಂದೆ, ಮೇಲೆ-ಕೆಳಗೆ ಎಲ್ಲೆಲ್ಲಿಯೂ ಆ ಚಪಲ ಗತಿಯ ಮೋಡಗಳೇಮೋಡಗಳು. ಅವುಗಳ ಓಡಾಟವೇ ಓಡಾಟ. ಕೆಲವು ಸಮಯದಲ್ಲಿ ಆ ಮೋಡಗಳು

ವಿಮಾನದ ಮೇಲೆ ಕೋಪಗೊಂಡು ಮುಂದೆ ನುಗ್ಗುವುದೂ ಉಂಟು. ಸೃಷ್ಟಿಯಲ್ಲಿ ಜನರಿಗಿದ್ದಂತೆಯೇ ಆ ಮೋಡಗಳಿಗೂ ಸ್ವಾಭಿಮಾನವುಂಟಷ್ಟೆ! ಅವುಗಳ ರಾಜ್ಯವನ್ನು ಹೊಕ್ಕ ಈ ಸ್ವಚ್ಛಂದ ವಿಮಾನಗಳನ್ನು ಆ ಸ್ವಾಭಿಮಾನಿ ಮೋಡಗಳು ಪ್ರತಿಭಟಿಸುವುದರಲ್ಲಿಯೂ ಕೊಂಚ ಔಚಿತ್ಯವನ್ನು ನಾವು ತರ್ಕಿಸಬಹುದು. ಮೇಘಗಳ ಈ ಚೈತನ್ಯವನ್ನು ಮಹಾಕವಿಯಾದ ಕಾಳಿದಾಸನು ತಿಳಿದಿದ್ದುದರಿಂದಲೇ ಅವನು 'ಮೇಘದೂತ' ಎಂಬ ಸುಂದರ ಕಾವ್ಯವನ್ನು ಬರೆದಂತೆ ಕಾಣುತ್ತದೆ. ಕಾಳಿದಾಸನು ಆಕಾಶ ವಿಮಾನ ಯಾತ್ರೆಯನ್ನು ಮಾಡಿರದಿದ್ದರೆ ಈ ಮೋಡಗಳ ವಿಚಾರವಾಗಿ ಅಷ್ಟೊಂದು ವಿಷಯಗಳನ್ನು ಸಂಗ್ರಹಿಸುತ್ತಿದ್ದನೆಂತು? ವಿಮಾನ ಯಾತ್ರೆಯಲ್ಲಿ ಮೋಡಗಳು ವಿಮಾನಗಳನ್ನು ಪ್ರತಿಭಟಿಸುವುದು, ವಿಮಾನವು ಅವುಗಳನ್ನು ಛೇದಿಸಿಕೊಂಡು ಪೌರುಷದಿಂದ ಮುಂದೆ ನುಗ್ಗುವುದು, ಆಗ ಪ್ರಯಾಣಿಕರಿಗೆ ಕಣ್ಣು ಕಾಣದಂತಾಗುವುದು ಇವೆಲ್ಲಾ ಬಹಳ ಚಮತ್ಕಾರಗಳಾದ ಸಂಗತಿಗಳೇ ಸರಿ. ಸಾಹಿತಿಗಳೂ, ಚಿತ್ರಗಾರರೂ, ಶಿಲ್ಪಿಗಳೂ, ಭಾಷಣಕಾರರೂ ಒಮ್ಮೆಯಾದರೂ ವಿಮಾನಯಾತ್ರೆ ಮಾಡುವುದು ಅಗತ್ಯವಾಗಿದೆ. ಇದರಿಂದ ಅವರ ಅನುಭವ ಭಂಡಾರ ಪೂರ್ಣವಾಗುತ್ತದೆ.

ಬೆಂಗಳೂರಿಂದ ಬೊಂಬಾಯಿಗೆ ಹೊರಟವರಿಗೆ ಹೈದ್ರಾಬಾದ್ ವಿಮಾನ ನಿಲ್ದಾಣದಲ್ಲಿ ೩೦ ನಿಮಿಷ ವಿಶ್ರಾಂತಿ ಸಿಗುತ್ತದೆ. ಅಲ್ಲಿ ವಿಮಾನ ಸಂಸ್ಥೆಯವರ ಉಪಾಹಾರ ಭವನವಿದೆ. ಪ್ರಯಾಣಿಕರು ತಮ್ಮ ಬಯಕೆಗೆ ಅನುಗುಣವಾಗಿ ಕಾಫಿ, ಟೀ, ಹಾಲು, ಹಣ್ಣು ಸೇವಿಸಬಹುದು. ಬೆಂಗಳೂರಿನಿಂದ ೪೦೦ ಮೈಲಿಗಳುಳ್ಳ ಹೈದರಾಬಾದಿಗೆ ಕೇವಲ ೨ ಘಂಟೆಗಳಲ್ಲಿ ತಲುಪುತ್ತದೆ ವಿಮಾನ. ಅಲ್ಲಿಂದ ೧೦ ಘಂಟೆಗೆ ಹೊರಟ ವಿಮಾನ ಬೊಂಬಾಯಿಗೆ ೧೨-೩೦ಕ್ಕೆ ಸರಿಯಾಗಿ ತಲುಪುತ್ತದೆ. ಮುಂಬಯಿ ನಿಲ್ದಾಣದಿಂದ ಪ್ರಯಾಣಿಕರು ಮನೆಗಳಿಗೆ ಬಸ್ಸುಗಳ ಮೂಲಕ ತಲುಪಲು ವ್ಯವಸ್ಥೆಯಿದೆ. ಬೆಂಗಳೂರಿನಲ್ಲಿ ಸ್ವಂತ ಕಾರಿಲ್ಲದವರು ಈ ಕಂಪನಿಯ ಬಸ್ಸುಗಳ ಮೂಲಕವೇ ವಿಮಾನ ನಿಲ್ದಾಣಕ್ಕೆ ಹೋಗುವ ಸೌಕರ್ಯವಿದೆ. ಬೆಂಗಳೂರು-ಬೊಂಬಾಯಿಗಳ ವಿಮಾನ ಪ್ರಯಾಣದ ವೆಚ್ಚ ೧೩೫ ರೂ.

ಗಳು. ಇದು ರೈಲುಮಾರ್ಗದ ಪ್ರಥಮ ವರ್ಗದ ವೆಚ್ಚದಂತೆ (ಸುಮಾರು) ಇರುತ್ತದೆಂದು ಹೇಳಬಹುದು. ಆದರೆ ಬೆಂಗಳೂರಿಂದ ಬೊಂಬಾಯಿಗೆ ರೈಲು ಪ್ರಯಾಣದ ಕಾಲ ೩೬ ಘಂಟೆಗಳು. ಅಂದರೆ ವಿಮಾನದ ವೇಗ ರೈಲಿಗಿಂತ ಎಂಟು ಪಾಲು ಹೆಚ್ಚು ಎಂಬುದನ್ನು ತಿಳಿದು ನೋಡಿದರೆ ವಿಮಾನ ಪ್ರಯಾಣದ ಮಹತ್ವವನ್ನು ನಾವು ಸುಲಭವಾಗಿ ಅರಿಯಬಹುದು. ಭಾರತದಲ್ಲಿ ವಿಮಾನಗಳ ವೇಗ ಗಂಟೆಗೆ ೧೫೦ ಮೈಲಿಯಿಂದ ೨೫೦ ಮೈಲಿಯವರೆಗುಂಟು. ಕೆಲವು ವಿಮಾನಗಳು ಗಂಟೆಗೆ ೪೫೦ ಮೈಲಿಯವರೆಗೂ ಹೋಗುವುದುಂಟು. ಬೆಂಗಳೂರಿನಿಂದ ಹೈದರಾಬಾದುವರೆಗಿನ ಪ್ರಯಾಣ ಕಾಲದಲ್ಲಿ ವಾತಾವರಣ ಸುಪ್ರಸನ್ನವಾಗಿತ್ತು. ಹೈದರಾಬಾದಿನಿಂದ ಮುಂಬಯಿಗೆ ಹೋಗುವ ಕಾಲದಲ್ಲಿ ಸಾಮಾನ್ಯವಾಗಿತ್ತು. ಮುಂಬಯಿಗೆ ಅನತಿ ದೂರದಲ್ಲಿರುವ ಪಶ್ಚಿಮ ಘಟ್ಟಗಳನ್ನು ಪ್ರಯಾಣಿಕರು ದಾಟಿಹೋಗುತ್ತಾರೆ. ಆದರೆ ಈ ಘಟ್ಟ ಪ್ರದೇಶಗಳು ಅನೇಕ ಸಮಯದಲ್ಲಿ ಪ್ರಕೃತಿಯ ವಿಕೋಪದ ಫಲವಾಗಿ ವಿಮಾನಾಪಘಾತಗಳಿಗೆ ಕಾರಣವಾಗುತ್ತವೆಂದು ತಿಳಿದು ಬಂದಿದೆ. ಒಟ್ಟಿನಲ್ಲಿ ಭರತಖಂಡದ ವಾತಾವರಣವು ವಿಮಾನ ಪ್ರಯಾಣಕ್ಕೆ ಅನುಕೂಲವಾಗಿದೆಯೆಂದು ಶಾಸ್ತ್ರಜ್ಞರು ಅಭಿಪ್ರಾಯಪಟ್ಟಿರುತ್ತಾರೆ. ಯುರೋಪು ಮತ್ತು ಅಮೆರಿಕಾ ಖಂಡಗಳಲ್ಲಿ ಆಗುವಷ್ಟು ವಿಮಾನಾಪಘಾತಗಳು ಭಾರತದಲ್ಲಿ ಆಗದಿರುವುದನ್ನು ಇದಕ್ಕೆ ಸಾಕ್ಷಿಯಾಗಿ ಹೇಳಬಹುದು. ವಿಮಾನಗಳಲ್ಲಿರುವ ಸುದ್ದಿಯಂತ್ರ (Wireless) ಬಹಳ ಉಪಯುಕ್ತವಾದುದು. ಪ್ರತಿಯೊಂದು ವಿಮಾನ ನಿಲ್ದಾಣಗಳಿಂದಲೂ ವಿಮಾನ ನಡೆಸುವವರಿಗೆ ಈ ವೈರ್‌ಲೆಸ್ ಮೂಲಕ ವಾರ್ತೆಗಳು ತಿಳಿಸಲ್ಪಡುತ್ತವೆ. ವಿಮಾನ ನಡೆಸುವವನು ಆ ಎಚ್ಚರಿಕೆಯಂತೆ ನಡೆಯದೆ ಮಾರ್ಗ ತಪ್ಪಿದರೆ ನೀಲಗಿರಿ ಬೆಟ್ಟದ ಕೋತಗಿರಿಯಲ್ಲಿ ನಡೆದಂತಹ ದುರಂತ ನಡೆಯುತ್ತದೆ.

ದೇಶದ ವ್ಯಾಪಾರ, ವ್ಯವಹಾರ, ರಾಜಕಾರಣ, ರಕ್ಷಣೆ ಮೊದಲಾದ ಎಲ್ಲ ದೃಷ್ಟಿಗಳಿಂದಲೂ ಇಂದು ವಿಮಾನಗಳಿಗೆ ಪ್ರಾಮುಖ್ಯತೆ ಪ್ರಾಪ್ತವಾಗಿದೆ. ಈಗಿನ ಮಹಾಯುದ್ಧಗಳ ಬಲಾಬಲಗಳ ನಿರ್ಣಯ ವಿಮಾನ ಬಲವನ್ನೇ ಅವಲಂಬಿಸಿದೆ. ಆದ್ದರಿಂದ ದೇಶಾಭಿಮಾನಿಗಳೆಲ್ಲರೂ ಈ

ವಿಮಾನದ ಪರಿಚಯಮಾಡಿಕೊಳ್ಳುವುದು, ವಿಮಾನಯಾತ್ರೆಯ ಸುಖ ದುಃಖಗಳನ್ನು ತಿಳಿದುಕೊಳ್ಳುವುದು ಆಗತ್ಯವೆಂದು ತೋರುತ್ತದೆ. ಆಟಂ ಬಾಂಬನ್ನು ತಿಳಿಯದ್ದರಿಂದಲೇ ಜರ್ಮನ ಸಾಮ್ರಾಜ್ಯ ತಲೆತಗ್ಗಿಸಿತು. ಈಗಿನ ಕಾಲದಲ್ಲಿ ವಿಷಯಗಳನ್ನು ತಿಳಿಯದಿರುವುದೂ ದೋಷವೇ ಸರಿ.

ಬೊಂಬಾಯಿಗೆ ಗೆಳೆಯರ ಮನೆಗೆ ಸುಖವಾಗಿ ತುಲುಪಿದ ನಾನು ಬೆಂಗಳೂರಿಗೆ ನಮ್ಮ ಮನೆಯವರಿಗೆ ವಿಮಾನ ಯಾತ್ರೆಯಲ್ಲಿ ನಾನು ಅಪಘಾತಕ್ಕೆ ಈಡಾಗಿಲ್ಲ, ಸುಖವಾಗಿರುವೆನು' ಎಂದು ಟೆಲಿಫೋನ್ ಮೂಲಕ ತಿಳುಹಿಸಿದೆನು. ಆಗ ಅವರಿಗೆ ತುಂಬಾ ಸಂತೋಷವಾಗಿರಬೇಕು. ಅಯ್ಯೋ ಪಾಪ ! ರೈತನು ಮೇಘಗಳನ್ನು ನಂಬಿ ಕೂತಂತೆ ನನ್ನನ್ನೇ ನಂಬಿ ಕೂತ ಆ ನಮ್ಮ ಜನರಿಗೆ ಟೆಲಿಫೋನ್ ವಾರ್ತೆ ಸುಖಕರವಾಗಿಯೇ ಇದ್ದೀತು. ನಾನು ಮುಂಬಯಿಗೆ ಹೋದಕೂಡಲೇ ಗೆಳೆಯರ ಮನೆಯಲ್ಲಿ ಕುಳಿತು ನನ್ನನ್ನೂ ನನ್ನ ಸಂಗಡಿಗರನ್ನೂ ವಿಮಾನಯಾತ್ರೆಯಲ್ಲಿ ಅಪಘಾತಕ್ಕೆ ಈಡು ಮಾಡದೆ ಕಾಪಾಡಿದ ಭಗವಂತನನ್ನು ಪ್ರಾರ್ಥಿಸಿದೆನು. ಇತ್ತ ನಮ್ಮ ಮನೆಯವರೂ ನನಗೆ ಅಪಘಾತವಾಗದಿರಲು ಅನೇಕ ಶಾಂತಿ ಕರ್ಮಗಳನ್ನು ಆಚರಿಸಿದರಂತೆ.! ವ್ರತೋಪವಾಸಗಳೂ ನಡೆದುವಂತೆ.

ಪ್ರಯಾಣದ ಮುನ್ನ ವಿಮೆ ಮಾಡದೆ ಹೊರಟದ್ದು ಜಾಣತನವಾಯಿತೆಂದು ಆಗ ಅರಿತುಕೊಂಡೆನು. ದೇವರನ್ನು ನಂಬುವುದರಿಂದ ವ್ಯವಹಾರ ದೃಷ್ಟಿಯಿಂದ ಕೂಡ ಲಾಭವುಂಟೆಂದು ಅರಿತೆನು. ಗೀತೆಯ 'ಅನನ್ಯಾಶ್ಚಿಂತಯಂತೋಮಾಂ........' ಎಂಬ ಶ್ಲೋಕವನ್ನು ನೆನೆಸಿಕೊಂಡೆನು. ಈ ವಿಮಾನಯಾತ್ರೆಯ ಸಾಹಸದ ಫಲವಾಗಿ ನನಗೆ ಕೊಂಚ ಹೆಚ್ಚು ಕಾಸು ಖರ್ಚಾದರೂ ನನಗಿಂತ ಎರಡುದಿನ ಮೊದಲೇ ಬೆಂಗಳೂರು ಬಿಟ್ಟ ಗೆಳೆಯರನ್ನು ಸಮ್ಮೇಳನದಲ್ಲಿ ಅಂದೇ ಹೊರಟ ನಾನು ಸಂದರ್ಶಿಸಿ ಸಂತೋಷಿಸುವ ಅವಕಾಶ ಕಲ್ಪಿಸಿಕೊಂಡೆನು. ಕಾಸಿದ್ದರೆ ಕೈಲಾಸ, ದುಡ್ಡಿದ್ದರೆ ದೊಡ್ಡಪ್ಪ ಎಂಬ ಸಾಮತಿಯುಂಟಷ್ಟೆ?



ಆಸ್ಥಾನ ವಿದ್ವಾನ್, ಪಂಡಿತ ರತ್ನಂ, ಕೀರ್ತನಾಚಾರ್ಯ, ಕರ್ಣಾಟಕ ವಿಭೂಷಣ
ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು
(ಅಧ್ಯಕ್ಷರು–ಕನ್ನಡ ಸಾಹಿತ್ಯ ಪರಿಷತ್ತು)

ನನ್ನ ವಿಮಾನಯಾತ್ರೆಯು ಮೋಡಗಳ ಮಡಲಿನಲ್ಲಿ ನನಗೆ ಹೆಚ್ಚಿನ ಸಂತೋಷವನ್ನೂ ಜ್ಞಾನಾನುಭವವನ್ನೂ ಉಂಟುಮಾಡಿತು. ಅದಕ್ಕೂ ಮಿಗಿಲಾಗಿ ಎರಡು ದಿನ ರೈಲಿನಲ್ಲಿ ಪ್ರಯಾಣಮಾಡಬೇಕಾಗಿದ್ದ ನನ್ನ ಕಷ್ಟ ವನ್ನೂ ತಪ್ಪಿಸಿತು. ಆದರೆ ವಿಮಾನದಲ್ಲಿ ಆಕಾಶ ಕೈಗೆ ಎಟಗುವುದೆಂದು ತಿಳಿದಿದ್ದ ನನಗೆ ಅಸರ ಅಗಾಧ ಶಕ್ತಿಯನ್ನು ಕಂಡು ಅಚ್ಚರಿಯೂ ನಿರಾಶೆಯೂ ಆಯಿತು 'ಗಗನಂ ಗಗನಾಕಾರಂ ಸಾಗರಃ ಸಾಗರೋಪಮಃ.'

ಇನ್ನು ಮುಂದೆ ಬೆಂಗಳೂರಿನಿಂದ ಬೊಂಬಾಯಿಗೆ ಹೋಗತಕ್ಕವರು ವಿಮಾನದಲ್ಲಿ ಹೋಗುವುದೇ ಸುಖಕರವೆಂದು ನನ್ನ ಅಭಿಪ್ರಾಯ. ಆದರೆ ಇದನ್ನು ಒಪ್ಪುವುದು ಬಿಡುವುದು ವಾಚಕರ ಇಷ್ಟ ಮತ್ತು ಅದೃಷ್ಟ ಗಳನ್ನು ಅವಲಂಬಿಸಿದೆ. ಜನಿಸಿದ ಮನುಷ್ಯನು ಒಮ್ಮೆಯಾದರೂ ವಿಮಾನಯಾತ್ರೆ ಮಾಡಿ ಆ ಮೋಡಗಳ ವಿಲಾಸವನ್ನೂ ಆಗಸದ ಆಶ್ಚರ್ಯ ಗಳನ್ನೂ ಕಂಡು ಉಂಡು ಹರ್ಷಿಸುವುದು ಅಗತ್ಯ. ಮನುಷ್ಯನ ಬುದ್ಧಿ ಶಕ್ತಿಯು ವಿಜ್ಞಾನದ ಸಾಮರ್ಥ್ಯಗಳ ಅನುಭವ ಮಾಡಿಕೊಳ್ಳುವುದು ಫಲಪ್ರದ. ಸೃಷ್ಟಿಕರ್ತನ ಮಾಹಾತ್ಮ್ಯವನ್ನೂ ಆದಿಶಕ್ತಿಯ ಲೀಲಾವಿಲಾಸ ಗಳನ್ನೂ ಅರಿಯಲು ಈ ಆಗಸದ ಯಾತ್ರೆ ಅತಿ ಅಗತ್ಯವಾದುದು.



# ಸಾಹಿತ್ಯ ಮತ್ತು ಸಮಾಜ

'ಸಾಹಿತ್ಯವು ಸಮಾಜ ಜೀವನದ ಪ್ರತಿಬಿಂಬ' ಎಂಬ ಮಾತು ಈಗ ಎಲ್ಲರ ಬಳಕೆಯಲ್ಲಿದೆ. ಸಾಹಿತ್ಯವು ಸಮಕಾಲೀನ ಜನರ ರನ್ನಗನ್ನಡಿ (Literature is the Golden mirror of the contemporary Society) ಎಂದು ಪ್ರಾಜ್ಞರು ಹೇಳಿದ್ದಾರೆ. ಸಾಹಿತ್ಯವು ಬುದ್ಧಿಶಾಲಿಗಳ ವಿಚಾರ (Literature is the thought of thinking souls) ಎಂಬುದು ಕಾರ್ಲಾಯಿಲ್ ಮಹಾಶಯನ ಮತ. ಸಾಹಿತ್ಯ ಎಂದರೆ ಜನತೆಯ ಅನುಭವದ ಸಾರ [our high respects for a well read man is praise enough of literature] ಎಂಬುದು ಎಮರ್‌ಸರ್ ಎಂಬ ವಿದ್ವಾಂಸನ ಅಭಿಪ್ರಾಯ. ಮನುಷ್ಯನ ವಿವೇಕದ ಸಚ್ಚಿದಾನಂದವೇ ಸಾಹಿತ್ಯ [Literature is the process of recording immemorable speach] ಎಂದು ಸರ್ ಆರ್‌ಥರ್ ಕೌಚ್ ಎಂಬ ವಿದ್ವಾಂಸನು ಅರ್ಥಮಾಡಿರುತ್ತಾನೆ. ಸಾಹಿತ್ಯವೆಂದರೆ ಸಾಮಾನ್ಯ ಜನರ ಅಸಾಧಾರಣ ಅನುಭವ ಎಂಬುದು ರಾಬರ್ಟ್ ಲಿಂಚ್ ಮಹಾಶಯನ ಅಭಿಪ್ರಾಯ. ಹೀಗೆ ಮೇಲೆ ಕಂಡ ವಿದ್ವಜ್ಜನರ ಅಭಿಪ್ರಾಯಗಳಿಂದ ಸಾಹಿತ್ಯವು, ಸಮಾಜದ ಆತ್ಮ, ಜನಜೀವನದ ಉಸಿರು, ಜನಾಂಗದ ಅನುಭವಸಾರ ಎಂಬ ಅಂಶವನ್ನು ನಾವು ಒಪ್ಪಿಕೊಳ್ಳಬೇಕಾಗುತ್ತದೆ.

ಸಂಸ್ಕೃತ ಪಂಡಿತರು 'ಸಹಿತಾನಾಂ ಭಾವಃ ಸಾಹಿತ್ಯಂ' ಎಂದು ಸಾಹಿತ್ಯಕ್ಕೆ ಅರ್ಥಮಾಡಿದ್ದಾರೆ. ಸಾಹಿತ್ಯದ ತಿರುಳಾದ ಕಾವ್ಯವು ರಸಾತ್ಮಕವಾದ ವಾಕ್ಯಗಳ ಸಮೂಹವೆಂದು (ಕಾವ್ಯಂ ರಸಾತ್ಮಕಂ ವಾಕ್ಯಂ) ಎಂದು ಓರ್ವ ಅಲಂಕಾರಿಕನು ಹೇಳಿದ್ದಾನೆ. 'ಛಂದೋಬದ್ಧವಾದ ವಾಕ್ಯಗಳು ಸಾಹಿತ್ಯ' ಎಂದು ಮತ್ತೊಬ್ಬ ವಿದ್ವಾಂಸನು ಅಭಿಪ್ರಾಯಪಡುತ್ತಾನೆ. "ಸಾಹಿತ್ಯ ಎಂದರೆ ಮಾನವ ಜೀವನದ ಚಿದ್ಭಾಗಕ್ಕೆ ಉದ್ದೇಶವಾಗದೆ ಅದರ

ಆನಂದಾನುಭವಶಕ್ತಿ ಅಥವಾ ರಾಗಭಾಗಕ್ಕಾಗಿ ಎಂದು ಹೇಳುತ್ತಾರೆ. ಸಾಹಿತ್ಯವನ್ನು ನಿರ್ಮಿಸುವವರು ಕವಿಗಳು, ಕಾದಂಬರಿಗಾರರು, ಕತೆಗಾರರು, ವಿಮರ್ಶಕರು, ನಾಟಕಕಾರರು, ಸಂಶೋಧಕರು, ಇತಿಹಾಸಗಾರರು ಇತ್ಯಾದಿಗಳು. ಇವರೆಲ್ಲರೂ ಸಾಹಿತ್ಯ ಸರಸ್ವತಿಯ ಸುಪುತ್ರರು. ಇವರು ಸಮಾಜದ ಸಾಂಸ್ಕೃತಿಕ ಪ್ರತಿನಿಧಿಗಳು. ಸಂಗೀತಗಾರರು, ನೃತ್ಯಗಾರರು, ಶಿಲ್ಪಿಗಳು ಇವರೆಲ್ಲರೂ ಒಂದು ರೀತಿಯಿಂದ ಇದೇ ಜಾತಿಗೆ ಸೇರಿದವರು. ಕವಿತೆಯು ಸಂಸ್ಕಾರ ಜನ್ಯವಾದುದು. ಮಹಾಕವಿ ಷಡಕ್ಷರನು "ಬಹುತರ ಜನ್ಮ ಕೋಟಿಗಳೊಳ್ ಆರ್ಜಿಸಿದ ಉತ್ತಮ ಪುಣ್ಯದೇಳ್ಗೆಯಿಂ | ಮಹಿಯೊಳೆ ಸತ್ಕವಿತ್ವದಿವಿಷನ್ಮಣಿ ಸಾರ್ಗುಂ—ಎಂದೂ, "ಸುದುರ್ಲಭಂ ಪ್ರಾಪ್ಯಕವಿತ್ವ ರತ್ನಂ" ಎಂದೂ, "ನವಕವಿತಾಚಿಂತಾರತ್ನಂ ದೊರೆಗುಮೆ ಮಾರಾರಿಯ ಕೃಪೆಯಿಲ್ಲದಂಗೆ" ಎಂದೂ ಹೇಳಿರುತ್ತಾನೆ. ಕವಿಗಳ ಹಿರಿಮೆಯನ್ನು ಹೇಳಿಕೊಳ್ಳುವ ಮಹಾಕವಿ ನೇಮಿಚಂದ್ರನು "ಅದೇನಳವಗ್ಗಳಮೋ ಕವೀಂದ್ರರ" ಎಂದು ಹೇಳಿ, ಕವಿಗಳು 'ಕಾಷ್ಠಮಂ ಕೊನರಿಪರ್, ಕಲ್ಲಲ್ಲಿ ನಾರೆತ್ತುವರ್" ಎಂದು ಹೇಳುತ್ತಾ 'ಕವಿಗಳು ನಿಗ್ರಹಾನುಗ್ರಹ ಸಮರ್ಥರೆಂದು' ಅಭಿಪ್ರಾಯಪಟ್ಟಿರುತ್ತಾನೆ. ಸೋಮೇಶ್ವರ ಕವಿಯು ತನ್ನ ಜನಪ್ರಿಯ ಶತಕದಲ್ಲಿ "ಕವಿಯೇ ಸರ್ವರೊಳುತ್ತಮಂ" ಎಂದು ಸಾರಿ ಹೇಳಿದ್ದಾನೆ. ಮೇಲೆ ಕಂಡ ಈ ಎಲ್ಲ ಪ್ರಾಜ್ಞರ ಮಾತುಗಳಿಂದ, ಕವಿಯು ಸಮಾಜದ ಪ್ರತಿನಿಧಿ, ಸಮಾಜಕ್ಕೆ ಚೈತನ್ಯವನ್ನು ಕೊಡತಕ್ಕವನು, ಜನಾಂಗದ ಮಾರ್ಗದರ್ಶಕನು ಎಂಬುದನ್ನು ನಾವು ಒಪ್ಪಿಕೊಳ್ಳಬೇಕಾಗುತ್ತದೆ.

ರಾಜ್ಯ ಸಾಮ್ರಾಜ್ಯಗಳು ಹುಟ್ಟಿ ಸಾಯುತ್ತವೆ. ಇಂದು ರಾಜನಾಗಿದ್ದವನು ನಾಳೆ ಸಾಮಾನ್ಯ ಪ್ರಜೆಯೆನಿಸುತ್ತಾನೆ. ಇಂದಿನ ಶ್ರೀಮಂತ ನಾಳೆ ಬಡವನಾಗುವುದೂ ಉಂಟು. ಇಂದಿನ ತರುಣನು ನಾಳೆ ವೃದ್ಧನೆನಿಸಿಕೊಳ್ಳುತ್ತಾನೆ. ಆದರೆ ಸಾಹಿತ್ಯ ಪ್ರಪಂಚದಲ್ಲಿ, ಕವಿಗಳು, ಕಾದಂಬರಿಕಾರರು, ಕತೆಗಾರರು ಸದಾಕಾಲವೂ ನವಯೌವನದಿಂದ ಕಂಗೊಳಿಸುತ್ತಲೇ ಇರುತ್ತಾರೆ. ಕಾರಣ, ಕವಿಯ ಶಕ್ತಿಯು ಅವನಲ್ಲಿ ಅಡಗಿರುವ ಪಾಂಡಿತ್ಯ, ಪ್ರತಿಭೆ, ಅನುಭವ ಮೊದಲಾದ ದಿವ್ಯ ಸಂಪತ್ತುಗಳು, ಎಲ್ಲರ

ಪ್ರೀತಿಗೌರವಗಳಿಗೆ, ಎಲ್ಲ ಕಾಲದ ಜನಗಳಿಗೆ ಪಾತ್ರವಾದುವು ಎಂದು ನಾವು ತಿಳಿಯಬಹುದಾಗಿದೆ. "ನಾನ್‌ಋಷಿಃ ಕುರುತೇ ಕಾವ್ಯಂ" ಅಂದರೆ "ಋಷಿಯ ಅಂಶವಿಲ್ಲದವನು ಕವಿಯಾಗಲಾರನು," ಎಂಬ ಮಾತು''ಸಾಹಿತ್ಯ ರಸಮಾಧರ್ಯಂ ಶಂಕರೋವೇತ್ತಿವಾನವಾ" ಅಂದರೆ ಸಾಹಿತ್ಯ ರಸದ ರುಚಿಯು ಶಂಕರನಿಗಾದರೂ ತಿಳಿಯುತ್ತದೆಯೋ ಇಲ್ಲವೋ ಎಂಬ ಮಾತು, "ರಸಿಕರಾಡಿದ ಮಾತು ಶಶಿಯುದಿಸಿ ಬಂದಂತೆ," "ಸಾಹಿತ್ಯವೆಲ್ಲರಿಗೆ ಇಲ್ಲ" ಎಂಬ ಸರ್ವಜ್ಞನ ಮಾತು ಸಾಹಿತ್ಯದ ಮಹತ್ವಕ್ಕೆ ನಿದರ್ಶನವಾಗಿವೆ. ಬ್ರಹ್ಮಾನಂದಕ್ಕೆ ಎರಡನೆಯದಾಗಿ ಕಾಂತಾನಂದಕ್ಕಿಂತ ಶ್ರೇಷ್ಠವಾದುದಾಗಿ ರಸಿಕಪ್ರಪಂಚದಿಂದ ಪರಿಭಾವಿಸಲ್ಪಟ್ಟಿರುವ ಕಾವ್ಯಾನಂದವು ಸಾಹಿತ್ಯದಿಂದಲ್ಲದೆ ಮತ್ತೆಲ್ಲಿಂದ ತಾನೇ ಮಾನವರಿಗೆ ಪ್ರಾಪ್ತವಾದೀತು ?

ಭಗವಂತನ ದೃಷ್ಟಿಯಲ್ಲಿ ಪ್ರಾಣಿಗಳು ಸಂಘಜೀವಿಗಳಾಗಿಯೂ, ಮಾನವರು ಸಮಾಜಜೀವಿಗಳಾಗಿಯೂ ಇರಬೇಕೆಂಬ ನಿಯಮವಿದ್ದಂತೆ ಕಾಣುತ್ತದೆ. ಇರುವೆ, ದುಂಬಿ, ಜಿಂಕೆ, ಕುರಿ, ಕಪಿ, ಆನೆ ಮೊದಲಾದ ಪ್ರಾಣಿಗಳು, ಗಿಳಿ, ಪಾರಿವಾಳ, ಕಾಗೆ, ಗುಬ್ಬಿ ಮೊದಲಾದ ಪಕ್ಷಿಗಳು, ಮೀನು, ಮೊಸಳೆ, ತಿಮಿಂಗಿಲ ಮೊದಲಾದ ಜಲಚರಗಳು ಗುಂಪು ಗುಂಪಾಗಿ ಜೀವಿಸುವುದನ್ನು ನಾವು ನೋಡುತ್ತಿದ್ದೇವೆ. ಯಾರಾದರೂ ಒಂದು ಕಪಿಯನ್ನು ಕೆಣಕಿದರೆ ಮಿಕ್ಕ ಕಪಿಗಳೆಲ್ಲವೂ ಕೆಣಕಿದವನ ಮೇಲೆ ಬಿದ್ದು ಅದನ್ನು ರಕ್ಷಿಸುತ್ತವೆ. ಒಂದು ಕಾಗೆ ಸತ್ತರೆ ಮಿಕ್ಕೆಲ್ಲ ಕಾಗೆಗಳೂ ಗುಂಪು ಕಟ್ಟಿಕೊಂಡು ಕಾ ಕಾ ಎಂದು ಗೋಳಿಡುತ್ತವೆ. ಒಂದು ಕುರಿ ಮುಂದೆ ನುಗ್ಗಿದರೆ, ಮಂಡೆಯ ಕುರಿಗಳೆಲ್ಲವೂ ಅದರ ಹಿಂದೆ ತಲೆಬಾಗಿ ನುಗ್ಗುತ್ತವೆ. ಸಲಗ ಆನೆ ಹೊರಟರೆ ಮಿಕ್ಕೆಲ್ಲ ಆನೆಗಳೂ ಅದನ್ನು ಶಿಸ್ತಿನಿಂದ ಹಿಂಬಾಲಿಸುತ್ತವೆ. ಕೇವಲ ಚಿಕ್ಕಪ್ರಾಣಿಗಳಾದ ಇರುವೆಗಳು ಸಾಲುಗಟ್ಟಿಕೊಂಡು ಶಿಪಾಯಿಗಳಂತೆ ನಡೆಯುತ್ತವೆ. ಜೇನುಹುಳುಗಳಂತು ಗುಂಪುಗುಂಪಾಗಿಯೇ ಜೀವಿಸುತ್ತವೆ. ಒಂದು ಹುಳು ಪೆಟ್ಟುತಿಂದರೆ ಮಿಕ್ಕಗುಂಪೆಲ್ಲ ಪೆಟ್ಟುಕೊಟ್ಟವರ ಮೇಲೆ ಝೇಂಕರಿಸಿ ಮುತ್ತುತ್ತವೆ. ಇದನ್ನೆಲ್ಲಾ ನೋಡಿದರೆ, ಪ್ರಾಣಿಗಳು ಸಂಘಜೀವಿಗಳಾಗಿರಲಿ, ಅದರಲ್ಲಿಯೇ ಅವುಗಳಿಗೆ ಕ್ಷೇಮ

ಎಂದು ಸೃಷ್ಟಿಕರ್ತನ ಉದ್ದೇಶವಿದ್ದಂತೆ ಕಾಣುತ್ತದೆ. ಪ್ರಾಣಿಗಳಲ್ಲಿ ಮನುಷ್ಯನು ಸರ್ವೋತ್ಕೃಷ್ಟನು ಎಂದು ಎಲ್ಲರೂ ಹೇಳಿದ್ದಾರೆ. ಆಕಾಶದ ಪಕ್ಷಿಗಳು, ಸಾಗರದ ಮೀನುಗಳು, ಭೂಮಿಯ ಮೃಗಗಳು ಇವೆಲ್ಲವೂ ತಿರ್ಯಂಗ್ಮುಖಗಳುಳ್ಳವಾಗಿಯೇ ಇವೆ.' ಆದರೆ ಮನುಷ್ಯನು ಮಾತ್ರ ಊರ್ಧ್ವಮುಖವುಳ್ಳವನಾಗಿದ್ದಾನೆ. ವಿಶ್ವದ ಇತರ ಯಾವ ಪ್ರಾಣಿಗಳಲ್ಲಿಯೂ ಇಲ್ಲದ ಆಲೋಚನಾ ಶಕ್ತಿಯ ಕೇಂದ್ರವೆನಿಸಿದ ಮೆದುಳು ಇವನಿಗೆ ಅಗಾಧವಾಗಿದೆ. ತನ್ನ ಅಭಿಪ್ರಾಯವನ್ನು ಇತರರಿಗೆ ತಿಳಿಸುವ ಸಾಧನವಾದ ಜ್ಯೋತಿರ್ಲಿಂಗ ರೂಪಿ ವಾಕ್ ಶಕ್ತಿಯು ಇವನಿಗೆ ಮಾತ್ರ ಮೀಸಲಾಗಿದೆ. ಅಗಾಧವಾದ ಸೃಷ್ಟಿಯ ಸೌಂದರ್ಯ ಮತ್ತು ಕೌತುಕಗಳನ್ನು ಕಂಡು ಆನಂದಿಸುವ ಹಾಗೂ ಅದನ್ನು ಅಭಿವ್ಯಕ್ತಗೊಳಿಸುವ ನಗುವಿಕೆ ಇವನಿಗೆ ಮಾತ್ರ ಮೀಸಲಾಗಿದೆ. ಈ ಅಮೌಲ್ಯವಾದ ಶಕ್ತಿತ್ರಯಗಳು (ಆಲೋಚನಾ ಶಕ್ತಿ, ವಾಕ್ ಶಕ್ತಿ ಮತ್ತು ಆನಂದ ಶಕ್ತಿಗಳು) ನಿಜಕ್ಕೂ ಮಾನವನ ಹಿರಿಮೆ ಮತ್ತು ಗರಿಮೆಗೆ ಸಾಧನವೆನಿಸಿವೆ. ಕೃತತ್ರೇತಾದಿ ಯುಗಗಳಿಂದ, ಭೂಚರ, ಖೇಚರ ಮತ್ತು ಜಲಚರ ಪ್ರಾಣಿಗಳು ಒಂದೇ ಪ್ರಕಾರದಲ್ಲಿದ್ದು ಮಾನವ ಪ್ರಾಣಿ ಮಾತ್ರ ದಿನದಿನವೂ ಪ್ರಗತಿಯನ್ನು ಹೊಂದಲು ಅವನಿಗಿರುವ ಈ ಅಮೌಲ್ಯ ಶಕ್ತಿತ್ರಯಗಳೇ ಸಾಧನವೆನಿಸಿವೆ.

ಮನುಷ್ಯನು ಸಮಾಜ ಜೀವಿ. ಅದರಲ್ಲಿಯೇ ಅವನಿಗೆ ಸುಖಸಂತೋಷ ಮತ್ತು ಪ್ರಗತಿ ಎಂಬುದು ಅನುಭವ ಸಿದ್ಧಾಂತ. ಇದು ಸೃಷ್ಟಿಕರ್ತನ ಉದ್ದೇಶವೂ ಎಂದು ತೋರುತ್ತದೆ.

ಮನುಷ್ಯನು ಜನನ, ಜರೆ, ರೋಗ, ಮರಣ ಕಾಲಗಳಲ್ಲಿ ಇತರರ ಸಹಾಯವನ್ನು ಬಯಸುತ್ತಾನೆ. ಅವನ ಬೆನ್ನು ಅವನ ಕೈಗೆ ಹತ್ತದಿರುವುದು ಅವನ ಅಪೂರ್ಣತೆಗೆ ನಿದರ್ಶನವಾಗಿದೆ. ಸ್ತ್ರೀಪುರುಷರು ಜೀವನದಲ್ಲಿ ಸಂಗಾತಿಗಳನ್ನು ಅಥವಾ ಗೆಳೆಯರನ್ನು ಬಯಸುತ್ತಾರೆ. ಆದರಿಂದ ಅವರ ವ್ಯಕ್ತಿಜೀವನ ಹೋಗಿ ಸಮಾಜಜೀವನ ಪ್ರಾರಂಭವಾಗುತ್ತದೆ. ಸಮಾಜ ಜೀವನದಿಂದ ಮಾನವರ ಅಂತಃಕರಣ ವಿಕಾಸವಾಗಿ ಅವರಿಗೆ

ಸಂಸಾರದಲ್ಲಿ ಒಗೆಬಗೆಯ ಜೀವನಾನುಭವಗಳು ಪ್ರಾಪ್ತವಾಗುತ್ತವೆ. ಈ ಅನುಭವಗಳು ಅವನ ಪೂರ್ವೋಕ್ತ ಶಕ್ತಿತ್ರಯಗಳನ್ನು ವಿಕಾಸ ಗೊಳಿಸುತ್ತವೆ. ಇಂತಹ ಸಂಘ ಜೀವನದಿಂದಲೇ ಸ್ತ್ರೀಪುರುಷರು, ಸುಖ, ಸಂತೋಷ, ಉತ್ಸಾಹ, ಜೀವನದ ಶ್ರದ್ಧೆ ಮೊದಲಾದ ಸದ್ಗುಣಗಳನ್ನು ಹೊಂದಿ ಪ್ರಗತಿಯನ್ನು ಪಡೆಯುತ್ತಾರೆ. ಸಮಾಜ ಜೀವಿಯಾದ ಸ್ತ್ರೀ ಪುರುಷರು ಸಂಸಾರದ ಜಂಜಡದಲ್ಲಿ ತಮಗೆ ಒದಗುವ ಸುಖ ದುಃಖ, ರೋಗ ರುಜೆ, ಲಾಭ ನಷ್ಟ, ಮಾನ ಅವಮಾನ, ಕೋಪ ತಾಪ, ಮೊದ ಲಾದ ಸನ್ನಿವೇಶಗಳ ಫಲವಾಗಿ ಹಲವಾರು ಜೀವನಾನುಭವಗಳನ್ನು ಪಡೆಯುತ್ತಾರೆ. ಆ ಅನುಭವಗಳನ್ನು ತಮಗಿರುವ ವಾಕ್ ಸಂಪತ್ತಿನ ಸಹಾಯದಿಂದ ಇನ್ನೊಬ್ಬರಿಗೆ ಹೇಳುತ್ತಾರೆ. ಹೀಗೆ ಒಬ್ಬರಿಗೊಬ್ಬರು ಹೇಳಿ ಕೇಳುವ ವ್ಯವಹಾರದಲ್ಲಿ ಸಾಹಿತ್ಯವು ಸೃಷ್ಟಿಯಾಗುತ್ತದೆ. ಈ ಪ್ರಸಂಗ ದಲ್ಲಿ ಸಾಮಾನ್ಯರ ಅನುಭವಗಳು ಜನಪದ ಸಾಹಿತ್ಯವಾಗಿಯೂ ಸುಪ್ರೌಢರ ಅನುಭವಗಳು ಸವಿಕಟ್ಟಾದ ಕಾವ್ಯ, ನಾಟಕ, ಕಾದಂಬರಿಗಳಾಗಿಯೂ ಬೆಳಕನ್ನು ಕಾಣುತ್ತವೆ. ಇಂತಹ ಜೀವನಾನುಭವಗಳನ್ನೇ ಪ್ರಭಾವ ಶಾಲಿಗಳಾದ ಕವಿಗಳು, ಕಾದಂಬರಿಕಾರರು, ನಾಟಕಕಾರರು ತಮ್ಮ ತಮ್ಮ ಭಾಷಾಲಿಪಿಗಳಿಂದ ಬರೆದಿಡುತ್ತಾರೆ. ಇಂತಹ ಬರೆವಣಿಗೆಯ ಸಮೂಹವೇ ನಾಡಿನ ಸಾಹಿತ್ಯವೆನಿಸುತ್ತದೆ. ಅದು ಮುಂದಿನವರಿಗೆ ಮಾರ್ಗದರ್ಶಕ ವೆನಿಸುತ್ತದೆ. ನಮ್ಮ ಹಿಂದಿನವರ ಜ್ಞಾನ ಭಂಡಾರವೆನಿಸುತ್ತದೆ.

ಸಮಾಜದ ಉನ್ನತಿ ಮತ್ತು ಅವತಿಯು ಬಹು ಮಟ್ಟಿಗೆ ಆ ನಾಡಿನವ ರನ್ನೇ ಅವಲಂಬಿಸಿದೆ. ಹಿಂದಿನವರ ಜೀವನಾನುಭವಗಳನ್ನು ನಾವು ನಮ್ಮ ಪ್ರಾಚೀನ ಸಾಹಿತ್ಯದಲ್ಲಿ ಕಾಣುತ್ತೇವೆ. ಸಮಕಾಲೀನರ ಜ್ಞಾನಾನುಭವಗಳನ್ನು ಇಂದಿನ ಸಾಹಿತ್ಯದಲ್ಲಿ ಓದುತ್ತೇವೆ. ಆದುದರಿಂದಲೇ ಸಮಾಜಕ್ಕೂ ಸಾಹಿತ್ಯಕ್ಕೂ ದೇಹ ಆತ್ಮರಿಗಿರುವಷ್ಟು ನಿಕಟಬಾಂಧವ್ಯ ವಿರುವುದೆಂದು ಹಿರಿಯರು ಹೇಳಿರುತ್ತಾರೆ.

ಭಾರತದಲ್ಲಿ ಆ ಸೇತುಹಿಮಾಚಲಪರ್ಯಂತವಾಗಿ ಕಂಗೊಳಿಸುತ್ತಿ ರುವ ಉಜ್ವಲ ಸಂಸ್ಕೃತಿಯ ಮೂಲ ಕಾರಣ ನಮ್ಮ ವೇದಶಾಸ್ತ್ರ

ಪುರಾಣೇತಿಹಾಸಗಳು. ಶಾಸ್ತ್ರವು ಜ್ಞಾನಪ್ರಧಾನ. ಸಾಹಿತ್ಯವು ಆನಂದ ಪ್ರಧಾನ. ವಿಜ್ಞಾನಿಗಳು ಮತ್ತು ಕವಿಗಳು ಸರಸ್ವತಿಯ ಅವಳಿ ಜವಳಿ ಮಕ್ಕಳು. ತಲೆಯ ಸಂಸ್ಕಾರಕ್ಕೆ ಶಾಸ್ತ್ರಗಳು. ಹೃದಯದ ಪರಿಪಾಕಕ್ಕೆ ಕಾವ್ಯಗಳು ಅತ್ಯವಶ್ಯ. ಶಾಸ್ತ್ರವನ್ನು ಚಪಾತಿ, ರೊಟ್ಟಿ, ಮೊದಲಾದ ಘಟ್ಟಿ ಊಟಕ್ಕೂ, ಸಾಹಿತ್ಯವನ್ನು, ಹಾಲು, ಕೀರು, ಚಿತ್ರಾನ್ನ, ಚಿರೋಟಿ ಮೊದಲಾದ ಭೂರಿ ಭೋಜನಕ್ಕೂ, ಸಂಗೀತ, ನೃತ್ಯ, ಶಿಲ್ಪ, ಚಿತ್ರಾದಿ ಕಲೆಗಳನ್ನು ದಿವ್ಯ ನವ್ಯಭೋಜನಗಳಿಗೂ ನಾವು ಹೋಲಿಸ ಬಹುದು. ಒಟ್ಟಿನಲ್ಲಿ ಇವೆಲ್ಲವೂ ಮಾನವನ ದೇಹರಕ್ಷಣೆಗೆ ಅಗತ್ಯವಾದ ಪದಾರ್ಥಗಳು. ಹೊಟ್ಟೆಗೆ ಅನ್ನವಿದ್ದಂತೆ ಮನಸ್ಸಿಗೆ ಜ್ಞಾನವೂ. ಬೇಕಾ ದುದು. ಅದರ ಆರ್ಜನೆ ಶಾಸ್ತ್ರಸಾಹಿತ್ಯಗಳ ಅಧ್ಯಯನದಿಂದ ವಿವೇಕಿ ಯಾದ ಮಾನವನು ಮಾಡತಕ್ಕದ್ದು. ದೇಹರಕ್ಷಣೆಯಂತೆಯೇ, ಬುದ್ಧಿಯ, ಮನಸ್ಸಿನ ವಿಕಾಸ ಆತ್ಮನ ಶಾಂತಿಯನ್ನು ಶ್ರದ್ಧೆಯಿಂದಗಳಿಸಿಕೊಳ್ಳುತ್ತಾನೆ. ತಲೆ ತಣ್ಣಗಿರಲಿ, ಹೃದಯ ಶಾಂತವಿರಲಿ, ಕೈಕಾಲು ಬೆಚ್ಚಗಿರಲಿ ಎಂಬ ಈ ಎಲ್ಲ ಅನುಭವಗಳೂ ಮಾನವ ಹೃದಯದಲ್ಲಿ ಅಡಗಿ ಕೂತಿವೆ.

ಶ್ರೀರಾಮ, ಕೃಷ್ಣ, ಬುದ್ಧ, ಅಶೋಕ, ಶಂಕರ, ಬಸವ, ರಾಮಾ ನುಜ, ಆನಂದತೀರ್ಥ, ತಿಲಕ, ಗಾಂಧಿ, ಠಾಕೂರ್, ನೆಹರು ಮೊದ ಲಾದ ಮಹಾಪುರುಷರ ಜನನಕ್ಕೆ ಕಾರಣವಾದ ಭಾರತ ದೇಶದಲ್ಲಿ, ಅನಾದಿ ಕಾಲದಿಂದ ಜನತೆಯಲ್ಲಿ ನೆಲೆಸಿರುವ ಸದ್ಗುಣ ಸಂಪತ್ತಿಗೆ ನಮ್ಮ ಪ್ರಾಚೀನ ಜ್ಞಾನಭಂಡಾರವೆನಿಸಿದ ರಾಮಾಯಣ–ಭಾರತಾದಿಗಳು ಕಾರಣವೆನಿಸಿವೆ. ರಾಮಾಯಣ ಭಾರತಗಳು ಮಾನವ ಜಾತಿಯ ಆದರ್ಶ ಗ್ರಂಥಗಳು ಎಂದು ವಿಶ್ವಕವಿ ಠಾಕೂರರು ಹೇಳಿರುವ ಮಾತುಗಳಲ್ಲಿ ತುಂಬಾ ಅರ್ಥ ವಿದೆ. ಭಾರತದ ಗೀತೋಪನಿಷತ್ತುಗಳು ವಿಶ್ವದ ಜನತೆಗೆ ಬೆಳಕನ್ನು ನೀಡತಕ್ಕವುಗಳೆಂದು ಮ್ಯಾಕ್ಸ್‌ಮುಲ್ಲರ್ ಮಹಾಶಯರು ಹೇಳಿರುವುದು ಗಮನಾರ್ಹವಾಗಿದೆ. ಶ್ರೀರಾಮನ ಪಿತೃಭಕ್ತಿ, ಸೀತೆಯ ಪತಿಭಕ್ತಿ, ದಶ ರಥನ ಪುತ್ರಪ್ರೇಮ, ಲಕ್ಷ್ಮಣಾದಿಗಳ ಭಾತೃಪ್ರೇಮ, ಸುಗ್ರೀವ, ಭೀಷ್ಮಾ ದಿಗಳ ನ್ಯಾಯನಿಷ್ಠೆ, ಹಾಗೂ ಸ್ನೇಹಪರತೆ, ಹನುಮಂತನ ಸ್ವಾಮಿನಿಷ್ಠೆ,

ಶ್ರೀ ಕೃಷ್ಣನ ಲೋಕಾನುಗ್ರಹ, ಭೀಮಾರ್ಜುನರ ಪರಾಕ್ರಮ, ಯುಧಿಷ್ಠರನ ಧರ್ಮ ಬುದ್ಧಿ, ಭೀಷ್ಮನ ನಿರ್ಮಲ ಜೀವನ, ವಿದುರನ ವಿನಯಶೀಲತೆ, ಸಾವಿತ್ರಿಯ ಸಾಹಸ, ಚಂದ್ರಮತಿಯ ಸೌಜನ್ಯ, ದಮಯಂತಿಯ ಪ್ರಾವೀಣ್ಯತೆ, ಹರಿಶ್ಚಂದ್ರನ ಸತ್ಯನಿಷ್ಠೆ, ನಳನ ನ್ಯಾಯಪರತೆ, ಕರ್ಣನ ದಾನಗುಣ, ಬಲಿಯ ತ್ಯಾಗ ಬುದ್ಧಿ ಇವುಗಳನ್ನೆಲ್ಲಾ ಅರಿದು ನಾವು ಸ್ಫೂರ್ತಿಯನ್ನು ಪಡೆದಿರುವುದು ನಮ್ಮ ಪ್ರಾಚೀನ ಋಷಿಕಾವ್ಯಗಳಾದ ರಾಮಾಯಣ ಮಹಾ ಭಾರತಗಳಿಂದಲ್ಲವೆ ?

ಕನ್ನಡ ಜನರು "ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್" ಎಂದು ನೃಪತುಂಗನು ಹೇಳಿರುತ್ತಾನೆ. ಇದು ಕನ್ನಡಿಗರಿಗೆ ಆ ಮಹಾ ರಾಜನು ಕೊಟ್ಟ ಉಡುಗೊರೆಯೇ ಸರಿ'. ಕನ್ನಡ ಜನರಲ್ಲಿ ನಾವು ಕಾಣುತ್ತಿರುವ ದೇಶ ಭಕ್ತಿ, ಪರಾಕ್ರಮಾದಿ ಗುಣಗಳಿಗೆ, ಪಂಪ ಭಾರತ, ಗದಾಯುದ್ಧ, ಗದುಗಿನ ಭಾರತ, ಜೈಮಿನಿ ಭಾರತಗಳು ಸ್ಫೂರ್ತಿಯನ್ನು ಕೊಟ್ಟಿವೆ. ಕನ್ನಡರಲ್ಲಿ ಕಂಗೊಳಿಸುವ ರಸಿಕತೆಗೆ, ಲೀಲಾವತಿ, ಶೃಂಗಾರ ಸಾರ, ರಾಜಶೇಖರ ವಿಳಾಸ, ಭರತೇಶ ವೈಭವ, ರಾಮಾಶ್ವಮೇಧಗಳು ಮಾತೃಸ್ಥಾನವೆನಿಸಿವೆ. ಕನ್ನಡಿಗರಲ್ಲಿ ನೆಲಸಿರುವ ಕರುಣಾಶೀಲತೆಗೆ, ಹರಿಶ್ಚಂದ್ರ ಕಾವ್ಯ, ನಳಚರಿತೆ, ಯಶೋಧತ ಚರಿತೆ, ಗೋವಿನ ಕತೆ ಮೊದಲಾದುವು ಪೋಷಕವೆನಿಸಿವೆ. ಕನ್ನಡ ಜನರಲ್ಲಿ ನೆಲಸಿರುವ ಧರ್ಮಸಮನ್ವಯ ಬುದ್ಧಿಗೆ, ಶಿವಶರಣರ ಮತ್ತು ಹರಿದಾಸರ ಕೃತಿಗಳು ಸ್ಫೂರ್ತಿಯನ್ನು ಕೊಟ್ಟಿವೆ. ಕನ್ನಡಿಗರ ಭಕ್ತಿಜೀವನಕ್ಕೆ, ಹರಿಹರನ ರಗಳೆಗಳು, ಕನ್ನಡ ಶತಕಗಳು ಬಹುಮಟ್ಟಿಗೆ ಕಾರಣ. ನಮ್ಮ ಜನತೆಯಲ್ಲಿ ಕಂಡುಬರುವ ಲೋಕಾನುಭವಕ್ಕೆ, ಸೋಮೇಶ್ವರ ಶತಕ, ಸರ್ವಜ್ಞ ತ್ರಿಪದಿಗಳು ಕಾರಣ. ನಮ್ಮ ನಾಡಿನ ವೇದಾಂತನಿಷ್ಠೆಗೆ ನಿಜಗುಣರು, ಪುರಂದರ ದಾಸರು, ಕನಕ ದಾಸರು, ಶಾಲ್ಯದ ಅರಸರು, ಸರ್ಪಭೂಷಣರು, ಮುಪ್ಪಿನ ಷಡಕ್ಷರಿ, ಮಹಲಿಂಗರಂಗ ಮೊದಲಾದವರ ಗ್ರಂಥ ಸಮುದಾಯ ಕಾರಣ. ಕನ್ನಡ ನಾಡಿನಲ್ಲಿ ಇತ್ತೀಚಿಗೆ ಉಂಟಾಗಿರುವ ವಿಚಾರ ಕ್ರಾಂತಿಗೆ ಆಧುನಿಕ ಕವಿಗಳ, ಕತೆಗಳು, ಕಾದಂಬರಿಗಳು, ಕಾವ್ಯಗಳು, ನಾಟಕಗಳು, ಗೀತೆಗಳು, ವಿಮರ್ಶೆ

ಗಳು, ಸಂಶೋಧನಗಳು ಇತ್ಯಾದಿಗಳೇ ಕಾರಣ. ಇದನ್ನೆಲ್ಲವನ್ನೂ ಪರಿಶೀಲಿಸಿದಾಗ ನಾವು ಸಮಾಜಕ್ಕೂ ಸಾಹಿತ್ಯಕ್ಕೂ ಇರುವ ನಿಕಟವಾದ ಬಾಂಧವ್ಯವನ್ನು ಸುಲಭವಾಗಿ ಅರಿಯಬಹುದು.

ಕನ್ನಡಿಗರ ಸುಮಾರು ೨೦೦೦ ವರ್ಷಗಳ ಉಜ್ವಲ ಜೀವನಕ್ಕೆ ಉತ್ತಮ ನಿದರ್ಶನವಾಗಿ, ನಮ್ಮ ನಾಡಿನ ತುಂಬ ಕಂಗೊಳಿಸುತ್ತಿರುವ, ಕನ್ನಡ ನಾಡಿನ ಸದ್ಗುಣಗಳ ಮತ್ತು ಸಂಸ್ಕೃತಿಯ ಸಂಕೇತವೆನಿಸಿರುವ, ಅಸಂಖ್ಯಾತ ಶಿಲಾಶಾಸನ, ತಾಮ್ರಶಾಸನ, ಮಹಾಸತಿಕಲ್ಲು , ವೀರಗಲ್ಲು, ನಿಷದಿಗಲ್ಲು, ಗೋಗ್ರಹಣಕಲ್ಲು, ಗುಡಿ ಗೋಪುರ, ಭಿತ್ತಿಚಿತ್ರ, ಶಿಲ್ಪ ಕಲಾ ವೈಭವಗಳು ನಿದರ್ಶನವಾಗಿವೆ.

ಇಂದಿನದಿನ ವಿಜ್ಞಾನಕ್ಕೆ ಹೆಚ್ಚು ಮಹತ್ವವನ್ನು ಕೊಟ್ಟಿದೆ. ಕೆಲವರು ಸಾಹಿತ್ಯಕ್ಕಿಂತಲೂ ಕಲೆಗಿಂತಲೂ ವಿಜ್ಞಾನವೇ ಪ್ರಾಮುಖ್ಯವೆಂದು ವಾದಿಸುತ್ತಿದ್ದಾರೆ. ಈ ವಿಷಯವನ್ನು ಸಂಯಮದಿಂದ ಆಲೋಚಿಸುವುದು ಅಗತ್ಯ. ವಿಜ್ಞಾನಿ ಮತ್ತು ಸಾಹಿತಿ ಸರಸ್ವತಿಯ ಅವಳಿ ಜವಳಿ ಮಕ್ಕಳು ಎಂಬ ಮಾತನ್ನು ಈ ಹಿಂದೆಯೇ ಹೇಳಿದೆ. ಮಾನವನ ಜೀವನಕ್ಕೆ ಸೌಕರ್ಯವನ್ನು ಒದಗಿಸುವ ವಿಜ್ಞಾನ ವಸ್ತುಗಳು ನಮಗೆ ಅತ್ಯಗತ್ಯವೇ ಸರಿ. ವಿಜ್ಞಾನದ ಸಂತಾನವೆನಿಸಿದ, ರೈಲು, ಮೋಟಾರು, ರೇಡಿಯೋ, ಟೆಲಿಫೋನ್, ಗಡಿಯಾರ, ಸಿನಿಮಾ, ವಿವಿಧ ಯಂತ್ರಗಳು ಇವು ಎಲ್ಲರಂತೆ ಸಾಹಿತಿಗಳಿಗೂ ಬೇಕೇ ಬೇಕು. ಆದುದರಿಂದ ವಿಜ್ಞಾನವು ನಾಡಿನ ಪ್ರಗತಿಗೆ ಅಗತ್ಯವಾದ ವಸ್ತುವೇ ಸರಿ. ಆದರೆ ಮನುಷ್ಯನ ಆತ್ಮವನ್ನು ಪ್ರಸನ್ನಗೊಳಿಸುವ, ಅಂತಃಕರಣವನ್ನು ಅರಳಿಸುವ, ಬುದ್ಧಿಶಕ್ತಿಯನ್ನು ಪ್ರಕಾಶಗೊಳಿಸುವ ಉತ್ಸಾಹಶಕ್ತಿಯನ್ನು ಹುರುಪುಗೊಳಿಸುವ, ಸಾಹಿತ್ಯ ಶಕ್ತಿಯನ್ನು ಕಡೆಗಣಿಸುವ ಉದ್ದೇಶದಲ್ಲಿ ಜಾಣ್ಮೆ ಇದೆಯೆ ? ಔಚಿತ್ಯವಿದೆಯೆ ?

ಭಾರತೀಯರಾದ ನಮಗೆ ವಿಜ್ಞಾನ ಪಂಡಿತರಾದ ಬೋಸ್, ರೇ, ರಾಮನ್‌ರಂತೆಯೇ, ಸುಜ್ಞಾನ ಪಂಡಿತರಾದ, ಪರಮಹಂಸ, ವಿವೇಕಾ

ನಂದ, ಅರವಿಂದ, ರಮಣರ ಅಗತ್ಯವೂ ಇದೆ. ಹಾಗೆಯೇ ಭಾರತದ ಸರ್ವಾಂಗೀಣ ಪ್ರಗತಿಗೆ ಕಾರಣ ಕರ್ತರಾದ ದೇವತಾತ್ಮರು ತಿಲಕ, ಮಾಳವೀಯ, ಠಾಗೂರ್, ಗಾಂಧೀಜಿ, ನೆಹರು, ರಾಧಾಕೃಷ್ಣ ಮೊದಲಾದವರ ಅಗತ್ಯವೂ ಇದೆ. ಇಂತಹ ಸಮನ್ವಯ ಮಾರ್ಗದಿಂದ ಭಾರತೀಯರ, ಬುದ್ಧಿ ಶಕ್ತಿ, ಆತ್ಮಶಕ್ತಿ ಮತ್ತು ಕರ್ತೃತ್ವಶಕ್ತಿ ಅಧಿಕ ವಾಗಿದೆ. ನಮ್ಮ ಜನರು ಲೋಕದ ಮುಂದೆ ತಲೆ ಎತ್ತಿ ನಿಲ್ಲಲು ಸಾಧ್ಯ ವಾಗಿದೆ. ಪ್ರಗತಿಪರ ರಾಜ್ಯಗಳಾದ, ಅಮೆರಿಕ, ಇಂಗ್ಲೆಂಡ್, ಜರ್ಮನಿ, ರಷ್ಯ ಮೊದಲಾದ ರಾಷ್ಟ್ರಗಳಲ್ಲಿ, ಸಾಹಿತ್ಯ ಸಂಸ್ಕೃತಿಗಳ ಏಳಿಗೆಗಾಗಿ ಸರಕಾರದವರು ಮಂತ್ರಿಶಾಖೆಗಳನ್ನು ಏರ್ಪಡಿಸಿರುವರೆಂದು ನಾವು ಕೇಳಿ ದ್ದೇವೆ. ಪರಿಪೂರ್ಣ ಪ್ರಜಾಪ್ರಭುತ್ವದಿಂದ ಕಂಗೊಳಿಸುತ್ತಿರುವ ಭಾರತ ಸರಕಾರವೂ ಕೂಡ ಈ ವಿಷಯದಲ್ಲಿ ಜಾಗ್ರತವಾಗಿ ಸಾಹಿತ್ಯ ಸಂಗೀತ ನಾಟಕ ಅಕ್ಯಾಡಮಿಗಳನ್ನು ಕೇಂದ್ರದಲ್ಲಿಯೂ,ಪ್ರಾಂತಗಳಲ್ಲಿಯೂ ಸ್ಥಾಪಿಸಿ ಜನತೆಗೆ ಪ್ರೋತ್ಸಾಹಕೊಡುತ್ತಿರುವುದು ಶ್ಲಾಘ್ಯವಾಗಿದೆ. ಹಿಂದಿನಿಂದ ರಾಜಮಹಾರಾಜರುಗಳು ಸಂರಕ್ಷಿಸಿಕೊಂಡು ಬಂದ, ಸಾಹಿತ್ಯ, ಸಂಸ್ಕೃತಿ ಮತ್ತು ಲಲಿತಕಲೆಗಳನ್ನು ಇಂದು ನಮ್ಮ ಪ್ರಜಾಪ್ರಭುತ್ವವು ಸಂರಕ್ಷಿಸು ತ್ತಿರುವುದಕ್ಕಾಗಿ ನಾವುಗಳು ಹರ್ಷಿಸಬೇಕಾಗಿದೆ. ಇದಕ್ಕಾಗಿ ಕೇಂದ್ರದ ಲ್ಲಿಯೂ ರಾಜ್ಯಗಳಲ್ಲಿಯೂ, ಸಂಗೀತ ನಾಟಕ, ಸಾಹಿತ್ಯ, ಮತ್ತು ಲಲಿತ ಕಲೆಗಳ ಅಭಿವೃದ್ಧಿಗಾಗಿ ಅಕ್ಯಾಡಮಿಗಳು ಏರ್ಪಾಡಾಗಿರುವುದು ಅಭಿನಂದ ನಾರ್ಹವಾಗಿದೆ.

ಮೈಸೂರಿನಲ್ಲಿ ಸರ್ಕಾರದವರೂ, ಸಂಗೀತ ನಾಟಕ ಅಕ್ಯಾಡಮಿ ಯವರೂ, ವಿದ್ವಾಂಸರಿಗೂ ಕಲೆಗಾರರಿಗೂ ವಿವಿಧ ರೀತಿಯಿಂದ ಪ್ರೋತ್ಸಾಹ ಕೊಡುತ್ತಿದ್ದಾರೆ. ಹಿಂದೆ ಮಹಾರಾಜರು ಕೊಡುತ್ತಿದ್ದ ಪ್ರೋತ್ಸಾಹ ವನ್ನು ಇಂದು ಪ್ರಜಾಸರ್ಕಾರ ಕೊಡುತ್ತಿದೆ ಎನ್ನಬಹುದು.



ನ್ನಡನಾಡು
ದೇಶದಗುರುತು.
ರೈಲುಹಾದಿ
ಜಿಲ್ಲೆಯಗುರುತು.
ಸಾತಾರ
ಕೊಲ್ಹಾಪುರ
ಮಿರಜ
ಬೆಳಗಾಂವಿ
ಜಮಖಂಡಿ
ಸೊಲ್ಲಾಪುರ
ಕಲ್ಯಾಣಿ
ಬೀದರ
ಮಾಳಖೇಡ
ಕಲುಬುರ್ಗಿ
ಸುರಪುರ
ಬಾದಾಮಿ
ಮುದುಗಲ್ಲು
ರಾಯಚೂರು
ಧಾರವಾಡ
ಹುಬ್ಬಳ್ಳಿ
ಗದಗು
ಆದವಾನಿ
ವಿಜಯನಗರ
ಬಳ್ಳಾರಿ
ಗುಂತಕಲ್ಲು
ಕರ್ನೂಲು
ನವಣೂರು
ಗೋವೆ
ಕಾರವಾರ
ಗೋಕರ್ಣ
ಬನವಾಸಿ
ಇಕ್ಕೇರಿ
ದಾವಣಗೆರೆ
ಚಿತ್ರದುರ್ಗ
ಭಟ್ಕಳ
ಉಡುಪಿ
ಮಂಗಳೂರು
ಕಡೂರು
ಚಿಕ್ಕಮಗಳೂರು
ತುಮಕೂರು
ಕೋಲಾರ
ನಂದಿ
ಬೇಲೂರು
ಹಾಸನ
ಶ್ರವಣಬೆಳಗೊಳ
ಬೆಂಗಳೂರು
ಮಡಿಕೇರಿ
ಶ್ರೀರಂಗಪಟ್ಟಣ
ಕೊಳ್ಳೇಗಾಲ
ಮೈ ಸೂ ರು.
ನೀಲಗಿರಿ.
ಕೊಯಿಮತ್ತೂರು

# ಕನ್ನಡಿಗರ ಹಂಬಲ

---

೧. ಈ ರಾಜ್ಯಕ್ಕೆ ಭೌಗೋಳಿಕ, ಐತಿಹಾಸಿಕ, ಸಾಂಸ್ಕೃತಿಕ ಕಾರಣಗಳಿಂದ ಸಮಂಜಸವೆನಿಸಿರುವ 'ಕರ್ನಾಟಕ' ಎಂದು ಹೆಸರಾಗಬೇಕು.

೨. ಗಂಗ, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಯಾದವ, ವಿಜಯನಗರ, ಕೆಳದಿ, ಮೈಸೂರು ಮೊದಲಾದ ರಾಜ್ಯ ಸಾಮ್ರಾಜ್ಯಗಳ ಆಡಳಿತ ಭಾಷೆಯೆನಿಸಿಕೊಂಡ ಸುಪ್ರೌಢ ಕನ್ನಡ ಭಾಷೆಯು ನಮ್ಮ ರಾಜ್ಯದ ಆಡಳಿತ ಭಾಷೆಯಾಗಬೇಕು.

೩. ಕಾಸರಗೋಡು, ತಾಳವಾಡಿ, ಹೊಸೂರು, ಮಡಕಶಿರ, ಆದವಾನಿ, ಅಕ್ಕಲಕೋಟೆ, ಜತ್ತ, ಸೊಲ್ಲಾಪುರ, ನೀಲಗಿರಿ ಮೊದಲಾದ ಕನ್ನಡದ ಗಡಿಗಳು ಮೈಸೂರು ರಾಜ್ಯಕ್ಕೆ ಸೇರಬೇಕು.

೪. ಮಂಗಳೂರು, ಕಾರವಾರ, ಗೋವ ಬಂದರುಗಳು ಕರ್ನಾಟಕದ ವ್ಯಾಪಾರ ವ್ಯವಹಾರಗಳ ನೆಲಮನೆಯೆನಿಸಬೇಕು.

೫. ಕೃಷ್ಣಾ, ಮಲಪ್ರಭಾ, ಭೀಮಾ, ಘಟಪ್ರಭಾ, ಮಂಜೀರಾ ಮೊದಲಾದ ನದಿಗಳಿಗೆ ಅಣೆಕಟ್ಟುಗಳಾಗಿ ಕರ್ನಾಟಕದ ಬರಗಾಲ ಬಗೆ ಹರಿಯಬೇಕು.

೬. ಮೈಸೂರು ಮತ್ತು ಕರ್ನಾಟಕ ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡ ಮಾಧ್ಯಮವಾಗಬೇಕು.

೭. ಅಖಿಲ ಕರ್ನಾಟಕದ ಏಕೈಕ ಮಹಾಸಂಸ್ಥೆಯೆನಿಸಿರುವ, ಜನತಾ ವಿಶ್ವವಿದ್ಯಾಲಯವೆಂಬ ಕೀರ್ತಿಯಿಂದ ಕಂಗೊಳಿಸುತ್ತಿರುವ, ಕನ್ನಡ

ಸಾಹಿತ್ಯ ಪರಿಷತ್ತು-ಕರ್ನಾಟಕ ಸಂಶೋಧನ ಮಂಡಲಿ ಮತ್ತು ಕರ್ನಾಟಕ ಸಾಹಿತ್ಯ ಮಂದಿರಗಳಿಂದ ಕಂಗೊಳಿಸುತ್ತಾ-ಸುವರ್ಣಕಲಶದಿಂದ ಪರಿಶೋಭಿಸಬೇಕು.

೮. ಹಾಸನ-ಮಂಗಳೂರು, ಹುಬ್ಬಳ್ಳಿ-ಕಾರವಾರ, ಬೆಂಗಳೂರು ಸೇಲಂ, ಚಾಮರಾಜನಗರ-ಸತ್ಯಮಂಗಲ, ಬೀದರ- ಕಲ್ಬುರ್ಗಿ-ಬಿಜಾಪುರ, ಬಳ್ಳಾರಿ-ಚಿತ್ರದುರ್ಗ-ತುಮಕೂರು ರೈಲುಮಾರ್ಗಗಳಾಗಬೇಕು.

೯. ಮಣಿಪಾಲ, ಬೆಂಗಳೂರು, ಕಲ್ಬುರ್ಗಿಗಳಲ್ಲಿ ವಿನೂತನ ವಿಶ್ವವಿದ್ಯಾನಿಲಯಗಳಾಗಬೇಕು.

೧೦. ಕೇಂದ್ರದ ಆಡಳಿತದಲ್ಲಿ ಕನ್ನಡಿಗರು ತಕ್ಕಷ್ಟು ಪ್ರಭಾವಶಾಲಿಗಳಾಗಿ ಭಾಗವಹಿಸಬೇಕು.

೧೧. ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಹಿರಿಮೆ ಗರಿಮೆಗಳನ್ನು ಕನ್ನಡ ಜನ ಚೆನ್ನಾಗಿ ಅರಿಯಬೇಕು.

೧೨. ಮುಂಬಯಿ, ದಿಲ್ಲಿ, ಕಲ್ಕತ್ತ, ಕಾಶಿ, ಪ್ರಯಾಗ, ಹೈದರಾಬಾದು, ಪುಣೆ, ಮದ್ರಾಸು ಮೊದಲಾದ ಭಾರತದ ಮಹಾ ನಗರಗಳಲ್ಲಿ ಕರ್ನಾಟಕದ ಕೀರ್ತಿಧ್ವಜ ಸದಾ ಮೆರೆದು, ಇನ್ನು ಮುಂದೆ ನಡೆಯುವ ಕನ್ನಡಿಗರ ಸಾಹಿತ್ಯಸಮ್ಮೇಳನಾದಿ ಚಟುವಟಿಕೆಗಳು ಅಖಿಲ ಭಾರತದ ಮಟ್ಟದಲ್ಲಿ ನಡೆಯಬೇಕು.

೧೩. ಬೇಲೂರು, ಹಳೇಬೀಡು. ಸೋಮನಾಥಪುರ, ಉಡುಪಿ, ಹಂಪೆ, ಶೃಂಗೇರಿ, ಎಲ್ಲೋರ, ಅಜಂತ, ಲೇಪಾಕ್ಷಿ, ಬಿಜಾಪುರ, ಶ್ರೀರಂಗಪಟ್ಟಣ, ಲಕ್ಷ್ಮೇಶ್ವರ, ಬೀದರ, ಮೈಸೂರು, ಬೆಂಗಳೂರು, ಮಡಕೇರಿ ಮೊದಲಾದ ಕಲಾ ಕೇಂದ್ರಗಳು ವಿಶ್ವದ ಪ್ರವಾಸಿಗಳ ಯಾತ್ರಾಸ್ಥಳಗಳೆನಿಸಬೇಕು. ತನ್ಮೂಲಕ ರಾಜ್ಯದ ಗೌರವ ಬಳೆಯಬೇಕು.

೧೪. ಕನ್ನಡಸಂತರ-ಶಿವಶರಣರ ಹಾಗೂ ಹರಿದಾಸರ ವಾಙ್ಮಯದ ಸಾರ ಸಂದೇಶ ವಿಶ್ವಕ್ಕೆಲ್ಲ ಮುಟ್ಟುವಂತಾಗಬೇಕು.

೧೫. ಕನ್ನಡ ಕವಿಗಳು, ಪಂಡಿತರು, ಕಲಾವಿದರು, ಬಡತನದ ಬವಣೆಯಿಂದ ದೂರವಾಗಿ ಸದಾ ಸಂತೋಷಚಿತ್ತದಿಂದ ಇರುವಂತಾಗಲಿ, ಕನ್ನಡಮ್ಮನ ಮಕ್ಕಳು, ಬಂಗಾಳಿಗಳಂತೆ ಬುದ್ಧಿವಂತರಾಗಿ, ಗುಜರಾತಿಗಳಂತೆ ಸ್ವಾಭಿಮಾನಿಗಳಾಗಿ, ಪಂಜಾಬಿಗಳಂತೆ ಬಲಶಾಲಿಗಳಾಗಿ, ತಮಿಳರಂತೆ ಸಾಹಸಿಗಳಾಗಿ, ತೆಲುಗರಂತೆ ಮಹತ್ವಾಕಾಂಕ್ಷಿಗಳಾಗಿ ಕಂಗೊಳಿಸಬೇಕು.

೧೬. ಬೆಳಕಿಗೆ ಬಾರದಿರುವ ಅಸಂಖ್ಯಾತ ಕನ್ನಡ ಶಿಲಾ-ತಾಮ್ರ ಶಾಸನಗಳು ಸಂಶೋಧಿಸಲ್ಪಟ್ಟು ಪ್ರಕಟವಾಗಬೇಕು.

೧೭. ಗಂಗ, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಯಾದವ, ವಿಜಯನಗರ ರಾಜ್ಯಗಳ ಇತಿಹಾಸ ಸಂಪುಟಗಳು ಪ್ರತ್ಯೇಕ ಪ್ರತ್ಯೇಕವಾಗಿ ಪ್ರಕಟವಾಗಬೇಕು.

೧೮. ಕನ್ನಡದಲ್ಲಿ ಸುಂದರ ಸರಳ ಬಾಲಸಾಹಿತ್ಯ ರಚನೆಯಾಗಬೇಕು. ಅದರಿಂದ ಕನ್ನಡಮಕ್ಕಳು ಸ್ಫೂರ್ತಿಗೊಳ್ಳಬೇಕು ಸಿಡಿಲಿನ ಮರಿಗಳಾಗಬೇಕು.

೧೯. ಕನ್ನಡ ಜನರು ಕದನ ಕಲಿಗಳಾಗಿ ಮಹಾ ಪ್ರತಿಭಾಶಾಲಿಗಳಾಗಿ ಕಂಗೊಳಿಸಬೇಕು.

೨೦. ಕನ್ನಡಿಗರಲ್ಲಿ ಸ್ವಧರ್ಮನಿಷ್ಠೆ ಪರಧರ್ಮ ಸಹಿಷ್ಣುತೆ ಪ್ರಕಾಶಿಸಬೇಕು. ಧರ್ಮಸ್ಥಳದಂತೆ ಕನ್ನಡಿಗರ ಮನೆ ಮನೆಗಳೂ ಊರು ಕೇರಿಗಳೂ, ಸಮನ್ವಯದ ನೆಲೆಬೀಡುಗಳಾಗಬೇಕು.

—ಶೂಲಪಾಣಿ.

# ಭೋಮಾತೆ ಕರ್ಣಾಟ ಭೂಮಾತೆ

(ರಾಗ–ಕಾಂಬೋಧಿ, ತಾಳ–ಝಂಪೆ)

ಭೋಮಾತೆ ಕರ್ಣಾಟ ಭೂಮಾತೆ ವಿನುತೆ ।
ನೇಮದಿಂ ವಂದಿಪೆನು ಭುವನವಿಖ್ಯಾತೆ ॥ ಪ ॥

ಇಮ್ಮಡಿಯ ಪುಲಿಕೇಶಿ ವೀರ ವಿಕ್ರಮರಾಯ ।
ಒಮ್ಮತದಿ ರಾಜ್ಯವಾಳಿದ ಕೃಷ್ಣರಾಯ ।
ಬೊಮ್ಮವಿದ ನೃಪತುಂಗ ಬಿಟ್ಟಿ ದೇವಾದಿಗಳು ।
ಅಮ್ಮ ನಿನ್ನುದರದೊಳೆ ಜನಿಸಿರ್ಪರಲ್ತೆ ॥ ೧ ॥

ರನ್ನ ಲಕ್ಷ್ಮೀಶ ಹರಿಹರ ಷಡಕ್ಷರದೇವ ।
ಪೊನ್ನ ನಯಸೇನ ಪಂಡಿತ ರಾಘವ ।
ಜನ್ನ ಸರ್ವಜ್ಞಮುನಿ ಪಂಪಾದಿ ಕವಿವರರು ।
ಎನ್ನಮ್ಮ ನಿನ್ನೆದೆಯ ಹಾಲುಂಡರಲ್ತೆ ॥ ೨ ॥

ಶ್ರೀ ನೀಲಕಂಠಾರ್ಯ ಶ್ರೀ ರೇಣುಕಾಚಾರ್ಯ ।
ಆ ಮಾಧವಾಚಾರ್ಯ ಸಾಯಣಾಚಾರ್ಯ ।
ಆನಂದ ತೀರ್ಥಮುನಿ ಬಸವಾಲ್ಲಮಾದಿಗಳು
ಹೇಮಾತೆ ನಿನ್ನುದರ ಸಂಜಾತರಲ್ತೆ ॥ ೩ ॥

ತಾಯೆ ಮತ್ತೆಂದು ತಾಳುವೆ ಪೂರ್ವವೈಭವವ ।
ತಾಯೆ ಮತ್ತೆಂದು ರಾಜಿಸುವೆ ಭಾರತದಿ ।
ಬಾಯಿಮಾತಿಂ ಸಾಧ್ಯಮಪ್ಪುದೇ ಹಿರಿಯತನ
ಕಾಯುವಂ ಸವೆಸದಲೆ ಕನ್ನಡಿಗರನಿಶಂ ॥ ೪ ॥

–ಶೂಲಪಾಣಿ

